ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

ಸರ್ವಮೂಲ ಗ್ರಂಥಗಳು

# ನ್ಯಾಯವಿವರಣ



ಮಾರ್ಗದರ್ಶನ

ಪರಮಪೂಜ್ಯ ಶ್ರೀ ಶ್ರೀ ಸುವಿದ್ಯೇಂದ್ರ ತೀರ್ಥಶ್ರೀಪಾದರು

ಅನುವಾದಕರು

ಡಾ. ಧನಂಜಯಾಚಾರ್ಯ

ಪ್ರಕಾಶಕರು

ಅಖಿಲ ಭಾರತ ಮಾಧ್ವ ಮಹಾ ಮಂಡಲ, ಬೆಂಗಳೂರು.

ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು - 560 028

|| ಶ್ರೀಃ ||

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ

# ಶ್ರೀ ಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

## ಸಂಪುಟ - ೨೫

# ಶ್ರೀನ್ಯಾಯವಿವರಣ

ಮಾರ್ಗದರ್ಶನ :

**ಪರಮಪೂಜ್ಯ ಶ್ರೀ ಶ್ರೀ ಸುವಿದ್ಯೇಂದ್ರತೀರ್ಥಶ್ರೀಪಾದರು**

ಅನುವಾದಕರು :

**ಡಾ. ಧನಂಜಯಾಚಾರ್ಯ, ಎಂ.ಎ.**

(ಅಲಂಕಾರ, ನ್ಯಾಯ ಹಾಗೂ ವೇದಾಂತ ವಿದ್ವಾನ್)

ಪ್ರಕಾಶಕರು
ಅಖಿಲ ಭಾರತ ಮಾಧ್ವ ಮಹಾ ಮಂಡಲ (ರಿ), ಉಡುಪಿ
ಪೂರ್ಣಪ್ರಜ್ಞ ವಿದ್ಯಾಪೀಠ
ಬೆಂಗಳೂರು - 560 028

ಸರ್ವಮೂಲ : ಶ್ರೀನ್ಯಾಯವಿವರಣ ಕನ್ನಡ ಅನುವಾದ
ಮಾರ್ಗದರ್ಶನ : **ಪರಮಪೂಜ್ಯ ಶ್ರೀ ಸುವಿದ್ಯೇಂದ್ರತೀರ್ಥಶ್ರೀಪಾದರು**
ಅನುವಾದಕರು :
**ಡಾ. ಧನಂಜಯಾಚಾರ್ಯ,** ಎಂ.ಎ. (ಅಲಂಕಾರ, ನ್ಯಾಯ ಹಾಗೂ ವೇದಾಂತ ವಿದ್ವಾನ್)
ಪ್ರಕಾಶನ ಅಖಿಲ ಭಾರತ ಮಾಧ್ವ ಮಹಾ ಮಂಡಲ, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು-28. ಈ ಗ್ರಂಥವು ತಮ್ಮ ಐತಿಹಾಸಿಕ ಪಂಚಮ ಪರ್ಯಾಯ ಶ್ರೀ ಕೃಷ್ಣಪೂಜಾ ಕೈಂಕರ್ಯವನ್ನು ಮಾಡಿದ **ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು** ತಮ್ಮ 81ನೇ ಚಾತುರ್ಮಾಸ್ಯ ಸಂಕಲ್ಪವನ್ನು ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಶ್ರೀಕೃಷ್ಣನಿಗೆ ಅರ್ಪಿಸಿದ ಶುಭಸಂದರ್ಭ ದಿನಾಂಕ 25.9.2018ರಂದು ಮಂಗಳವಾರ ಈ ಗ್ರಂಥವನ್ನು ಲೋಕಾರ್ಪಣೆ ಮಾಡಲಾಯಿತು.

ಪುಟಗಳು : 566
ಪ್ರಥಮ ಮುದ್ರಣ : 2018 ಪ್ರತಿ ಬೆಲೆ : **ರೂ.350**
ಪ್ರತಿಗಳು : 1000




ಗ್ರಂಥಗಳು ದೊರೆಯುವ ಸ್ಥಳ
**ಅಖಿಲ ಭಾರತ ಮಾಧ್ವ ಮಹಾ ಮಂಡಲದ ಕಾರ್ಯಾಲಯ**
ಪೂರ್ಣಪ್ರಜ್ಞ ವಿದ್ಯಾಪೀಠ, ಪೂರ್ಣಪ್ರಜ್ಞ ನಗರ, ಬೆಂಗಳೂರು -28

ಮುಖಪುಟ ವಿನ್ಯಾಸ : ಡಾ. ಹೆಚ್.ಎನ್. ನಾರಾಯಣ ರಾವ್

ಅಕ್ಷರ ಜೋಡಣೆ : **ಆರ್.ಎಸ್.ಪ್ರೇಮ್‌ಕುಮಾರ್**

ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ನ್ಯೂತರಗು ಪೇಟೆ, ಬೆಂಗಳೂರು.

# ಶ್ರೀ 108 ಶ್ರೀ ಪೇಜಾವರ ಮಠಾಧೀಶರಾದ
# ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಸಂದೇಶ

ಶ್ರೀ ಮಧ್ವಾಚಾರ್ಯರ 750ನೇ ವರ್ಷದ ಜಯಂತಿಯ ಸಂದರ್ಭದಲ್ಲಿ ಕೈಗೊಂಡಿರುವ ಜ್ಞಾನಪ್ರಸಾರ ಯೋಜನೆಯ ಅಂಗವಾಗಿ ಶ್ರೀಮದಾಚಾರ್ಯರ ಎಲ್ಲಾ ಗ್ರಂಥಗಳ ಕನ್ನಡ ಅನುವಾದವನ್ನು ಪ್ರಕಾಶಿಸುವ ಬೃಹತ್ ಯೋಜನೆಯನ್ನು ಆನಂದತೀರ್ಥ ಪ್ರತಿಷ್ಠಾನದ ಸಹಕಾರದಿಂದ ಅಖಿಲ ಭಾರತ ಮಾಧ್ವ ಮಹಾಮಂಡಲವು ಕೈಗೊಂಡಿದೆ. ತೆಲುಗು, ತಮಿಳು ಮುಂತಾದ ಪ್ರಾದೇಶಿಕ ಭಾಷೆಗಳಲ್ಲಿಯೂ, ಹಿಂದಿ, ಇಂಗ್ಲೀಷ್ ಭಾಷೆಗಳಲ್ಲಿಯೂ ಅನುವಾದವನ್ನು ಪ್ರಕಟಿಸುವ ಬಯಕೆ ನಮ್ಮದಾಗಿದೆ. ಜಗತ್ತಿನ ಸತ್ಯತತ್ವಗಳನ್ನು ಅನುಭವದ ನೆಲೆಯಲ್ಲಿ ಪರೀಕ್ಷಿಸಿ ಸರಿಯಾದ ಪ್ರಮಾಣಗಳ ಆಧಾರದಲ್ಲಿ ವೈಜ್ಞಾನಿಕವಾಗಿ ವಿವೇಚಿಸುವ ವಿಶಿಷ್ಟತೆಯನ್ನು ಶ್ರೀಮದಾಚಾರ್ಯರ ಸಿದ್ಧಾಂತದಲ್ಲಿ ನಾವು ಕಾಣಬಹುದು. ಎಲ್ಲಾ ಪ್ರಮಾಣ, ತರ್ಕ, ಊಹಾಪೋಹಗಳಿಗಿಂತಲೂ ಅನುಭವಕ್ಕೆ ಹೆಚ್ಚಿನ ಸ್ಥಾನವನ್ನು ಶ್ರೀಮದಾಚಾರ್ಯರು ನೀಡಿದ್ದಾರೆ. ಎಲ್ಲಾ ಭಾಷೆಗಳಲ್ಲಿ ಆಚಾರ್ಯರ ಗ್ರಂಥಗಳ ಅನುವಾದದ ಪ್ರಕಟಣೆಯು, ಜಗತ್ತಿನ ಜಿಜ್ಞಾಸುಗಳಿಗೆ ಈ ಸತ್ಯದ ಅರಿವುಂಟಾಗಲು ಅನುಕೂಲವಾಗುವುದು. ಶ್ರೀಮದಾಚಾರ್ಯರ ಸಂದೇಶವು ವಿಶ್ವದಲ್ಲಿ ಪ್ರತಿಧ್ವನಿತವಾಗಲಿ, ಈ ಗ್ರಂಥ ಪ್ರಕಾಶನದಿಂದಾಗಿ ಜ್ಞಾನ, ಭಕ್ತಿ, ಕರ್ತವ್ಯ, ಚಾರಿತ್ರ್ಯಗಳ ಬಗ್ಗೆ ಜನಜಾಗೃತಿಯುಂಟಾಗಲಿ ಎಂದು ಹಾರೈಸುತ್ತೇವೆ. ಭಕ್ತರೂ, ಅಭಿಮಾನಿಗಳೂ, ಜಿಜ್ಞಾಸುಗಳೂ ಆದ ಎಲ್ಲಾ ಮಹಾಜನರ ಸಹಕಾರದಿಂದ, ಶ್ರೀಹರಿವಾಯುಗುರುಗಳ ಅನುಗ್ರಹದಿಂದ ಈ ಪವಿತ್ರವಾದ ಮಹತ್ತರವಾದ ಜ್ಞಾನಕಾರ್ಯವು ಯಶಸ್ವಿಯಾಗಲಿ ಎಂದು ಆಶಿಸುತ್ತೇವೆ.

ಶ್ರೀ ಶ್ರೀವಿಶ್ವೇಶತೀರ್ಥ ಶ್ರೀಪಾದರು

ದಿನಾಂಕ 04.01.2018 ಪರ್ಯಾಯ ಶ್ರೀ ಪೇಜಾವರ ಮಠ, ಉಡುಪಿ.

# ಪೇಜಾವರ ಶ್ರೀಪಾದರ ಸಂದೇಶ

ಪ್ರತಿಪಕ್ಷವು ಗಟ್ಟಿಯಾಗಿದ್ದಾಗ ಮಾತ್ರ ಸ್ವಪಕ್ಷವು ದೃಢವಾಗಲು ಸಾಧ್ಯ. ಶಾಸ್ತ್ರದಲ್ಲಿ ಸಿದ್ಧಾಂತವು ದೃಢವಾಗಲು ಪೂರ್ವಪಕ್ಷವೂ ಗಟ್ಟಿಯಾಗಿರಬೇಕು. ವೇದಗಳಿಗೆ ಆಪಾತತಃ ಅಥವಾ ಸರಿಯಾಗಿ ವಿಮರ್ಶಿಸದೇ ತೋರುವ ಅರ್ಥ ಪೂರ್ವಪಕ್ಷವೆನಿಸುತ್ತದೆ. ಪೂರ್ವಾಪರ ವಿಮರ್ಶೆ ಮಾಡಿ ಸದಾಗಮಗಳಿಂದ ವಿರೋಧ ಬರದಂತೆ ನಿರ್ಣಯಿಸಿದ ತತ್ತ್ವವು ಸಿದ್ಧಾಂತ. ಪೂರ್ವಪಕ್ಷವನ್ನು ವಿಸ್ತರಿಸುವುದಕ್ಕಾಗಿ ಪೂರ್ವಪಕ್ಷಗಳು ಕೈಗೊಂಡ ಮೂಲನಿರ್ಣಯವನ್ನು ಪೂರ್ವಪಕ್ಷ ನ್ಯಾಯವೆನ್ನ ಲಾಗುತ್ತದೆ. ಪೂರ್ವಪಕ್ಷದ ಟೊಳ್ಳುತನವನ್ನು ತೆರೆದಿಟ್ಟು ನಿರ್ಣಯಿಸಿದ ಸಿದ್ಧಾಂತದ ಮೂಲತತ್ತ್ವವು ಸಿದ್ಧಾಂತನ್ಯಾಯವೆನಿಸಿದೆ. ವೇದಗಳ ಅರ್ಥವನ್ನು ನಿರ್ಣಯಿಸುವುದ ಕ್ಕಾಗಿ ಶ್ರೀವೇದವ್ಯಾಸರು ರಚಿಸಿರುವ ಬ್ರಹ್ಮಸೂತ್ರಗಳಲ್ಲಿ ಹುದುಗಿರುವ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷನ್ಯಾಯ ಮತ್ತು ಸಿದ್ಧಾಂತನ್ಯಾಯಗಳನ್ನು ಶ್ರೀಮನ್ಮಧ್ವಾಚಾರ್ಯರು ಶ್ರೀಮದನುವ್ಯಾಖ್ಯಾನದಲ್ಲಿ ಸಂಗ್ರಹಿಸಿದ್ದಾರೆ. ಅಲ್ಲಿ ಸಂಗ್ರಹಿಸಿದ ನ್ಯಾಯಗಳ ವಿವರಣೆಗಾಗಿ ಆಚಾರ್ಯರೇ ಮತ್ತೊಂದು ಗ್ರಂಥವನ್ನು ರಚಿಸಿದರು. ಇದೇ ಶ್ರೀಮದನುವ್ಯಾಖ್ಯಾನನ್ಯಾಯವಿವರಣ. ಚಿಕ್ಕದಾಗಿ 'ನ್ಯಾಯವಿವರಣ' ಎಂಬ ಹೆಸರಿನಿಂದ ಈ ಗ್ರಂಥವನ್ನು ವ್ಯವಹರಿಸುತ್ತೇವೆ.

ಸೂಕ್ತಪ್ರಸ್ಥಾನದ ಮೇಲೆ ಅಣುಭಾಷ್ಯ, ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನ ಗಳನ್ನು ರಚಿಸಿದ ಮೇಲೂ ಈ ನ್ಯಾಯವಿವರಣೆಯನ್ನು ರಚಿಸಬೇಕಾದ ಅನಿವಾರ್ಯತೆ ಯೇನು? ಎಂಬ ಪ್ರಶ್ನೆಗೆ ಶ್ರೀಮದಾಚಾರ್ಯರೇ ಗ್ರಂಥಾಂತ್ಯದಲ್ಲಿ ಹೀಗೆ ಉತ್ತರಿಸಿ ದ್ದಾರೆ—

ಇತ್ಯನಂತ ಮಹಾನ್ಯಾಯ ಮೀಮಾಂಸಾಪಾರವಾರಿಧೇಃ ।
ಉತ್ತಾರಣಾತ್ಯಶಕ್ತ್ಯೈವ ವ್ಯಾಕುಲೀಕೃತಚೇತಸಾಂ ।
ಮಂದಾನಾಮುಪಕಾರಾಯ ಮಹತಾಂ ಚಿಚ್ರಿತಾತ್ಮನಾಂ ।
ತದ್ವಿಶೇಷಪರಿಜ್ಞಾನಪ್ರದೀಪ್ತಾರ್ಕಾಭಚೇತಸಾಂ ।
ವಿಶೇಷಗಾಢೇ ಮನಸಿ ನಿತರಾಮುಪಕಾರಕಃ ।
ನ್ಯಾಯಪ್ಲವೋ ಮಯಾಕಾರಿ ಸಂಕ್ಷೇಪಾತ್ ಪ್ರಮಿತಾಕ್ಷರೈಃ ॥

(ನ್ಯಾಯವಿವರಣ-ಅಧ್ಯಾಯ 4-ಪಾದ-4)

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅನಂತನ್ಯಾಯಗಳು ಅಡಗಿವೆ. ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳೆಂಬ ವೀಚೀತರಂಗಗಳಿಂದ ಅಲ್ಲೋಲಕಲ್ಲೋಲವಾಗಿರುವ ಈ ಸಮುದ್ರಲ್ಲಿ ಈಜಿ ದಡಮುಟ್ಟುವುದು ಬಹಳ ಕಷ್ಟ. ಹಾಗಾಗಿ ಸಜ್ಜನರು ಕಳವಳಗೊಂಡಿದ್ದಾರೆ. ಮಂದಜನರಿಗೂ ಉಪಕಾರವಾಗುವಂತೆ ಇಲ್ಲಿ ನ್ಯಾಯಗಳ ವಿವರಣೆಯನ್ನು ನೀಡಿದ್ದೇವೆ. ಮೀಮಾಂಸಾಸಾಗರದಲ್ಲಿ ನಿರಂತರ ಮುಳುಗಿ ಏಳುತ್ತಿರುವ ಸೂರ್ಯನಂತೆ ಪ್ರಕಾಶದ ವ್ಯಕ್ತಿತ್ವವುಳ್ಳ ಸುಜ್ಞಾನಿಗಳಿಗೆ ಸಾಗರದ ಆಳವನ್ನು ಮುಟ್ಟಿ ಮೇಲೆದ್ದು ಸಾಗರವನ್ನು ದಾಟಿ ಭಗವಂತನನ್ನು ಮುಟ್ಟಲು ಅನುಕೂಲ ವಾಗುವಂತೆ ಈ ನ್ಯಾಯವಿವರಣ ಎಂಬ ದೋಣಿಯನ್ನು ನಾನು ರಚಿಸಿದ್ದೇನೆ.

ಅನುವ್ಯಾಖ್ಯಾನ, ಬ್ರಹ್ಮಸೂತ್ರಭಾಷ್ಯಗಳಿಗೆ ಹೋಲಿಸಿದರೆ ಇದು ಅತ್ಯಂತ ಪುಟ್ಟ ಗ್ರಂಥ. ಆದರೆ ಭಾಷ್ಯ, ಅನುವ್ಯಾಖ್ಯಾನಗಳಲ್ಲಿ ವಿಸ್ತಾರವಾಗಿ ನಿರೂಪಿಸಿರುವ ವಿಷಯಗಳನ್ನು ಮನನ ಮಾಡಿರುವ ವಿದ್ವಾಂಸರಿಗೆ ಈ ಪುಟ್ಟ ಗ್ರಂಥವೇ ವಿಸ್ತೃತ ಗ್ರಂಥವಾಗಿ ಬಗೆದಷ್ಟೂ ಅರ್ಥರಾಶಿಯನ್ನು ನೀಡುತ್ತದೆ. ಹಾಗಾಗಿ ಮುಖ್ಯವಾಗಿ ವಿದ್ವಾಂಸರಾದ ಜಿಜ್ಞಾಸುಗಳ ವಿಶೇಷಜ್ಞಾನಕ್ಕಾಗಿ ಈ ಗ್ರಂಥವನ್ನು ಆಚಾರ್ಯರು ರಚಿಸಿದ್ದಾರೆ.

> ವಿಸ್ತಾರೋಽಪ್ಯಯಮೇವ ಸ್ಯಾತ್ ತದ್ವಿಶೇಷಾತಿವೇದಿನಾಂ ।
> ವ್ಯಾಖ್ಯಾನುವ್ಯಾಖ್ಯಯೋರೇವ ವಿಸ್ತಾರೋಯಮುದೀರಿತಃ ।
> ಅನಲ್ಪಚೇತಸಾಂ ಪುಂಸಾಂ ಅಲಂ ವಿಜ್ಞಾನ ಸಿದ್ಧಯೇ ॥

(ನ್ಯಾಯವಿವರಣ. 4ನೇ ಅಧ್ಯಾಯದ ಕೊನೆಯಲ್ಲಿ)

ಜಿಜ್ಞಾಸುಗಳಿಗೆ ಒಂದು ವಿಷಯವು ಮನದಟ್ಟಾಗಬೇಕಾದರೆ ಒಮ್ಮೆ ಸಂಕ್ಷೇಪ ವಾಗಿಯೂ ಮತ್ತೊಮ್ಮೆ ವಿಸ್ತಾರವಾಗಿಯೂ ನಿರೂಪಿಸಬೇಕು. ಬ್ರಹ್ಮಸೂತ್ರದಂತಹ ಗಹನಾರ್ಥವುಳ್ಳ ಗ್ರಂಥವನ್ನಂತೂ ಅನೇಕಬಾರಿ ಬಗೆಬಗೆಯಿಂದ ತಿಳಿಸಬೇಕು. ಸಜ್ಜನ ಕೃಪಾಲುಗಳಾದ ಶ್ರೀಮನ್ ಮಧ್ವಾಚಾರ್ಯರು ಬ್ರಹ್ಮಸೂತ್ರಗಳ ಮೇಲೆ ಎರಡು ಸಂಕ್ಷೇಪಗ್ರಂಥಗಳನ್ನೂ ಎರಡು ವಿಸ್ತಾರ ಗ್ರಂಥಗಳನ್ನೂ ರಚಿಸಿದ್ದಾರೆ. ಈ ಗ್ರಂಥಗಳೂ ಕೂಡ ಸೂತ್ರಗಳನ್ನು ಅನುಕರಿಸುತ್ತಿವೆ. ವಿಶ್ವತೋಮುಖವಾಗಿವೆ. ಶ್ರೀವೇದವ್ಯಾಸರ ಅನುಗ್ರಹ ಬಲದಿಂದ ಮಾತ್ರ ಅವರ ಗ್ರಂಥಗಳಿಗೆ ಸಂಕ್ಷೇಪ-ವಿಸ್ತೃತಿಗಳ ಗ್ರಂಥಗಳನ್ನು ರಚಿಸಿ ವ್ಯಾಖ್ಯಾನಿಸುವುದಕ್ಕೆ ಸಾಧ್ಯವಾಗಿದೆ ಎಂದು ಆಚಾರ್ಯರೇ ಇಲ್ಲಿ ಹೇಳಿದ್ದಾರೆ.

ಅಹಂ ತು ತತ್ಪ್ರಸಾದೈಕ ಮಹಾಸ್ಪದಬಲೋದ್ಯತಃ ।
ನ್ಯಾಯಾಮೃತಾರ್ಣವಮಿಮಮವಗಾಹ್ಯ ವಿಭಜ್ಯ ಚ ।
ಸಂಕ್ಷೇಪ ವಿಸ್ತಾರಾಭ್ಯಂ ಚ ಚಕಾರ ವ್ಯಾಕೃತಿಂ ಕೃತಿಮ್ ।
ತತ್ಪ್ರಸಾದಮೃತೇ ಕಸ್ಯ ಶಕ್ತಿಃ ಸಂಸಾರಸಾಗರೇ ।
ಮಗ್ನಸ್ಯಚೇತನಸ್ಯ ಸ್ಯಾತ್ ತತ್ಕೃತಾನುಕೃತೌ ಕ್ವಚಿತ್ ॥

ಭಗವಂತನ ಅನುಗ್ರಹವಿಲ್ಲದೇ ಯಾರಿಗೂ ಆ ಭಗವಂತನೇ ರಚಿಸಿರುವ ಗ್ರಂಥಗಳಿಗೆ ವ್ಯಾಖ್ಯಾನ ಮಾಡುವ ಸಾಮರ್ಥ್ಯ ಬರಲಾರದು. ಸರ್ವಜ್ಞನಾದ ಭಗವಂತನ ಪ್ರೀತಿಯ ನೋಟದಿಂದ ಅನುಗ್ರಹೀತನಾದ ವ್ಯಕ್ತಿಗೆ ಎಂತಹ ಮಹತ್ಕಾರ್ಯವೂ ಅಶಕ್ಯವೆಂಬುದಕ್ಕೆ ಸೂತ್ರಗಳಿಗೆ ಮತ್ತೆ ಮತ್ತೆ ವ್ಯಾಖ್ಯಾನಿಸುತ್ತಿರುವ ನಾನೇ ಸಾಕ್ಷಿಯಾಗಿದ್ದೇನೆ. ಎಂಬ ಭಾವುಕನುಡಿಗಳನ್ನು ಆಚಾರ್ಯರು ಈ ಗ್ರಂಥದ ಕೊನೆಯಲ್ಲಿ ಆಡಿದ್ದಾರೆ. ಸರ್ವಜ್ಞರಾದ ಆಚಾರ್ಯರ ಈ ನುಡಿಗಳು ನಮಗೆಲ್ಲರಿಗೂ ಭಗವತ್ಪ್ರಜ್ಞೆಯ ಜೀವನಕ್ಕೆ ಮಾರ್ಗದರ್ಶಿಗಳಾಗಿವೆ.

ಗಹನಾರ್ಥಗಳುಳ್ಳ ನ್ಯಾಯವಿವರಣದ ಅನುವಾದ ಹಾಗೂ ವಿವರಣೆಯ ಕೃತಿಯನ್ನು ಅಖಿಲಭಾರತ ಮಾಧ್ವಮಹಾಮಂಡಲ ಇದೀಗ ಸಮಾಜಕ್ಕೆ ನೀಡುತ್ತಿದೆ. ಪೂಜ್ಯರಾದ ಸುವಿದ್ಯೇಂದ್ರತೀರ್ಥಶ್ರೀಪಾದರು ಈ ಅನುವಾದ ಕಾರ್ಯದಲ್ಲಿ ವಿದ್ವಾನ್ ಧನಂಜಯಾಚಾರ್ಯರಿಗೆ ಮಾರ್ಗದರ್ಶನವನ್ನು ನೀಡಿ ಶ್ರೀಮದ್ಆಚಾರ್ಯರ ಸೇವೆ ಯನ್ನು ಮಾಡಿದ್ದಾರೆ. ಜಿಜ್ಞಾಸು ಸಜ್ಜನರು ಇದರ ಪ್ರಯೋಜನವನ್ನು ಪಡೆದು ಹರಿಗುರುಗಳ ಅನುಗ್ರಹಕ್ಕೆ ಪಾತ್ರರಾಗಲಿ ಎಂದು ಆಶಿಸುತ್ತೇವೆ.

**ಶ್ರೀಶ್ರೀ ವಿಶ್ವೇಶತೀರ್ಥಶ್ರೀಪಾದರು**
ಪೇಜಾವರ ಮಠ

# ಅನುಗ್ರಹ ಸಂದೇಶ

ಮುಮುಕ್ಷು ಜೀವನು ವೇದವನ್ನು ಸರಿಯಾಗಿ ಅರ್ಥೈಸಿಕೊಂಡು ಮುಕ್ತಿ ಪಥದತ್ತ ಸಾಗಲೆಂದು ವೇದವ್ಯಾಸರು ಬ್ರಹ್ಮಸೂತ್ರಗಳನ್ನು ರಚಿಸಿದ್ದಾರೆ. ಇವುಗಳಿಗೆ ವ್ಯಾಖ್ಯಾನರೂಪವಾಗಿ ಶ್ರೀಮನ್ಮಧ್ವಾಚಾರ್ಯರು ನಾಲ್ಕು ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ನ್ಯಾಯವಿವರಣವೂ ಒಂದು. ಶ್ರೇಷ್ಠ ಪಂಡಿತರಿಗೂ ದುರವಗಾಹ್ಯವಾದ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ಶ್ರೀಮದಾಚಾರ್ಯರು ನ್ಯಾಯಮಾಲಾ ಎಂಬ ಹೆಸರಿನಿಂದ ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿದ್ದಾರೆ. ಈ ನ್ಯಾಯಮಾಲೆಯ ವಿವರಣೆಯೇ ನ್ಯಾಯವಿವರಣೆ ಎಂಬ ಗ್ರಂಥ. ಈ ಗ್ರಂಥದ ಬಗ್ಗೆ ನಾರಾಯಣಪಂಡಿತಾ ಚಾರ್ಯರು ಹೀಗೆ ಉದ್ಗಾರವನ್ನು ತೆಗೆದಿದ್ದಾರೆ. 'ಕವೀಂದ್ರೈರೇಷ ದುಷ್ಕರಂ' 'ಮಧ್ವಾಚಾರ್ಯರಲ್ಲದೆ ಬೇರಾವ ಪಂಡಿತೋತ್ತಮರಿಗೂ ಇದು ಅಸಾಧ್ಯವಾದ ಕೆಲಸ' ಎಂದು.

ನ್ಯಾಯಮಾಲೆಯಲ್ಲಿ ಹೇಳಿದ ನ್ಯಾಯಗಳನ್ನು ಮಾತ್ರವಲ್ಲದೆ ಮೊದಲ ಎರಡು ಪಾದಗಳ ಅಧಿಕರಣಗಳ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ಪ್ರತ್ಯೇಕವಾಗಿ ವಿವರಿಸಿದ್ದಾರೆ ಎಂಬುದು ಈ ಗ್ರಂಥದ ಮತ್ತೊಂದು ವೈಶಿಷ್ಟ್ಯ. ಉದಾಹರಣೆಗೆ ಮೊದಲನೆಯ ಜಿಜ್ಞಾಸಾಧಿಕರಣದಲ್ಲಿಯೇ **'ಜೀವವ್ಯತಿರಿಕ್ತಸ್ಯ ಈಶ್ವರಸ್ಯಾಭಾವಾತ್ ತಸ್ಯ ಚ ಸ್ವಪ್ರಕಾಶತ್ವಾತ್ ನ ಜಿಜ್ಞಾಸ್ಯತಾ'** 'ಜೀವನಿಗಿಂತ ಭಿನ್ನನಾದ ಈಶ್ವರನಿಲ್ಲ. ಜೀವನಾದರೂ ಸ್ವಪ್ರಕಾಶನಾದ್ದರಿಂದ ಸಿದ್ಧನಾಗಿದ್ದಾನೆ. ಸಂದಿಗ್ಧನಲ್ಲವಾದ್ದರಿಂದ ಜಿಜ್ಞಾಸೆಗೆ ವಿಷಯವೇ ಇಲ್ಲ' ಎಂಬುದೇ ಪೂರ್ವಪಕ್ಷನ್ಯಾಯ. ಅದರಂತೆ ಗುಣಪೂರ್ಣನಾದ ಬ್ರಹ್ಮನೇ ಜಿಜ್ಞಾಸೆಗೆ ವಿಷಯ ಎಂಬುದು, ಸಿದ್ಧಾಂತನ್ಯಾಯ. ಹೀಗೆ ಪ್ರತಿಯೊಂದು ಅಧಿಕರಣದಲ್ಲಿಯೂ ನ್ಯಾಯಗಳನ್ನು ಹೇಳಿದ್ದಾರೆ.

ಶಾಸ್ತ್ರಯೋನಿತ್ವಾಧಿಕರಣದಲ್ಲಿ **'ನ ಚ ರುದ್ರಾದೌ ಸಮಮೇತಲ್ಲಕ್ಷಣಂ'** ಎಂದು ನ್ಯಾಯವಿವರಣೆಯ ವಾಕ್ಯವಿದೆ. ಹಿಂದಿನ ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾಧಿಕಾರಣತ್ವವೆಂಬ ಬ್ರಹ್ಮನ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ ಶಂಕೆಯನ್ನು ಮಾಡುತ್ತಿದ್ದಾರೆ. ಇಲ್ಲಿ 'ಸಮಂ' ಎಂದರೆ ಸಾಧಾರಣ ಎಂದರ್ಥ. ಮತ್ತೊಂದು ಅರ್ಥವೂ ಇದೆ. ಮಾಯಾ=ಅನುಮಾನೇನ ಸಹಿತಂ ಸಮಂ ಎಂದು. ಅಂದರೆ ಪೂರ್ವಪಕ್ಷಿಯು ರುದ್ರನಲ್ಲಿ ಹೇಳುತ್ತಿರುವ ಜಗಜ್ಜನ್ಮಾದಿಕಾರಣತ್ವವು ಕಪೋಲಕಲ್ಪಿತವಲ್ಲ. ಇದಕ್ಕೆ ಅನುಮಾನ ಪ್ರಮಾಣವಿದೆ ಎಂದರ್ಥ. ಈರೀತಿಯಾಗಿ

ವ್ಯಾಖ್ಯಾನ ಮಾಡಿದಾಗ 'ನಚ ಅನುಮಾನತೋಽನ್ಯೇ ನ ಕಲ್ಪನೀಯಾಃ' ಎಂಬ ಭಾಷ್ಯದ ಅಭಿಪ್ರಾಯವನ್ನು ಸಂಗ್ರಹಿಸಿದಂತಾಗುತ್ತದೆ. ಆದ್ದರಿಂದ ಭಾಷ್ಯ, ಅನುಭಾಷ್ಯಗಳಂತೆ ನ್ಯಾಯವಿವರಣೆಯೂ ಅನೇಕಾರ್ಥಗರ್ಭಿತವಾಗಿದೆ ಎಂಬುದನ್ನು ಓದುಗರು ತಿಳಿದುಕೊಳ್ಳಬೇಕು.

ಈ ನ್ಯಾಯವಿವರಣದ ಸ್ವಲ್ಪಭಾಗಕ್ಕೆ ಶ್ರೀಮಜ್ಜಯತೀರ್ಥರು ಟೀಕೆಯನ್ನು ಬರೆದಿದ್ದಾರೆ. ಆದರ ಮುಂದಿನ ಭಾಗಕ್ಕೆ ಶ್ರೀರಘೂತ್ತಮರು ಟೀಕೆಯನ್ನು ಬರೆದಿದ್ದಾರೆ. ಈ ಟೀಕಾ ಮತ್ತು ಭಾವಬೋಧಗಳನ್ನು ಚೆನ್ನಾಗಿ ಅಧ್ಯಯನ ಮಾಡಿ ಶ್ರೀ ಧನಂಜಯಾಚಾರ್ಯ ನ್ಯಾಯವಿವರಣವನ್ನು ಕನ್ನಡೀಕರಿಸಿದ್ದಾರೆ. ಇಷ್ಟು ಮಾತ್ರವಲ್ಲದೆ ಶ್ರೀವಾದಿರಾಜರು ನ್ಯಾಯಸುಧಾ ಗುರ್ವರ್ಥದೀಪಿಕೆಯಲ್ಲಿ ನೀಡಿದ ನ್ಯಾಯಮಾಲಾ ವ್ಯಾಖ್ಯಾನದ ವಿಷಯವನ್ನೂ ಅಗತ್ಯವಿದ್ದ ಸ್ಥಳದಲ್ಲಿ ಅಳವಡಿಸಿದ್ದಾರೆ. ಪ್ರತ್ಯೇಕವಾಗಿ ಪ್ರತಿಯೊಂದು ಅಧಿಕರಣದ ಪ್ರಧಾನಸೂತ್ರದ ಪ್ರತಿಪದಾರ್ಥವನ್ನೂ ವಿವರಿಸಿದ್ದಾರೆ. ವಿದ್ಯಾಪೀಠದಲ್ಲಿ ೧೨ ವರ್ಷಗಳ ಕಾಲ ನ್ಯಾಯವೇದಾಂತಾಧ್ಯಾಯನ ಹಾಗೂ ಅದೇ ಸಂಸ್ಥೆಯಲ್ಲಿ ಅನೇಕ ವರ್ಷಗಳಿಂದ ನಡೆಸಿದ ಅಧ್ಯಾಪನದ ಫಲವಾಗಿ ಬಹುಸುಂದರವಾಗಿ ಉಪಕಾರಕವಾಗಿ ಮೂಡಿಬಂದ ಈ ಅನುವಾದ ಸೇವೆಯಿಂದ ಶ್ರೀಮದಾಚಾರ್ಯರು ಅವರಲ್ಲಿ ವಿಶೇಷವಾಗಿ ಪ್ರೀತರಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಪರಮಪೂಜ್ಯ ಶ್ರೀವಿದ್ಯಾಮಾನ್ಯತೀರ್ಥರ ಮತ್ತು ಶ್ರೀವಿಶ್ವೇಶತೀರ್ಥರ ಮುಂದಾಲೋಚನೆಯ ಫಲವಾಗಿ ಬಹಳ ವರ್ಷಗಳ ಹಿಂದೆಯೇ ಆರಂಭ ಗೊಂಡಿರುವ ಅಖಿಲಭಾರತ ಮಾಧ್ವಮಹಾಮಂಡಲವು ಸಮರ್ಪಕವಾಗಿ ತನ್ನ ಕಾರ್ಯವನ್ನು ನಿರ್ವಹಿಸುತ್ತಿದೆ. ಅನೇಕ ಉಪಯುಕ್ತ ಗ್ರಂಥಗಳನ್ನು ಹೊರತಂದು ಜಿಜ್ಞಾಸುಗಳ ಪಿಪಾಸೆಯನ್ನು ತಣಿಸಿದೆ. ಇದರ ಎಲ್ಲ ಪದಾಧಿಕಾರಿಗಳನ್ನು, ವಿಶೇಷವಾಗಿ ಪ್ರಧಾನಕಾರ್ಯದರ್ಶಿಗಳಾದ ಡಾ||ಹೆಚ್.ಎನ್.ನಾರಾಯಣರಾಯ ರನ್ನು ಅಭಿನಂದಿಸುತ್ತೇನೆ. ಅ.ಭಾ.ಮಾ.ಮ.ಮಂಡಲದಿಂದ ಮತ್ತಷ್ಟು ಉಪಯುಕ್ತ ಕಾರ್ಯಗಳು ನಡಿಯುವಂತಾಗಲೆಂದು ಅಸ್ಮದುಪಾಸ್ಯಮೂರ್ತಿಯಲ್ಲಿ ಪ್ರಾರ್ಥಿಸು ತ್ತೇವೆ.

ಶ್ರೀಶ್ರೀ ಸುವಿದ್ಯೇಂದ್ರತೀರ್ಥಶ್ರೀಪಾದರು

# ಸಂಪಾದಕ ಮಂಡಳಿಯ ನಿವೇದನೆ

"ಗುಣಪೂರ್ಣನೂ, ನಿರ್ದೋಷನೂ ಆದ ನಾರಾಯಣನನ್ನು ತಿಳಿದು ಸೇರಬೇಕು" ಎಂಬ ಆದೇಶವನ್ನು ಬ್ರಹ್ಮಸೂತ್ರಗಳು ನೀಡುತ್ತಿವೆ. ನಾಲ್ಕು ಅಧ್ಯಾಯದಲ್ಲಿರುವ 564 ಸೂತ್ರಗಳು ವೇದೋಪನಿಷತ್ತುಗಳೆಂಬ ಮಹಾಪ್ರವಾಹಕ್ಕೆ ಕಟ್ಟಿದ ದಂಡೆಗಳಂತಿದ್ದು ಇವು ವೇದಗಳೆಂಬ ಗಂಗಾಪ್ರವಾಹವನ್ನು ನಾರಾಯಣನೆಂಬ ಗುಣಸಾಗರದಲ್ಲಿ ಸೇರಿಸಿವೆ.

ಬ್ರಹ್ಮಸೂತ್ರಗಳ ಬಗೆಗೆ ಆಚಾರ್ಯರು ಶ್ರೀಮದ್ಬ್ರಹ್ಮಸೂತ್ರಭಾಷ್ಯ , ಅಣುಭಾಷ್ಯ ಹಾಗೂ ಅನುವ್ಯಾಖ್ಯಾನಗಳನ್ನು ರಚಿಸಿದ ನಂತರ ಶ್ರೀಮನ್ನ್ಯಾಯವಿವರಣವನ್ನು ರಚಿಸಿದ್ದಾರೆ. ಅನುವ್ಯಾಖ್ಯಾನದ ಯುಕ್ತಿಮಾಲಾಭಾಗದ ವಿವರಣೆಯಾಗಿ ಈ ಕೃತಿಯು ರಚಿತವಾಗಿದೆ. ನಾರಾಯಣಪಂಡಿತಾಚಾರ್ಯರು ಹೇಳುವಂತೆ 'ಅನುವ್ಯಾಖ್ಯಾನಾಸ್ತೋತ್ರವಾದ ಯುಕ್ತಿಮಾಲೆಯ ವಿವರಣೆ ಪಂಡಿತರಿಂದ ದುಷ್ಕರವೆಂದು ತಾವೇ ಈ ನ್ಯಾಯವಿವರಣೆಯ ಮೂಲಕ ನೀಡಿರುತ್ತೀರಿ.'

ಯುಕ್ತಾಯಾ ಯುಕ್ತಿಮಾಲಾಯಾಃಪ್ರೋಕ್ತಾಯಾಸ್ತತ್ರ ಚಾತ್ಮನಾ ।
ವ್ಯಕ್ತಂ ಚಕ್ರೇ ವಿವರಣೆ ಕವೀಂದ್ರೈರೇಷ ದುಷ್ಕರಮ್ ॥

(ಸು.ವಿ.15/90)

ಬ್ರಹ್ಮಸೂತ್ರಗಳು ನಾಲ್ಕು ಅಧ್ಯಾಯದಲ್ಲಿವೆ. ಅವುಗಳಲ್ಲಿ ಅನೇಕ ಅಧಿಕರಣ ಗಳಿವೆ. ಪ್ರತಿಯೊಂದು ಅಧಿಕರಣದಲ್ಲೂ ಪೂರ್ವಪಕ್ಷ-ಸಿದ್ಧಾಂತಗಳಿವೆ. ಅದಕ್ಕೆ ಸಂಬಂಧಿಸಿದ ನ್ಯಾಯಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಶಾಸ್ತ್ರೀಯ ಜಟಿಲ ವಿಷಯಗಳು ಸಂಕ್ಷಿಪ್ತಕ್ರಮದಿಂದ ಇಲ್ಲಿ ವಿವರಿಸಲ್ಪಟ್ಟಿವೆ. ಹಾಗಾಗಿ ಇದರ ಕನ್ನಡ ಅನುವಾದವು ಶಾಸ್ತ್ರದ ಒಳಪ್ರವೇಶವಿಲ್ಲದವರಿಗೆ ವಾಸ್ತವ ಪ್ರಯೋಜನವನ್ನು ನೀಡಲಾರದು. ಒಂದುಬಾರಿ ಗುರುಮುಖದಿಂದ ಪಾಠಕೇಳಿರುವ ಜಿಜ್ಞಾಸುಗಳಿಗೆ ಇದು ಉಪಕಾರಿಯಾದೀತು ಎಂದು ಭಾವಿಸಿದ್ದೇವೆ.

ಈ ಗ್ರಂಥವನ್ನು ಅವಲೋಕಿಸಿ ಸೂಕ್ತ ನಿರ್ದೇಶನವನ್ನು ಹಾಗೂ ಅನುಗ್ರಹ ಸಂದೇಶವನ್ನು ಅನುಗ್ರಹಿಸಿದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಪ್ರಣಾಮ ಪೂರ್ವಕ ನಮಸ್ಕಾರಗಳು.

ಇದು ಸರ್ವಮೂಲಾನುವಾದದ ಇಪ್ಪತ್ತೈದನೆಯ ಸಂಪುಟ. ಪೂರ್ಣಪ್ರಜ್ಞ ವಿದ್ಯಾಪೀಠದ ಪಾಠಪ್ರವಚನದ ಒತ್ತಡದ ಮದ್ಯೆ ಡಾ.ಧನಂಜಯಾಚಾರ್ಯರು ಅನುವಾದ ಮಾಡಿರುತ್ತಾರೆ. ಇವರ ಅನುವಾದಕ್ಕೆ ಪರಮಪೂಜ್ಯ ಶ್ರೀ ಶ್ರೀ ಸುವಿದ್ಯೇಂದ್ರತೀರ್ಥಶ್ರೀಪಾದಂಗಳವರು ಪ್ರತಿಹಂತದಲ್ಲಿ ಮಾರ್ಗದರ್ಶನ ನೀಡಿ ಅನುಗ್ರಹಿಸಿರುತ್ತಾರೆ. ಶ್ರೀಪಾದರಿಗೆ ಪ್ರಣಾಮಪೂರ್ವಕ ನಮಸ್ಕಾರಗಳು. ಮತ್ತು ಅನುವಾದಕರಾದ ಡಾ.ಧನಂಜಯಾಚಾರ್ಯರಿಗೆ ಮಂಡಳಿಯ ಅಭಿನಂದನೆಗಳು.

ಆಂಗ್ಲ ಭಾಷೆಯಲ್ಲಿ ಈ ಗ್ರಂಥದ ಪರಿಚಯವನ್ನು ನೀಡಿರುವ ದಿವಂಗತ ಪ್ರೊ. ಕೆ.ಟಿ. ಪಾಂಡುರಂಗಿಯವರನ್ನು ಇಲ್ಲಿ ಸ್ಮರಿಸುವುದು ನಮ್ಮ ಕರ್ತವ್ಯ.

ಈ ಸಂಪುಟದ ಅಕ್ಷರ ಜೋಡಣೆಯನ್ನು ಶ್ರೀ ಆರ್.ಎಸ್.ಪ್ರೇಮಕುಮಾರ್ ಅವರು ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು. ಸಂಪುಟದ ಮುದ್ರಣವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಅವರಿಗೆ, ಮುಖಪುಟ ವಿನ್ಯಾಸ ಹಾಗೂ ಸಂಪುಟದ ಬಿಡುಗಡೆ ಹಾಗೂ ಇತರೆ ಈ ಗ್ರಂಥದ ಮುದ್ರಣಕ್ಕೆ ವಿವಿಧ ಹಂತಗಳಲ್ಲಿ ಶ್ರಮವಹಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಹೆಚ್.ಎನ್.ನಾರಾಯಣರಾವ್ ಹಾಗೂ ಕಾರ್ಯದರ್ಶಿ ಶ್ರೀ ಶ್ರೀಪಾದ ಸಿಂಗನಮಲ್ಲಿ ಇವರಿಗೆ ಕೃತಜ್ಞತೆಗಳು. ಈ ಮುದ್ರಣಕಾರ್ಯದಲ್ಲಿ ನೆರವು ನೀಡಿರುವ ಮಾಧ್ವ ಮಂಡಲದ ಎಲ್ಲಾ ಸಿಬ್ಬಂದಿ ವರ್ಗಕ್ಕೂ ಅಭಿನಂದನೆಗಳು.

**ಬೆಂಗಳೂರು**
**ದಿನಾಂಕ 25.9.2018**

**ಸಂಪಾದಕ ಮಂಡಳಿ**
**ಸರ್ವಮೂಲ ಕನ್ನಡ ಅನುವಾದ**
**ಅ.ಭಾ.ಮಾ.ಮ.ಮಂಡಲ**
**ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು**

# ಪ್ರಕಾಶಕರ ನುಡಿ

ಶ್ರೀಮನ್ಮಾಧ್ವಾಚಾರ್ಯರ 750ನೇ ಜಯಂತಿ ಅಂಗವಾಗಿ 1986ರಲ್ಲಿ ಪರಮಪೂಜ್ಯ ಶ್ರೀ ಶ್ರೀವಿಶ್ವೇಶ್ವತೀರ್ಥಶ್ರೀಪಾದರು ಸಂಸ್ಕೃತ ಭಾಷೆ ಪರಿಚಯ ಇಲ್ಲದ ಜಿಜ್ಞಾಸುಗಳಿಗೆ ಶ್ರೀ ಆಚಾರ್ಯರ ಸರ್ವಮೂಲಗ್ರಂಥಗಳ ಅಧ್ಯಯನದ ಪಾಠ, ಇತ್ಯಾದಿಗಳಿಗೆ ಅನುಕೂಲತೆಗೆ ಇದರ ಕನ್ನಡ ಅನುವಾದ ಪ್ರಕಟನೆಯ ಯೋಜನೆ ರೂಪಿಸಿ ಇದರಡಿಯಲ್ಲಿ ಈವರೆಗೆ 35 ಗ್ರಂಥಗಳು ಅಖಿಲಭಾರತ ಮಾಧ್ವ ಮಹಾಮಂಡಲದ ಮುಖಾಂತರ ಹಂತಹಂತವಾಗಿ ಜಿಜ್ಞಾಸುಗಳಿಗೆ ಲಭ್ಯವಾಗಿ ಇದರ ಉಪಯೋಗವನ್ನು ಪಡೆದಿರುತ್ತಾರೆ. ಶ್ರೀ ಆಚಾರ್ಯರ 37 ಸರ್ವಮೂಲ ಗ್ರಂಥಗಳಲ್ಲಿ ಶ್ರೀನ್ಯಾಯವಿವರಣ ಗ್ರಂಥವು 36ನೇ ಗ್ರಂಥವಾಗಿರುತ್ತದೆ. ಇನ್ನು ಕೇವಲ ಒಂದೇ ಗ್ರಂಥವಾದ ಶ್ರೀಅನುವ್ಯಾಖ್ಯಾನ ಗ್ರಂಥದ ಅನುವಾದ. ಶ್ರೀಪರಿವಾಸಭಟ್ಟರು ಅನುವಾದಿಸಿ ಇದರ ಎರಡು ಅಧ್ಯಾಯವನ್ನು 2 ಸಂಪುಟದಲ್ಲಿ ಪ್ರಕಟಿಸಿರುತ್ತದೆ. ಇನ್ನು ಈ ಗ್ರಂಥದ 3-4ನೇ ಅಧ್ಯಾಯ ಮಾತ್ರ ಬಾಕಿ ಇದ್ದು ಇದರ ಪ್ರಕಟನೆಯನ್ನು ಸಾಧ್ಯವಾದಷ್ಟು ತ್ವರಿತವಾಗಿ ಕೈಕೊಂಡು 2019ನೇ ಮಾರ್ಚ್ ಒಳಗಾಗಿ ಪ್ರಕಟನೆಯ ಯೋಜಿಸಿ ತನ್ಮೂಲಕ ಸರ್ವಮೂಲದ ಕನ್ನಡ ಅನುವಾದ ಯೋಜನೆ ಸಂಪೂರ್ಣಗೊಳ್ಳುವುದಕ್ಕೆ ಮಂಡಳವು ಪ್ರಯತ್ನಿಸುತ್ತದೆ.

ಈ ಗ್ರಂಥವನ್ನು ಅವಲೋಕಿಸಿ ಸೂಕ್ತ ನಿರ್ದೇಶನವನ್ನು ಹಾಗೂ ಅನುಗ್ರಹ ಸಂದೇಶವನ್ನು ಅನುಗ್ರಹಿಸಿದ ಪರಮಪೂಜ್ಯ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ಪ್ರಣಾಮ ಪೂರ್ವಕ ನಮಸ್ಕಾರಗಳು.

ನ್ಯಾಯವಿವರಣದ ಕನ್ನಡ ಅನುವಾದವನ್ನು ಪರಮಪೂಜ್ಯರಾದ ಶ್ರೀಶ್ರೀಸುವಿದ್ಯೇಂದ್ರತೀರ್ಥಶ್ರೀಪಾದರು ತಮ್ಮ ನಿರಂತರ ಪಾಠಪ್ರವಚನ

ಭಾರದಿಂದ, ತಾವು ಮಾರ್ಗದರ್ಶಕರಾಗಿ ನಿಂತು ತಮ್ಮ ಶಿಷ್ಯನಾದ ವಿ|| ಡಾ|| ಧನಂಜಯಚಾರ್ಯರ ಮೂಲಕ ಮಾಡಿಸಿರುತ್ತಾರೆ. ಪರಮಪೂಜ್ಯ ಶ್ರೀಶ್ರೀ ಸುವಿದ್ಯೇಂದ್ರತೀರ್ಥಶ್ರೀಪಾದಂಗಳವರಿಗೆ ಮಂಡಳವು ಸಾಷ್ಟಾಂಗ ಪ್ರಣಾಮಪೂರ್ವಕ ನಮಸ್ಕಾರವನ್ನು ಅರ್ಪಿಸುತ್ತಿದೆ. ಇದರಂತೆ ವಿ|| ಡಾ|| ಧನಂಜಯಾಚಾರ್ಯರು ಪೂರ್ಣಪ್ರಜ್ಞ ವಿದ್ಯಾಪೀಠದ ಪಾಠಪ್ರವಚನಗಳ ಒತ್ತಡಗಳ ಮಧ್ಯೆ ಬಿಡುವು ಮಾಡಿಕೊಂಡು ಈ ಅನುವಾದವನ್ನು ಮಾಡಿಕೊಟ್ಟಿರುವುದಕ್ಕಾಗಿ ಮಂಡಲವು ಪ್ರೀತಿಪೂರ್ವಕ ಅಭಿನಂದನೆ ಸಲ್ಲಿಸುತ್ತದೆ.

ಆಂಗ್ಲಭಾಷೆಯಲ್ಲಿ ಈ ಗ್ರಂಥದ ಪರಿಚಯವನ್ನು ನೀಡಿರುವ ಪ್ರೊ|| ಕೆ.ಟಿ. ಪಾಂಡುರಂಗಿಯವರನ್ನು ಇಲ್ಲಿ ಸ್ಮರಿಸುವುದು ಮಂಡಳದ ಕರ್ತವ್ಯ .

ಈ ಸಂಪುಟದ ಅಕ್ಷರ ಜೋಡಣೆಯನ್ನು ಶ್ರೀ ಆರ್.ಎಸ್.ಪ್ರೇಮಕುಮಾರ್ ಅವರು ಅಂದವಾಗಿ ಮಾಡಿಕೊಟ್ಟಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು. ಸಂಪುಟದ ಮುದ್ರಣವನ್ನು ಸಕಾಲಕ್ಕೆ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್ ಅವರಿಗೆ, ಮುಖಪುಟ ವಿನ್ಯಾಸ ಹಾಗೂ ಸಂಪುಟದ ಬಿಡುಗಡೆ ಹಾಗೂ ಇತರೆ ಈ ಗ್ರಂಥದ ಮುದ್ರಣಕ್ಕೆ ವಿವಿಧ ಹಂತಗಳಲ್ಲಿ ಶ್ರಮವಹಿಸಿದ ಮಂಡಲದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಹೆಚ್.ಎನ್.ನಾರಾಯಣರಾವ್ ಹಾಗೂ ಕಾರ್ಯದರ್ಶಿ ಶ್ರೀ ಶ್ರೀಪಾದ ಸಿಂಗನಮಲ್ಲಿ ಇವರಿಗೆ ಕೃತಜ್ಞತೆಗಳು. ಈ ಮುದ್ರಣಕಾರ್ಯದಲ್ಲಿ ನೆರವು ನೀಡಿರುವ ಮಾಧ್ವ ಮಂಡಲದ ಎಲ್ಲಾ ಸಿಬ್ಬಂದಿ ವರ್ಗಕ್ಕೂ ಅಭಿನಂದನೆಗಳು.

ಬೆಂಗಳೂರು
ದಿನಾಂಕ 25.9.2018

ಹೆಚ್.ವಿ.ಗೌತಮ್
ಅಧ್ಯಕ್ಷರು
ಅ.ಭಾ.ಮಾ.ಮ.ಮಂಡಲ,ಬೆಂಗಳೂರು

# ಮುನ್ನುಡಿ

ಭಗವಾನ್ ಬಾದರಾಯಣರು ಸಕಲ ಶಾಸ್ತ್ರಗಳೆಂಬ ಸಮುದ್ರವನ್ನು ಮಥನಮಾಡಿ ಬ್ರಹ್ಮಸೂತ್ರಗಳೆಂಬ ಅಮೃತವನ್ನು ಸಂಗ್ರಹಿಸಿದ್ದಾರೆ. ಈ ಅಮೃತವನ್ನು ಪಾನಮಾಡುವ ಅಧಿಕಾರ ಎಲ್ಲರಿಗೂ ಇಲ್ಲ. **'ಬ್ರಹ್ಮಾದ್ಯಾ ಅಮೃತೇ ಯದ್ವತ್ ಸಾಗರೋನ್ಮಥನೋದ್ಧೃತೇ'** ಹಿಂದೆ ಸಮುದ್ರ ಮಥನ ಮಾಡಿದಾಗ ಬಂದ ಅಮೃತವನ್ನು ಪಾನಮಾಡಲು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದ ಬ್ರಹ್ಮಾದಿ ದೇವತೆಗಳಿಗೆ ಮಾತ್ರ ಸಾಧ್ಯವಾಯಿತೇ ಹೊರತು ಎಲ್ಲರಿಗೂ ಅಲ್ಲ. ಅದರಂತೆ ವ್ಯಾಸರ ಪೂರ್ಣ ಅನುಗ್ರಹಕ್ಕೆ ಪಾತ್ರರಾದ್ದರಿಂದ ಶ್ರೀಮದಾಚಾರ್ಯರಿಗೆ ಮಾತ್ರ ಇದನ್ನು ಪಾನ ಮಾಡುವ ಅಧಿಕಾರವೇ ಹೊರತು, ಬೇರಾವ ದೇವತೆಗೂ ಇದು ಸಾಧ್ಯವಾಗದು. **'ಅಹಂ ತು ತತ್ಪ್ರಾಸಾದೈಕಮಹಾಸ್ಪದಬಲೋದ್ಧತಃ'.** ಅಂದರೆ ಈ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನಮಾಡುವ ಅಧಿಕಾರ ಶ್ರೀಮಧ್ವಾಚಾರ್ಯರಿಗೊಬ್ಬರಿಗೇ ಹೊರತು ಮತ್ತಾರಿಗೂ ಅಲ್ಲ ಎಂಬುದು ಸ್ಪಷ್ಟ.

ವೇದಾರ್ಥವನ್ನು ನಿರ್ಣಯಿಸಲು ಹೊರಟಿರುವ ಬ್ರಹ್ಮಸೂತ್ರಗಳಿಗೆ ಶ್ರೀಮಧ್ವಾಚಾರ್ಯರು ಮಾನ್ಯತೆಯನ್ನು ನೀಡಿದಷ್ಟು ಮತ್ತಾವ ದಾರ್ಶನಿಕನೂ ನೀಡಿಲ್ಲ. 'ಪರವಿದ್ಯೆ' ಎಂದು ಕರೆದು ಅನುತ್ತಮ ಪ್ರಾಮಾಣ್ಯವನ್ನು ಅಂಗೀಕರಿಸಿದರು. ಶ್ರೀಮಧ್ವರಿಗೆ ಬ್ರಹ್ಮಸೂತ್ರಗಳಲ್ಲಿ ಅಪಾರ ಗೌರವವಿದೆ ಎಂದರೆ ಕೆನ್ನೆ ತಟ್ಟಿ ಕೈಮುಗಿದು ಪೂಜಿಸುವಂತದು ಎಂದು ತಪ್ಪು ತಿಳಿಯಬಾರದು. 'ಶಬ್ದಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ' ಯಾವುದೇ ಒಂದು ಶಬ್ದದ ಅರ್ಥವನ್ನು ನಿರ್ಣಯಿಸಬೇಕಾದರೂ ಅದಕ್ಕೆ ಬ್ರಹ್ಮಸೂತ್ರಗಳೇ ಆಧಾರವಾಗಿರಬೇಕು ಎಂಬುದು ಅವರ ಆಶಯ. ಇವುಗಳನ್ನು ಸರಿಯಾಗಿ ಅರಿಯದಿದ್ದರೆ, ವೇದಾರ್ಥಗಳನ್ನು ಸರಿಯಾಗಿ ಅರಿತುಕೊಳ್ಳದೆ ಸಜ್ಜನರು ಮುಕ್ತಿಯಿಂದ

ವಂಚಿತರಾಗುತ್ತಾರೆ ಎಂಬ ಕಳವಳ. ಅದಕ್ಕಾಗಿಯೇ ಶ್ರೀಮದಾಚಾರ್ಯರು ಬ್ರಹ್ಮಸೂತ್ರಗಳನ್ನು ಆಧರಿಸಿ ಬ್ರಹ್ಮಸೂತ್ರಭಾಷ್ಯ, ಅನುಭಾಷ್ಯ, ಅಣುಭಾಷ್ಯ, ನ್ಯಾಯವಿವರಣೆ ಎಂಬ ನಾಲ್ಕು ಗ್ರಂಥಗಳನ್ನು ರಚಿಸಿದರು. ಇವುಗಳಲ್ಲಿ ಅಣುಭಾಷ್ಯ ಬ್ರಹ್ಮಸೂತ್ರಭಾಷ್ಯದ ಸಂಗ್ರಹವಾದರೆ ನ್ಯಾಯವಿವರಣೆಯು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನ್ಯಾಯಮಾಲೆಯ ವಿವರಣಾತ್ಮಕವಾಗಿದೆ. ಈರೀತಿಯ ಸಂಗ್ರಹಾತ್ಮಕವಾದ ಗ್ರಂಥಗಳು ಬೇರೆ ಸಿದ್ಧಾಂತಗಳಲ್ಲಿಯೂ ಹೇರಳವಾಗಿವೆ. ನಿಜ. ಆದರೂ ಒಂದೊಂದೇ ಪದದಿಂದ ಒಂದೊಂದು ಅಧಿಕರಣಗಳ ವಿಷಯಗಳನ್ನು ಸಂಗ್ರಹಿಸುವ ಅಣುಭಾಷ್ಯದಂತಹ ಗ್ರಂಥ, ಒಂದೊಂದೇ ವಾಕ್ಯದಿಂದ ಒಂದೊಂದು ಅಧಿಕರಣಗಳ ಪೂರ್ವಪಕ್ಷ– ಸಿದ್ಧಾಂತನ್ಯಾಯಗಳನ್ನು ಸಂಗ್ರಹಿಸುವ ನ್ಯಾಯವಿವರಣದಂತಹ ಗ್ರಂಥ ಮತ್ತಾವ ಸಿದ್ಧಾಂತದಲ್ಲಿಯೂ ಇಲ್ಲ ಎಂದರೆ ತಪ್ಪಾಗಲಾರದು.

## ನ್ಯಾಯವಿವರಣದ ವೈಶಿಷ್ಟ್ಯ

ಇತ್ತೀಚಿನ ದಿನಗಳಲ್ಲಿ ನ್ಯಾಯವಿವರಣದ ಪಾಠ–ಪ್ರವಚನಗಳು ಬಹಳ ಅಪರೂಪವಾಗಿವೆ. ಬ್ರಹ್ಮಸೂತ್ರಭಾಷ್ಯ–ತತ್ತ್ವಪ್ರಕಾಶಿಕಾ, ಅನುವ್ಯಾಖ್ಯಾನ–ಸುಧಾದಿಗಳ ಪಾಠ, ಮಂಗಳಗಳಲ್ಲಿಯೇ ತಲ್ಲೀನರಾಗಿ ನ್ಯಾಯವಿವರಣವನ್ನು ಅಧ್ಯಯನ ಪರಂಪರೆಯಿಂದ ದೂರ ಉಳಿಸಿದ್ದೇವೆ. ವಸ್ತುತಃ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳ ಅಧ್ಯಯನಕ್ಕಿಂತ ಮೊದಲು ಅಧ್ಯಯನ ಮಾಡಬೇಕಾದ ಗ್ರಂಥ ನ್ಯಾಯವಿವರಣ. ಭಾಷ್ಯ , ಅನುಭಾಷ್ಯಗಳಲ್ಲಿ ಪೂರ್ವಪಕ್ಷ–ಸಿದ್ಧಾಂತಗಳಿಗೆ ಸಂಬಂಧಿಸಿದ ಅನೇಕ ಪ್ರಮಾಣಗಳು, ಇತರ ದರ್ಶನಗಳ ವಿಮರ್ಶೆ, ಪ್ರಾಮಾಣ್ಯಸ್ವತಸ್ತ್ವ, ಕಥಕತಾವಾದ ಮೊದಲಾದ ಅನೇಕ ಜಟಿಲ ಪ್ರಮೇಯಗಳು ಅಡಕವಾಗಿವೆ. ಇವುಗಳಲ್ಲಿ ಅಧ್ಯೇತೃ ಕಳೆದು ಹೋಗುತ್ತಾನೆ. ನಮ್ಮ ಸಿದ್ಧಾಂತವೇನು? ಎಂಬುದನ್ನೇ ಅರಿಯದೇ ಹೋದಾನು. ಅರಿತರೂ ವಿಸ್ತಾರದಲ್ಲಿ ಮರೆಯುತ್ತಾನೆ. ಮೊದಲು ಸಂಕ್ಷೇಪವಾಗಿ ತಿಳಿದು ವಿಸ್ತಾರದಲ್ಲಿ ತೊಡಗಿದರೆ ಎರಡೂ ಅಚ್ಚಳಿಯದೆ ಉಳಿಯುತ್ತವೆ ಎಂಬುದು ನನ್ನ ಅಭಿಪ್ರಾಯ. ಅಥವಾ ಭಾಷ್ಯ, ಅನುಭಾಷ್ಯಗಳ ಅಧ್ಯಯನದ ಅನಂತರವಾದರೂ ನ್ಯಾಯವಿವರಣದ ಅಧ್ಯಯನವಾದರೆ ವಿಸ್ತೃತವಾದ ವಿಷಯವನ್ನು ಕ್ರೋಢೀಕರಿಸಿ ತಿಳಿದುಕೊಂಡು ಬುದ್ಧ್ಯಾರೂಢಮಾಡಿಕೊಳ್ಳಲು ಸಹಾಯಕವಾಗುತ್ತದೆ.

ಹಾಗಂತ ವಿಸ್ತಾರಕ್ಕೆ ಹೆದರುವ ಮಂದರಿಗೆ ಮಾತ್ರ ಇದರ ಆವಶ್ಯಕತೆ ಹೊರತು ಬುದ್ಧಿವಂತರಿಗೆ ಈ ಗ್ರಂಥ ಬೇಡ ಎಂದು ತಿಳಿಯಬಾರದು.

**ಇತ್ಯನಂತಮಹಾನ್ಯಾಯಮೀಮಾಂಸಾಪಾರವಾರಿಧೇಃ**
**ಉತ್ತಾರಣಾತ್ಮಶಕ್ತ್ಯೈವ ವ್ಯಾಕುಲೀಕೃತಚೇತಸಾಂ ॥**
**ಮಂದಾನಾಮುಪಕಾರಾಯ ಮಹತಾಂ ಚೋಽಭ್ರಿತಾತ್ಮನಾಂ ।**
**ತದ್ವಿಶೇಷಪರಿಜ್ಞಾನಪ್ರದೀಪ್ತಾರ್ಕಾಭಚೇತಸಾಂ ॥**
**ವಿಶೇಷಗಾಢೇ ಮನಸಿ ನಿತರಾಮುಪಕಾರಕಃ ॥**

**ನ್ಯಾಯಪ್ಲವೋ ಮಯಾಽಕಾರಿ ।**

'ಬ್ರಹ್ಮಮೀಮಾಂಸಾಶಾಸ್ತ್ರವು ಸಮುದ್ರದಂತೆ ಅನಂತ ಅಪಾರ. ದುರವಗಾಹ್ಯ. ಇದನ್ನು ದಾಟಲು ಅಂದರೆ ಅರ್ಥೈಸಿಕೊಳ್ಳಲು ಅಸಮರ್ಥರಾದ ಅಜ್ಞಾನಿಗಳಿಗೆ ಗಾಬರಿಯುಂಟಾದಾಗ ಈ ಗ್ರಂಥವು ತೆಪ್ಪದಂತೆ ಉಪಕಾರಕವಾಗಿದೆ. ಅಷ್ಟೇ ಅಲ್ಲದೆ ಮಧ್ಯಾಹ್ನ ಸೂರ್ಯನಂತೆ ಪ್ರಖರವಾದ ಜ್ಞಾನವಿರುವ ವಿದ್ವಾಂಸರಿಗೂ ಅವರ ಮನಸ್ಸು ಬ್ರಹ್ಮಸೂತ್ರಗಳೆಂಬ ಸಮುದ್ರದಲ್ಲಿ ಆಳವಾಗಿ ಮುಳುಗಿದಾಗಲೂ ಈ ನೌಕೆಯು ತುಂಬಾ ಉಪಕಾರವನ್ನು ಉಂಟುಮಾಡುವುದು'.

ನ್ಯಾಯವಿವರಣೆ ಎಂಬ ಈ ಗ್ರಂಥವು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನ್ಯಾಯಮಾಲೆಯ ವಿಸ್ತಾರರೂಪವೆಂದು ಪ್ರಸಿದ್ಧವಾಗಿದೆ. ನ್ಯಾಯಮಾಲೆಯು ಪ್ರಥಮಾಧ್ಯಾಯ ತೃತೀಯಪಾದದಿಂದ ಆರಂಭವಾಗುವುದು. ನ್ಯಾಯವಿವರಣೆಯಲ್ಲಿ ಮಾತ್ರ ಜಿಜ್ಞಾಸಾಧಿಕರಣದಿಂದಲೇ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ವಿವರಿಸಿದ್ದಾರೆ. ಶ್ರೀಮಧ್ವಾಚಾರ್ಯರು ಭಾಷ್ಯಕಾರರು ಮಾತ್ರವಲ್ಲ, ಓದುಗರ ಮನಸ್ಸನ್ನರಿತ ಉತ್ತಮ ಅಧ್ಯಾಪಕರೂ ಹೌದು. ಎಲ್ಲಿ ಸಂದೇಹ ಬರುತ್ತದೆ, ಎಷ್ಟು ಹೇಳಿದರೆ ಅದು ಪರಿಹಾರವಾಗುತ್ತದೆ ಎಂಬುದನ್ನು ಸಮಗ್ರವಾಗಿ ತಿಳಿದಿದ್ದಾರೆ. ನ್ಯಾಯವಿವರಣೆಯ ಶೈಲಿ ಬಲು ವಿಚಿತ್ರವಾಗಿದೆ. ಅದನ್ನು ಟೀಕಾಕೃತ್ಪಾದರ ವಾಕ್ಯದಲ್ಲಿಯೇ ಹೇಳುವುದಾದರೆ,

'ಅತ್ರ ಕ್ವಚಿತ್ ಪೂರ್ವಪಕ್ಷಸಿದ್ಧಾಂತಯೋಃ ಪೃಥಗ್ ವಿವರಣಂ ಕ್ರಿಯತೇ । ಯಥಾ ಪ್ರಥಮಾಧಿಕರಣೇ । ಕ್ವಚಿತ್ ಸಿದ್ಧಾಂತಪುರಸ್ಕಾರೇಣ ಪೂರ್ವಪಕ್ಷವಚನೇನ ತನ್ನ್ಯಾಯವಿವರಣಪೂರ್ವಕಂ ಸಿದ್ಧಾಂತನ್ಯಾಯೋ ವಿವ್ರಿಯತೇ। ಯಥಾ ದ್ವಿತೀಯಾಧಿಕರಣೇ । ಕ್ವಚಿತ್ತು ಸಿದ್ಧಾಂತವಚನೇನೈವ ಯಥಾಽತ್ರಾಧಿಕರಣೇ ।

'ಜಿಜ್ಞಾಸಾಧಿಕರಣದಲ್ಲಿ ವಿವರಿಸಿದಂತೆ ಕೆಲವು ಕಡೆಗಳಲ್ಲಿ ಪೂರ್ವಪಕ್ಷನ್ಯಾಯ, ಸಿದ್ಧಾಂತನ್ಯಾಯಗಳನ್ನು ಪ್ರತ್ಯೇಕವಾಗಿ ವಿವರಿಸುತ್ತಾರೆ. ಇನ್ನು ಕೆಲವು ಸಂದರ್ಭಗಳಲ್ಲಿ ಸಿದ್ಧಾಂತದ ವಚನದಿಂದಲೇ ಪೂರ್ವಪಕ್ಷವನ್ನು ಹೇಳಿ ಪೂರ್ವಪಕ್ಷ ನ್ಯಾಯವನ್ನು ವಿವರಿಸಿ ಸಿದ್ಧಾಂತನ್ಯಾಯವನ್ನು ಜನ್ಮಾಧಿಕರಣದಲ್ಲಿ ವಿವರಿಸಿದಂತೆ ವಿವರಿಸಿರುತ್ತಾರೆ (ಅಂದರೆ ಜಿಜ್ಞಾಸಾಧಿಕರಣದಂತೆ ಪೂರ್ವಪಕ್ಷವನ್ನು ಪ್ರತ್ಯೇಕವಾಗಿ ಮಂಡಿಸಿರುವುದಿಲ್ಲ.) ಇನ್ನು ಕೆಲವು ಕಡೆ ಸಮನ್ವಯಾಧಿಕರಣದಲ್ಲಿರುವಂತೆ ಪೂರ್ವಪಕ್ಷ ವಾಕ್ಯವನ್ನೂ ಹೇಳದೆ ಸಿದ್ಧಾಂತವನ್ನು ಮಾತ್ರ ವಿವರಿಸುತ್ತಾರೆ.

ದ್ವಿತೀಯಾಧ್ಯಾಯದ ದ್ವಿತೀಯಪಾದದ ನ್ಯಾಯಗಳು ಅನುವ್ಯಾಖ್ಯಾನ ದಲ್ಲಿಯೇ ಸ್ಫುಟವಾಗಿ ತಿಳಿಯುವುದರಿಂದ ಅವುಗಳನ್ನು ನ್ಯಾಯಮಾಲೆಯಲ್ಲಿ ಸಂಗ್ರಹಿಸಲಿಲ್ಲ. ಈ ಗ್ರಂಥದಲ್ಲಿಯೂ ಅವುಗಳ ವಿವರಣೆಯನ್ನು ನೀಡಲಿಲ್ಲ.

ಇಷ್ಟೇ ಅಲ್ಲದೆ ಕೆಲವು ಅಧಿಕರಣಗಳಲ್ಲಿ ನ್ಯಾಯಗಳನ್ನು ಶ್ರೀಮದಾ ಚಾರ್ಯರು ಸಂಗ್ರಹಿಸಿಲ್ಲ. ವಿವರಿಸಿಯೂ ಇಲ್ಲ. ಅಲ್ಲಿಯೂ ಅವುಗಳ ನ್ಯಾಯಗಳು ಭಾಷ್ಯದಿಂದ ಸ್ಫುಟವಾಗಿ ತಿಳಿಯುತ್ತಿರುತ್ತವೆ. ಇಲ್ಲವಾದರೆ ಶಿಷ್ಯರು ತಾವೇ ಅದನ್ನು ಊಹಿಸಲಿ ಎಂಬ ಅಭಿಪ್ರಾಯ ಆಚಾರ್ಯದ್ದಾಗಿರುತ್ತದೆ.

ಎಲ್ಲದಕ್ಕಿಂತಲೂ ಅದ್ಭುತವೆಂದರೆ, ಸಾಧಾರಣವಾಗಿ ಪೂರ್ವಪಕ್ಷ ನ್ಯಾಯ ಸಿದ್ಧಾಂತನ್ಯಾಯಗಳು ಬೇರೆಬೇರೆ ಆಗಿರುತ್ತವೆ. ಆದರೆ ಕೆಲವು ಅಧಿಕರಣಗಳಲ್ಲಿ ಪೂರ್ವಪಕ್ಷಕ್ಕೂ ಸಿದ್ಧಾಂತಕ್ಕೂ ಒಂದೇ ನ್ಯಾಯವನ್ನೇ ಹೇಳಿರುತ್ತಾರೆ.

'ಏತಾ ಏವ ತ್ವತಿಬಲಾಃ ಸಿದ್ಧಾಂತಸ್ಯೈವ ಸಾಧಿಕಾಃ'

ಪೂರ್ವಪಕ್ಷ ಯುಕ್ತಿಗಳೇ ನಿರವಕಾಶವಾಗಿ ಪ್ರಬಲವಾಗಿ ಸಿದ್ಧಾಂತವನ್ನೂ ಸಾಧಿಸುತ್ತವೆ ಎಂಬುದು ಅವರ ವಾದ. ಇದನ್ನು ವಾದಿರಾಜರು ಸುಂದರವಾಗಿ ಬಣ್ಣಿಸಿದ್ದಾರೆ— 'ಪೂರ್ವಪಕ್ಷಿಯು ಹೇಳಿದ ಯುಕ್ತಿಗಳಿಂದಲೇ ಅವರ ಪಕ್ಷವನ್ನು ನಿರಾಕರಿಸುವ ಭಾಷ್ಯಕಾರರು ಕುವಲಯಾಪೀಡದ ದಂತದಿಂದಲೆ ಅದನ್ನು ಸಂಪರಿಸಿದ ಕೃಷ್ಣನ ಭಕ್ತಾಗ್ರೇಸರರು ಎಂದು, ರಾವಣನು ಹಚ್ಚಿದ ಬೆಂಕಿಯಿಂದಲೇ ರಾವಣನ ಪಟ್ಟಣವನ್ನು ಸುಟ್ಟ ಹನುಮಂತನ ಮೂರನೇ ಅವತಾರವೆಂದು ಸ್ಪಷ್ಟವಾಗುತ್ತದೆ' ಎಂದು.

ನಾಲ್ಕನೆಯ ಅಧ್ಯಾಯದ ತಮೋಕೋಧಿಕರಣವಲ್ಲಿ 'ತೇ ಬ್ರಹ್ಮಲೋಕೇ ತು

ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವೇ' ಎಂಬ ಶ್ರುತಿಯ ಉಲ್ಲೇಖ ಬಂದಿದೆ. ಈ ಶ್ರುತಿಯು ಎಲ್ಲ ಕಡೆಗಳಲ್ಲಿಯೂ ಹೀಗೆ ಅಧ್ಯಯನ ಪರಂಪರೆಯಲ್ಲಿ ಉಳಿದಿದೆ. ಆದರೆ ಶ್ರೀಮದಾಚಾರ್ಯರು ಇಲ್ಲಿ 'ಪರಾನ್ಯತಾತ್' ಎಂಬ ಪಾಠವನ್ನು ಸ್ವೀಕರಿಸಿದ್ದಾರೆ ಎಂದನಿಸುತ್ತದೆ. ಏಕೆಂದರೆ ಅವರು ಅಲ್ಲಿಯೇ 'ಅನ್ಯತ್ವದ' ವಿವರಣೆಯನ್ನು ನೀಡುತ್ತಾರೆ. ಆದರೆ ಮುದ್ರಿತ ಪುಸ್ತಕಗಳಲ್ಲಿ 'ಪರಾಮೃತಾತ್' ಎಂದೇ ನ್ಯಾಯವಿವರಣೆಯ ಪಾಠವು ಉಳಿದುಕೊಂಡು ಬಂದಿರುವುದು ಅಚ್ಚರಿಯೆನಿಸುತ್ತಿದೆ. ಬಲ್ಲವರು ತಿಳಿಸಿ ಹೇಳಬೇಕು ಎಂದು ವಿನಂತಿಸುತ್ತೇನೆ.

## ಜಯತೀರ್ಥರ ಟೀಕೆ

ಟೀಕಾಚಾರ್ಯರೆಂದೇ ಪ್ರಸಿದ್ಧರಾದ ಜಯತೀರ್ಥರು ನ್ಯಾಯವಿವರಣೆ ಎಂಬ ಗ್ರಂಥಕ್ಕೂ ವ್ಯಾಖ್ಯಾನವನ್ನು ಬರೆದಿದ್ದಾರೆ. ಶ್ರೀಮದಾಚಾರ್ಯರ ಪೂರ್ವೋತ್ತರವಾಕ್ಯಗಳಿಗೆ ಸುಂದರವಾದ ಸಂಗತಿಯನ್ನು ನೀಡುವುದು, ಲೌಕಿಕ ವ್ಯಾಕರಣಕ್ಕನುಗುಣವಾಗಿ ಶುದ್ಧಿಯನ್ನು ಸಾಧಿಸುವುದು, ಮೂಲವಾಕ್ಯಗಳಿಗೆ ವಿವರಣೆ ನೀಡುವುದು, ಮಧ್ಯದಲ್ಲಿ ಸೊಗಸಾದ ಆಭಾಣಕಗಳನ್ನು ಹೇಳುವುದು ಇವೆ ಮೊದಲಾದವುಗಳು ಟೀಕಾಚಾರ್ಯರ ಶೈಲಿಯ ವೈಶಿಷ್ಟ್ಯಗಳೆಂದು ವಿದ್ವಾಂಸರಿಗೆ ತಿಳಿದಿದೆ. ಆ ಎಲ್ಲ ವೈಶಿಷ್ಟ್ಯಗಳನ್ನೂ ನಾವು ನ್ಯಾಯವಿವರಣೆಯ ಟೀಕೆಯಲ್ಲಿಯೂ ಕಾಣುತ್ತೇವೆ. ಆವಶ್ಯಕತೆಗೆ ತಕ್ಕಂತೆ ಕೆಲವು ವಿಷಯಗಳನ್ನು ಈ ಕನ್ನಡದ ಅನುವಾದದಲ್ಲಿ ಸಂಗ್ರಹಿಸುವ ಪ್ರಯತ್ನವನ್ನು ಮಾಡಲಾಗಿದೆ.

ನ್ಯಾಯವಿವರಣೆಯಲ್ಲಿ ಆಕಾಶಾಧಿಕರಣ, ಪ್ರಾಣಾಧಿಕರಣಗಳನ್ನು ಪ್ರಸ್ತುತ ಪಡಿಸಿ ಜ್ಯೋತಿರಧಿಕರಣವೊಂದನ್ನು ಬಿಟ್ಟು ಮುಂದಿನ ಗಾಯತ್ರ್ಯಧಿಕರಣದ ನಿರೂಪಣೆಯನ್ನು ಒಂದೇ ಮೂಲದಲ್ಲಿ ಮಾಡಿದ್ದಾರೆ. ನಮಗೆ ಎರಡು ಪ್ರಶ್ನೆಗಳು ಬರುತ್ತವೆ. (1) ಜ್ಯೋತಿರಧಿಕರಣವನ್ನು ಬಿಟ್ಟಿದ್ದು ಏಕೆ? (2) ಎಲ್ಲ ಅಧಿಕರಣ ಗಳನ್ನು ಪ್ರತ್ಯೇಕವಾಗಿ ನಿರೂಪಣೆ ಮಾಡಿದಂತೆ ಮಾಡದೆ ಒಂದೇ ಮೂಲದಲ್ಲಿ ನಿರೂಪಿಸಿದ್ದು ಏಕೆ? ಎಂದು. ಇದಕ್ಕೆ ಟೀಕೆಯಲ್ಲಿ ಉತ್ತರವನ್ನು ಹೀಗೆ ನೀಡಿದ್ದಾರೆ. 'ಏತಾನಿ ಚತ್ವಾರ್ಯತಿದೇಶಾಧಿಕರಣಾನಿ। ಅತ್ರ ಪೂರ್ವಪಕ್ಷೇ ಅಧಿಕಾಶಂಕಾ ದರ್ಶನೀಯಾ। ಜ್ಯೋತಿರಧಿಕರಣೇ ತು ಭಾಷ್ಯದೇವ ಸಾಧಿತಾ। ಯದಾಹ–'ಅಗ್ನಿಸೂಕ್ತತ್ವಾತ್' ಇತಿ। ಅತಸ್ತದ್ವಿಹಾಯಾನ್ಯತ್ರ ಭಾಷ್ಯಾದ್ಯನವಗತಾಧಿ ಕಾಶಂಕಾಪ್ರದರ್ಶನೇನ ಲಾಘವಾಯೈಕೋಕ್ತ್ಯಾ ನ್ಯಾಯವಿವರಣಂ ಕ್ರಿಯತೇ।' 'ಈ

ನಾಲ್ಕು ಅಧಿಕರಣಗಳು ಅತಿದೇಶಾಧಿಕರಣಗಳು.[1] ಪೂರ್ವಪಕ್ಷದಲ್ಲಿ ಅಧಿಕವಾದ ಶಂಕೆಯನ್ನು ಮಾಡಬೇಕು. ಜ್ಯೋತಿರಧಿಕರಣದ ಶಂಕೆಯನ್ನು ಭಾಷ್ಯದಲ್ಲಿಯೇ ಮಾಡಲಾಗಿದೆ– 'ಜ್ಯೋತಿಶ್ಶಬ್ದವಿರುವುದು ಅಗ್ನಿಸೂಕ್ತದಲ್ಲಿ. ಆದ್ದರಿಂದ ಜ್ಯೋತಿಶ್ಶಬ್ದವಾಚ್ಯನು ಅಗ್ನಿಯೇ ಆಗಬೇಕೇ ಹೊರತು ವಿಷ್ಣುವಲ್ಲ. ಎಂದು' ಈ ಅಧಿಕರಣದ ಪೂರ್ವಪಕ್ಷದ ಅಧಿಕಾಂಶವು ಭಾಷ್ಯದಿಂದಲೇ ಸ್ಪಷ್ಟವಾಗಿ ತಿಳಿಯುವುದರಿಂದ ಜ್ಯೋತಿರಧಿಕರಣವನ್ನು ಪ್ರತ್ಯೇಕವಾಗಿ ಹೇಳಲಿಲ್ಲ ಎಂಬುದು ಮೊದಲನೆಯ ಪ್ರಶ್ನೆಗೆ ಉತ್ತರ. ಇನ್ನು ಉಳಿದ ಮೂರಧಿಕರಣಗಳ ಪೂರ್ವಪಕ್ಷದ ಅಧಿಕಾಶಂಕೆಯು ಭಾಷ್ಯದಲ್ಲಿ ಸ್ಪಷ್ಟವಾಗುವುದಿಲ್ಲವಾದ್ದರಿಂದ ಇಲ್ಲಿ ವಿವರಿಸಿದ್ದಾರೆ. ಇವು ಅತಿದೇಶಾಧಿಕರಣಗಳಾದ್ದರಿಂದ ಪರಿಹಾರವು ಎಲ್ಲದರಲ್ಲಿಯೂ ಸಮಾನವೆಂಬ ಲಾಘವವಿರುವುದರಿಂದ ಮೂರು ಅಧಿಕರಣಗಳನ್ನೂ ಒಂದೇ ಮೂಲದಲ್ಲಿ ನಿರೂಪಿಸಿದ್ದಾರೆ ಎಂಬುದು ಎರಡನೆಯ ಆಕ್ಷೇಪಕ್ಕೆ ಉತ್ತರ. ಹೀಗೆ ಅನೇಕ ಸೂಕ್ಷ್ಮವಿಚಾರಗಳನ್ನು ಟೀಕಾಕೃತ್ಪಾದರ ವ್ಯಾಖ್ಯಾನದಲ್ಲಿ ಕಾಣಬಹುದು.

## ಏರಿಬಾಲಾಚಾರ್ಯರ ಟಿಪ್ಪಣೀ

ಜಯತೀರ್ಥರ ಟೀಕೆಗೆ ಏರಿಬಾಲಾಚಾರ್ಯರ ಟಿಪ್ಪಣಿಯೂ ಉಪಲಬ್ಧವಿದೆ. ಸತ್ಯಪರಾಯಣತೀರ್ಥರ ಶಿಷ್ಯರಾದ ಇವರು ಲಕ್ಷ್ಮೀ ನಾರಾಣಾಚಾರ್ಯರೆಂಬುವವರ ಪ್ರಾರ್ಥನೆಯಂತೆ ಈ ಟಿಪ್ಪಣಿಯನ್ನು ಬರೆದಿದ್ದಾರೆ ಎಂದು ಅವರ ಮಂಗಳಾಚರಣೆಯಿಂದ ತಿಳಿಯುತ್ತದೆ. 'ಬಾಲಕನು ಎಡವಿದರೆ ಯಾರೂ ಬೈಯುವುದಿಲ್ಲ. ನನ್ನ ಹೆಸರೂ ಬಾಲ ಎಂದಿರುವುದರಿಂದ ನಾನು ಎಡವಿದರೂ ಯಾರೂ ಆಕ್ಷೇಪಿಸುವಂತಿಲ್ಲ' 'ನ ನಿಂದ್ಯೋಽಸ್ಮಿ ನಾಮ್ನಾ ಬಾಲಃ ಸ್ಖಲನ್ನಪಿ' ಎಂದು ಕೇಳಿಕೊಂಡಿದ್ದಾರೆ. ಆದರೆ ತುಂಬಾ ಉಪಯುಕ್ತವಾದ ಟಿಪ್ಪಣಿಯನ್ನು ಬರೆದಿದ್ದಾರೆ. ಟೀಕಾಕೃತ್ಪಾದರು ಸಂಪೂರ್ಣವಾಗಿ ನ್ಯಾಯವಿವರಣೆಗೆ ಟೀಕೆಯನ್ನು ಬರೆದಿಲ್ಲವೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. 'ಸನ್ನ್ಯಾಯವಿವೃತಿವ್ಯಾಖ್ಯಾಂ ಕರಿಷ್ಯಾಮಿ ಯಥಾಮತಿ' ಎಂದು ಪ್ರತಿಜ್ಞೆಗೈದ ಜಯತೀರ್ಥರು ಏಕೆ ವ್ಯಾಖ್ಯಾನವನ್ನು ಮಾಡಲಿಲ್ಲ? ಎಂಬ ಪ್ರಶ್ನೆಯನ್ನು ಮಾಡಿಕೊಂಡು 'ಉಚ್ಚೈರ್ಮಾ ವೋಚಃ। ಪರೋಽಪಿ ಶ್ರೋಷ್ಯತಿ' ಎಂದು ಸುಧಾವಾಕ್ಯವನ್ನೇ ಉದ್ಧರಿಸಿದ್ದಾರೆ. 'ಹೀಗೆ ಅಸಂಬದ್ಧ ಪ್ರಶ್ನೆಯನ್ನು ಜೋರಾಗಿ

---

1. 'ಯತ್ರ ಶಂಕಾಯಾಮಾಧಿಕ್ಯಂ ಪರಿಹಾರಸ್ಯ ಚಾವಿಶಿಷ್ಟತ್ವಂ ತತ್ರೈವಾತಿದೇಶಪ್ರವೃತ್ತಿನಿಯಮಾತ್'

ಕೇಳಬೇಡ. ಯಾರಾದರೂ ಕೇಳಿ ಅಪಹಾಸ್ಯ ಮಾಡಿಯಾರು' ಎಂದು ಅದರ ಅಭಿಪ್ರಾಯ. ವ್ಯಾಖ್ಯಾನವನ್ನು ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ವ್ಯಾಖ್ಯಾನವನ್ನು ಮಾಡಿಯೇ ಇದ್ದಾರೆ. ಇನ್ನು ಪೂರ್ಣವಾಗಿ ಏಕೆ ಮಾಡಲಿಲ್ಲ? ಎಂಬ ಪ್ರಶ್ನೆ ಉಳಿಯುತ್ತದೆ. ಅದಕ್ಕೆ ಉತ್ತರ 'ಯಥಾಮತಿ' ಎಂದು. ಇಲ್ಲಿ ಮತಿ ಎಂದರೆ 'ಇಚ್ಛೆ' ಎಂದರ್ಥ. ಇಷ್ಟೇ ವ್ಯಾಖ್ಯಾನವನ್ನು ಮಾಡಬೇಕೆಂಬುದು ಅವರ ಇಚ್ಛೆ, ಅದಕ್ಕನುಗುಣವಾಗಿ ಮಾಡಿದ್ದಾರೆ. ಇಷ್ಟು ವ್ಯಾಖ್ಯಾನಿಸಿದ್ದರಲ್ಲೂ ಒಂದು ಆಂತರ್ಯವಿದೆ— 'ನ್ಯಾಯಮಾಲೆಯಲ್ಲಿ ಮೊದಲ ಎರಡು ಪಾದಗಳಿಗೆ ನ್ಯಾಯಗಳನ್ನೇ ಹೇಳದಿರುವಾಗ ನ್ಯಾಯವಿವರಣೆಯು ಯಾವುದರ ವಿವರಣೆ? ಎಂದು ಜಿಜ್ಞಾಸುಗಳಿಗೆ ಬರುವ ಮಾನಸಿಕ ಗೊಂದಲವನ್ನು ಕಳೆಯುವುದಕ್ಕೆ ಮೊದಲ ಎರಡು ಪಾದಗಳಿಗೆ ವ್ಯಾಖ್ಯಾನವನ್ನು ಮಾಡಿದ್ದಾರೆ. ನ್ಯಾಯಮಾಲೆಯನ್ನೊಳಗೊಂಡ ಸ್ವಲ್ಪಭಾಗಕ್ಕೂ ವ್ಯಾಖ್ಯಾನಮಾಡಿ ವ್ಯಾಖ್ಯಾನಕ್ರಮ ವನ್ನು ತಿಳಿಸಿ ಮುಂದಿನ ಜವಾಬ್ದಾರಿಯನ್ನು ಶಿಷ್ಯರಿಗೇ ನೀಡಿದ್ದಾರೆ. ಅಷ್ಟೇ ಅಲ್ಲದೆ, ಕೊನೆಗೆ ಮಂಗಳಾಚರಮೆಯನ್ನು ಮಾಡಿ ಗ್ರಂಥದಲ್ಲಿರಿಸದಿದ್ದರೂ ಆಸ್ತಿಕರಾದ್ದರಿಂದ ಮಂಗಲವನ್ನು ಮಾಡಿ ಇರುತ್ತಾರೆ ಎಂದು ಊಹಿಸಬಹುದು. ಆದ್ದರಿಂದ ಮಂಗಲಾಚರಣೆ ಇಲ್ಲದೆ ಟೀಕೆಯು ಸಮಾಪ್ತವಾಗಿದೆ ಎಂದು ಆಕ್ಷೇಪಿಸಬಾರದು' ಎಂದು ಟೀಕಾಕೃತ್ಪಾದರನ್ನು ಸಮರ್ಥಿಸಿದ ಬಾಲಾಚಾರ್ಯರ ಶೈಲಿ ಅದ್ಭುತವಾಗಿದೆ.

### ರಘೂತ್ತಮಸ್ವಾಮಿಗಳ ಟೀಕೆ

ನ್ಯಾಯವಿವರಣೆಗೆ ಶ್ರೀಮಟ್ಟೀಕಾಕೃತ್ಪಾದರ ಟೀಕೆಯು ಆರಂಭದ ಎರಡೂವರೆ ಪಾದಗಳಿಗೆ ಮಾತ್ರ ಉಪಲಬ್ಧವಿದ್ದು ಮಂಗಲಪದ್ಯವೂ ಇಲ್ಲದೆ ಕೊನೆಗೊಳ್ಳುತ್ತದೆ. ತಣ್ಣಗೆ ಬೀಸುವ ಗಾಳಿ ಇದ್ದಕ್ಕಿದ್ದಂತೆ ನಿಂತುಹೋದಾಗ ಉಸಿರು ಗಟ್ಟುವ ವಾತಾವರಣ ನಿರ್ಮಾಣವಾಗುವಂತೆ ಓದುಗರಿಗೆ ಉಸಿರುಗಟ್ಟಿಸುತ್ತದೆ. ಈ ಕೊರತೆಯನ್ನು ರಘೂತ್ತಮಸ್ವಾಮಿಗಳು ಸಮರ್ಥವಾಗಿ ನೀಗಿಸುತ್ತಾರೆ. ಆರಂಭ ದಿಂದಲೂ ವ್ಯಾಖ್ಯಾನವನ್ನು ಮಾಡದೆ ಟೀಕಾಕೃತ್ಪಾದರ ಟೀಕೆ ಮುಕ್ತಾಯವಾದ ಮುಂದಿನ ಅಧಿಕರಣದಿಂದ ವ್ಯಾಖ್ಯಾನವನ್ನು ಮಾಡಿ, ತತ್ತ್ವಪ್ರಕಾಶಿಕಾದ ಅಧ್ಯಯನದ ಬಲದಿಂದ ಇದಕ್ಕೆ ವ್ಯಾಖ್ಯಾನ ಮಾಡುತ್ತೇನೆ ಎಂದು ಪ್ರತಿಜ್ಞೆಗೈದು ಅವರಲ್ಲಿರುವ ಅಪಾರ ಗೌರವವನ್ನು ಪ್ರಕಟಪಡಿಸಿದ್ದಾರೆ–

ಆದ್ಯಾಧ್ಯಾಯಗತೇ ಸಾರ್ಧಪೂರ್ವಪಾದದ್ವಯೇಽಸ್ತಿ ಹಿ ।
ಪಂಚಿಕಾ ಜಯತೀರ್ಥೀಯಾ ತಸ್ಮಾತ್ ತ್ಯಕ್ತಂ ಮಯಾಽತ್ರ ಹಿ ॥

ಪ್ರತಿಯೊಂದು ಅಧಿಕರಣಕ್ಕೂ ವಿಷಯ, ಸಂಶಯ, ಪೂರ್ವಪಕ್ಷ, ಸಿದ್ಧಾಂತ, ಪ್ರಯೋಜನಗಳನ್ನು ಪ್ರತ್ಯೇಕವಾಗಿ ಹೇಳಿ ಮೂಲ ವಾಕ್ಯಗಳಿಗೆ ಅರ್ಥವನ್ನು ಹೇಳುವುದಲ್ಲದೆ ಭಾಷ್ಯಾರೂಢವನ್ನಾಗಿ ಮಾಡುವ ಇವರ ಕ್ರಮ ಅದ್ಭುತವಾದದ್ದು. ನ್ಯಾಯವಿವರಣೆಯು ಅನುವ್ಯಾಖ್ಯಾನ ಸಂಕ್ಷೇಪರೂಪವೆಂದು ಮಾತ್ರ ತಿಳಿದ ಜನಕ್ಕೆ ಇದು ಭಾಷ್ಯದ ಸಂಕ್ಷೇಪರೂಪವೂ ಆಗಿದೆ ಎಂದು ಇವರ ವ್ಯಾಖ್ಯಾನವು ಮನವರಿಕೆ ಮಾಡಿಕೊಡುತ್ತದೆ.

ಇವರ ವ್ಯಾಖ್ಯಾನಶೈಲಿಗೆ ನಿದರ್ಶನವಾಗಿ ಒಂದು ಅಧಿಕರಣವನ್ನು ನೋಡಬಹುದು. ಅಹಿಕುಂಡಲಾಧಿಕರಣದ ನ್ಯಾಯವಿವರಣೆಯು ಹೀಗಿದೆ— '**ನ ಚ ಗುಣಾನಾಂ ಗುಣಿಸ್ವರೂಪತ್ವಂ ವಿರುದ್ಧಂ । ಕಾಲಾದಿದೃಷ್ಟಾಂತಾತ್ ॥**'' ಎಂದು ಗುಣ, ಗುಣಿ ಇವೆರಡೂ ಒಂದೇ ಆಗುವುದು ವಿರುದ್ಧ. ಆದ್ದರಿಂದ ಬ್ರಹ್ಮನು ಆನಂದ ಸ್ವರೂಪನಲ್ಲ ಎಂದು ಪೂರ್ವಪಕ್ಷ. 'ಪೂರ್ವಃ ಕಾಲಃ' ಎಂದು ಹೇಳಿದಾಗ ಪೂರ್ವರೂಪವಾದ ಸೂಕ್ಷ್ಮಕಾಲವು ವಿಶೇಷಣ. ಕಾಲವು ವಿಶೇಷ್ಯ. ವಿಶೇಷಣ–ವಿಶೇಷ್ಯಗಳಲ್ಲಿ ಭೇದವಿರಬೇಕು. ಆದರೂ ವಿಶೇಷಬಲದಿಂದ ಇದನ್ನು ಕೂಡಿಸುವಂತೆ ಬ್ರಹ್ಮನು ಆನಂದಸ್ವರೂಪವೆನ್ನಲು ಬಾಧಕವಿಲ್ಲ ಎಂಬುದು ಉತ್ತರ.

'**ಕಾಲಾದಿದೃಷ್ಟಾಂತಾತ್**' ಎಂಬಲ್ಲಿ ಆದಿಶಬ್ದದಿಂದ ಭಾಷ್ಯದಲ್ಲಿ ಹೇಳಿದ ಅಹಿಕುಂಡಲ, ಪ್ರಕಾಶಗಳ ದೃಷ್ಟಾಂತವನ್ನೂ ಸ್ವೀಕರಿಸಬೇಕೆಂದು ವ್ಯಾಖ್ಯಾನಿಸುತ್ತಾರೆ. ಸೂತ್ರಭಾಷ್ಯಗಳಲ್ಲಿ ಅಹಿಕುಂಡಲದ ದೃಷ್ಟಾಂತ ಮೊದಲಿಗಿದ್ದರೂ ಅದನ್ನು ಹೇಳದೆ ಕಾಲದೃಷ್ಟಾಂತವನ್ನು ಕಂಠತಃ ಹೇಳಿ ಆದಿಶಬ್ದದಿಂದ ಅದನ್ನು ಏಕೆ ಸೂಚಿಸಿದ್ದಾರೆ? ಎಂದರೆ, ಗುಣಗುಣಿಗಳ ವಿಷಯವು ಪ್ರಸ್ತುತವಾದ್ದರಿಂದ ಇದಕ್ಕೆ ಸರಿಹೊಂದುವುದು ಕಾಲದ ದೃಷ್ಟಾಂತವೇ. ಆದ್ದರಿಂದ ಅದನ್ನು ಕಂಠತಃ ಹೇಳಿದ್ದಾರೆ ಎಂದು ಉತ್ತರಿಸುತ್ತಾರೆ. ಒಂದು ನಿದರ್ಶನ ಸಾಕು. ಮೂರು ಏಕೆ? ಎಂದರೆ, ಸೂಕ್ಷ್ಮಮತಿಗಳಿಗೆ ಕಾಲ, ಪ್ರಕಾಶಗಳ ದೃಷ್ಟಾಂತ. ಸ್ಥೂಲಮತಿಗಳಿಗೆ ಅಹಿಕುಂಡಲ ದೃಷ್ಟಾಂತ ಎಂದು ಅವರ ಉತ್ತರ. ಇಷ್ಟೇ ಅಲ್ಲ. ಅನುವ್ಯಾಖ್ಯಾನ ನ್ಯಾಯಮಾಲೆಯಲ್ಲಿ ಆಚಾರ್ಯರು ಹೇಳಿದ ಸಿದ್ಧಾಂತಸಾಧಕ ಯುಕ್ತಿ 'ಸುನಿದರ್ಶನ' ಎಂಬುದು. ಇಲ್ಲಿ 'ಸು' ಶಬ್ದಕ್ಕೆ ಬಹಳ, ಅನುರೂಪ=ಯೋಗ್ಯ ಎಂದು ಎರಡರ್ಥ. ಅದಕ್ಕೆ ಈ ಅಧಿಕರಣದಲ್ಲಿ ಯೋಗ್ಯವಾದ ಬಹಳ ನಿದರ್ಶನಗಳನ್ನು ನೀಡಿದ್ದಾರೆ ಎಂದು ವ್ಯಾಖ್ಯಾನಿಸುತ್ತಾರೆ. ವಾಮನಂತಿರುವ ಶ್ರೀಮದಾಚಾರ್ಯರ ಪುಟ್ಟವಾಕ್ಯವು ಇವರ ವ್ಯಾಖ್ಯಾನದಿಂದ ತ್ರಿವಿಕ್ರಮನಂತೆ ಕಾಣುತ್ತದೆ. ಬ್ರಾಹ್ಮಣಾಧಿಕರಣದ 'ಸಮಸ್ತಮೇತತ್' ಎಂಬ ನ್ಯಾಯವಿವರಣದ ವಾಕ್ಯಕ್ಕೆ ಇವರು ಮಾಡಿದ ವ್ಯಾಖ್ಯಾನವು ಇದಕ್ಕೆ ಸಾಕ್ಷಿಯಾಗಿದೆ.

ಹೀಗೆ ಪ್ರತಿಯೊಂದು ವಾಕ್ಯಕ್ಕೂ ಅದ್ಭುತವಾಗಿ ವ್ಯಾಖ್ಯಾನಿಸುವ ಇವರ ಕೌಶಲವನ್ನು ಬಣ್ಣಿಸಲು ಮಾನುಷ ಪದಪುಂಜ ಸಾಕಾಗದು.

## ಗುರುರ್ವರ್ಥದೀಪಿಕಾ

ವಾದಿರಾಜಗುರುಸಾರ್ವಭೌಮರು ತತ್ವಪ್ರಕಾಶಿಕಾ ಮತ್ತು ಶ್ರೀಮನ್ನ್ಯಾಯ ಸುಧಾಗಳಿಗೆ ಗುರ್ವರ್ಥದೀಪಿಕಾ ಎಂಬ ವ್ಯಾಖ್ಯಾನವನ್ನು ಬರೆದಿರುವುದು ಎಲ್ಲರಿಗೂ ತಿಳಿದ ವಿಷಯ. ನ್ಯಾಯಮಾಲೆಗೆ ವಿವರಣೆ ನೀಡುತ್ತಾ ನ್ಯಾಯವಿವರಣೆಯನ್ನೂ ವ್ಯಾಖ್ಯಾನಿಸಿರುವುದು ತುಂಬಾ ಅದ್ಭುತವಾಗಿದೆ. ಮೊದಲನೇ ಅಧ್ಯಾಯದ ಮೂರನೇ ಪಾದದಿಂದ ಆರಂಭಿಸಿ ಮೂರನೇ ಅಧ್ಯಾಯದ ಸಮಾಪ್ತಿವರೆಗೆ ವ್ಯಾಖ್ಯಾನಿಸಿದ್ದಾರೆ. 'ಶ್ರೀಮದಾಚಾರ್ಯರು ಅನುವ್ಯಾಖ್ಯಾನದ ನ್ಯಾಯಮಾಲೆಯಲ್ಲಿ ಹೇಳಿದ ವಾಕ್ಯಗಳಿಗೆ ತಾವೇ ನ್ಯಾಯವಿವರಣವೆಂಬ ವ್ಯಾಖ್ಯಾನ ಮಾಡಿ [1]ಭಾಷ್ಯಕಾರರೆನಿಸಿದ್ದಾರೆ. ಮಂದಮತಿಗಳಿಗೂ ತಿಳುವಳಿಕೆಗಾಗಿ ಮತ್ತು ನಮ್ಮ ವಾಕ್‌ಶುದ್ಧಿಗಾಗಿ ವಿವರಿಸಿದ್ದೇವೆ' ಎಂದು ಆರಂಭದಲ್ಲಿಯೇ ಹೇಳಿಕೊಂಡಿದ್ದಾರೆ.

ಎರಡನೇ ಅಧ್ಯಾಯದ ಮೊದಲನೆಯ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಅವುಗಳ ಪೂರ್ವಪಕ್ಷ-ಸಿದ್ಧಾಂತ ಯುಕ್ತಿಗಳನ್ನು ಶ್ರೀಮದಾಚಾರ್ಯರು ಕೇವಲ ಒಂದು ಶ್ಲೋಕ ಮತ್ತೊಂದು ಶ್ಲೋಕದ ಒಂದು ಪಾದದಲ್ಲಿ ಅಂದರೆ ಸಪಾದ ಶ್ಲೋಕದಲ್ಲಿಯೇ ಸಂಗ್ರಹಿಸಿದ್ದಾರೆ. ಇದನ್ನು ಕಂಡು ವಾದಿರಾಜರು ಉದ್ಗಾರವನ್ನು ತೆಗೆದಿದ್ದಾರೆ— 'ಏಕಾದಶಾಧಿಕರಣಪೂರ್ವಪಕ್ಷಸಿದ್ಧಾಂತಯುಕ್ತೀಃ ಸಪಾದಶ್ಲೋಕಮಾತ್ರೇಣ ಸಂಗೃಹ್ಣತೋ ಮಧ್ವಮುನೇರಗ್ರತೋ ನ ಕಸ್ಯಾಪಿ ವಾದಿನಃ ಪ್ರತ್ಯವಸ್ಥಾನಮಿತಿ ಬುದ್ಧಿಮತಾ ಬೋಧ್ಯಂ' 'ಹೀಗೆ ಸಂಗ್ರಹಿಸಿದ ಮಧ್ವಮುನಿಯ ಎದುರಲ್ಲಿ ಯಾವ ವಾದಿಯೂ ಸರಿಸಾಟಿಯಾಗಿ ನಿಲ್ಲಲಾರ ಎಂದು ವಿಚಾರಶೀಲನಿಗೆ ತಿಳಿಯುತ್ತದೆ'ಎಂದು.

ವಾದಿರಾಜರ ಹೆಸರು ನೆನಪಾದೊಡನೆಯೇ ನಮಗೆ ನೆನಪಾಗುವುದು ಶಾಸ್ತ್ರೀಯ ಪ್ರಮೇಯಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಲು ಅವರು ನೀಡುವ ಲೌಕಿಕ ಉದಾಹರಣೆಗಳು. ಈ ವ್ಯಾಖ್ಯಾನದಲ್ಲಿಯೂ ಅವುಗಳನ್ನು ಹೇರಳವಾಗಿ ನೀಡಿದ್ದಾರೆ. ಪ್ರಥಮಾಧಿಕರಣದಲ್ಲಿ ಉಪಕ್ರಮವನ್ನು ಅನುಸರಿಸಿ ಉಪಸಂಹಾರಕ್ಕೆ ಅರ್ಥವನ್ನು ಮಾಡಬೇಕೋ ಅಥವಾ ಉಪಸಂಹಾರಕ್ಕನುಗುಣವಾಗಿ ಉಪಕ್ರಮ

---

1. 'ಸೂತ್ರಾರ್ಥೋ ವರ್ಣ್ಯತೇ ಯತ್ರ ವಾಕ್ಯೈಃ ಸೂತ್ರಾನುಕಾರಿಭಿಃ। ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋ ವಿದುಃ॥'

ವನ್ನು ಅರ್ಥೈಸಿಕೊಳ್ಳಬೇಕೋ? ಎಂದು ಸಂಶಯಬಂದಾಗ ಅನಂತರವಿರುವ ಉಪಸಂಹಾರವು ಆದಿಯಲ್ಲಿರುವ ಉಪಕ್ರಮಕ್ಕೆ ವ್ಯಾಖ್ಯಾನರೂಪವಾಗಿದೆ. ವ್ಯಾಖ್ಯಾನವನ್ನು ಅನುಸರಿಸಿ ಮೂಲಗ್ರಂಥಕ್ಕೆ ವ್ಯಾಖ್ಯಾನ ಮಾಡುವಂತೆ ಉಪ ಸಂಹಾರಕ್ಕನುಗುಣವಾಗಿ ಉಪಕ್ರಮಕ್ಕೆ ಅರ್ಥವನ್ನು ಮಾಡಬೇಕು ಎಂದು ನಿರ್ಧರಿಸಲಾಗಿದೆ. ಇಷ್ಟು ಗಂಭೀರವಾದ ಈ ವಿಷಯವನ್ನು ಅರ್ಥಮಾಡಿಕೊಳ್ಳಲು ವಾದಿರಾಜರು ಒಂದು ಸುಂದರ ನಿದರ್ಶನವನ್ನು ಹೇಳಿರುವರು— 'ತನ್ನ ಪ್ರಯಾಣಕ್ಕಾಗಿ ರಾಜನು ಕುದುರೆಯನ್ನು ಹಿಂಬಾಲಿಸಿದರೂ ತಾನು ಯಾವ ಆಹಾರವನ್ನು ಕೊಡುವನೋ ಅದನ್ನು ಕುದುರೆಯು ತಿನ್ನಬೇಕೇ ಹೊರತು ಮುಂದೆ ಓಡುವ ಕುದುರೆ ನೀಡುವ ಆಹಾರವನ್ನು ಪುರುಷ ತಿನ್ನುವುದಿಲ್ಲ' ಎಂದು.

ಶ್ರೀಮದಾಚಾರ್ಯರು ಎಲ್ಲ ಅಧಿಕರಣಗಳ ನ್ಯಾಯಗಳನ್ನು ವಿವರಿಸಿಲ್ಲ ಎಂದು ಹಿಂದೆ ಹೇಳಲಾಗಿದೆ. ಆ ಸಂದರ್ಭದಲ್ಲಿ ವಾದಿರಾಜರು 'ಶಿಷ್ಯರೇ ಊಹಿಸಲಿ ಎಂದು ಆಚಾರ್ಯರು ಈ ಅಧಿಕರಣದ ನ್ಯಾಯಗಳನ್ನು ಹೇಳಲಿಲ್ಲ' ಎಂದು ಹೇಳಿ ಮಧ್ವರು ಬಿಟ್ಟ ಕೆಲಸವನ್ನು ಸಮರ್ಪಕವಾಗಿ ಪೂರೈಸಿದ್ದಾರೆ. ಹಿಂದಿನ ಅಧಿಕರಣದಲ್ಲಿ ಭಾಷ್ಯಕಾರರು ಹೇಳಿದ ನ್ಯಾಯಗಳನ್ನೇ ಮುಂದಿನ ಅಧಿಕರಣದಲ್ಲಿ ಅನ್ವಯಿಸಿ ವಿವರಿಸುವ ಅವರ ಕೌಶಲವು ಅತ್ಯದ್ಭುತ. ಮಧ್ವರ ಹೃದಯವನ್ನು ರಾಜರು ಹೇಗೆ ಅರಿತಿರುವರು ಎಂಬುದಕ್ಕೆ ಚಕ್ಷುರಾದ್ಯಧಿಕರಣಗಳೇ ಮೊದಲಾದ ಅನೇಕ ಅಧಿಕರಣಗಳು ನಿದರ್ಶನವಾಗಿವೆ.

ಮೂರನೆಯ ಅಧ್ಯಾಯದ ಮೂರನೇ ಪಾದದಲ್ಲಿ 'ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ' ಎಂಬ ಸೂತ್ರದಿಂದ ಆರಂಭವಾಗಿ ಒಟ್ಟು ಮೂರು ಸೂತ್ರಗಳನ್ನೊಳಗೊಂಡಿರುವುದು ಕಾಮಾಧಿಕರಣ. ಇದರಲ್ಲಿ ಶ್ರೀಮದಾಚಾರ್ಯರು ಮೊದಲನೆ ಸೂತ್ರದ ಅರ್ಥವನ್ನು ವಿವರಿಸದೆ ಎರಡನೆ ಸೂತ್ರವಾದ 'ಆದರಾವಲೋಪಃ' ಎಂಬ ಸೂತ್ರಾರ್ಥವನ್ನು ಹೇಳಿದ್ದಾರೆ. ಎಲ್ಲ ಅಧಿಕರಣ ಗಳಲ್ಲಿಯೂ ಪ್ರಥಮಸೂತ್ರದ ಅರ್ಥವನ್ನು ವಿವರಿಸುವ ಮಧ್ವರು ಇಲ್ಲಿ ಮಾತ್ರ ದ್ವಿತೀಯಸೂತ್ರಾರ್ಥವನ್ನು ಹೇಳಿದ್ದು ಏಕೆ? ಎಂಬ ಪ್ರಶ್ನೆಯನ್ನು ಮಾಡಿಕೊಂಡು ವಾದಿರಾಜರು ಉತ್ತರಿಸಿದ್ದಾರೆ— 'ಯದ್ಯಪ್ಯಧಿಕರಣಾರಂಭಸೂತ್ರೇ ಶ್ರಿಯಃ ಸಂಸಾರಾಭಾವಮಾಶಂಕ್ಯ ತದಭಾವಃ ಸಮರ್ಥ್ಯತೇ। ತಥಾಪಿ ನಾಸೌ ಭಗವದುಪಾಸನಪ್ರಸ್ತಾವಃ। ಕಿಂತು ಪ್ರಾಸಂಗಿಕಂ ಪ್ರಮೇಯಮಿತ್ಯತಃ ಉಪಾಸನಾವಿಚಾರರೂಪತ್ವಾದುತ್ತರಸೂತ್ರಾರ್ಥ ಏವಾನುವ್ಯಾಖ್ಯಾನಕೃತಾ ಸಂಗೃಹೀತಃ।' ಮೊದಲ ಸೂತ್ರದಲ್ಲಿ ಲಕ್ಷ್ಮೀದೇವಿಗೂ ಸೃಷ್ಟ್ಯಾದಿಗಳಿರುವುದರಿಂದ

ಉಳಿದವರಂತೆ ಅವಳಿಗೂ ಸಂಸಾರವಿದೆ ಎಂದು ಪೂರ್ವಪಕ್ಷ ಮಾಡಿಕೊಂಡು ಲಕ್ಷ್ಮೀದೇವಿಗೆ ಸ್ವೇಚ್ಛೆಯಿಂದ ಅವತಾರವೇ ಹೊರತು ಜನ್ಮವಲ್ಲವಾದ್ದರಿಂದ ಅವಳು ಸಂಸಾರಿಗಳ ಗುಂಪಿನಲ್ಲಿ ಸೇರುವುದಿಲ್ಲವೆಂದು ಸಿದ್ಧಾಂತ ಮಾಡಿದ್ದಾರೆ. ಈ ಪ್ರಮೇಯವು ಪ್ರಾಸಂಗಿಕವಾಗಿದೆಯೇ ಹೊರತು ಉಪಾಸನೆಗೆ ಸಂಬಂಧಿಸಿರುವುದಿಲ್ಲ. ಆದರೆ ಎರಡನೆ ಸೂತ್ರದಲ್ಲಿ 'ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿದ್ದಾಳೆ. ಅವಳಿಗೆ ಪ್ರಯತ್ನಮಾಡುವ ಆವಶ್ಯಕತೆ ಇಲ್ಲದಿರುವುದರಿಂದ ಅವಳಿಗೆ ಉಪಾಸನೆಯಿಲ್ಲ ಎಂದು ಪೂರ್ವಪಕ್ಷ ಮಾಡಿಕೊಂಡು ಲಕ್ಷ್ಮೀದೇವಿಗೆ ಭಗವಂತನು ಅತಿಪ್ರಿಯನಾಗಿದ್ದಾನೆ. ಪ್ರೀತಿಪಾತ್ರರನ್ನು ಯಾವಾಗಲೂ ಧ್ಯಾನಮಾಡುವುದು ಲೋಕದಲ್ಲಿ ಕಂಡಿದೆ. ಆದ್ದರಿಂದ ಲಕ್ಷ್ಮೀದೇವಿಯು ಯಾವಾಗಲೂ ಪರಮಾತ್ಮನ ಉಪಾಸನೆಯನ್ನು ಮಾಡುತ್ತಾಳೆ ಎಂದು ಸಿದ್ಧಾಂತ ಮಾಡಿದ್ದಾರೆ. ಈ ಸೂತ್ರದ ವಿಷಯವು ಉಪಾಸನೆಗೆ ಸಂಬಂಧಿಸಿದ್ದು. ಉಪಾಸನಾಪಾದದಲ್ಲಿ ಈ ಸೂತ್ರದ ಪ್ರಮೇಯವೇ ತುಂಬಾ ಸೂಕ್ತವೆನಿಸಿ ಶ್ರೀಮದಾಚಾರ್ಯರು ಇದನ್ನೇ ವಿವರಿಸಿದ್ದಾರೆ ಎಂಬ ಸಮರ್ಥನೆ ತುಂಬಾ ಹೃದಯಂಗಮವಾಗಿದೆ. ಈ ರೀತಿಯ ವಿದ್ವಜ್ಜನ ಮನೋರಂಜಕವಾದ ಎಷ್ಟೋ ವಿಷಯಗಳು ಅವರ ವ್ಯಾಖ್ಯಾನದಲ್ಲಿ ಅಡಗಿವೆ.

ಅಷ್ಟೇ ಅಲ್ಲ. ನ್ಯಾಯಮಾಲೆಯಲ್ಲಿ ಹೇಳಲ್ಪಟ್ಟ ನ್ಯಾಯಗಳಿಗೆ ನ್ಯಾಯವಿವರಣೆಯಲ್ಲಿ ಹೇಳಿದ ಅರ್ಥ ಅಡಗಿದೆ ಎಂದು ವಾದಿರಾಜರು ಆ ಪದಗಳನ್ನು ಒಡೆದು ಅರ್ಥೈಸಿದಾಗ ಮಾತ್ರ ತಿಳಿಯುವುದೇ ಹೊರತು ಇಲ್ಲವಾದರೆ ಯಾರಿಗೂ ಅದು ಅಗಮ್ಯವಾಗಿಯೇ ಉಳಿಯುತ್ತದೆ. ಕೃಷ್ಣನ ಆ ಪುಟ್ಟ ಬಾಯಲ್ಲಿ ಇಡೀ ಪ್ರಪಂಚವೇ ಅಡಗಿದೆ ಎಂದು ಅದನ್ನು ಕಂಡು ಯಶೋದೆ ಹೇಳಿದಾಗಲೇ ಎಲ್ಲರಿಗೂ ತಿಳಿಯಿತು. ಇಲ್ಲವಾದರೆ ಅದೂ ಗುಟ್ಟಾಗಿಯೇ ಉಳಿಯುತ್ತಿತ್ತು.

## ವಂದನೆಗಳು

ಅಖಿಲಭಾರತ ಮಾಧ್ವಮಹಾಮಂಡಲದಿಂದ ಹೊರಬರುತ್ತಿರುವ ಹೆಚ್ಚಿನ ಗ್ರಂಥಗಳಿಗೆ ಇತ್ತೀಚಿನ ದಿನಗಳಲ್ಲಿ ಶ್ರೀಹಯವದನಪುರಾಣಿಕರು, ಶ್ರೀಹರಿದಾಸ ಭಟ್ಟರು ಮೊದಲಾದ ಹಿರಿಯ ವಿದ್ವಾಂಸರು ಅನುವಾದವನ್ನು ಮಾಡುತ್ತಿದ್ದಾರೆ. ಕನ್ನಡದ ಅನುವಾದಗಳಿಗೆ ಮೂಗು ಮುರಿಯುತ್ತಿದ್ದವರೂ ಇವರ ವಿಮರ್ಶಾತ್ಮಕ ಕನ್ನಡೀಕರಣಗಳನ್ನು ಕಂಡು ಮೆಚ್ಚೇರಿಸುವಂತಾಗಿದೆ. ಈ ಸಂದರ್ಭದಲ್ಲಿ ಪರಮಪೂಜ್ಯರಾದ ಶ್ರೀವಿಶ್ವೇಶತೀರ್ಥಶ್ರೀಪಾದರು ನ್ಯಾಯವಿವರಣದ ಕನ್ನಡೀಕರಣಕ್ಕಾಗಿ ಆದೇಶಿಸಿದಾಗ ಒಂದುಕ್ಷಣ ತಬ್ಬಿಬ್ಬಾದರೂ ಅವರ ಅನುಗ್ರಹವೇ ಈ

ಕೆಲಸವನ್ನು ಮಾಡಿಸುತ್ತದೆ ಎಂದು ಒಪ್ಪಿಕೊಂಡೆ. ನನ್ನ ನಂಬಿಕೆ ಸುಳ್ಳಾಗಲಿಲ್ಲ. ನನ್ನ ಔದಾಸೀನ್ಯದಿಂದ ಸ್ವಲ್ಪ ವಿಳಂಬವಾದರೂ ಇದನ್ನು ಪೂರ್ಣಗೊಳಿಸಿದ್ದು ಅವರ ಅನುಗ್ರಹವೇ. ಅಶನ, ವಸನ, ವಿದ್ಯೆಗಳನ್ನು ನೀಡುವುದರೊಂದಿಗೆ ಶ್ರೀಮದಾಚಾರ್ಯರ ಈ ಸೇವೆಯನ್ನೂ ಮಾಡಲು ಅವಕಾಶ ಮಾಡಿಕೊಟ್ಟ ಪೂಜ್ಯಗುರುಗಳಿಗೆ ವಂದನೆಗಳನ್ನಲ್ಲದೆ ಈ ಅಲ್ಪನು ಮತ್ತೇನು ಮಾಡಿಯಾನು?

ಪರಮಪೂಜ್ಯ ಶ್ರೀಸುವಿದ್ಯೇಂದ್ರತೀರ್ಥರು ನನಗೆ ಶ್ರೀಮನ್ನ್ಯಾಯಸುಧಾದಿ ಅನೇಕಗ್ರಂಥಗಳನ್ನು ಪಾಠಮಾಡಿದ್ದಾರೆ. ತಮ್ಮ ಬಿಡುವಿಲ್ಲದ ಪಾಠಪ್ರವಚನಗಳ ನಡುವೆಯೂ ನ್ಯಾಯವಿವರಣೆಯ ಅನೇಕ ಸೂಕ್ಷ್ಮ ವಿಷಯಗಳನ್ನು ತಿಳಿಸಿದ್ದಾರೆ. ಅವರಿಗೆ ನನ್ನ ವಂದನೆಗಳು.

ಈ ಪುಸ್ತಕದಲ್ಲಿ ಪ್ರತಿಯೊಂದು ಅಧಿಕರಣದ ಕೊನೆಯಲ್ಲಿ ಅನುಕೂಲಕ್ಕಾಗಿ ಸಂಬಂಧಿಸಿದ ಒಂದೊಂದೇ ಸೂತ್ರದ ಅರ್ಥವನ್ನೂ ಕೊಟ್ಟಿದ್ದೇನೆ. ಇದಕ್ಕೆ ಗುರುಗಳಾದ ಸಿ.ಹೆಚ್.ಬದರಿನಾಥಾಚಾರ್ಯರ ಸೂತ್ರಸೌರಭದ ಸಹಾಯವನ್ನು ಪಡೆದಿದ್ದೇನೆ. ಅವರಿಗೂ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಈ ಅನುವಾದದ ಕಾರ್ಯದಲ್ಲಿ ಬೆನ್ನೆಲುಬಾಗಿ ನಿಂತು ಪ್ರೋತ್ಸಾಹಿಸಿದ ಪ್ರಾಂಶುಪಾಲರಾದ ಡಾ.ಹೆಚ್.ಸತ್ಯನಾರಾಯಣಾಚಾರ್ಯರನ್ನು ವಂದಿಸುತ್ತೇನೆ.

ಅ.ಭಾ.ಮಾ.ಮಂಡಲದ ಪ್ರಧಾನಕಾರ್ಯದರ್ಶಿಗಳಾದ ಡಾ.ಹೆಚ್.ಎನ್. ನಾರಾಯಣರಾವ್ ಬೆನ್ನು ಬೆಡದೆ ಈ ಕೆಲಸ ಮಾಡಿಸಿದ್ದಾರೆ. ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುವೆ.

ಅದರಂತೆ ಸಹಕರಿಸಿದ ವಿದ್ವಾಂಸರಾದ ಬಿ.ಎಸ್.ಹಯವದನಾಚಾರ್ಯರಿಗೆ, ವೆಂಕಟೇಶಪುರೋಹಿತರಿಗೆ, ಪ್ರೇಮಕುಮಾರ್‌ರವರಿಗೂ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಈ ಕನ್ನಡೀಕರಣದಲ್ಲಿ ಮೂಲಕ್ಕೆ ಭಾವಾರ್ಥವನ್ನು ನೀಡಿ, ವಿವರಣೆಯಲ್ಲಿ ಕೆಲವು ಟಿಪ್ಪಣಿಯ ವಿಷಯಗಳನ್ನು ಜೋಡಿಸುವ ಪ್ರಯತ್ನ ಮಾಡಿದ್ದೇನೆ. ಇದು ಸಮಗ್ರವಾಗಿ ಮೂಡಿಬಂದಿದೆ ಎಂದು ಹೇಳಿಕೊಳ್ಳುವ ಸಾಹಸವನ್ನು ನಾನು ಮಾಡುವುದಿಲ್ಲ. ದೋಷಗಳು ಕಂಡಲ್ಲಿ ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸುವ ಪ್ರಯತ್ನ ಮಾಡುತ್ತೇನೆ ಎಂದಿಷ್ಟು ಮಾತ್ರ ವಿದ್ವಾಂಸರಲ್ಲಿ ವಿನಮ್ರವಾಗಿ ವಿನಂತಿಸುತ್ತೇನೆ.

ಡಾ II ಧನಂಜಯಾಚಾರ್ಯ

# Introduction

Nyāyavivaraṇa of Śrī Ānandatīrtha (Śrī Madhvāchārya) is a supplimentary treatise for Brahmasūtra bhāṣya and Brahma sūtravyākhyāna of Śrī Ānandatīrtha. The Brahmasūtras are arranged in adhikaraṇa style. Each adhikaraṇa is arranged in two steps viz., pūrvapakṣa and Siddhānta. In each step the arguments are stated in support of it. With these arguments appropriate rulings are evolved. These rulings are designated as Nyāya i.e., maxims. The nyāyas developped to support pūrvapakṣa are called pūrvapakṣanyāyas those that are developped to support siddhānta are called Siddhānta nyāyas. The pūrvapakṣa, nyāyas are either not sustainable or not applicable to the present case. These nyāyas are suggested by the very sūtras. The Bhāṣya states them more explicitly.

These are also codified in the Anuvyākhyāna. These are the keys to correctly grasp the pūrvapakṣa and siddhānta. Śrī Ānanda tīrtha has written two small and compact treatises viz., Aṇubhāṣya and Nyāyavivaraṇa to present Brahmasūtra thought in a nutshell. Aṇubhāṣya summorises the conclusion of each adhikaraṇa in one word while Nyāya vivaraṇa summarises the

nyāyas in one or two sentences. Normally both pūrvapakṣa nyāya and siddhānta nyāya are suggested and explained in Sūtra and Bhāṣya respectively. However in some cases the siddhānta nyāya only is stated and pūrvapakṣa nyāya has to be pressumed.

i) न्यायशब्देन पूर्वोत्तरपक्षयुक्तयो अभिधीयन्ते । अत्र तासां प्रतिपादकानि वाक्यानि उपलक्ष्यन्ते । पूर्वपक्षन्यायानां सूत्रप्रयोजकत्वम् । सिद्धान्तन्यायानां तत्त्वनिश्चय सामर्थ्यम् । (टीक)

ii) अत्र कचित् पूर्वपक्ष सिद्धान्त न्याययोः पृथग् विवरणं क्रियते यथा प्रथमाधिकरणे । कचित् सिद्धान्तपुरस्कारेण पूर्वपक्षवचनेन तन्न्यायविवरणपूर्वकं सिद्धान्तन्यायो विव्रियते यथा द्वितीयाधिकरणे कचित्तु सिद्धान्तवचनेनैव यथा तृतीयाधिकरणे । (टीका)

We will notice the application of this method in a few instances.

i) ईक्षत्यधिकरणम् (1-1-5)

न्या.वि.- न च तस्य अवाच्यत्वं श्रुत्यभिप्रायः । सर्वे वेदाः यत् पदमामनन्ति' इत्यादि श्रुतिसहितानुभवस्य वलवत्त्वात् ।

Here, Pūrvapakṣin argues that the śruti 'यतो वाचो वर्तन्ते' conveys अवाच्यत्व of ब्रह्मन्. Siddhantin points out that there are other śrutis like 'सर्वे वेदा यत्पदमामनन्ति'. The brahman is stated to be ईक्षणीय i.e., the object of knowledge. This means that he is

conveyed by श्रुति. In view of this यतो वाचो निवर्तन्ते has to be interpreted to say that 'brahman cannot be fully comprehended. It should not be interpreted to say that Brahman cannot be conveyed at all by the Śruti.

Here pūrvapakṣa nyāya is śruti conveys अवाच्यत्व of ब्रह्मन्. The siddhānta nyāya is yukti supported by śruti conveys वाच्यत्व of ब्रह्मन्. Therefore अवाच्यत्व śruti be interpreted to say that brahman cannot be fully described and fully comprehended. The entire purport of the adhikaraṇa is presented in two sentences.

ii) अत्तृत्वाधिकरणम् (1-2-2)

सन्दिग्धश्रुतिलिङ्गाभ्यां निश्चित लिङ्गप्रकरणयोरेव बलवत्त्वम् ।

Here, whether the word अदिति conveys देवमाता or ब्रह्मन् has to be settled. Pūrvapakṣin argues that श्रुति i.e., the name अदिति and लिङ्ग अदितित्व Support the contention that देवमाता is conveyed by the word अदिति. This is supported by both श्रुति and लिङ्ग.

Siddhantin points out that the word. अदिति is explained in the śruti 'यद्यदेव असृजत तत्तदत्तुमध्रियत' states that अदिति destroys all created by it. The context is that of creation by brahman. Here the श्रुति and लिङ्ग mentioned by pūrvapakṣin could be explained

away. Therefore these supporting pūrvapakṣin's interpretation is doubtful. While सर्वात्तृत्व and विष्णुप्रकरण are conclusive. hence,. the word वैश्वानर should be taken in the sense of विष्णु.

iii) वैश्वानराधिकरणम्

श्रुतिसाधारण्ये विशेषश्रुत्यादेः निश्चयः । उभयत्र विशेष श्रुत्यादौ पुनः सावकाशत्व निरवकाशत्वबलात् निश्चयः ।

Here, there is साधारणश्रुति for both and there are विशेषश्रुतिs for both pūrvapakṣa and siddhānta However, in the case of pūrvapakṣa the viśeṣa śruti is sāvakāśa while it is niravakāśa in the case of siddhanta. Hence, the word वैश्वानर has to be taken to convey विष्णु.

The above three examples are selected from 1st and 2nd pāda on which Śrī Jayatīrtha has commented. He has commented on three pādas of 1st adhyāya only. On this portion of Ṭīkā Śrī Eri Bālāchārya has written sub-commentary. He informs that since, in Anuvyākhyāna the pūrvapakṣa and siddhānta nyāyas are explicitely stated in respect of other portions. Śrī Jayatīrtha did not think it necessary to explain the nyāya in them here.

प्रथमद्वितीय पादयोः युक्तिमालायाः अनुक्तेः कस्याः एतद्विवरणमिति

शिष्याणां मनः खेदो मा भूदिति प्रथमस्य चरणद्वयं व्याख्याय तृतीय चरणे विषयमाला विवरणेन च व्याख्यानक्रमं प्रदर्श्य शिष्यमतिपरीक्षणाय च उत्तरग्रन्थं न व्याचक्रुः इति प्रतीमः ।

This Sub-commentator also raises the question as to why concluding mangala verse is not added by Śrī Jayatīrtha if he has intended to conclude his work. Raising this question he offers two solutions.

i) अन्ते प्रतीक ग्रहणव्याजेन द्यावाभूम्याश्रयस्य विष्णोः संकीर्तनरूपं मङ्गलमाचरन् शिष्यशिक्षायै अन्ते निबध्नाति । यस्मिन् द्यौरिति ।

Śrī Jayatīrtha explains the Nyāya in two pādas of 1st adhyāyas as these are not specifically stated in Anu vyākhyāna as in the case of other portions. In the case of the third pāda he gave viṣaya māla i.e., the topics of the adhikaraṇas. He concluded his work quoting the Viṣayavākya of dyubhvādyadhikaraṇa which states that viṣṇu supports all. In this way he has performed concluding mangala.

ii) Another solution suggested is as follows :

भगवतः टीकाकृतः परमास्तिकत्वात् मङ्गलानुष्ठानादिकमनुमीयते ।

As Śrī Jayatīrtha is great āstika we have to presume that he has performed concluding mangala in an appropriate way.

It is difficult to envisage the circumstances under which this work remained incomplete. This sub-commentater is of quite late date. Śrī Raghūttamatīrtha continued Śrī Jayatīrtha's commentary on this work is much earlier. He does not say anything about the incompleteness of this work.

Śrī Raghūttama who has continued the commentary adopts a slightly different style. He first comments on pūrvapakṣa remarks only of all adhikaraṇa and then comments on siddhānta remarks. We will note some instances.

i) भूमाधिकरणम्

न्या.वि. पूर्वपक्षः प्राणो वा आशायाः भूयानित्युक्त्वा प्राणाद् भूयसोऽनुक्तिः.

Here, whether the word भूमा conveys मुख्यवायुs or विष्णुs has to be settled. The śruti quoted above states that the प्राण is greater than आशा! Then no one else is stated as greater than prāṇa. Hence prāṇa is higher He is conveyed by the word भूमा.

न्या.वि. सिद्धान्तः - प्राणस्य विष्णोः सकाशात् भूयस्त्वानुक्तिः । च शब्देन 'एष तु वा अतिवदति यः सत्येन अतिवदति' इति प्राणाद् विष्णोः भूयस्त्वोक्तिश्च ।

Siddhāntin points out that it is also not stated in

this context that prāṇa is greater than Viṣṇu. On the contrary it is clearly stated that सत्य i.e., विष्णु is greater than all.

Here अनुक्ति not being mentioned is used as the ground both by pūrvapakṣin and Siddhāntin to support their respective position. However, siddhāntin also adds that the fact of Viṣṇu being greatest is mentioned in the very context. This is indicated by च added to अनुक्ति.

The method of commenting on the pūrvapakṣa position and siddhānta position separately is followed only for the third pāda of the first chapter. Later the two are considered together. We will notice one instance of this type.

असदधिकरणम् (2-1-4)

न्या.वि. ईश्वरस्य स्रष्टृत्ववदसतोऽपि स्रष्टृत्वं श्रूयत इति नास्ति । सोऽसच्छब्दो ब्रह्मशब्दवदेव ब्रह्मवाचकः इति श्रुतेः साम्यम् ।

Here, the question whether the असत् i.e., विश्वप्रागभाव is जगत्कारण or ब्रह्मन् is raised. In this respect there is श्रुतिसाम्य that is to say both positions are stated in श्रुति,

i) असदेवेदमग्र आसीत् ii) यतो वा इमानि भूतानि. Therefore pūrvapakṣin claims that Viṣṇu cannot be

considered as जगत्कारण.

Siddhāntin points out that the word असत् itself conveys ब्रह्मन्. Therefore there is श्रुतिसाम्य in respect of ब्रह्मणः जगत्कारणत्व only. Here श्रुतिसाम्यत्व न्याय proposed by pūrvapakṣin is utilised by siddhāntin with appropriate application.

The above example give an idea of utilising nyāya to comprehend the pūrvapakṣa and siddhānta positions clearly. The longer discussions will be useful only after the central point is correctly grasped. Nyāya vivaraṇa considerably helps the readers by compiling these nyāya.

Tatvaprakāśikā utilises Nyāyavivaraṇa to present the pūrvapakṣa and siddhānta position. The arguments presented in Tatvaprakāśikā verbatum agree with Nyāyavivaraṇa in many instances. In a few instances, Tatvaprakāśikā presents the very point slightly differently. Tātparya Chandrika notices these variations and explains the purpose behind these variations appropriatly. We will notice one or two such instances.

In अत्तृत्वाधिकरण both श्रुति and लिङ्ग are made the grounds for pūrvapakṣa in न्यायविवरण. However in तत्त्वप्रकाशिका लिङ्ग श्रुति alone is made the ground.

Chandrikā states this difference and clarifise that there is some room to consider ds‹O' as सावकाश but not लिङ्ग. Keeping this in mind तत्त्वप्रकाशिका makes लिङ्ग only as the ground.

i) तीरादौ गङ्गापदप्रयोगेपि तीरे गङ्गात्वमित्यप्रयोगात् श्रुतेः ब्रह्मणि अमुख्यत्वेन सम्भवेपि लिङ्गस्य अमुख्यत्वेनापि असम्भवः इति टीकाभिप्रायः । (ता.चं)

ii) अदिति श्रुति can be taken as conveying Viṣṇu setting aside the रूढि in अदितिदेवता. But अत्तृत्वलिङ्ग cannot apply to Viṣṇu as he is declared as अनश्नन्. Hence लिङ्ग only is made the ground of pūrvapakṣa.

यद्वा अन्तराधिकरणन्यायेन रूढिबाधेन श्रुतेः ब्रह्मपरत्व सम्भवेपि अनश्नन् इत्यादिश्रुत्या अनत्तुः ब्रह्मणः अत्तृत्वादिरूपादितिलिङ्गत्वं न सम्भवतीति टीकाभिप्रायः । (ता.चं.)

In Samanvayādhikaraṇa pūrvapakṣa is presented in two ways.

i) शैवा द्यागमात् वेदव्याख्यानरूपात् मानान्तराविरुद्धाद् रुद्रादेः कारणत्वे वेदतात्पर्य निश्चयात् कारणत्वस्य शास्त्रयोनित्वेपि रुद्रादौ अतिव्याप्तिः (ता.चं.)

In the previous adhikaraṇa it is stated that Viṣṇu is जगत्कारणत्वेन शास्त्रप्रतिपाद्य. On this. Pūrvapakṣin claims here that even रुद्रादेः जगत्कारणत्व is शास्त्रप्रतिपाद्य since शैवागम is a kind of commentary on शास्त्र i.e., वेद and these

state the जगत्कारणत्व of रुद्र.

This pūrvapakṣa is stated in न्यायविवरण. अत्र आद्य पूर्वपक्षः 'न च पाशुपतोदितत्वादिशास्त्रप्रतिपाद्यत्वे कारणमिति न्यायविवरणोक्तः ।

ii) यद्वा रुद्रादेः कारणता तावद् भाति । तत्र शास्त्रतात्पर्यं च अबाधितप्रतीत्या निश्चीयते ।

The fact of रुद्र etc., being जगत्कारण is comprehended by शास्त्र itself. This second pūrvapakṣa is based on the Bhāṣya remark. द्वितीयस्तु अज्ञानां प्रतीयमान इति भाष्योक्तः (ता.चं)

न्यायसुधा puts both the grounds of pūrvapakṣa अत एव सुधायां न शास्त्रतात्पर्यावगता वा आपातप्रतीतिर्वा व्याख्यातृवचनं वा लिङ्गमित्युक्तम् । (ता.चं.)

तत्त्वप्रकाशिका takes into account the remarks of Bhāṣya and Nyāyavivaraṇa and puts them together. अत्र तु टीकायां न्याय विवरणे आदिपदेन प्रतीतेरपि उक्तत्वात् भाष्यं प्रतीत्या पापतादि शास्त्रस्यापि उपलक्षणात् प्रतीतिसध्रीचीनागमेनैक एव दृढः पूर्वपक्षः दर्शितः ।

Chandrikā frequently refers to Nyāyavivaraṇa to develop pūrvapakṣa and Siddhānta. The variations found in this respect in Bhāṣya, Ṭīkā and Nyāyavivaraṇa are utilised to bring out the different dimensions of pūrvapakṣa and siddhānta.

In a few instances the brief remarks of Nyāyavivaraṇa are fully explained. When the same nyāya is utilised for pūrvapakṣa its different shades of meaning are explained. Tatvaprakāśikā remarks on these are explained. We may notice these points in the instances like प्राणोत्पत्त्यधिकरण, तत्प्रागधिकरण सप्तगत्यधिकरण etc.

The importance of Nyāyavivaraṇa and the nature of help rendered by it to comprehend the pūrvapakṣa yukti and siddhānta yukti will be realised When we go through Tātparya Chandrikā.

This brief introduction is intended to enkindle the interest of advance students of Vedānta and Research scholars. Nyāya vivaraṇa is a treatise on research methodology. It saves the time and energy of reading volumenous works on the plan and purpose of Vedanta sūtras. We give below a brief account of the life and works of Śrī Raghūttamatīrtha. The life and works of Śrī Ānandatīrtha and Śrī Jayatīrtha are well known.

**Śrī Raghūttamatīrtha**

Śrī Raghūttama tīrtha was a peethādhipati of Śrī Uttarādi matha during 1557-96 A.D. He was a contemporary of Śrī Vādirāja tīrtha and Śrī Vijayindratīrtha. He has commented upon five

works. His commentaries are named as Bhāvabodha. i) Tatvaprakāśikā bhāvabodha, ii) Brihadāranya bhāvabodha, iii) Nyāyavivaraṇa bhāvabhodha, iv) Viṣṇutatvanirṇaya bhāvabodha, v) Vivaraṇoddhāra, vi) Nyāyasudhā sambandha dīpika.

The first three are recently published by Dvaitavedanta Foundation. The fourth is published by Rāddhānta sabhā. The last two are still in manuscript. His Style is simple. The Tippaṇi style i.e., the subcommentary style was initiated by Śrī Raghūttama. Śrī Vādirāja and Śrī Vijayindra more or less at the same time. Śrī Vādirāja's Tippani's are very brief though his independent work Yukti mallikā is quite large. Śrī Raghūttamas sub-commentaries are more detailed. He is considered to be an authority on premeyas. He had three distinguished desciples (i) Taranginī Rāmachārya (ii) Pāndurangi Ānanda bhattāraka, iii) Śrī Vedeśa tīrtha. The first two belonged to Puntamba (Puṇyasthambapur) an agrahāra of scholars on the bank of Godavari in the present Ahmad nagar District of Maharāśtra. Both these have written commentaries on Nyāyāmṛta of Śrī Vyāsatīrtha, Śrī Vedeśatīrtha is the elder brother of Śrī Yādavārya. He has commented upon four prakaraṇas, four upaniṣads and Pramāṇapaddhati. This reveals that

the tradition Ṭippaṇikāras was developped in a big way by Śrī Raghūttamatīrtha and his desciples. Śrī Raghavendra tīrtha and Śrīnivāsatīrtha are at the centre of this tradition. Śrī Raghūttamatīrtha lived at mannur in the earlier part of his life. Later he moved to Tirukoilur in Tamilnādu. His Vrindāvana is at Tirukoilur.

## Eri Bālāchārya

Eri Balāchārya has written a sub-commentary on Śrī Jayatīrtha's commentary of Nyāyavivarana. He displays good knowledge of Vyākaraṇa. His explanations are quite useful to comprehend Nyāyavivaraṇa. He states that he is a desciple of Satyaparāyaṇa. He mentions his further name as Anantacharya. He also states that he wrote his sub-commentory at the request of Lakṣminārāyaṇ achārya.

Mahāmahopādhyāya
**Prof. K.T. Pandurangi**

# ವಿಷಯಾನುಕ್ರಮಣಿಕೆ

**ಚತುರ್ಥಾಧ್ಯಾಯ**

॥ ಶ್ರೀಮದಾನಂದತೀರ್ಥಭಗವತ್ಪಾದಪ್ರಣೀತಂ ॥

# ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣ

## (ಸನ್ನ್ಯಾಯವಿವೃತಿಃ)

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಶ್ರೀಲಕ್ಷ್ಮೀಹಯಗ್ರೀವಾಯ ನಮಃ ॥

ಚೇತನಾಚೇತನಜಗನ್ನಿಯಂತ್ರೇಽಶೇಷಸಂವಿದೇ ।
ನಮೋ ನಾರಾಯಣಾಯಾಜಶರ್ವಶಕ್ರಾದಿವಂದಿತ ॥ ೧ ॥

ಕೃತ್ವಾ ಭಾಷ್ಯಾನುಭಾಷ್ಯೇಽಹಮಪಿ ವೇದಾರ್ಥಸತ್ತತೇಃ ।
ಕೃಷ್ಣಸ್ಯ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಸ್ಫುಟಮ್ ॥ ೨ ॥

ಕರೋಮಿ ಮಂದಬುದ್ಧೀನಾಂ ಬುಧಾನಾಂ ಚೋಪಕಾರಿಕಾಮ್ ।
ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದಪುರಃಸರಃ ॥ ೩ ॥

## ಪ್ರಥಮಾಧ್ಯಾಯಃ (ಸಮನ್ವಯಾಧ್ಯಾಯಃ)

### ಪ್ರಥಮಃಪಾದಃ

॥ ಹರಿಃ ಓಂ ॥ ಜೀವವ್ಯತಿರಿಕ್ತೇಶ್ವರಸ್ಯಾಭಾವಾತ್ ತಸ್ಯ ಚ ಸ್ವಪ್ರಕಾಶತ್ವಾನ್ನ ಜಿಜ್ಞಾಸ್ಯತೇತಿ ಪ್ರಾಪ್ತೇ ''ಅಥಾತೋ ಬ್ರಹ್ಮಜಿಜ್ಞಾಸಾ''

ಇತ್ಯಾಹ । ''ತದ್ವಿಜಿಜ್ಞಾಸಸ್ವ ತದ್ಬ್ರಹ್ಮ'' ಇತಿ ಬ್ರಹ್ಮಶಬ್ದೇನ ಪೂರ್ಣ-ಗುಣತ್ವೋಕ್ತೇರ್ನಾನುಭವಸಿದ್ಧಾಲ್ಪಗುಣಜೀವಾಭೇದಃ ।

''ಅಥ ಕಸ್ಮಾದುಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ'' ಇತಿ ಶ್ರುತೇಃ ॥ ೧ ॥

ನ ಜೀವ ಏವಾಯಂ ಬ್ರಹ್ಮ ಶಬ್ದಃ । ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇತ್ಯಾದಿನಾ ಜನ್ಮಾದಿಕಾರಣತ್ವಸ್ಯೈವ ಬ್ರಹ್ಮಲಕ್ಷಣತ್ವೋಕ್ತೇಃ ॥ ೨ ॥

ನ ಚ ರುದ್ರಾದೌ ಸಮಮೇತಲ್ಲಕ್ಷಣಮ್ । ಶಾಸ್ತ್ರೈಕಸಮಧಿಗಮ್ಯತ್ವಾತ್ ಕಾರಣತ್ವಸ್ಯ ॥ ೩ ॥

ನ ಚ ಪಾಶುಪತಶಾಸ್ತ್ರೋದಿತತ್ವಾದಿ ಶಾಸ್ತ್ರಪ್ರತಿಪಾದ್ಯತ್ವೇ ಕಾರಣಮ್ । ಕಿಂ ತೂಪಕ್ರಮಾದಿಲಕ್ಷಣಃ ಸಮನ್ವಯ ಏವ ॥ ೪ ॥

ನ ಚ ತಸ್ಯಾವಾಚ್ಯತ್ವಂ ಶ್ರುತ್ಯಭಿಪ್ರಾಯಃ । ''ಸರ್ವೇ ವೇದಾ ಯತ್ಪದಮಾಮನಂತಿ'' ಇತ್ಯಾದಿ ಶ್ರುತಿಸಹಿತಾನುಭವಸ್ಯ ಬಲವತ್ತ್ವಾತ್ ॥ ೫ ॥

ನ ಚಾವಯವತ್ವವಿರೋಧಃ ''ನೇಹ ನಾನಾಸ್ತಿ ಕಿಂಚನ'' ಇತಿ ಶ್ರುತೇರವಯವಾದ್ಯಭೇದಾತ್ ॥ ೬ ॥

ನ ಚ

''ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ।

ಕೃತ್ವಾ ಭಾಷ್ಯಾನುಭಾಷ್ಯೇಽಹಮಪಿ ವೇದಾರ್ಥಸತ್ತ್ವತೇಃ ।
ಕೃಷ್ಣಸ್ಯ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಸ್ಫುಟಮ್ ॥ ೨ ॥

ಕರೋಮಿ ಮಂದಬುದ್ಧೀನಾಂ ಬುಧಾನಾಂ ಚೋಪಕಾರಿಕಾಮ್ ।
ಪ್ರೀತ್ಯೈ ತಸ್ಯೈವ ದೇವಸ್ಯ ತತ್ಪ್ರಸಾದಪುರಃಸರಃ ॥ ೩ ॥

ಭಾಷ್ಯ, ಅನುವ್ಯಾಖ್ಯಾನಗಳನ್ನು ನಾನೇ ರಚನೆ ಮಾಡಿದ್ದರೂ ವೇದಾರ್ಥಗಳನ್ನು ರಕ್ಷಣೆ ಮಾಡುವ ವೇದವ್ಯಾಸದೇವರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾದ ಅನುವ್ಯಾಖ್ಯಾನದಲ್ಲಿ ಹೇಳಿರುವ ಸನ್ನ್ಯಾಯಗಳಿಗೆ ವಿವರಣೆಯನ್ನು ಅದೇ ವೇದವ್ಯಾಸರ ಅನುಗ್ರಹದಿಂದ, ಅವರ ಪ್ರೀತಿಗಾಗಿಯೇ ಮಾಡುತ್ತಿದ್ದೇನೆ. ಈ ಗ್ರಂಥವು ಮಂದಮತಿಗಳಿಗೆ ಮತ್ತು ಪಂಡಿತರಿಗೂ ಉಪಕಾರಕ ವಾಗಿದೆ.

'ಭಾಷ್ಯಾನುಭಾಷ್ಯೇಽಹಂ' ಎಂಬಲ್ಲಿ ಏಕಾರಾಂತವಾದ ದ್ವಿವಚನವಾದ್ದರಿಂದ 'ಈದೂದೇದ್ದ್ವಿವಚನಂ ಪ್ರಗೃಹ್ಯಂ' ಎಂಬ ಸೂತ್ರದಿಂದ ಪ್ರಗೃಹ್ಯಸಂಜ್ಞೆಯಿರುವುದರಿಂದ 'ಪ್ಲುತಪ್ರಗೃಹ್ಯಾ ಅಚಿ ನಿತ್ಯಂ' ಎಂಬ ಸೂತ್ರದಿಂದ ಪ್ರಕೃತಿಭಾವ ಬಂದು ಯಾವುದೇ ಸಂಧಿಕಾರ್ಯವಾಗಬಾರದು. ಆದರೆ ಪೂರ್ವರೂಪಸಂಧಿ ಆದದ್ದು ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಈದಾದೀನಾಂಪ್ರಗೃಹ್ಯತ್ವೇ ಮಣೀವಾದೀನಾಂ ಪ್ರತಿಷೇಧಕ್ತವ್ಯಃ' ಎಂಬ ವಾರ್ತಿಕದಿಂದ ಪ್ರಗೃಹ್ಯಸಂಜ್ಞೆಯನ್ನು ನಿಷೇಧ ಮಾಡಿದ್ದರಿಂದ 'ಮಣೀವೋಷ್ಟಸ್ಯ ಲಂಬೇತೇ' ಎಂಬ ಮಹಾಭಾರತದ ವಾಕ್ಯದಲ್ಲಿ ಮಣೀ+ಇವ ಎಂಬಲ್ಲಿ ಸವರ್ಣದೀರ್ಘಸಂಧಿಯಾಗಿರುವಂತೆ ಇಲ್ಲಿಯೂ ಸಂಧಿಯಾಗಿದೆ.

ಅಥವಾ 'ಓರ್ಗುಣಃ' ಎಂಬ ಸೂತ್ರದಲ್ಲಿ ಸಂಜ್ಞೆಯನ್ನು ಆಧರಿಸಿ ಮಾಡುವ ಕಾರ್ಯವು ಅನಿತ್ಯವೆಂದು ಪರಿಭಾಷೆಯಲ್ಲಿ ಹೇಳಿರುವುದರಿಂದ ಪ್ರಗೃಹ್ಯಸಂಜ್ಞೆಯನ್ನು ಆಧರಿಸುವ ಪ್ರಕೃತಿಭಾವವು ಅನಿತ್ಯವಾದ್ದರಿಂದ ಸಂಧಿಯಾಗಿದೆ.

ಅಥವಾ, (ಭಾಷ್ಯಂ ಚ ಅನುಭಾಷ್ಯಂ ಚ ಏತಯೋಃ ಸಮಾಹಾರಃ ಭಾಷ್ಯಾನುಭಾಷ್ಯಂ। ತಸ್ಮಿನ್) ಸಮಾಹಾರದ್ವಂದ್ವವನ್ನು ಮಾಡಿಯೂ ಈ ಪ್ರಯೋಗವನ್ನು ಕೂಡಿಸಬಹುದು.

ಮೊದಲು ಅನುವ್ಯಾಖ್ಯಾನದಲ್ಲಿ ನ್ಯಾಯಗಳನ್ನು ಕ್ಲಿಷ್ಟಕರವಾಗಿ ರಚಿಸಿ ಅವುಗಳ ವಿವರಣೆಯನ್ನು ಈ ಗ್ರಂಥದಲ್ಲಿ ಮಾಡುತ್ತಿರುವುದು 'ಸುಮ್ಮನೆ ಉಪ್ಪನ್ನು ತಿಂದು ನೀರು ಹುಡುಕುವ ಪ್ರಯತ್ನವಾಗುವುದಿಲ್ಲವೇ?' ಎಂದರೆ, ಇಲ್ಲ ಎಂದು ಉತ್ತರಿಸುತ್ತಿದ್ದಾರೆ. 'ಪ್ರೀತ್ಯೈ' ಎಂಬ ಪದದಿಂದ. ಇದು ಭಗವಂತನ ಪ್ರೀತಿಗಾಗಿಯೇ ಮಾಡುತ್ತಿರುವುದರಿಂದ ಯಾವದೋಷವೂ ಇಲ್ಲ.

# ಪ್ರಥಮಾಧ್ಯಾಯಃ (ಸಮನ್ವಯಾಧ್ಯಾಯಃ)

## ಪ್ರಥಮಃಪಾದಃ

### ಜಿಜ್ಞಾಸಾಧಿಕರಣ (1-1-1)

ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ಎಂಬ ಸೂತ್ರವನ್ನೊಳಗೊಂಡ ಅಧಿಕರಣದಲ್ಲಿ 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಜಿಜ್ಞಾಸೆಯು ವಿಷಯ. ಆ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೋ? ಬೇಡವೋ? ಎಂಬುದು ಸಂದೇಹ. ಈ ಅಧಿಕರಣದ ಪೂರ್ವಪಕ್ಷ ಮತ್ತು ಸಿದ್ಧಾಂತ ನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**॥ ಹರಿಃ ಓಂ ॥ ಜೀವವ್ಯತಿರಿಕ್ತೇಶ್ವರಸ್ಯಾಭಾವಾತ್ ತಸ್ಯ ಚ ಸ್ವಪ್ರಕಾಶತ್ವಾನ್ನ ಜಿಜ್ಞಾಸ್ಯತೇತಿ ಪ್ರಾಪ್ತೇ ''ಅಥಾತೋ ಬ್ರಹ್ಮಜಿಜ್ಞಾಸಾ'' ಇತ್ಯಾಹ । ''ತದ್ವಿಜಿಜ್ಞಾಸಸ್ವ ತದ್ಬ್ರಹ್ಮ'' ಇತಿ ಬ್ರಹ್ಮಶಬ್ದೇನ ಪೂರ್ಣ-ಗುಣತ್ವೋಕ್ತೇರ್ನಾನುಭವಸಿದ್ಧಾಲ್ಪಗುಣಜೀವಾಭೇದಃ । ''ಅಥ ಕಸ್ಮಾ-ದುಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ'' ಇತಿ ಶ್ರುತೇಃ ॥ ೧ ॥**

**ಭಾವಾರ್ಥ—** ಜಿಜ್ಞಾಸೆಗೆ ವಿಷಯನಾದವನು ಬ್ರಹ್ಮನೆಂದು ಹೇಳಲಾಗಿದೆ. ಆದರೆ ಇದು ಯುಕ್ತವಾಗುವುದಿಲ್ಲ. ಜೀವನಿಗಿಂತ ಭಿನ್ನನಾದ ಈಶ್ವರನೇ ಇಲ್ಲ. ಜೀವನಾದರೂ ಸ್ವಪ್ರಕಾಶನಾದ್ದರಿಂದ ಸಿದ್ಧನಾಗಿದ್ದಾನೆ. ಆದ್ದರಿಂದ ಜೀವನು

ಜಿಜ್ಞಾಸೆಗೆ ವಿಷಯನಾಗುವುದಿಲ್ಲ ಎಂದು ಪೂರ್ವಪಕ್ಷವು ಪ್ರಾಪ್ತವಾದಾಗ ಅದನ್ನು ನಿರಾಕರಿಸಲು ಸೂತ್ರಕಾರರು ಹೇಳುತ್ತಿದ್ದಾರೆ. 'ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ' ಎಂದು. 'ತದ್ ವಿಜಿಜ್ಞಾಸಸ್ವ' ಎಂಬುದಾಗಿ ಶ್ರುತಿಯು ಜಿಜ್ಞಾಸೆಯನ್ನು ವಿಧಾನಮಾಡಿ, ಜಿಜ್ಞಾಸೆಗೆ ವಿಷಯನಾದವನಲ್ಲಿ 'ತದ್ ಬ್ರಹ್ಮೇತಿ' ಎಂದು ಬ್ರಹ್ಮ ಶಬ್ದವನ್ನು ಪ್ರಯೋಗಿಸಿದೆ. ಬ್ರಹ್ಮ ಶಬ್ದದಿಂದ ಗುಣಪರಿಪೂರ್ಣತ್ವವು ಉಕ್ತವಾಗಿದೆ. ಜೀವನಾದರೂ ಅಲ್ಪಗುಣವುಳ್ಳವನೆಂದು ಅನುಭವದಿಂದ ಸಿದ್ಧವಾಗಿದೆ. ಆದ್ದರಿಂದ ಜೀವರಲ್ಲಿ ಬ್ರಹ್ಮ, ಅಭೇದವು ಕೂಡುವುದಿಲ್ಲ. ಬ್ರಹ್ಮಶಬ್ದದಿಂದ ಗುಣಪರಿಪೂರ್ಣತ್ವವು ಹೇಗೆ ಉಕ್ತವಾಗುತ್ತದೆ ಎಂದರೆ ಶ್ರುತಿಯಿಂದ ಎಂದು ಉತ್ತರ. 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ' 'ಪರಮಾತ್ಮನು ಯಾವ ಕಾರಣದಿಂದ ಬ್ರಹ್ಮನೆಂದು ಹೇಳಲ್ಪಡುತ್ತಾನೆ' ಎಂದು ಶಂಕೆ ಮಾಡಿಕೊಂಡು ಶ್ರುತಿಯಲ್ಲಿಯೇ 'ಬೃಹಂತೋ ಹ್ಯಸ್ಮಿನ್ ಗುಣಾಃ' ಪೂರ್ಣವಾದ ಗುಣಗಳು ಇವನಲ್ಲಿರುವುದರಿಂದ ಎಂದು ಹೇಳಲಾಗಿದೆ.

**ವಿವರಣೆ—** ಜಿಜ್ಞಾಸೆಗೆ ವಿಷಯವಾಗಬೇಕಾದರೆ ಸಂದಿಗ್ಧವಾಗಿರಬೇಕೆ ಹೊರತು ನಿಶ್ಚಿತವಾಗಬಾರದು. ಜಿಜ್ಞಾಸೆಗೆ ವಿಷಯನೆಂದು ಹೇಳಲಾದ ಬ್ರಹ್ಮನು ಜೀವನಿಂದ ಅಭಿನ್ನನಾಗಿದ್ದಾನೆ. ಜೀವನು ಸ್ವಪ್ರಕಾಶನಾದ್ದರಿಂದ ಸಿದ್ಧನಾಗಿದ್ದಾನೆ. (ಕೆಲವು ವಾದಿಗಳ ಪ್ರಕಾರ ಸ್ವಪ್ರಕಾಶವಾದ ಜ್ಞಾನಕ್ಕೆ ಆಶ್ರಯನಾದ್ದರಿಂದ, ಇನ್ನೂ ಕೆಲವರ ಪ್ರಕಾರ ಮಾನಸಪ್ರತ್ಯಕ್ಷಕ್ಕೆ ವಿಷಯನಾದ್ದರಿಂದ ಸಿದ್ಧನಾಗಿದ್ದಾನೆ.) ಆದ್ದರಿಂದ ಜಿಜ್ಞಾಸೆಗೆ ವಿಷಯನಾಗುವುದಿಲ್ಲ ಎಂಬುದು ಪೂರ್ವಪಕ್ಷದ ಸಾರ.

ಜೀವನು ಅಲ್ಪಗುಣವುಳ್ಳವನೆಂದು ಎಲ್ಲರ ಅನುಭವವಿದೆ. ಬ್ರಹ್ಮನಾದರೂ 'ಬೃಹಂತೋ ಹ್ಯಸ್ಮಿನ್ ಗುಣಾಃ' ಮುಂತಾದ ಶ್ರುತಿಯಿಂದ ಗುಣಪೂರ್ಣನೆಂದು ಸಿದ್ಧನಾಗಿದ್ದಾನೆ. ಅಲ್ಪಗುಣತ್ವ, ಪೂರ್ಣಗುಣತ್ವವೆಂಬ ವಿರುದ್ಧಧರ್ಮವಿರುವ ಜೀವಬ್ರಹ್ಮರಿಗೆ ನೀರು ಬೆಂಕಿಗಳಂತೆ ಭೇದವಿದೆ. ಹೀಗೆ ಭಿನ್ನನಾದ, ಸಂದಿಗ್ಧನಾದ ಬ್ರಹ್ಮನ ಜಿಜ್ಞಾಸನೆಯನ್ನು ಮುಮುಕ್ಷುವಾದವನು ಮಾಡಲೇಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ**

ಅಥ=ಅಧ್ಯಯನ, ಶಮ, ದಮಾದಿರೂಪ ಅಧಿಕಾರ ಪ್ರಾಪ್ತಿಯ ಅನಂತರ ಅತಃ=ಅಕಾರದಿಂದ ವಾಚ್ಯನಾದ ಪ್ರಸನ್ನನಾದ ಬ್ರಹ್ಮನ ಜ್ಞಾನ, ಅದರಿಂದ ಉಂಟಾದ ಪ್ರಸಾದ, ಅದರಿಂದ ದೊರಕುವ ಮೋಕ್ಷರೂಪ ಪ್ರಯೋಜನವಿರುವುದರಿಂದ ಓಂ=ಗುಣಪೂರ್ಣನಾದ ಬ್ರಹ್ಮ=ಬ್ರಹ್ಮನ ಜಿಜ್ಞಾಸಾ=ಶ್ರವಣ ಮನನ ನಿಧಿಧ್ಯಾಸನರೂಪವಾದ ವಿಚಾರವು ಕರ್ತವ್ಯಾ=ಮಾಡಲ್ಪಡಬೇಕು.

## ಜನ್ಮಾಧಿಕರಣ (1-1-2)

ಓಂ ಜನ್ಮಾದ್ಯಸ್ಯಯತಃ ಓಂ ಎಂಬ ಒಂದುಸೂತ್ರವನ್ನೊಳಗೊಂಡ ಜನ್ಮಾಧಿಕರಣಕ್ಕೆ 'ಯತೋ ವಾ ಇಮಾನಿ ಭೂತಾನಿ...' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮನು ವಿಷಯ. ಬ್ರಹ್ಮನು ಜೀವನೋ? ವಿಷ್ಣುವೋ? ಎಂಬುದು ಸಂಶಯ. ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ವಿವರಿಸುತ್ತಿದ್ದಾರೆ–

**ನ ಜೀವ ಏವಾಯಂ ಬ್ರಹ್ಮ ಶಬ್ದಃ । ''ಯತೋ ವಾ ಇಮಾನಿ ಭೂತಾನಿ ಜಾಯಂತೇ'' ಇತ್ಯಾದಿನಾ ಜನ್ಮಾದಿಕಾರಣತ್ವಸ್ಯೈವ ಬ್ರಹ್ಮಲಕ್ಷಣತ್ವೋಕ್ತೇಃ ॥ ೨ ॥**

**ಭಾವಾರ್ಥ—**'ತದ್‌ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ' ಎಂಬಲ್ಲಿ ಉಕ್ತವಾದ ಬ್ರಹ್ಮಶಬ್ದವು ಜೀವನನ್ನು ಹೇಳುತ್ತದೆ ಎಂದು ಹೇಳಬಾರದು. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಮೊದಲಾದ ಶ್ರುತಿಯಿಂದ ಜಗಜ್ಜನ್ಮಾದಿ ಕಾರಣತ್ವವು ಬ್ರಹ್ಮನ ಲಕ್ಷಣವೆಂದು ಹೇಳಲಾಗಿದೆ. ಇದು ಜೀವನಲ್ಲಿ ಅಸಂಭಾವಿತ ವಾಗಿದೆ.

**ಪೂರ್ವಪಕ್ಷ—** 'ಬೃಹ=ಜಾತಿ, ಜೀವ, ಕಮಲಾಸನ, ಶಬ್ದರಾಶಿಷು' ಎಂಬ ಧಾತುಪಾಠದಿಂದ ಬ್ರಹ್ಮಶಬ್ದವು ಜಾತಿ, ಜೀವ, ಕಮಲಾಸನ, ಶಬ್ದರಾಶಿ ಎಂಬ ಅರ್ಥಗಳಲ್ಲಿ ಪ್ರಸಿದ್ಧವಾಗಿದೆ. 'ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮೇತಿ' ಎಂಬಲ್ಲಿರುವ ಬ್ರಹ್ಮಶಬ್ದದಿಂದ ಜಾತಿಯನ್ನು ಸ್ವೀಕರಿಸಲಾಗುವುದಿಲ್ಲ. ಜಾತಿಯು ಸಿದ್ಧವಾದ್ದರಿಂದ (ಸಂದಿಗ್ಧವಾಗಿಲ್ಲವಾದ್ದರಿಂದ) ಜಿಜ್ಞಾಸೆಗೆ ವಿಷಯವಾಗಲಾರದು. ಶಬ್ದರಾಶಿಯ ಪ್ರಾಮಾಣ್ಯವೂ ಲೋಕದಿಂದಲೇ ಸಿದ್ಧವಾದ್ದರಿಂದ ಅದನ್ನೂ ಸ್ವೀಕರಿಸಲಾಗದು.

ಕಮಲಾಸನ=ಚತುರ್ಮುಖ ಬ್ರಹ್ಮನನ್ನೂ ಸ್ವೀಕರಿಸಲು ಸಾಧ್ಯವಿಲ್ಲ. ಅವನ ಜಿಜ್ಞಾಸೆಯನ್ನು ಮಾಡುವುದರಿಂದ ಯಾವುದೇ ಪ್ರಯೋಜನಗಳು ಇಲ್ಲವಾದ್ದರಿಂದ. ಕೊನೆಯದಾಗಿ ಜೀವನನ್ನೇ ಬ್ರಹ್ಮಶಬ್ದದಿಂದ ಸ್ವೀಕರಿಸಬೇಕು. ಜೀವನೂ ಸಿದ್ಧನಾಗಿದ್ದಾನೆ. ಅವನಾದರೂ ಹೇಗೆ ಜಿಜ್ಞಾಸೆಗೆ ವಿಷಯನಾಗುತ್ತಾನೆ ಎಂದರೆ, ಜೀವನು ಸಿದ್ಧನಾಗಿದ್ದರೂ ದೇಹಕ್ಕಿಂತ ಭಿನ್ನನಾಗಿ ಸಿದ್ಧನಾಗಿಲ್ಲವಾದ್ದರಿಂದ ಬ್ರಹ್ಮಶಬ್ದವು ಜೀವನನ್ನೇ ಪ್ರತಿಪಾದಿಸುತ್ತದೆ. ಹೊರತು ವಿಷ್ಣುವನ್ನಲ್ಲ ಎಂಬುದು ಪೂರ್ವಪಕ್ಷ.

**ಸಿದ್ಧಾಂತ—** 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಎಂಬ ಶ್ರುತಿಯು 'ಯಾರಿಂದ ಬ್ರಹ್ಮ ರುದ್ರ ಮೊದಲಾದ ಜೀವರು ಹುಟ್ಟುತ್ತಾರೋ, ಯಾರಿಂದ ಜೀವಿಸುವರೋ, ಪ್ರಲಯಕಾಲದಲ್ಲಿ ಯಾರನ್ನು ಪ್ರವೇಶಿಸುವರೋ, ಮೋಕ್ಷದಲ್ಲಿ ಯಾರನ್ನು ಸ್ವೇಚ್ಛೆಯಿಂದ ಪ್ರವೇಶಿಸುವರೋ ಅವನೇ ಬ್ರಹ್ಮ' ಎಂದು ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಲಕ್ಷಣವೆಂದು ಹೇಳಿದೆ. ಈ ಲಕ್ಷಣವು ಜೀವನಲ್ಲಿ ಕೂಡುವುದಿಲ್ಲವಾದ್ದರಿಂದ ಬ್ರಹ್ಮಶಬ್ದವಾಚ್ಯನು ಜೀವನಾಗಲಾರ; ವಿಷ್ಣುವೇ.

'ನ ಜೀವ ಏವಾಯಂ ಬ್ರಹ್ಮಶಬ್ದಃ' ಎಂಬಲ್ಲಿ 'ಜೀವಃ ಏವ ಅಯಂ' ಎಂಬುದಾಗಿ ಪದಚ್ಛೇದ ಮಾಡಬಹುದು. ಆವಾಗ 'ಬ್ರಹ್ಮಶಬ್ದಃ ಎಂಬಲ್ಲಿ ಬ್ರಹ್ಮ ಇತಿ ಶಬ್ದಃ ಯಸ್ಯ ಸಃ ಎಂದು ವಿಗ್ರಹವಾಕ್ಯವನ್ನು ಮಾಡಬೇಕು. ಅಥವಾ 'ಜೀವೇ ಏವ ಅಯಂ' ಎಂದೂ ಪದಚ್ಛೇದ ಮಾಡಬಹುದು. ಆವಾಗ ಜೀವೇ ಎಂಬಲ್ಲಿಯ ಸಪ್ತಮೀ ವಿಭಕ್ತಿಗೆ ವಿಷಯ ಸಪ್ತಮೀ ಎಂದಿಟ್ಟುಕೊಳ್ಳಬೇಕು. ಬ್ರಹ್ಮಶಬ್ದವು ಜೀವವಿಷಯಕವಲ್ಲ (ಜೀವಪ್ರತಿಪಾದಕವಲ್ಲ) ಎಂಬರ್ಥವು ಲಭಿಸುತ್ತದೆ.

'ಜನ್ಮಾದಿಕಾರಣತ್ವಸ್ಯೈವ ಬ್ರಹ್ಮಲಕ್ಷಣತ್ವೋಕ್ತೇಃ' ಎಂಬಲ್ಲಿಯ 'ಏವ'ಕಾರವು ಈ ಲಕ್ಷಣವು ಜೀವನಲ್ಲಿ ಅಸಂಭಾವಿತ ಎಂಬುದನ್ನು ತಿಳಿಸುತ್ತದೆ.

**ಸೂತ್ರಾರ್ಥ—**

**'ಓಂ ಜನ್ಮಾದ್ಯಸ್ಯ ಯತಃ ಓಂ'**

ಅಸ್ಯ=ಚೇತನಾಚೇತನಾತ್ಮಕ ವಾದ ಈ ಜಗತ್ತಿನ ಜನ್ಮಾದಿ=ಸೃಷ್ಟಿ, ಸ್ಥಿತಿ,

ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಯತಃ=ಯಾರಿಂದ ಸಂಭವಿಸುತ್ತವೆ ಎಂದು ಶ್ರುತಿ ಹೇಳುತ್ತಿದೆಯೋ ಅವನೇ ಬ್ರಹ್ಮ.

## ಶಾಸ್ತ್ರಯೋನಿತ್ವಾಧಿಕರಣ (1-1-3)

ಓಂ ಶಾಸ್ತ್ರಯೋನಿತ್ವಾತ್ ಓಂ ಎಂಬ ಸೂತ್ರವನ್ನೊಳಗೊಂಡ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಜಗತ್ಕಾರಣತ್ವವು ವಿಷಯ. ಜಗತ್ಕಾರಣನು ವಿಷ್ಣುವೋ? ಇತರರೋ? ಎಂಬುದು ಸಂಶಯ. ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ವಿವರಿಸುತ್ತಿದ್ದಾರೆ.

**ನ ಚ ರುದ್ರಾದೌ ಸಮಮೇತಲ್ಲಕ್ಷಣಮ್। ಶಾಸ್ತ್ರೈಕಸಮಧಿಗಮ್ಯತ್ವಾತ್ ಕಾರಣತ್ವಸ್ಯ ॥ ೩ ॥**

**ಭಾವಾರ್ಥ**—ಹಿಂದಿನ ಅಧಿಕರಣದಲ್ಲಿ ಹೇಳಿದ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ರುದ್ರಾದಿಗಳಲ್ಲಿಯೂ ಸಾಧಾರಣವಾದ್ದರಿಂದ ಅತಿವ್ಯಾಪ್ತಿಯೆಂದು ಶಂಕಿಸ ಬಾರದು. ಜಗಜ್ಜನ್ಮಾದಿಕಾರಣತ್ವವನ್ನು ಋಗ್ವೇದ ಮುಂತಾದ ಶಾಸ್ತ್ರದಿಂದಲೇ ತಿಳಿಯಬೇಕೇ ಹೊರತು ಅನುಮಾನದಿಂದಲ್ಲ.

**ಪೂರ್ವಪಕ್ಷ**—ಪಾಶುಪತಾದಿ ಆಗಮದಲ್ಲಿ ರುದ್ರನನ್ನು ಸರ್ವಜ್ಞ ಎಂದು ಹೇಳಿದ್ದಾರೆ. ಸರ್ವಜ್ಞನಾದವನು ಜಗತ್ತಿಗೆ ಕಾರಣ ಎಂಬ ತರ್ಕದಿಂದ (ಅನುಮಾನದಿಂದ) ಜಗತ್ಕಾರಣತ್ವವನ್ನು ರುದ್ರನಿಗೆ ಸಾಧಿಸಬಹುದು. ಪಾಶುಪತ ಆಗಮಗಳು ರುದ್ರನಿಂದಲೇ ಜಗತ್ತಿನ ಸೃಷ್ಟ್ಯಾದಿಗಳು ನಡೆಯುತ್ತವೆ ಎಂದು ಪ್ರತಿಪಾದಿಸುತ್ತವೆ. ಹೀಗೆ ಅನುಮಾನ ಮತ್ತು ಆಗಮಗಳಿಂದ ಜಗಜ್ಜನ್ಮಾದಿಕಾರಣತ್ವವೆಂಬ ಲಕ್ಷಣವು ರುದ್ರಾದಿಗಳಲ್ಲಿಯೂ ಬರುವುದರಿಂದ ಅತಿವ್ಯಾಪ್ತಿ ಎಂಬುದು ಪೂರ್ವಪಕ್ಷ.

**ಸಿದ್ಧಾಂತ**— ಅನುಮಾನದಿಂದ ಜಗತ್ಕಾರಣತ್ವವನ್ನು ರುದ್ರಾದಿಗಳಲ್ಲಿ ಸಾಧಿಸಬೇಕಾದರೆ, 'ರುದ್ರಃ ಜಗತ್ಕರ್ತಾ ಸರ್ವಜ್ಞತ್ವಾತ್' ಎಂಬುದಾಗಿ ರುದ್ರನನ್ನು, ಪಕ್ಷಮಾಡಿ, ಅಥವಾ 'ಜಗಜ್ಜನ್ಮಾದಿಕಾರಣತ್ವಂ ರುದ್ರನಿಷ್ಠಂ ಧರ್ಮತ್ವಾತ್' ಎಂದು ಜಗಜ್ಜನ್ಮಾದಿಕಾರಣತ್ವವನ್ನಾದರೂ ಪಕ್ಷಮಾಡಿ ಸಾಧಿಸಬೇಕು. ಈ ಎರಡು ವಿಧವಾದ

ಅನುಮಾನಗಳಲ್ಲಿಯೂ ಜಗಜ್ಜನ್ಮಾದಿಕಾರಣತ್ವವು ಪ್ರಸಿದ್ಧವಾಗಿರಬೇಕು. ಇಲ್ಲವಾದರೆ ಆಶ್ರಯಾಸಿದ್ಧಿ, ಅಪ್ರಸಿದ್ಧವಿಶೇಷಣತಾ ಮುಂತಾದ ದೋಷಗಳು ಬರುತ್ತವೆ. ಜಗಜ್ಜನ್ಮಾದಿಕಾರಣತ್ವವನ್ನು ಶಾಸ್ತ್ರವೇ ಪ್ರತಿಪಾದಿಸುತ್ತದೆಯೇ ಹೊರತು ಬೇರೆ ಪ್ರಮಾಣಗಳಲ್ಲ. ಕೇವಲ ಅನುಮಾನದಿಂದ ಸಾಧಿಸಲು ಹೊರಟರೆ ಸತ್ಪ್ರತಿ ಪಕ್ಷಾನುಮಾನವನ್ನು ಮಾಡಲು ಬರುವುದರಿಂದ ಅನುಮಾನವು ದುಷ್ಟವಾಗುತ್ತದೆ. ಶಾಸ್ತ್ರವು ಜಗಜ್ಜನ್ಮಾದಿಕಾರಣತ್ವವನ್ನು ಪ್ರತಿಪಾದಿಸುವಾಗ ಯಾರಿಗೆ ತಿಳಿಸುತ್ತದೆಯೋ ಅವನನ್ನೇ ಜಗಜ್ಜನ್ಮಾದಿಕಾರಣನೆಂದು ತಿಳಿಯಬೇಕೇ ಹೊರತು ರುದ್ರಾದಿಗಳನ್ನಲ್ಲ. ಆದ್ದರಿಂದ ಅತಿವ್ಯಾಪ್ತಿ ಇಲ್ಲ.

ಶಾಸ್ತ್ರದಿಂದ ಜಗಜ್ಜನ್ಮಾದಿಕಾರಣತ್ವವನ್ನು ನಿರ್ಣಯಿಸಬೇಕೆಂದು ಹೇಳಲಾಗಿದೆ. ಪಾಶುಪತಾದಿಗಳೂ ಶಾಸ್ತ್ರವೇ ಆಗಿವೆ. ಅವುಗಳಲ್ಲಿ ರುದ್ರಾದಿಗಳಿಗೆ ಜಗತ್ಕಾರಣತ್ವ ವನ್ನು ಹೇಳುತ್ತಿರುವುದರಿಂದ ಅತಿವ್ಯಾಪ್ತಿಯು ಇದ್ದೇ ಇದೆ ಎಂದು ಆಕ್ಷೇಪ ಮಾಡು ವಂತಿಲ್ಲ. ಏಕೆಂದರೆ, ಪಾಶುಪತಾದಿಗಳನ್ನೂ ಶಾಸ್ತ್ರವೆಂದು ಪರಿಗಣಿಸುವಂತಿಲ್ಲ.

ಋಗ್ಯಜುಃಸಾಮಥರ್ವಾಶ್ಚ ಭಾರತಂ ಪಂಚರಾತ್ರಕಂ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ॥
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ।
ಅತೋಽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್॥

ಎಂದು ಭಾಷ್ಯೋದಾಹೃತ ಪ್ರಮಾಣವಚನದಲ್ಲಿ ಹೇಳಲಾದವುಗಳನ್ನು ಮಾತ್ರ ಶಾಸ್ತ್ರವೆಂದು ಸ್ವೀಕರಿಸಬೇಕು. ಆದ್ದರಿಂದ ಅತಿವ್ಯಾಪ್ತಿಯಿಲ್ಲ.

'ಶಾಸ್ತ್ರೈಕಸಮಧಿಗಮ್ಯತ್ವಾತ್ ಕಾರಣಸ್ಯ' ಎಂಬುದಾಗಿ ಆಚಾರ್ಯರ ವಾಕ್ಯ. 'ಶಾಸ್ತ್ರೈಕ' ಎಂಬುದು ಪಾಣಿನೀಯ ವ್ಯಾಕರಣಕ್ಕೆ ವಿರುದ್ಧದಂತೆ ಕಾಣುತ್ತದೆ. ಏಕಂ ಚ ತತ್ ಶಾಸ್ತ್ರಂ ಚ ಎಂದು ಕರ್ಮಧಾರಯ ಸಮಾಸವನ್ನು ಮಾಡಿದಾಗ 'ಪೂರ್ವಕಾಲೈಕಸರ್ವಜರತ್ಪುರಾಣನವಕೇವಲಾಃ ಸಮಾನಾಧಿಕರಣೇನ' ಎಂಬ ಸೂತ್ರದಿಂದ 'ಏಕ' ಶಬ್ದಕ್ಕೆ ಪೂರ್ವ ನಿಪಾತ ಬಂದು 'ಏಕಶಾಸ್ತ್ರಸಮಧಿಗಮ್ಯತ್ವಾತ್' ಎಂದಾಗಬೇಕೆ ಹೊರತು 'ಶಾಸ್ತ್ರೈಕಸಮಧಿಗಮ್ಯತ್ವಾತ್' ಎಂಬುದು ಸಮಂಜಸ ವಾಗುವುದಿಲ್ಲ. ಇದಕ್ಕೆ ಉತ್ತರ ಹೀಗಿದೆ— ಇಲ್ಲಿರುವ 'ಏಕ' ಶಬ್ದಕ್ಕೆ ಸಂಖ್ಯೆ

ಯೆಂಬರ್ಥವಿಲ್ಲ. ಅಸಹಾಯಕ (ಮುಖ್ಯ) ಎಂಬ ಅರ್ಥವಿದೆ. ಪಾಣಿನಿಯು ಸಂಖ್ಯಾವಾಚಕವಾದ ಏಕ ಶಬ್ದಕ್ಕೆ ಪೂರ್ವನಿಪಾತವನ್ನು ಹೇಳಿದ್ದಾರೆಯೇ ಹೊರತು ಅಸಹಾಯಕ ಎಂಬರ್ಥದ ಏಕ ಶಬ್ದಕ್ಕೆ ಅಲ್ಲ. ಆದ್ದರಿಂದ 'ಶಾಸ್ತ್ರೈಕಸಮಧಿಗಮ್ಯತ್ವಾತ್' ಎಂಬ ಪ್ರಯೋಗ ಸರಿಯಾಗಿಯೇ ಇದೆ. ಇದರಂತೆಯೇ 'ದೋಷೈಕದೃಕ್ ಪುರೋಭಾಗೀ' ಎಂಬ ಅಮರಕೋಶದ ವಾಕ್ಯವನ್ನು 'ಹ್ಲಾದೈಕಮಯೀಂ' ಎಂಬ ಕಾವ್ಯಪ್ರಕಾಶದ ಮಾತನ್ನೂ ಕೂಡಿಸಬೇಕು.

**ಸೂತ್ರಾರ್ಥ—**

**ಓಂ ಶಾಸ್ತ್ರಯೋನಿತ್ವಾತ್ ಓಂ**

ಶಾಸ್ತ್ರ=ವೇದ ಮತ್ತು ವೇದಾನುಸಾರಿ ಗ್ರಂಥಗಳೇ ಯೋನಿತ್ವಾತ್=ಪ್ರಮಾಣಗಳಾಗಿರುವುದರಿಂದ ಬ್ರಹ್ಮನೇ ಜಗತ್ಕಾರಣ.

## ಸಮನ್ವಯಾಧಿಕರಣ (1-1-4)

ಓಂ ತತ್ತು ಸಮನ್ವಯಾತ್ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಶಾಸ್ತ್ರಯೋನಿತ್ವವೇ ವಿಷಯ. ಎರಡು ವಿಧವಾದ ವಾಕ್ಯಗಳು ಕಾಣುತ್ತಿರುವುದರಿಂದ ಸಂಶಯ ಬರುತ್ತದೆ. ಶಾಸ್ತ್ರಯೋನಿತ್ವವು ವಿಷ್ಣುವಿಗೋ? ಅಥವಾ ರುದ್ರಾದಿಗಳಿಗೋ? ಎಂಬುದು ಸಂದೇಹ. ಪೂರ್ವಪಕ್ಷ ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ನ ಚ ಪಾಶುಪತಶಾಸ್ತ್ರೋದಿತತ್ವಾದಿ ಶಾಸ್ತ್ರಪ್ರತಿಪಾದ್ಯತ್ವೇ ಕಾರಣಮ್ ।**
**ಕಿಂ ತೂಪಕ್ರಮಾದಿಲಕ್ಷಣಃ ಸಮನ್ವಯ ಏವ ॥ ೪ ॥**

**ಭಾವಾರ್ಥ—**ರುದ್ರಾದಿಗಳು ಜಗತ್ಕಾರಣರೆಂದು ವೇದಾದಿಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದ್ದಾರೆ ಎಂಬುದಾಗಿ ಪಾಶುಪಾತಾದಿಶಾಸ್ತ್ರಗಳಲ್ಲಿ ಹೇಳಿದ್ದರಿಂದ ರುದ್ರಾದಿಗಳೇ ಜಗತ್ಕಾರಣರು ಎಂದು ಆಕ್ಷೇಪಿಸಬಾರದು. ಏಕೆಂದರೆ ಉಪಕ್ರಮಾದಿ ಲಿಂಗಗಳೇ ಶಾಸ್ತ್ರದ ತಾತ್ಪರ್ಯವನ್ನು ನಿರ್ಣಯಿಸುವವುಗಳು. ಅವುಗಳಿಂದ ವಿಮರ್ಶೆ ಮಾಡಿದಾಗ ವಿಷ್ಣುವೇ ಜಗತ್ಕಾರಣನೆಂದು ಸಿದ್ಧವಾಗುತ್ತದೆ.

**ಪೂರ್ವಪಕ್ಷ**—ಪಾಶುಪತಾದಿ ಶಾಸ್ತ್ರಗಳಲ್ಲಿ ರುದ್ರಾದಿಗಳೇ ಜಗತ್ಕಾರಣರೆಂದು ವೇದಪ್ರತಿಪಾದ್ಯರಾಗಿದ್ದಾರೆ ಎಂದು ಹೇಳಿದ್ದರಿಂದ ರುದ್ರಾದಿಗಳನ್ನು ಜಗತ್ಕಾರಣ ರೆಂದು ಒಪ್ಪಬೇಕು ಎಂದು ಪೂರ್ವಪಕ್ಷ. ಪಾಶುಪತಾದಿಶಾಸ್ತ್ರಗಳು ಪ್ರಮಾಣಗಳೇ ಅಲ್ಲ. ಅವುಗಳಿಂದ ಹೇಗೆ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಒಪ್ಪುವುದು? ಎಂದರೆ 'ಹಿರಣ್ಯಗರ್ಭಃ ಸಮವರ್ತತಾಗ್ರೇ', 'ಜ್ಞಾತ್ವಾ ಶಿವಂ ಶಾಂತಿಮತ್ಯಂತ ಮೇತಿ' ಮುಂತಾದ ವೇದಗಳಲ್ಲಿ ರುದ್ರಾದಿಗಳು ಜಗತ್ಕಾರಣರೆಂದು ಪ್ರತೀತರಾಗಿದ್ದಾರೆ. ಈ ಪ್ರತೀತಿಸಹಿತವಾದ ಪಾಶುಪತಾದಿ ಆಗಮಗಳಿಗೆ ಪ್ರಾಮಾಣ್ಯವು ಬರುವುದರಿಂದ ಈ ಪೂರ್ವಪಕ್ಷವನ್ನು ಮಾಡಲಾಗಿದೆ.

**ಸಿದ್ಧಾಂತ**—ಪಾಶುಪತಾದಿಶಾಸ್ತ್ರಗಳಲ್ಲಿ ರುದ್ರಾದಿಗಳು ಜಗತ್ಕಾರಣರೆಂದು ಹೇಳಿದ್ದಾರೆ ಎಂಬ ಕಾರಣದಿಂದ ಅವರಿಗೆ ಕಾರಣತ್ವವನ್ನು ಒಪ್ಪಲಾಗುವುದಿಲ್ಲ. ಅವುಗಳಲ್ಲಿ ವಿಶ್ವಾಸವಿಲ್ಲ. ಪ್ರತೀತಿಯ ಸಹಾಯವಿದ್ದರೂ ಅದೇ ಪ್ರಮಾಣ ವಾಗಲಾರದು. ಏಕೆಂದರೆ ವಕ್ತೃವು 'ಘಟಮಾನಯ' ಎಂದು ಪ್ರಯೋಗ ಮಾಡಿದಾಗ ಇಂದ್ರಿಯಗಳ ದೋಷದಿಂದಾಗಿ ಶ್ರೋತೃವಿಗೆ ಪಟದ ಪ್ರತೀತಿ ಬರಬಹುದು. ಹಾಗಾದರೆ ಶಾಸ್ತ್ರದ ತಾತ್ಪರ್ಯವನ್ನು ಯಾವುದರಿಂದ ನಿರ್ಣಯಿಸಬೇಕು? ಎಂದರೆ, ಉಪಕ್ರಮಾದಿಗಳಿಂದಲೇ ಎಂದು ಉತ್ತರ, ಅವುಗಳು

ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಮ್ ।
ಅರ್ಥಾವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ॥

ಎಂದು ಹೇಳಿದಂತೆ, ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ ಎಂಬ ಈ ಲಿಂಗಗಳಿಂದ ಶಾಸ್ತ್ರದ ತಾತ್ಪರ್ಯವನ್ನು ನಿರ್ಣಯಿಸಬೇಕು. ಇವುಗಳಿಂದ ವಿಮರ್ಶೆಮಾಡಿದಾಗ ವಿಷ್ಣುವೇ ಜಗತ್ಕಾರಣ ಎಂದು ಸಿದ್ಧವಾಗುತ್ತದೆ ಹೊರತು ರುದ್ರಾದಿಗಳಲ್ಲ. ಆದ್ದರಿಂದ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ.

**ಸೂತ್ರಾರ್ಥ**—

**ಓಂ ತತ್ತು ಸಮನ್ವಯಾತ್ ಓಂ**

ಸಮನ್ವಯಾತ್=ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಸರಿಯಾಗಿ ವಿಚಾರ ಮಾಡಿದಾಗ ತತ್ತು=ಜಗತ್ಕಾರಣನೆಂದು ಶಾಸ್ತ್ರಪ್ರತಿಪಾದ್ಯನಾದವನು ವಿಷ್ಣುವೇ.

## ಈಕ್ಷತ್ಯಧಿಕರಣ (1-1-5)

ಓಂ ಈಕ್ಷತೇರ್ನಾಶಬ್ದಂ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣಕ್ಕೆ ಶಾಸ್ತ್ರಯೋನಿತ್ವವು ವಿಷಯ. ವಾದಿಗಳಲ್ಲಿ ಪರಸ್ಪರ ವಿವಾದವಿರುವುದ ರಿಂದ ಶಾಸ್ತ್ರಯೋನಿತ್ವವು ಬ್ರಹ್ಮನಿಗೆ ಯುಕ್ತವೋ? ಅಯುಕ್ತವೋ? ಎಂಬುದು ಸಂಶಯ. ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ನ ಚ ತಸ್ಯಾವಾಚ್ಯತ್ವಂ ಶ್ರುತ್ಯಭಿಪ್ರಾಯಃ। ''ಸರ್ವೇ ವೇದಾ ಯತ್ಪದಮಾಮನಂತಿ'' ಇತ್ಯಾದಿ ಶ್ರುತಿಸಹಿತಾನುಭವಸ್ಯ ಬಲವತ್ತ್ವಾತ್ ॥೫॥**

**ಭಾವಾರ್ಥ—**ಪರಮಾತ್ಮನು ಅವಾಚ್ಯನೆಂಬುದು 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಗೆ ಅಭಿಪ್ರೇತವಾಗಿದ್ದರೆ ಪೂರ್ವಪಕ್ಷವು ಯುಕ್ತವಾಗು ತ್ತಿತ್ತು. ಆದರೆ, 'ಸರ್ವೇ ವೇದಾ ಯತ್ ಪದಮಾಮನಂತಿ' ಎಂಬ ಶ್ರುತಿಯಿಂದ ಸಹಿತವಾದ ಅನುಭವವು (ಈಕ್ಷಣವು) ಕೇವಲ ಶ್ರುತಿಗಿಂತ ಪ್ರಬಲವಾದ್ದರಿಂದ ಶ್ರುತಿಯನ್ನು ಬಾಧಿಸುತ್ತದೆ.

**ಪೂರ್ವಪಕ್ಷ—**'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು 'ಪರಮಾತ್ಮನು ಮಾತಿಗೆ ನಿಲುಕಲಾರ' ಎನ್ನುತ್ತಿದೆ. 'ಔಪನಿಷದಃ ಪುರುಷಃ' ಎಂಬ ಶ್ರುತಿಯಿದ್ದರೂ ಅದಕ್ಕೆ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನೆಂದಿಷ್ಟೇ ಅರ್ಥ. ಆದ್ದರಿಂದ ಬ್ರಹ್ಮನು ಮುಖ್ಯವೃತ್ತಿಯಿಂದ ಶಾಸ್ತ್ರಪ್ರತಿಪಾದ್ಯನಲ್ಲ.

**ಸಿದ್ಧಾಂತ—** 'ಸ ಏತಸ್ಮಾತ್ ಜೀವಘನಾತ್ ಪರಾತ್ ಪರಂ ಪುರಿಶಯಂ ಪುರುಷಮೀಕ್ಷತೇ' (ಪ್ರಣವೋಪಾಸನೆಯನ್ನು ಮಾಡಿದ ಜೀವನು ಚತುರ್ಮುಖನಿ ಗಿಂತಲೂ ಉತ್ತಮನಾದ ಪರಮಾತ್ಮನನ್ನು ಬ್ರಹ್ಮನ ಉಪದೇಶದಿಂದ ಸ್ಫುಟವಾಗಿ ತಿಳಿಯುತ್ತಾನೆ) ಮುಂತಾದ ಶ್ರುತಿಗಳು ಪರಮಾತ್ಮನು ಜ್ಞಾನವಿಷಯನೆಂದು

ಹೇಳುತ್ತಿವೆ. ಆದರೆ ಅವನ ಜ್ಞಾನವು ಇಂದ್ರಿಯಗಳಿಂದ ಅಥವಾ ಅನುಮಾನದಿಂದ ಬರಲು ಸಾಧ್ಯವಿಲ್ಲ. ಆದ್ದರಿಂದ ಶಾಸ್ತ್ರಪ್ರತಿಪಾದ್ಯನೆಂದೇ ಒಪ್ಪಬೇಕು ಎಂಬುದು ಸಿದ್ಧಾಂತ. ಶ್ರುತಿಯಿಂದ ಪೂರ್ವಪಕ್ಷ ಮಾಡಿದಾಗ ಈಕ್ಷಣವೆಂಬ ಹೇತುವಿನಿಂದ ಹೇಗೆ ಸಿದ್ಧಾಂತವನ್ನು ಮಾಡುತ್ತೀರಿ? ಶ್ರುತಿಗಿಂತ ಲಿಂಗವು ದುರ್ಬಲವಲ್ಲವೇ? ಎಂದರೆ, ಈ ಲಿಂಗಕ್ಕೆ 'ಸರ್ವೇ ವೇದಾ ಯತ್ ಪದಮಾಮನಂತಿ' (ಎಲ್ಲ ವೇದಗಳು ಪರಮಾತ್ಮನ ಸ್ವರೂಪವನ್ನು ಪ್ರತಿಪಾದಿಸುತ್ತವೆ) ಮುಂತಾದ ಶ್ರುತಿಯ ಸಹಾಯವಿರುವುದರಿಂದ ಶ್ರುತಿ ಸಹಿತವಾದ ಲಿಂಗವು ಪ್ರಬಲವಾಗಿ, ಕೇವಲ ಶ್ರುತಿಯನ್ನು ಬಾಧಿಸುತ್ತದೆ.

'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಶಬ್ದವೇದ್ಯನಲ್ಲ ಎಂದು ಹೇಳುತ್ತಿದೆಯಲ್ಲ? ಎಂದರೆ, ಸಂಪೂರ್ಣವಾಗಿ ಪರಮಾತ್ಮನನ್ನು ತಿಳಿಯಲು ಸಾಧ್ಯವಿಲ್ಲದಿರುವುದರಿಂದ, 'ಶಬ್ದಗಳಿಂದ ಸರ್ವಥಾ ಹೇಳಲಾಗದು' ಎಂದು ಅದರ ಅರ್ಥವಲ್ಲ. 'ಅವನನ್ನು ತಿಳಿಸಲು ಶಬ್ದ ಸಾಲದು' ಎಂದಿಷ್ಟೇ ಆ ಶ್ರುತಿಯ ಅಭಿಪ್ರಾಯ. ಆದ್ದರಿಂದ ಬ್ರಹ್ಮನು ಶಾಸ್ತ್ರಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ.

## ಆನಂದಮಯಾಧಿಕರಣ (1-1-6)

ಓಂ ಆನಂದಮಯೋಽಭ್ಯಾಸಾತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿ ಆನಂದಮಯನು ವಿಷಯ. ಆನಂದಮಯನು ಬ್ರಹ್ಮಾದಿಜೀವ ಸಮುದಾಯವೋ? ಚೇತನ ಪ್ರಕೃತಿಯೋ? ಅಚೇತನ ಪ್ರಕೃತಿಯೋ? ಅಥವಾ ವಿಷ್ಣುವೋ? ಎಂದು ಸಂದೇಹ. ಇವರೆಲ್ಲರಲ್ಲಿಯೂ ಬ್ರಹ್ಮಶಬ್ದದ ಪ್ರಯೋಗವಿರುವುದೇ ಸಂದೇಹಕ್ಕೆ ಕಾರಣ. ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ನ ಚಾವಯವತ್ವವಿರೋಧಃ ''ನೇಹ ನಾನಾಸ್ತಿ ಕಿಂಚನ'' ಇತಿ ಶ್ರುತೇರವಯವಾದ್ಯಭೇದಾತ್ ॥ ೬ ॥**

**ಭಾವಾರ್ಥ**—ಬ್ರಹ್ಮನು(ವಿಷ್ಣುವು) ಆನಂದಮಯನಾಗಲಾರ. 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂದು ಬ್ರಹ್ಮನು ಆನಂದಮಯನ ಪುಚ್ಛರೂಪ ಅವಯವ

ಎಂದು ಹೇಳಲಾಗಿದೆ. ಆದ್ದರಿಂದ ಬ್ರಹ್ಮನು ಆನಂದಮಯನ ಅವಯವವೇ ಹೊರತು ಆನಂದಮಯನಲ್ಲ ಎಂದು ಪೂರ್ವಪಕ್ಷವು ಪ್ರಾಪ್ತವಾದರೆ ಉತ್ತರಿಸುತ್ತಿದ್ದಾರೆ— 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಪರಮಾತ್ಮನಿಗೂ ಅವನ ಅವಯವಗಳಿಗೂ ಕಿಂಚಿತ್ತು ಭೇದವಿಲ್ಲವೆಂದು ಪ್ರತಿಪಾದಿಸುತ್ತಿರುವುದರಿಂದ ಆನಂದಮಯನೇ ಬ್ರಹ್ಮನೆನ್ನಲು ಯಾವುದೇ ಬಾಧಕವಿಲ್ಲ.

**ಪೂರ್ವಪಕ್ಷ—** 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬ ಶ್ರುತಿಯಲ್ಲಿ ಬ್ರಹ್ಮನು ಪುಚ್ಛರೂಪ ಅವಯವ ಎಂದು ಹೇಳಿದ್ದಾರೆ. ಬ್ರಹ್ಮ ಎಂದರೆ ವಿಷ್ಣು ಎಂದು 'ಅಸನ್ನೇವ ಸ ಭವತಿ' ಮುಂತಾದ ವಾಕ್ಯಗಳಿಂದ ನಿರ್ಧರಿಸಲಾಗಿದೆ. ಒಂದುವೇಳೆ ಆನಂದಮಯನೂ ಬ್ರಹ್ಮನೆಂದಾದರೆ ಅವಯವ-ಅವಯವಿ ಒಂದೇ ಎಂದು ಒಪ್ಪಬೇಕಾಗುವುದು. ಇದು ವಿರುದ್ಧ. ಆನೆಯ ಸೊಂಡಿಲೇ ಬೇರೆ ಆನೆಯೇ ಬೇರೆ ಎಂದು ಅನುಭವದಿಂದ ಸಿದ್ಧವಾಗಿದೆ. ಅದರಂತೆ ಪುಚ್ಛನಾದ ಬ್ರಹ್ಮನು ಆಶ್ರಯ. ಆನಂದಮಯ ಆಶ್ರಯಿ. ಆಶ್ರಯ ಆಶ್ರಯಿಗಳೂ ಭಿನ್ನವಾಗಿಯೇ ಕಂಡಿವೆ. ಈ ಎರಡು ಕಾರಣಗಳಿಂದ (ಅವಯವ-ಅವಯವಿಭಾವ, ಆಶ್ರಯ-ಆಶ್ರಯಿ ಭಾವಗಳ ವಿರೋಧವಿರುವುದರಿಂದ) ಬ್ರಹ್ಮನು ಆನಂದಮಯನಲ್ಲ.

**ಸಿದ್ಧಾಂತ—** 'ನೇಹ ನಾನಾಸ್ತಿ ಕಿಂಚನ' ಎಂಬ ಶ್ರುತಿಯು ಪರಮಾತ್ಮನಿಗೂ ಅವನ ಅವಯವಗಳಿಗೂ ಭೇದವನ್ನು ನಿರಾಕರಿಸುತ್ತಿದೆ. ಆದ್ದರಿಂದ ಆನಂದಮಯನ ಅವಯವ ಬ್ರಹ್ಮನೆಂದರೆ ಯಾವುದೇ ವಿರೋಧವಿಲ್ಲ.

ಶ್ರುತಿಯು ಭೇದವನ್ನು ನಿರಾಕರಿಸಬೇಕೆಂದರೆ ಭೇದವು ಪ್ರಾಪ್ತವಾಗಿರಲೇಬೇಕು. ಭೇದವು ಅವಯವ ಅವಯವಿಭಾವದಿಂದಲೇ ಪ್ರಾಪ್ತವಾಗಬೇಕು. ಇಲ್ಲವಾದರೆ, ಬ್ರಹ್ಮನು ಅವಯವರಹಿತನು ಎಂದು ಹೇಳಬೇಕಾಗಿತ್ತು. ಅವಯವ-ಅವಯವಿ ಭಾವವನ್ನು ಅಂಗೀಕರಿಸಿ ನಿರಾಕರಿಸುವ ಶ್ರುತಿಯು ವಿರೋಧವನ್ನು ತಾನೇ ಪರಿಹರಿಸುತ್ತದೆ. ಆದ್ದರಿಂದ ಆನಂದಮಯನು ಬ್ರಹ್ಮ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಆನಂದಮಯೋಽಭ್ಯಾಸಾತ್ ಓಂ॥**

ಆನಂದಮಯಃ=ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ರೂಪಗಳೂ ವಿಷ್ಣುವೇ. ಅಭ್ಯಾಸಾತ್=ಬ್ರಹ್ಮಶಬ್ದವು ಪುನಃಪುನಃ ಶ್ರುತವಾಗಿರುವುದರಿಂದ.

## ಅಂತಸ್ಥತ್ವಾಧಿಕರಣ (1-1-7)

ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ಎಂಬ ಸೂತ್ರದಿಂದ ಪ್ರಾರಂಭ ವಾಗುವ ಈ ಅಧಿಕರಣದಲ್ಲಿ ಅಂತಸ್ಥನು ವಿಷಯ. ಅದೃಶ್ಯತ್ವಲಿಂಗ ಮತ್ತು ಇಂದ್ರಾದಿ ಶ್ರುತಿಗಳಿರುವುದರಿಂದ ಸಂಶಯವು ಬರುತ್ತದೆ. ಈ ಅಂತಸ್ಥನು ವಿಷ್ಣುವೋ? ಅಥವಾ ಇತರರೋ ಎಂದು. ಪೂರ್ವಪಕ್ಷ, ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ನ ಚ**

**''ಬ್ರಹ್ಮೇಂದ್ರಮಗ್ನಿಂ ಜಗತಃ ಪ್ರತಿಷ್ಠಾಂ ದಿವ ಆತ್ಮಾನಂ ಸವಿತಾರಂ ಬೃಹಸ್ಪತಿಮ್ ।**

**ಚತುರ್ಹೋತಾರಂ ಪ್ರದಿಶೋಽನುಕ್ಲೃಪ್ತಂ ವಾಚೋ ವೀರ್ಯಂ ತಪಸಾಽನ್ವವಿಂದತ್''**

**ಇತ್ಯಾದಿ ಶಬ್ದಾನಾಮನ್ಯವಿಷಯತ್ವಮ್ । ಶ್ರುತಿಸಂದೇಹೇಽನನ್ಯಥಾ-ಸಿದ್ಧಲಿಂಗೇನ ನಿರ್ಣಯೋಪಪತ್ತೇಃ ॥ ೭ ॥**

**ಭಾವಾರ್ಥ**—ಅಂತಸ್ಥರು ಇಂದ್ರಾದಿಗಳೇ ಎಂದು ಶ್ರುತಿಯಿಂದ ಸಿದ್ಧವಾಗಿದೆ ಹೊರತು ಬ್ರಹ್ಮನಲ್ಲ. ಜಗತಃ ಪ್ರತಿಷ್ಠಾಂ=ಪ್ರಪಂಚಕ್ಕೆ ಆಶ್ರಯನು. ಚತುರ್ಹೋತಾರಂ=ಜ್ಞಾನ, ಇಚ್ಛಾ, ದ್ವೇಷ, ಪ್ರಯತ್ನಗಳೆಂಬ ನಾಲ್ಕು ಅಂತಃಕರಣಗಳಲ್ಲಿ ವಿಷಯವನ್ನು ಹೋಮಿಸುವವನೂ ಪ್ರದಿಶಃ=ಎಲ್ಲ ದಿಕ್ಕುಗಳಲ್ಲಿಯೂ ಅನುಕ್ಲೃಪ್ತಂ=ವ್ಯಾಪ್ತನಾದ ವಾಚಃ=ವೇದದ ವೀರ್ಯಂ= ಸಾರನಾದ (ಮುಖ್ಯಾರ್ಥನಾದ) ಇಂದ್ರಂ=ಇಂದ್ರನನ್ನು, ಅಗ್ನಿಂ=ಅಗ್ನಿಯನ್ನು ದಿವಃ=ಭಾರತೀದೇವಿಯ ಆತ್ಮಾನಂ=ಸ್ವಾಮಿಯಾದ ವಾಯುವನ್ನು, ಸವಿತಾರಂ=

ಸೂರ್ಯನನ್ನು ಬೃಹಸ್ಪತಿಂ=ಬೃಹಸ್ಪತಿಯನ್ನು, ಬ್ರಹ್ಮ=ಚತುರ್ಮುಖ ಬ್ರಹ್ಮನು ತಪಸಾ=ತಪಸ್ಸಿನಿಂದ ಅನ್ವವಿಂದತ್=ತಿಳಿದನು ಎಂಬುದಾಗಿ ಶ್ರುತವಾದ ಇಂದ್ರ ಮೊದಲಾದ ಶಬ್ದಗಳು ಬ್ರಹ್ಮನಿಗಿಂತ ಬೇರೆಯವರಾದ ಇಂದ್ರಾದಿಗಳನ್ನೇ ಪ್ರತಿಪಾದಿಸುತ್ತಿವೆಯೇ ಹೊರತು ಬ್ರಹ್ಮನನ್ನಲ್ಲ ಎಂದು ಪೂರ್ವಪಕ್ಷ ಬಂದಾಗ, ಉತ್ತರಿಸುತ್ತಾರೆ. ಶ್ರುತಿಯಲ್ಲಿ ಸಂದೇಹ ಬಂದಾಗ ಅನನ್ಯಥಾಸಿದ್ಧವಾದ (ನಿರವಕಾಶವಾದ) ಲಿಂಗದಿಂದ ನಿರ್ಣಯವನ್ನು ಮಾಡಬೇಕು.

**ಪೂರ್ವಪಕ್ಷ—** 'ಬ್ರಹ್ಮೇಂದ್ರಮಗ್ನಿಂ...' ಎಂಬ ಶ್ರುತಿಯಲ್ಲಿ ಅಂತಃಸ್ಥನಲ್ಲಿ ಇಂದ್ರ ಮುಂತಾದ ಶಬ್ದಗಳು ಶ್ರುತವಾಗಿವೆ. ಆ ಶಬ್ದಗಳು ರೂಢಿಯಿಂದ ಮತ್ತು ಯೋಗದಿಂದ (ಇದಿ ಪರಮೈಶ್ವರ್ಯೇ ಎಂಬ ಧಾತುವಿನಿಂದ ನಿಷ್ಪನ್ನವಾದ ಪರಮೈಶ್ವರ್ಯ ಮುಂತಾದವುಗಳು ಇಂದ್ರಾದಿದೇವತೆಗಳಲ್ಲಿರುವುದರಿಂದ) ಇಂದ್ರಾದಿದೇವತೆಗಳನ್ನೇ ಪ್ರತಿಪಾದಿಸುತ್ತವೆ ಹೊರತು ಬ್ರಹ್ಮನನ್ನಲ್ಲ.

**ಸಿದ್ಧಾಂತ—** ಸಮುದ್ರಾಂತಸ್ಥತ್ವವೆಂಬ ಭಗವಂತನ ಲಿಂಗವು ಶ್ರುತವಾಗಿರುವುದರಿಂದ ಅಂತಸ್ಥನು ವಿಷ್ಣುವೇ ಹೊರತು ಇಂದ್ರಾದಿಗಳಲ್ಲ.

ಶ್ರುತಿ ಮತ್ತು ಲಿಂಗಗಳಿಂದ ಪೂರ್ವಪಕ್ಷವನ್ನು ಮಾಡಿದಾಗ ಕೇವಲ ಲಿಂಗದಿಂದ ಸಿದ್ಧಾಂತವನ್ನು ಮಾಡುವುದು ಎಷ್ಟು ಸರಿ? ಎಂದು ಪ್ರಶ್ನಿಸಬಹುದು. ಇಲ್ಲಿ ಪೂರ್ವಪಕ್ಷಿಯು ಹೇಳಿದ ಶ್ರುತಿ ಲಿಂಗಗಳು ಸಾವಕಾಶವಾಗಿವೆ. ಇದಕ್ಕಿಂತ ನಿರವಕಾಶಲಿಂಗವೇ ಪ್ರಬಲವಾದ್ದರಿಂದ ನಿರವಕಾಶಲಿಂಗದಿಂದ ಸಿದ್ಧಾಂತ ಮಾಡಿರುವುದು ಸರಿಯಾಗಿದೆ.

ಶ್ರುತಿಲಿಂಗಗಳು ಸಾವಕಾಶವಾಗಿವೆ. ಅದು ಹೇಗೆಂದರೆ, ಇಂದ್ರ ಶ್ರುತಿಯು(ಶಬ್ದವು) ಇಂದ್ರನನ್ನು ಹೇಳುವಂತೆ 'ಸ ಬಹ್ರ ಸ ಶಿವಃ ಸ ಇಂದ್ರಃ' ಎಂಬುದಾಗಿ ರೂಢಿಯಿಂದ ವಿಷ್ಣುವನ್ನು ಹೇಳುತ್ತಿದೆ. ಪರಮೈಶ್ವರ್ಯವೂ ವಿಷ್ಣುವಿನಲ್ಲಿರುವುದರಿಂದ ಯೋಗದಿಂದಲೂ ವಿಷ್ಣುವನ್ನೇ ಪ್ರತಿಪಾದಿಸುತ್ತಿದೆ ಎಂದು ಸಿದ್ಧವಾಯಿತು. ಸಪ್ತಾಶ್ವಯುಕ್ತರಥವತ್ತ್ವವೆಂಬ ಲಿಂಗವು ಹೇಗೆ ಸೂರ್ಯನಲ್ಲಿದೆಯೋ ಅದರಂತೆ ಸೂರ್ಯನಲ್ಲಿರುವ ಭಗವಂತನಿಗೂ ಅನ್ವಯವಾಗುತ್ತದೆ. ಇದರಿಂದಾಗಿ ಶ್ರುತಿಲಿಂಗಗಳು ಇಂದ್ರಾದಿಗಳನ್ನು ಪ್ರತಿಪಾದಿಸುತ್ತಿದೆಯೋ ಅಥವಾ ವಿಷ್ಣುವನ್ನು ಪ್ರತಿಪಾದಿಸುತ್ತಿದೆಯೋ ಎಂದು

ಸಂದೇಹ ಬರುತ್ತದೆಯೇ ಹೊರತು ನಿರ್ಣಯವಾಗುವುದಿಲ್ಲ. ಸಮುದ್ರಾಂತಃಸ್ಥತ್ವ ವೆಂಬ ಲಿಂಗವಾದರೂ ವಿಷ್ಣುವಿನಲ್ಲಿಯೇ ಇದೆ ಹೊರತು ಇಂದ್ರಾದಿಗಳಲ್ಲಿಲ್ಲ. ಆದ್ದರಿಂದ ಅದು ಅನನ್ಯಥಾಸಿದ್ಧವಾಗಿದೆ. (ನಿರವಾವಕಾಶವಾಗಿದೆ) ಇದರಿಂದ ನಿರ್ಣಯಮಾಡಬಹುದು.

ಪೂರ್ವಪಕ್ಷಿಯು ಉದಹರಿಸಿದ ಶ್ರುತಿಲಿಂಗಗಳು ವಿಷ್ಣುವಿನಲ್ಲಿಯೇ ಮುಖ್ಯ ವಾಗಿವೆ. ಇಂದ್ರಾದಿಗಳಲ್ಲಿ ಅಮುಖ್ಯವಾಗಿವೆ. ಇಂದ್ರಶಬ್ದಾರ್ಥವಾದ ಪರಮೈಶ್ವರ್ಯವು ವಿಷ್ಣುವಿನಲ್ಲಿ ಮಿತಿ ಇಲ್ಲದ್ದು. ಮತ್ತು ಪರಾಧೀನವೂ ಅಲ್ಲ. ಆದರೆ ಇಂದ್ರನಲ್ಲಿರುವ ಪರಮೈಶ್ವರ್ಯಕ್ಕೆ ಮಿತಿ ಇದೆ. ಪರಮಾತ್ಮನ ಅಧೀನವೂ ಆಗಿದೆ. ಇಂದ್ರಶಬ್ದದ ಮುಖ್ಯಪ್ರತಿಪಾದ್ಯನಾದ ಶ್ರೀಹರಿಯ ಸನ್ನಿಧಾನ ಪುರಂದರನಲ್ಲಿರುವುದರಿಂದ ಇಂದ್ರಶಬ್ದದ ರೂಢಿ ಅವನಲ್ಲಿದೆ ಎಂದು ಹೇಳಬಹುದಾಗಿದೆ. 'ಮುಖ್ಯಾಮುಖ್ಯಯೋಃ ಮುಖ್ಯ ಏವ ಸಂಪ್ರತ್ಯಯಃ' (ಮುಖ್ಯ ಮತ್ತು ಅಮುಖ್ಯಗಳಲ್ಲಿ ಮುಖ್ಯವನ್ನೇ ಆಶ್ರಯಿಸಬೇಕು) ಎಂಬ ನಿಯಮದಂತೆ ಶ್ರುತಿ, ಲಿಂಗಗಳು ಮುಖ್ಯವಾಗಿ ಹೊಂದುವ ವಿಷ್ಣುವನ್ನೇ ಅಂತಃಸ್ಥನೆಂದು ನಿರ್ಣಯಿಸಬೇಕು.

**ಸೂತ್ರಾರ್ಥ—**

**ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥**

ಅಂತಃ=ಹೃದಯದ ಒಳಗಿರುವವನು ವಿಷ್ಣುವೇ ಏಕೆಂದರೆ, ತದ್ಧರ್ಮೋಪ ದೇಶಾತ್=ಸಮುದ್ರಾಂತಸ್ಥಿತತ್ವ ಮುಂತಾದ ವಿಷ್ಣುವಿನ ಧರ್ಮಗಳು ಶ್ರುತ ವಾಗಿರುವುದರಿಂದ.

## ಆಕಾಶ–ಪ್ರಾಣ–ಗಾಯತ್ರ್ಯಧಿಕರಣಗಳು (1-1-8,9,11)

ಓಂ ಆಕಾಶಸ್ತಲ್ಲಿಂಗಾತ್ ಓಂ ಎಂಬ ಸೂತ್ರವನ್ನೊಳಗೊಂಡ ಆಕಾಶಾಧಿಕರಣಕ್ಕೆ 'ಅಸ್ಯ ಲೋಕಸ್ಯ ಕಾ ಗತಿಃ, ಆಕಾಶ ಇತಿ ಹೋವಾಚ' ಎಂಬಲ್ಲಿ ಹೇಳಲ್ಪಟ್ಟ ಆಕಾಶವು ವಿಷಯವು. ಆಕಾಶಶಬ್ದವಾಚ್ಯವಾದದ್ದು ಭೂತಾಕಾಶವೋ ವಿಷ್ಣುವೋ ಎಂಬುದು

ಸಂದೇಹ. ಓಂ ಅತ ಏವ ಪ್ರಾಣಃ ಓಂ ಎಂಬ ಸೂತ್ರವನ್ನೊಳಗೊಂಡ ಪ್ರಾಣಾಧಿಕರಣಕ್ಕೆ 'ತದ್ವೈ ತ್ವಂ ಪ್ರಾಣೋಽಭವಃ' ಎಂಬಲ್ಲಿ ಶ್ರುತವಾದ ಪ್ರಾಣನು ವಿಷಯ. ಅವನು ಮುಖ್ಯಪ್ರಾಣನೋ? ಪರಮಾತ್ಮನೋ? ಎಂಬುದು ಸಂದೇಹ. ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಂ ಓಂ ಎಂಬ ಸೂತ್ರದಿಂದ ಆರಂಭವಾಗುವ ಗಾಯತ್ರ್ಯಧಿಕರಣಕ್ಕೆ ಗಾಯತ್ರೀಶಬ್ದವು ವಿಷಯ. ಗಾಯತ್ರೀಶಬ್ದವಾಚ್ಯವಾದದ್ದು ಛಂದಸ್ಸೋ? ವಿಷ್ಣುವೋ? ಎಂಬುದು ಸಂದೇಹ. ಈ ನಾಲ್ಕು ಅಧಿಕರಣಗಳ ಪೂರ್ವಪಕ್ಷ, ಸಿದ್ಧಾಂತನ್ಯಾಯಗಳನ್ನು ಸಂಗ್ರಹಿಸಿ ವಿವರಿಸುತ್ತಿದ್ದಾರೆ—

**ಅಧಿಭೂತಾಧ್ಯಾತ್ಮಾಧಿವೇದಗತಾನಾಮಪಿ ಶಬ್ದಾನಾಮಚೇತನತ್ವ-ಜೀವಾನ್ವಯವ್ಯತಿರೇಕಿತ್ವನಿತ್ಯತ್ವೇಷು ವಿದ್ಯಮಾನೇಷ್ವಪಿ ಭಗವದ್ವಿಷಯತ್ವ-ಮೇವಾನನ್ಯಥಾಸಿದ್ಧಲಿಂಗೈಃ । 'ತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪುರುಷಃ' ಇತ್ಯಾದಿ ಶಬ್ದಸಹಿತಲಿಂಗೈಶ್ಚ । ಸಂದಿಗ್ಧಶ್ರುತಿಲಿಂಗಾಭ್ಯಾ-ಮುಕ್ತಾಭ್ಯಾಮಪಿ, ಅಸಂದಿಗ್ಧಯೋಃ ಕೇವಲಯೋರೇವ ಬಲವತ್ತ್ವಾತ್ ॥ ೮-೧೧ ॥**

**ಭಾವಾರ್ಥ**—ಭೂತಗಳಲ್ಲಿ ಪ್ರಸಿದ್ಧಗಳಾದ ಆಕಾಶ ಪೃಥಿವೀ ಮೊದಲಾದ ಶಬ್ದಗಳು, ಮುಖ್ಯಪ್ರಾಣ, ಇಂದ್ರಿಯಗಳಲ್ಲಿ ಪ್ರಸಿದ್ಧಗಳಾದ ಪ್ರಾಣ, ಚಕ್ಷುರಾದಿ ಶಬ್ದಗಳು, ವೇದದಲ್ಲಿ ಪ್ರಸಿದ್ಧಗಳಾದ ಗಾಯತ್ರೀ, ಉಷ್ಣಿಕ್ ಮುಂತಾದ ಶಬ್ದಗಳು ಇವುಗಳಲ್ಲಿ ಕ್ರಮವಾಗಿ ಅಚೇತನತ್ವ, ಜೀವಾನ್ವಯವ್ಯತಿರೇಕಿತ್ವ (ಪ್ರಾಣನಿದ್ದರೆ ಜೀವನ. ಪ್ರಾಣನಿಲ್ಲದ್ದಿದರೆ ಜೀವನವಿಲ್ಲ ಎಂಬುದು ಅನ್ವಯ ವ್ಯತಿರೇಕ) ಮತ್ತು ನಿತ್ಯತ್ವಗಳು ಇದ್ದರೂ ಪರೋವರೀಯಸ್ತ್ವ, ಶ್ರೀಲಕ್ಷ್ಮೀಪತಿತ್ವ ಮೊದಲಾದ ಗಾನತ್ರಾಣಕರ್ತೃತ್ವ ಮೊದಲಾದ ಬೇರೆಯವರಲ್ಲಿಲ್ಲದಿರುವ ಲಿಂಗಗಳಿಂದ ಆಕಾಶ, ಗಾಯತ್ರೀ, ಪ್ರಾಣ ಶಬ್ದಗಳು ವಿಷ್ಣುವನ್ನೇ ಹೊರತು ಯಾರನ್ನೂ ಪ್ರತಿಪಾದಿಸಲಾರವು. ಅದರಂತೆಯೆ, 'ತಾವಾನಸ್ಯ ಮಹಿಮಾ ಅತೋ ಜ್ಯಾಯಾಂಶ್ಚ ಪುರುಷಃ' (ಹಿಂದೆ ಹೇಳಿದ ಮಹಿಮೆಯು ಮಾತ್ರವಲ್ಲ. ಅದಕ್ಕಿಂತಲೂ ಅಧಿಕವಾದ ಮಹಿಮೆಯುಳ್ಳವನು ಶ್ರೀಹರಿ) ಎಂಬ ಪುರುಷಶಬ್ದ ಸಹಿತವಾದ ಪುರುಷ

ಸೂಕ್ತೋಕ್ತತ್ವ, ಭೂತಾದಿಪಾದತ್ವ ಮೊದಲಾದ ಲಿಂಗಗಳಿಂದಲೂ ಆಕಾಶಾದಿ ಶಬ್ದವಾಚ್ಯನಾದವನು ನಿಶ್ಚಯವಾಗುತ್ತದೆ. ಸಂದಿಗ್ಧವಾದ ಶ್ರುತಿಲಿಂಗಗಳಿಗಿಂತಲೂ ಅಸಂದಿಗ್ಧವಾದ ಕೇವಲ ಶ್ರುತಿಲಿಂಗಗಳೇ ಪ್ರಬಲವಾಗುತ್ತವೆ.

**ಪೂರ್ವಪಕ್ಷ—** 'ಆಕಾಶ ಇತಿ ಹೋವಾಚ' ಎಂಬಲ್ಲಿ ಹೇಳಿರುವ ಆಕಾಶ ಶಬ್ದವು ಭೂತಾಕಾಶವನ್ನು ಹೇಳುತ್ತದೆಯೇ ಹೊರತು ವಿಷ್ಣುವನ್ನಲ್ಲ. ಆಕಾಶ ಶಬ್ದದ ಯೋಗ ಮತ್ತು ರೂಢಿಗಳು ಭೂತಾಕಾಶದಲ್ಲಿವೆಯೇ ಹೊರತು ವಿಷ್ಣುವಿನಲ್ಲಿವೆ ಎಂದು ಹೇಳಲು ಯಾವುದೇ ನಿರವಕಾಶಪ್ರಮಾಣಗಳಿಲ್ಲ. ಹಿಂದಿನ ಅಧಿಕರಣದಲ್ಲಿ ಹೇಳಿದಂತೆ (ಇಂದ್ರ ಶಬ್ದದ ಯೋಗಾರ್ಥವಾದ ಪರಮೈಶ್ವರ್ಯ ವಿಷ್ಣುವಿನ ಅಧೀನವಾದ್ದರಿಂದ ವಿಷ್ಣುವಿನಲ್ಲಿಯೇ ಇಂದ್ರಶಬ್ದ ಮುಖ್ಯ. ಪುರಂದರನಲ್ಲಿ ಅಮುಖ್ಯ ಎಂದು ಹೇಳಿದೆ) ಆಕಾಶ ಶಬ್ದದ ಪ್ರವೃತ್ತಿನಿಮಿತ್ತ ಅವಕಾಶಪ್ರದತ್ವವು ಭೂತಾಕಾಶದಲ್ಲಿ ಅಮುಖ್ಯ, ವಿಷ್ಣುವಿನಲ್ಲಿ ಮುಖ್ಯ ಎಂದು ಹೇಳಲು ಸಾಧ್ಯವಿಲ್ಲ. ಇಂದ್ರಾದಿಗಳು ಚೇತನರು, ಅವರ ಪ್ರವೃತ್ತಿಯು ಪರಾಧೀನವೆನ್ನಬಹುದು; ಭೃತ್ಯನ ಪ್ರವೃತ್ತಿಯು ರಾಜನ ಅಧೀನವಾಗುವಂತೆ. ಆದರೆ ಆಕಾಶವು ಜಡ ಆದಕ್ಕೆ ಪ್ರವೃತ್ತಿಯೇ ಇರುವುದಿಲ್ಲ. ಆದ್ದರಿಂದ ಯೋಗಾರ್ಥವಾದ ಅವಕಾಶಪ್ರದತ್ವವು ಆಕಾಶದ ಸ್ವಾಭಾವಿಕ ಧರ್ಮವೇ ಹೊರತು ಅದು ಪರಾಧೀನವಲ್ಲವಾದ್ದರಿಂದ ಆಕಾಶ ಶಬ್ದವು ಭೂತಾಕಾಶವನ್ನೇ ಹೇಳುತ್ತದೆಯೇ ಹೊರತು, ವಿಷ್ಣುವನ್ನಲ್ಲ.

'ತದ್ವೈ ತ್ವಂ ಪ್ರಾಣೋಽಭವಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಪ್ರಾಣಶಬ್ದವು ಮುಖ್ಯಪ್ರಾಣನನ್ನು ಹೇಳುತ್ತಿದೆಯೇ ಹೊರತು ಶ್ರೀಹರಿಯನ್ನಲ್ಲ. ಪ್ರಾಣಶಬ್ದದ ಯೋಗರೂಢಿಗಳು ಮುಖ್ಯಪ್ರಾಣನಲ್ಲಿಯೇ ಇವೆ. ಪ್ರಾಣಶಬ್ದದ ಪ್ರವೃತ್ತಿ ನಿಮಿತ್ತವೂ ಪರಾಧೀನವಲ್ಲ. ಶ್ರುತಿಯಲ್ಲಿ ಉಕ್ತವಾದ ಜೀವನಪ್ರದತ್ವವೆಂಬ ಪ್ರವೃತ್ತಿನಿಮಿತ್ತವು ಮುಖ್ಯಪ್ರಾಣನಲ್ಲಿ ಅಸಂಭಾವಿತವಾದರೆ ಪರಾಧೀನವೆಂದು ಕಲ್ಪಿಸಬಹುದು. ಆದರೆ, ಮುಖ್ಯಪ್ರಾಣನಿದ್ದರೆ, ಜೀವನ, ಮುಖ್ಯಪ್ರಾಣ ನಿಲ್ಲವಾದರೆ ಜೀವನವಿಲ್ಲವೆಂಬ ಅನ್ವಯ, ವ್ಯತಿರೇಕಗಳಿಂದ ಮುಖ್ಯಪ್ರಾಣ ನಲ್ಲಿಯೇ ಜೀವನಪ್ರದತ್ವ ಕೂಡುವುದರಿಂದ ಪರಮಾತ್ಮನ ಅಧೀನವೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಪ್ರಾಣಶಬ್ದವಾಚ್ಯನು ಮುಖ್ಯಪ್ರಾಣನೇ.

ಗಾಯತ್ರೀಶಬ್ದವೂ ವೇದದ ಅವಾಂತರಪ್ರಭೇದವೇ ಆಗಿದೆ. ಯೋಗರೂಢಿ

ಗಳೆರಡೂ ವೇದದಲ್ಲಿಯೇ ಯುಕ್ತವಾಗಿವೆ. ಗಾಯತ್ರೀಶಬ್ದದ ಪ್ರವೃತ್ತಿನಿಮಿತ್ತವಾದ ಗಾನ=ವಾಚಕತ್ವವು ವೇದದ (ಶಬ್ದದ) ಸ್ವಭಾವವಾಗಿರುವುದರಿಂದ ಅದನ್ನು ಪರಾಧೀನವೆನ್ನಲು ಬರುವುದಿಲ್ಲ. ಆದ್ದರಿಂದ ಗಾಯತ್ರೀಶಬ್ದವಾಚ್ಯವಾದದ್ದು ವೇದವೇ ಹೊರತು ವಿಷ್ಣುವಲ್ಲ.

**ಸಿದ್ಧಾಂತ—** ಪರೋವರೀಯಸ್ತ್ವ ಶ್ರೀಲಕ್ಷ್ಮೀಪತಿತ್ವ ಗಾನತ್ರಾಣಕರ್ತೃತ್ವವೆಂಬ ಲಿಂಗಗಳು, ಬೇರೆಯವರಲ್ಲಿ ಕೂಡುವುದಿಲ್ಲ. ವಿಷ್ಣುವಿನಲ್ಲಿಯೇ ಕೂಡುತ್ತವೆಯಾದ್ದರಿಂದ ನಿರವಕಾಶಗಳಾಗಿವೆ. ಈ ನಿರವಕಾಶಲಿಂಗಗಳಿಂದ ಆಕಾಶ, ಪ್ರಾಣ, ಗಾಯತ್ರೀ ಶಬ್ದವಾಚ್ಯನಾದವನು ವಿಷ್ಣುವೇ ಆಗುತ್ತಾನೆ. ಮತ್ತು ಗಾಯತ್ರ್ಯಧಿಕರಣದಲ್ಲಿ ಹೇಳಲಾದ 'ತಾವಾನಸ್ಯ ಮಹಿಮಾ ಅತೋ ಜ್ಯಾಯಾಂಶ್ಚ ಪುರುಷಃ' ಎಂಬ ಪುರುಷಶಬ್ದ ಸಹಿತವಾದ ಪುರುಷಸೂಕ್ತೋಕ್ತತ್ವ, ಭೂತಾದಿಪಾದತ್ವ ಮೊದಲಾದ ಲಿಂಗಗಳಿಂದಲೂ ಆಕಾಶಾದಿ ಶಬ್ದವಾಚ್ಯನು ವಿಷ್ಣುವೇ.

ಆಕಾಶಾದಿಶಬ್ದಗಳು ಭೂತಕಾಶಗಳನ್ನು ಪ್ರತಿಪಾದಿಸುತ್ತವೆ ಎಂಬ ವಿಷಯದಲ್ಲಿಯೂ ಪ್ರಮಾಣಗಳಿವೆ. ವಿಷ್ಣುವಾಚಕಗಳೂ ಆಗಿವೆ ಎಂಬ ವಿಷಯದಲ್ಲಿಯೂ ಪ್ರಮಾಣಗಳಿವೆ. ಹೀಗಿರುವಾಗ ನಿರ್ಣಯ ಮಾಡುವುದು ಹೇಗೆ? ಎಂದರೆ, ಆಕಾಶ, ಪ್ರಾಣ, ಗಾಯತ್ರೀಶಬ್ದಗಳು ಭೂತಾಕಾಶಾದಿಗಳನ್ನು ಪ್ರತಿಪಾದಿಸುವಂತೆ ವಿಷ್ಣುವನ್ನು ಪ್ರತಿಪಾದಿಸಲೂ ಸಮರ್ಥಗಳಾಗಿವೆ. ಆದ್ದರಿಂದ ಆಕಾಶಾದಿಶಬ್ದಗಳು ಭೂತಾಕಾಶಾದಿಗಳನ್ನು ಪ್ರತಿಪಾದಿಸುತ್ತವೆಯೋ ಅಥವಾ ವಿಷ್ಣುವನ್ನು ಪ್ರತಿಪಾದಿಸುತ್ತವೆಯೋ? ಎಂಬುದಾಗಿ ಸಂದಿಗ್ಧಗಳೇ ಆಗಿವೆ. ಅದರಂತೆ ಅಚೇತನವಾದ್ದರಿಂದ ಅದರ ಪ್ರವೃತ್ತಿಯು ಪರಾಧೀನವಲ್ಲ ಎಂದು ಹಿಂದೆ ಹೇಳಿದೆ. ಆದರೆ ಅನುವ್ಯಾಖ್ಯಾನದಲ್ಲಿ 'ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ' ಎಂದು ಅಚೇತನವಾದ ಆಕಾಶವೂ ಭಗವಂತನ ಅಧೀನವೆಂದು ಹೇಳಿದ್ದರಿಂದ ಅಚೇತನತ್ವಾದಿ ಲಿಂಗಗಳೂ ಸಂದಿಗ್ಧಗಳೇ ಆಗಿವೆ. ಪರೋವರೀಯಸ್ತ್ವ ಮುಂತಾದ ಲಿಂಗಗಳು ಪುರುಷಶಬ್ದವು ಅಸಂದಿಗ್ಧವಾಗಿವೆ. ಪೂರ್ವಪಕ್ಷಿಯು ಹೇಳಿದ ಸಂದಿಗ್ಧ ಶ್ರುತಿ ಲಿಂಗಗಳಿಗಿಂತ ಸಿದ್ಧಾಂತಿ ಹೇಳಿದ ಅಸಂದಿಗ್ಧವಾದ ಶ್ರುತಿ ಲಿಂಗಗಳಿಂದ ಆಕಾಶಾದಿಶಬ್ದಗಳು ವಿಷ್ಣುವಾಚಕಗಳೇ ಆಗಿವೆ ಎಂದು ನಿಶ್ಚಯಿಸಬಹುದು. ಸಂದಿಗ್ಧವಾದ ಅನೇಕ ಲಿಂಗಗಳಿಗಿಂತ ಅಸಂದಿಗ್ಧವಾದ ಒಂದೇ ಲಿಂಗವು ಪ್ರಬಲ

ವಾಗುತ್ತದೆ ಎಂದಮೇಲೆ ಶ್ರುತಿಸಹಿತವಾದ ಅನೇಕ ಲಿಂಗಗಳು ಪ್ರಬಲವೆಂದು ಪ್ರತ್ಯೇಕ ಹೇಳಬೇಕಿಲ್ಲ.

**ಸೂತ್ರಾರ್ಥ—**

### ಓಂ ಆಕಾಶಸ್ತಲ್ಲಿಂಗಾತ್ ಓಂ

ಆಕಾಶಃ='ಆಕಾಶ ಇತಿ ಹೋವಾಚ' ಎಂಬಲ್ಲಿರುವ ಆಕಾಶಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ತಲ್ಲಿಂಗಾತ್='ಸ ಏಷ ಪರೋವರೀಯಾನುದ್ಗೀಥಃ', 'ಸ ಏಷೋಽನಂತಃ' ಎಂಬಲ್ಲಿ ಶ್ರುತವಾದ ಪರೋವರೀಯಸ್ತ್ವ ಮೊದಲಾದವುಗಳು ವಿಷ್ಣುವಿನ ಲಿಂಗಗಳೇ ಆಗಿರುವುದರಿಂದ.

### ಓಂ ಅತ ಏವ ಪ್ರಾಣಃ ಓಂ

ಪ್ರಾಣಃ='ತದ್ವೈ ತ್ವಂ ಪ್ರಾಣೋಽಭವಃ' ಎಂಬಲ್ಲಿ ಶ್ರುತವಾದ ಪ್ರಾಣಶಬ್ದವಾಚ್ಯನು ವಿಷ್ಣುವೇ. ಅತ ಏವ='ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ' ಎಂಬಲ್ಲಿ ಉಕ್ತವಾದ ಶ್ರೀ ಲಕ್ಷ್ಮೀಪತಿತ್ವ ಎಂಬ ಲಿಂಗಗಳು ವಿಷ್ಣುವಿನಲ್ಲಿಯೇ ಇರುವುದರಿಂದ.

### ಓಂ ಛಂದೋಽಭಿಧಾನಾನ್ನೇತಿ ಚೇನ್ನ ತಥಾ ಚೇತೋಽರ್ಪಣನಿಗದಾತ್ ತಥಾ ಹಿ ದರ್ಶನಮ್ ಓಂ

ಛಂದೋಽಭಿಧಾನಾತ್='ಗಾಯತ್ರೀ ವಾ ಇದಂ ಸರ್ವಮ್' ಎಂಬಲ್ಲಿರುವ ಗಾಯತ್ರೀಪದವು ಛಂದಸ್ಸನ್ನು ಹೇಳುತ್ತಿರುವುದರಿಂದ ನ ಇತಿ ಚೇತ್=ವಿಷ್ಣು ವಾಚಕವಲ್ಲ ಎಂದರೆ ನ=ಅದು ಯುಕ್ತವಲ್ಲ. ಚೇತೋಽರ್ಪಣನಿಗದಾತ್= ಉಪಾಸನೆಗೋಸ್ಕರ ಹೇಳಿರುವುದರಿಂದ ತಥಾ ಹಿ ದರ್ಶನಮ್='ಗಾಯತಿ ತ್ರಾಯತಿ ಚ' ಎಂದು ಗಾನಕರ್ತೃತ್ವ, ತ್ರಾಣಕರ್ತೃತ್ವ ಮುಂತಾದ ಬ್ರಹ್ಮಲಿಂಗಗಳು ಇರುವುದರಿಂದ.

## ಪಾದಾಂತ್ಯಪ್ರಾಣಾಧಿಕರಣ (1-1-12)

ಓಂ ಪ್ರಾಣಸ್ತಥಾಽನುಗಮಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ

ಈ ಅಧಿಕರಣದಲ್ಲಿ ಪ್ರಾಣನೇ ವಿಷಯ. ಪ್ರಾಣಶಬ್ದವಾಚ್ಯನು ಮುಖ್ಯ ಪ್ರಾಣನೋ? ವಿಷ್ಣುವೋ? ಎಂಬುದು ಸಂದೇಹ. ಪೂರ್ವಪಕ್ಷ, ಸಿದ್ಧಾಂತನ್ಯಾಯ ಗಳನ್ನು ವಿವರಿಸುತ್ತಿದ್ದಾರೆ—

**ನ ಚಾನನ್ಯಥಾಸಿದ್ಧತ್ವಮನ್ಯತ್ರ ಶ್ರುತಿಲಿಂಗಾದೇಃ । ಅನ್ಯಗತ-ಲಿಂಗಾದೀನಾಮಪಿ ತದ್ಗಭಗವದಪೇಕ್ಷಯಾ ಯುಕ್ತೇಃ ॥ ೧೨ ॥**

**ಭಾವಾರ್ಥ**—ಇಂದ್ರ, ಪ್ರಾಣ, ಶ್ರುತಿ ಮತ್ತು ವೃತ್ರಹನನ, ಮಹಾವ್ರತ ಯಾಜಿತ್ವ ಶತಾಯುಷ್ಟ್ವ ಇಂದ್ರಿಯಗಳೊಂದಿಗೆ ಉಲ್ಲೇಖಗೊಂಡಿರುವುದು ಮುಂತಾದ ಲಿಂಗಗಳು ನಿರವಕಾಶವಾಗಿದ್ದು ಇಂದ್ರಾದಿಗಳಲ್ಲಿಯೇ ಕೂಡುತ್ತವೆ ಎಂದು ಪೂರ್ವಪಕ್ಷ ಮಾಡಬಾರದು. ಈ ಶ್ರುತಿಲಿಂಗಗಳು ಇಂದ್ರಾದಿಗಳಲ್ಲಿ ನೆಲೆಸಿರುವ ಭಗವಂತನಿಂದಲೇ ಕೂಡುತ್ತವೆ. ಆದ್ದರಿಂದ ಇಂದ್ರ ಮುಂತಾದ ಶಬ್ದದಿಂದ ವಾಚ್ಯನಾದವನು ಶ್ರೀಹರಿಯೇ.

**ಪೂರ್ವಪಕ್ಷ**— ಪ್ರಾಣಶಬ್ದವಾಚ್ಯನು ಇಂದ್ರನೋ ಅಥವಾ ಮುಖ್ಯ ಪ್ರಾಣನೋ ಆಗಬೇಕು. ಏಕೆಂದರೆ, ನಿರವಕಾಶವಾದ ಇಂದ್ರ ಶಬ್ದ ಮತ್ತು ಪ್ರಾಣಶಬ್ದಗಳು ಇವೆ. 'ಇಂದ್ರೋ ವೈ ವೃತ್ರಂ ಹತ್ವಾ ಮಹಾನಭವತ್' ಎಂಬಲ್ಲಿ ವೃತ್ರಹನನ, 'ವಿಶ್ವಾಮಿತ್ರಂ ಹ್ಯೇತದಹಃ ಶಂಸಿಷ್ಯಂತಮಿಂದ್ರ ಉಪನಿಷಸಾದ' ಎಂಬಲ್ಲಿ ಮಹಾವ್ರತಯಾಜಿತ್ವ ಎಂಬ ಇಂದ್ರನಿಗೆ ಹೇಳಲಾದ ನಿರವಕಾಶ ಲಿಂಗಗಳು, 'ಚಕ್ಷುಃ ಶ್ರೋತ್ರಂ ಮನೋ ವಾಕ್ ಪ್ರಾಣಃ' ಎಂದು ಇಂದ್ರಿಯ ಗಳೊಂದಿಗೆ ಉಲ್ಲೇಖಗೊಂಡಿರುವಿಕೆ, 'ತಾ ಅಹಿಂಸಂತ ಅಹಮುಕ್ಥಮಸ್ಮಿ-ಅಹಮುಕ್ಥಮಸ್ಮಿ' ಎಂಬುದಾಗಿ ಪ್ರಾಣಸಂವಾದ ಎಂಬ ಪ್ರಾಣನಲ್ಲಿ ಉಕ್ತವಾದ ನಿರವಕಾಶಲಿಂಗಗಳಿರುವುದರಿಂದ ಪ್ರಾಣಶಬ್ದವಾಚ್ಯನು ವಿಷ್ಣುವಲ್ಲ.

**ಸಿದ್ಧಾಂತ**— ಶ್ರುತಿ ಲಿಂಗಗಳು ನಿರವಕಾಶವಾಗಿ ಇಂದ್ರ ಪ್ರಾಣರನ್ನು ಪ್ರತಿಪಾದಿಸುವಂತೆ ಕಂಡರೂ ಪ್ರಾಣಶಬ್ದವಾಚ್ಯನಾದವನು ವಿಷ್ಣುವೇ. ವೃತ್ರಹನನ ಮೊದಲಾದ ಲಿಂಗಗಳು ಅಂತರ್ಗತನಾದ ಭಗವಂತನ ವಿವಕ್ಷೆಯಿಂದ ಕೂಡುತ್ತವೆ ಎಂದು ಹೇಳಲು ಬರುವುದರಿಂದ ಶ್ರುತಿಲಿಂಗಗಳು ಸಾವಕಾಶವಾಗಿವೆ.

'ಅಹಂ ಮನುರಭವಂ' ಎಂಬ ವಾಮದೇವಋಷಿಯ ವಾಕ್ಯವು ಹೇಗೆ

ಮನುವಿನ ಅಂತರ್ಯಾಮಿ ಪರಮಾತ್ಮ ಎಂಬ ಅರ್ಥವನ್ನು ತಿಳಿಸುತ್ತದೋ ಅದರಂತೆ ಇಲ್ಲಿ ಶ್ರುತಿ ಲಿಂಗಗಳು ಅಂತರ್ಯಾಮಿವಿವಕ್ಷೆಯಿಂದ ಕೂಡುತ್ತವೆ.

ವೇದದಲ್ಲಿ ಎಲ್ಲಿಯಾದರೂ ಪ್ರಾಣಶಬ್ದವು ಕಂಡಲ್ಲಿ ಅದನ್ನು ಭಗವಂತನ ಪರವಾಗಿ ಅರ್ಥೈಸಿಕೊಳ್ಳಬೇಕು ಎಂದು ಹಿಂದಿನ ಪ್ರಾಣಾಧಿಕರಣದಲ್ಲಿಯೇ ಹೇಳಿರುವುದರಿಂದ ಈ ಪಾದಾಂತ್ಯಪ್ರಾಣಾಧಿಕರಣವು ವ್ಯರ್ಥ. ಅಭ್ಯಧಿಕಾಶಂಕೆಯಿಂದ ಪ್ರತ್ಯೇಕವಾಗಿ ಈ ಅಧಿಕರಣವನ್ನು ರಚಿಸಲಾಗಿದೆ ಎಂದು ಉತ್ತರವನ್ನು ಹೇಳುವುದಾದರೆ, ಹಿಂದಿನ ಪ್ರಾಣಾಧಿಕರಣದ ನಂತರವೇ ಈ ಅಧಿಕರಣವು ಬರಬೇಕಿತ್ತು ಹೊರತು ಗಾಯತ್ರ್ಯಧಿಕರಣದ ನಂತರವಲ್ಲ ಎಂಬ ಆಕ್ಷೇಪ ಬರುತ್ತದೆ. ಇದಕ್ಕೆ ಉತ್ತರ ಹೀಗಿದೆ— ಅಭ್ಯಧಿಕಾಶಂಕೆಯಿಂದ ಹೊರಟಿದ್ದರೂ ಗಾಯತ್ರ್ಯಧಿಕರಣದಲ್ಲಿ ಹೇಳಿದ ಸಿದ್ಧಾಂತವನ್ನು ಆಶ್ರಯಿಸಿ ಈ ಅಧಿಕರಣ ಪೂರ್ವಪಕ್ಷವು ಹೊರಟಿರುವುದರಿಂದ ಗಾಯತ್ರ್ಯಧಿಕರಣದ ಅನಂತರ ಈ ಪಾದಾಂತ್ಯಪ್ರಾಣಾಧಿಕರಣವನ್ನು ರಚಿಸಲಾಗಿದೆ.

**ಸೂತ್ರಾರ್ಥ—**

## ಓಂ ಪ್ರಾಣಸ್ತಥಾಽನುಗಮಾತ್ ಓಂ

ತಥಾ=ತೈತ್ತರೀಯದಲ್ಲಿ ಹೇಳಲ್ಪಟ್ಟ ಪ್ರಾಣನಂತೆ ಪ್ರಾಣಃ=ಐತರೇಯದಲ್ಲಿ ಹೇಳಲ್ಪಟ್ಟಿರುವ ಪ್ರಾಣನೂ ವಿಷ್ಣುವೇ ಅನುಗಮಾತ್=ಬ್ರಹ್ಮಶಬ್ದ, ಸರ್ವದೇವೋಪಾಸ್ಯತ್ವ ಮುಂತಾದವು ಪುನಃ ಪುನಃ ಶ್ರುತವಾಗಿರುವುದರಿಂದ.

# ದ್ವಿತೀಯ ಪಾದಃ

## ಸರ್ವಗತತ್ವಾಧಿಕರಣ (1-2-1)

ಓಂ ಸರ್ವತ್ರಪ್ರಸಿದ್ಧೋಪದೇಶಾತ್ ಓಂ ಎಂಬ ಸೂತ್ರದಿಂದ ಆರಂಭ ವಾಗುವ ಈ ಅಧಿಕರಣದಲ್ಲಿ ಸರ್ವಗತತ್ವವು ವಿಷಯ. 'ಬ್ರಹ್ಮ ತತಮಮ್' (ಪರಮಾತ್ಮನು ವ್ಯಾಪಿಸಿದ್ದಾನೆ) ಎಂಬ ಶ್ರುತಿಯು, 'ಆದಿತ್ಯ' ಶಬ್ದವೂ ಶ್ರುತ ವಾಗುವುದರಿಂದ ಸರ್ವಗತನು ವಿಷ್ಣುವೋ? ಆದಿತ್ಯನೋ? ಎಂದು ಸಂದೇಹ. ಪೂರ್ವಪಕ್ಷ ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**॥ ಹರಿಃ ಓಂ ॥ ಬಹುಲಿಂಗಸಹಿತಶ್ರುತೇರಪಿ ಸಾವಕಾಶಾಯಾಃ, ನಿರವಕಾಶಶ್ರುತ್ಯಾದೀನಾಮೇವ ಬಲವತ್ತ್ವಮ್ । ಬಹವೋ ಹ್ಯತ್ರಾದಿತ್ಯ-ಶಬ್ದಾಃ । ಕ್ಷಿತ್ಯಾದಿಷೂಕ್ತ್ವಾಽಽದಿತ್ಯೇಽನುಕ್ತಿರಿತ್ಯಾದಿಲಿಂಗಂ ಚ । ತಥಾಽಪಿ ನಿರವಕಾಶಾಃ 'ಏತಮೇವ' ಇತ್ಯವಧಾರಣಾದಯಃ ॥ ೧ ॥**

**ಭಾವಾರ್ಥ**—'ಏತಂ ಹ್ಯೇವ ಬಹ್ವೃಚಾ' ಎಂಬಲ್ಲಿ ಅನೇಕಬಾರಿ ಆದಿತ್ಯ ವಾಚಕಗಳ ಸೂರ್ಯ, ಆದಿತ್ಯ ಮೊದಲಾದ ಶಬ್ದಗಳು ಶ್ರುತವಾಗಿರುವುದರಿಂದ, ಮತ್ತು 'ಏತಮಸ್ಯಾಂ' ಎಂಬುದಾಗಿ ಪೃಥಿವ್ಯಾದಿಗಳಲ್ಲಿದ್ದಾನೆ ಎಂದು ಹೇಳಿ ಆದಿತ್ಯನಲ್ಲಿದ್ದಾನೆ ಎಂದು ಹೇಳದಿರುವಿಕೆ ಎಂಬ ಲಿಂಗದಿಂದಲೂ ಈ ಶ್ರುತಿಯಲ್ಲಿ ಉಕ್ತನಾದವನು ಸೂರ್ಯನೇ ಆಗಬೇಕು. ಅಥವಾ ಚಕ್ಷುರ್ಮಯತ್ವ ಮುಂತಾದ ಲಿಂಗಗಳನ್ನು ಹೇಳಿರುವುದರಿಂದ ಶ್ರುತಿಯಲ್ಲಿ ಉಕ್ತವಾದ ಅಲ್ಪಸ್ಥಾನಸ್ಥಿತತ್ವವು ವಿಷ್ಣುವಿನಲ್ಲಿ ಕೂಡದೆ ಇರುವುದರಿಂದಲೂ ಆದಿತ್ಯಶಬ್ದವಾಚ್ಯನಾದವನು ಜೀವನೂ ಆಗಬಹುದು. ಎಂದು ಪೂರ್ವಪಕ್ಷವನ್ನು ಮಾಡುವುದು ಸರಿಯಲ್ಲ. ಬಹುಲಿಂಗ ಸಹಿತವಾದ ಸಾವಕಾಶವಾದ ಶ್ರುತಿಗಿಂತ ನಿರವಕಾಶವಾದ 'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬುದಾಗಿ ಅವಧಾರಣಸಹಿತವಾದ ಬ್ರಹ್ಮಶಬ್ದವಿರುವುದರಿಂದ ಆದಿತ್ಯಶಬ್ದವಾಚ್ಯನಾದವನು ವಿಷ್ಣುವೇ.

**ಪೂರ್ವಪಕ್ಷ**— 'ಏತಂ ಹ್ಯೇವ ಬಹ್ವೃಚಾ ಮಹತ್ಯುಕ್ಥೇ ಮೀಮಾಂಸಂತೇ' ಎಂಬಲ್ಲಿ ಉಕ್ತನಾದವನು ಆದಿತ್ಯನೋ ಅಥವಾ ಜೀವನೋ ಆಗಬೇಕು. ಆದಿತ್ಯ

ವಾಚಕಗಳಾದ 'ಯಶ್ಚಾಸಾವಾದಿತ್ಯೇ' 'ಸೂರ್ಯ ಆತ್ಮಾ ಜಗತಃ' 'ಚಕ್ಷುರ್ಮಿತ್ರಸ್ಯ' ಎಂಬುದಾಗಿ ಆದಿತ್ಯ, ಸೂರ್ಯ, ಮಿತ್ರ ಶಬ್ದಗಳು ಶ್ರುತವಾಗಿವೆ. 'ಏತಮಸ್ಯಾಂ' ಎಂದು ಪೃಥಿವ್ಯಾದಿಗಳಿದ್ದಾನೆ ಎಂದು ಹೇಳಿ 'ಏತಮಾದಿತ್ಯೇ' ಆದಿತ್ಯನಲ್ಲಿದ್ದಾನೆ ಎಂದು ಹೇಳದಿರುವುದರಿಂದಲೂ ಆದಿತ್ಯನಾಗಬೇಕು. ಚಕ್ಷುರ್ಮಯತ್ವಾದಿ ಲಿಂಗಗಳು ಶ್ರುತವಾಗಿರುವುದರಿಂದ ಜೀವನಾದರೂ ಆಗಬಹುದು. 'ಏತಂ ಸರ್ವೇಷು ಭೂತೇಷು' ಎಂದು ಅಲ್ಪಸ್ಥಾನವನ್ನು ಹೇಳಿರುವುದರಿಂದ ವಿಷ್ಣುವಾಗಲಾರ. 'ಬ್ರಹ್ಮ ತತಮಂ' ಎಂಬುದಾಗಿ ಸರ್ವತ್ರವ್ಯಾಪ್ತನಾಗಿದ್ದಾನೆ ಎಂದು ಹೇಳಿರುವುದರಿಂದ ವಿಷ್ಣುವು ಸರ್ವಶರೀರದಲ್ಲಿರುವುದಾದರೆ ಅಲ್ಲಿರುವ ಸುಖದುಃಖಾದಿಗಳ ಅನುಭವ ಅವನಿಗೂ ಆಗಬೇಕು. ಮನೆ ಸುಟ್ಟಾಗ ಅದರಲ್ಲಿರುವವನೂ ನಾಶವಾಗುವಂತೆ ಶರೀರ ನಾಶವಾದಾಗ ಪರಮಾತ್ಮನಿಗೂ ನಾಶಬರಬೇಕಾದೀತು. ಆದ್ದರಿಂದ ಸರ್ವಗತನು ಜೀವನೋ ಆದಿತ್ಯನೋ ಆಗಬೇಕೇ ಹೊರತು ವಿಷ್ಣುವಲ್ಲ.

**ಸಿದ್ಧಾಂತ**—ಐತರೇಯ ಶ್ರುತಿಯಲ್ಲಿ ವಾಚ್ಯನಾದವು ವಿಷ್ಣು ಎಂದು ಹೇಳಬಹುದು. 'ಯೋಽತೋಽಶ್ರುತಃ' ಎಂಬುದಾಗಿ ಅಶ್ರುತತ್ವಾದಿಲಿಂಗಗಳು, ಬ್ರಹ್ಮಶಬ್ದವು ಶ್ರುತವಾಗಿರುವುದರಿಂದ. ಅದರಂತೆ, 'ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ' ಎಂಬ ಸಮಾಖ್ಯಾ ಶ್ರುತಿಯಿದೆ. ಹಾಗೂ ಅಣುವಾದ ಜೀವನಿಗೆ ಸರ್ವಶರೀರಗಳಲ್ಲಿ ವಾಸವೂ ಕೂಡುವುದಿಲ್ಲ. ಆದ್ದರಿಂದ ವಿಷ್ಣುವೇ ವಾಚ್ಯನಾಗುತ್ತಾನೆ ಎಂದು ಸಿದ್ಧಾಂತ ಮಾಡುವುದು ಸರಿಯಾಗಿದೆ.

ಇದರ ಮೇಲೆ ಹೀಗೆ ಆಕ್ಷೇಪವು ಬರುತ್ತದೆ—ಪೂರ್ವಪಕ್ಷಿಯು ಶ್ರುತಿಲಿಂಗ ಸಮಾಖ್ಯಾ ಪರಪಕ್ಷ ಅನುಪಪತ್ತಿಗಳಿಂದ ಪೂರ್ವಪಕ್ಷವನ್ನು ಮಾಡಿದಾಗ ಸಿದ್ಧಾಂತಿಯೂ ಕೇವಲ ಶ್ರುತಿ, ಲಿಂಗ, ಸಮಾಖ್ಯಾ, ಪರಪಕ್ಷ ಅನುಪಪತ್ತಿಗಳಿಂದ ಸಿದ್ಧಾಂತವನ್ನು ಮಾಡುವುದು ಯುಕ್ತವಾಗುವುದಿಲ್ಲ. ಸಮಬಲವುಳ್ಳದ್ದು ಬಾಧಕ ವಾಗಲು ಸಮರ್ಥವಾಗುವುದಿಲ್ಲ. ಅದಕ್ಕೆ ಮಧ್ವಾಚಾರ್ಯರು 'ನಿರವಕಾಶ ಶ್ರುತ್ಯಾದೀನಾಮೇವ ಬಲವತ್ತ್ವಂ' ಎಂದು ಹೇಳಿದ್ದಾರೆ. ಇದರ ಅಭಿಪ್ರಾಯ ಹೀಗಿದೆ— ಸಿದ್ಧಾಂತಿಯು ಹೇಳಿದ ಶ್ರುತಿಲಿಂಗಾದಿಗಳು ನಿರವಕಾಶವಾಗಿವೆ. ಪೂರ್ವಪಕ್ಷಿಯು ಹೇಳಿದ ಶ್ರುತ್ಯಾದಿಗಳು ಸಾವಕಾಶವಾಗಿವೆ.

ಅದು ಹೇಗೆಂದರೆ— ಆದಿತ್ಯಶ್ರುತಿಯು ಆದಿತ್ಯನ ಅಂತರ್ಯಾಮಿಯಾದ ಪರಮಾತ್ಮನಲ್ಲಿ ಕೂಡಿಸಬಹುದು. 'ಏತಮಸ್ಯಾಂ' ಎಂದು ಪೃಥಿವ್ಯಾದಿಗಳಲ್ಲಿದ್ದಾನೆ ಎಂದು ಹೇಳಿ ಆದಿತ್ಯನಲ್ಲಿದ್ದಾನೆ ಎಂದು ಹೇಳಿಲ್ಲವಾದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟವನು ಆದಿತ್ಯನಾಗಬೇಕು ಎಂದು ಪೂರ್ವಪಕ್ಷಿಯ ಅಭಿಪ್ರಾಯ. ಆದರೆ 'ಏತಮಸ್ಯಾಂ' ಎಂಬ ಪದ ಉಪಲಕ್ಷಕ. ಪೃಥಿವ್ಯಾದಿಗಳಲ್ಲಿ ಆದಿತ್ಯನಲ್ಲಿಯೂ ಇದ್ದಾನೆ ಎಂದು 'ಏತಮಸ್ಯಾಂ' ಎಂಬ ಪದವೇ ತಿಳಿಸುತ್ತದೆ. ಆದ್ದರಿಂದ 'ಆದಿತ್ಯೇ ಅನುಕ್ತಿ' ಎಂಬ ಲಿಂಗವೂ ಸರಿಯಾಗುವುದಿಲ್ಲ.

ಚಕ್ಷುರ್ನಿಯತ್ವಲಿಂಗವೂ ಚಕ್ಷುರ್ನಿಯಮಕನಾದ್ದರಿಂದ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಸರ್ವತ್ರವ್ಯಾಪ್ತವಾದ ಆಕಾಶವು ಘಟ ಪಟ ಮೊದಲಾದ ಅಲ್ಪಸ್ಥಾನದಲ್ಲಿರುವಂತೆ ವ್ಯಾಪ್ತನಾದ ಪರಮಾತ್ಮನು ಜೀವರ ಹೃದಯವೆಂಬ ಅಲ್ಪಸ್ಥಾನದಲ್ಲಿ ಇರುವುದು ಯುಕ್ತವಾಗಿದೆ. ಸರ್ವಶರೀರಗಳಲ್ಲಿದ್ದರೂ ವಿಷ್ಣುವಿಗೆ ವಿಶೇಷ ಸಾಮರ್ಥ್ಯವಿರುವುದರಿಂದ ಅಲ್ಲಿರುವ ಸುಖದುಃಖಾದಿಗಳ ಅನುಭವ ವಾಗುವುದಿಲ್ಲ. ಮನೆ ಸುಟ್ಟಾಗ ಅದರಲ್ಲಿರುವವರೆಲ್ಲರೂ ನಾಶವಾಗುವುದಿಲ್ಲ. ವಿಶೇಷ ಯೋಗಶಕ್ತಿ ಇದ್ದವನು ನಾಶ ಹೊಂದದೆ ಉಳಿಯುತ್ತಾನೆ. ಅದರಂತೆ ದೇಹನಾಶವಾದರೂ ಪರಮಾತ್ಮನಿಗೆ ನಾಶವಿಲ್ಲ.

'ಏತಮೇವ ಬ್ರಹ್ಮೇತ್ಯಾಚಕ್ಷತೇ' ಎಂಬುದಾಗಿ ಅವಧಾರಣ ಸಹಿತವಾದ ಬ್ರಹ್ಮಶಬ್ದ ಲಿಂಗ ಸಮಾಖ್ಯಗಳು ನಿರವಕಾಶವಾಗಿವೆ. ಆದ್ದರಿಂದ 'ಏತಂ ಹ್ಯೇವ ಬಹ್ವೃಚಾ' ಎಂಬ ಐತರೇಯ ಶ್ರುತಿಯಲ್ಲಿ ಉಕ್ತನಾದವನು ವಿಷ್ಣುವೇ ಹೊರತು ಜೀವನೋ ಆದಿತ್ಯನೋ ಅಲ್ಲ.

**ಸೂತ್ರಾರ್ಥ—**

**ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ**

ಸರ್ವತ್ರ=ಪೃಥಿವ್ಯಾದಿಗಳಲ್ಲಿ ಎಲ್ಲ ಕಡೆಗಳಲ್ಲಿಯೂ ಹೇಳಲ್ಪಡುವವನು ವಿಷ್ಣುವೇ. ಪ್ರಸಿದ್ಧೋಪದೇಶಾತ್=ವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ಬ್ರಹ್ಮಶಬ್ದವನ್ನು ಹೇಳಿರುವುದರಿಂದ.

# ಅತ್ತೃತ್ವಾಧಿಕರಣ (1-2-1)

ಓಂ ಅತ್ತಾ ಚರಾಚರಗ್ರಹಣಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ 'ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ' (ಅದಿತಿಯು ಯಾವುದನ್ನೆಲ್ಲ ಸೃಷ್ಟಿಮಾಡಿತೋ ಅದೆಲ್ಲವನ್ನೂ ತಿನ್ನಲು ನಿರ್ಧರಿಸಿತು) ಎಂಬ ಶ್ರುತಿ ಪ್ರತಿಪಾದ್ಯವಾದ ಅದಿತಿಯು ವಿಷಯ. ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಸರ್ವಸಂಹಾರಕತ್ವ ವಿಷ್ಣುವಿನಲ್ಲಿರುವುದು, ಮತ್ತು ಅದಿತಿಶಬ್ದಪ್ರಯೋಗವು ದೇವಮಾತೆಯಲ್ಲಿರುವುದರಿಂದ ಸಂದೇಹವು ಬರುತ್ತಿದೆ. ಅದಿತಿಶಬ್ದವಾಚ್ಯವು ವಿಷ್ಣುವೋ? ದೇವಮಾತೆಯಾದ ಅದಿತಿಯೋ? ಎಂದು ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ, ನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ಸಂದಿಗ್ಧಶ್ರುತಿಲಿಂಗಾಭ್ಯಾಂ ನಿಶ್ಚಿತಲಿಂಗಪ್ರಕರಣಯೋರೇವ ಬಲವತ್ತ್ವಮ್ । ಸಂದಿಗ್ಧಶ್ರುತಿರ್ಲಿಂಗಂ ಚಾದಿತಿಶಬ್ದೋದಿತತ್ವಂ ಚ ॥ ೨ ॥**

**ಭಾವಾರ್ಥ**—ಸಂದಿಗ್ಧವಾದ ಶ್ರುತಿ ಲಿಂಗಗಳಿಗಿಂತಲೂ ನಿಶ್ಚಿತವಾದ ಚರಾಚರಾತ್ತೃತ್ವವೆಂಬ ಲಿಂಗ ಮತ್ತು ಪ್ರಕರಣಗಳಿಗೇನೇ ಪ್ರಾಬಲ್ಯವಿದೆ. ಅದಿತಿಶಬ್ದವೇ ಸಂದಿಗ್ಧವಾದ ಶ್ರುತಿ. ಅದಿತಿತ್ವವು ಸಂದಿಗ್ಧವಾದ ಲಿಂಗವಾಗಿದೆ.

**ವಿವರಣೆ**—'ಸ ಯದ್ಯದೇವಾಸೃಜತ' ಎಂಬ ಶ್ರುತಿಯಲ್ಲಿ ಅದಿತಿಶಬ್ದವು ಶ್ರುತವಾಗಿರುವುದರಿಂದ ಮತ್ತು ವಿಷ್ಣುವಿನಲ್ಲಿ ಅಸಂಭಾವಿತವಾದ ಅದಿತಿತ್ವವೆಂಬ ಲಿಂಗವಿರುವುದರಿಂದ ಅದಿತಿಶಬ್ದವಾಚ್ಯಳು ದೇವಮಾತೆಯಾದ ಅದಿತಿಯೇ ಹೊರತು ವಿಷ್ಣುವಲ್ಲ ಎಂದು ಪೂರ್ವಪಕ್ಷವು ಪ್ರಾಪ್ತವಾದಾಗ ಚರಾಚರಾತ್ತೃತ್ವ ಎಂದರೆ ಸರ್ವಜಗತ್ಸಂಹರ್ತೃತ್ವವೆಂಬ ಲಿಂಗದಿಂದ ಚತುರ್ಮುಖನ ಸೃಷ್ಟಿಯನ್ನು ಹೇಳಿರುವುದರಿಂದ ವಿಷ್ಣುಪ್ರಕರಣವೆಂದು ನಿಶ್ಚಿತವಾದದ್ದರಿಂದ ಅದಿತಿಶಬ್ದವಾಚ್ಯನಾದವನು ವಿಷ್ಣುವೆಂದು ಸಿದ್ಧಾಂತ ಮಾಡಲಾಗಿದೆ. ಇದು ಸರಿಯಲ್ಲ, ಏಕೆಂದರೆ,

ಶ್ರುತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ ।
ಪೂರ್ವಂ ಪೂರ್ವಂ ಬಲೀಯಃ ಸ್ಯಾದೇವಮಾಗಮನಿರ್ಣಯಃ ॥

ಎಂಬ ಸ್ಮೃತಿಯಂತೆ ಲಿಂಗಪ್ರಕರಣಗಳಿಗಿಂತ ಪೂರ್ವದಲ್ಲಿ ಹೇಳಲ್ಪಟ್ಟ ಶ್ರುತಿ ಲಿಂಗಗಳೇ ಪ್ರಬಲವಾಗಿವೆ. ಪ್ರಬಲವಾದ ಶ್ರುತಿಲಿಂಗಗಳಿಂದ ಪೂರ್ವಪಕ್ಷವನ್ನು ಮಾಡಿದಾಗ ದುರ್ಬಲವಾದ ಲಿಂಗ ಪ್ರಕರಣಗಳಿಂದ ಸಿದ್ಧಾಂತ ಮಾಡುವುದು ಯುಕ್ತವಾಗಲಾರದು. ಎಂದರೆ ಅದಕ್ಕೆ ಉತ್ತರವು ಹೀಗಿದೆ— ಶ್ರುತಿಲಿಂಗಗಳು ಪೂರ್ವದಲ್ಲಿ ಹೇಳಲ್ಪಟ್ಟಿದ್ದರೂ ಸಾವಕಾಶವಾದ್ದರಿಂದ ದುರ್ಬಲವಾಗಿವೆ. ಲಿಂಗ ಪ್ರಕರಣಗಳು ಅನಂತರ ಹೇಳಲ್ಪಟ್ಟಿದ್ದರೂ ನಿರವಕಾಶವಾಗಿವೆ. ಅದು ಹೇಗೆಂದರೆ, 'ಅದಿತಿರ್ದೇವತಾಮಯೀ' ಎಂಬ ಅದಿತಿಶಬ್ದವು ದೇವಮಾತೆಯಾದ ಅದಿತಿಗೂ ಪ್ರತಿಪಾದಕವಾಗಿದೆ. ಅದರಂತೆ ಅತ್ತೀತಿ ಅದಿತಿಃ ಎಂಬ ವ್ಯುತ್ಪತ್ತಿಯಿರುವುದರಿಂದ ದೇವತಾಮಯೀ=ದೇವೋತ್ತಮನಾದ ವಿಷ್ಣುವನ್ನೂ ಪ್ರತಿಪಾದಿಸುತ್ತದೆ. ಅದಿತಿತ್ವ ವೆಂಬ ಲಿಂಗವೂ ಸಾವಕಾಶವಾಗಿವೆ. 'ತ್ವ' ಎಂಬ ಪ್ರತ್ಯಯವು ಜಾತಿ (ಗೋತ್ವ) ಸ್ವರೂಪ (ಆಕಾಶತ್ವ) ಎಂಬ ಅರ್ಥಗಳನ್ನು ತಿಳಿಸುವಂತೆ ಕ್ರಿಯಾ (ಕರ್ತೃತ್ವ, ಭೋಕ್ತೃತ್ವ) ಗುಣ (ರೂಪಿತ್ವ) ದ್ರವ್ಯ (ದಂಡಿತ್ವ) ಎಂಬ ಅನೇಕ ಅರ್ಥಗಳನ್ನು ತಿಳಿಸುತ್ತದೆ. ಪ್ರಕೃತದಲ್ಲಿ ಅದಿತಿತ್ವವು ಸರ್ವಸಂಹರ್ತೃತ್ವವೆಂಬ ಕ್ರಿಯೆಯನ್ನು ತಿಳಿಸುತ್ತದೆ. ಅದು ವಿಷ್ಣುವಿನಲ್ಲಿಯೇ ಉಪಪನ್ನವಾಗುವುದರಿಂದ ಪೂರ್ವಪಕ್ಷಿಯು ಹೇಳಿದ ಶ್ರುತಿ, ಲಿಂಗಗಳು ದುರ್ಬಲವಾಗಿವೆ. ಆದ್ದರಿಂದ ಲಿಂಗ ಪ್ರಕರಣಗಳಿಂದ ಸಿದ್ಧಾಂತವನ್ನು ಮಾಡಿರುವುದು ಅತ್ಯಂತ ಯುಕ್ತವಾಗಿದೆ.

**ಸೂತ್ರಾರ್ಥ—**

**ಓಂ ಅತ್ತಾ ಚರಾಚರಗ್ರಹಣಾತ್ ಓಂ**

'ಸರ್ವಂ ವಾ ಅತ್ತಿ' ಎಂಬಲ್ಲಿ ಉಕ್ತನಾದ ಅತ್ತಾ=ಸಂಹಾರಕನು ವಿಷ್ಣುವೇ ಹೊರತು ದೇವಮಾತೆಯಾದ ಅದಿತಿಯಲ್ಲ. ಚರಾಚರಗ್ರಹಣಾತ್=ಚೇತನಾ ಚೇತನ ಸಮೂಹವನ್ನು ಸ್ವೀಕರಿಸಿರುವುದರಿಂದ.

## ಗುಹಾಧಿಕರಣ (1-2-3)

ಓಂ ಗುಹಾಂ ಪ್ರವಿಷ್ಟಾವಾತ್ಮಾನ್ ಹಿ ದದ್ದರ್ಶನಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ 'ಋತಂ ಪಿಬಂತಾ ಸುಕೃತಸ್ಯ ಲೋಕೇ ಗುಹಾಂ

ಪ್ರವಿಷ್ಟೌ ಪರಮೇ ಪರಾರ್ಧೇ। ಛಾಯಾ ತಪೌ ಬ್ರಹ್ಮವಿದೋ ವದಂತಿ ಪಂಚಾಗ್ನಯೋ ಯೇ ಚ ತ್ರಿನಾಚಿಕೇತಾಃ' (ಪುಣ್ಯನಿರ್ಮಿತವಾದ ಈ ಶರೀರದಲ್ಲಿ ಜೀವೋತ್ತಮನಾದ ಅತಿಶಯವಾಗಿ ಪೂರ್ಣನಾದ ವಾಯುದೇವನಲ್ಲಿದ್ದು ಹೃದಯಾವಕಾಶವನ್ನು ಪ್ರವೇಶಿಸಿ ಪುಣ್ಯಫಲವನ್ನು ಭೋಗಿಸುವ ಆ ಇಬ್ಬರನ್ನು ಮೂರು ಬಾರಿ ನಾಚಿಕೇತಾಗ್ನಿಯನ್ನು ಆರಾಧಿಸುವ ದೇವ, ಪಿತೃ, ಧೂತ, ಮನುಷ್ಯ, ಬ್ರಹ್ಮ ಈ ಪಂಚಯಜ್ಞಗಳನ್ನು ಮಾಡುತ್ತಿರುವ ಬ್ರಹ್ಮಜ್ಞಾನಿಗಳು ನೆರಳು ಮತ್ತು ಬೆಳಕಿನಂತೆ ಸುಖ, ದುಃಖ ಪ್ರದರನ್ನಾಗಿ ಹೇಳುತ್ತಾರೆ) ಎಂಬಲ್ಲಿ ಹೇಳಲ್ಪಟ್ಟ ಕರ್ಮಫಲ ಭೋಕ್ತೃತ್ವವು ವಿಷಯ. ಹಿಂದಿನ ಅಧಿಕರಣದಲ್ಲಿ ಸರ್ವಾತ್ಮತ್ವವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿರುವುದು. ಕರ್ಮಫಲಭೋಕ್ತತ್ವವು ಜೀವೇಶ್ವರರಲ್ಲಿ ಪ್ರಸಿದ್ಧವಾಗಿರುವುದರಿಂದ ಸಂದೇಹ ಬರುತ್ತದೆ— 'ಕರ್ಮಫಲಭೋಕ್ತೃತ್ವವು ವಿಷ್ಣುವಿನ ಎರಡು ರೂಪಗಳಿಗೋ? ಅಥವಾ ಜೀವೇಶ್ವರರಿಗೋ? ಎಂದು. ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ದ್ವಿವಚನಶ್ರುತೇರಪಿ ನಿರವಕಾಶತ್ವಂ ನಾಸ್ತಿ। ವಿಷ್ಣೋರೇವ ದ್ವಿರೂಪತ್ವಾತ್ ॥ ೩ ॥**

**ಭಾವಾರ್ಥ**—'ಋತಂ ಪಿಬಂತೌ' ಎಂಬಲ್ಲಿ ದ್ವಿವಚನಾಂತವಾದ ಶ್ರುತಿಯು ನಿರವಕಾಶವಾಗಿ ಕಂಡಿರುವುದರಿಂದ ಜೀವೇಶ್ವರರನ್ನೇ ಇಟ್ಟುಕೊಳ್ಳಬೇಕು ಎಂದು ಪ್ರತಿಪಾದಿಸುವುದು ಸರಿಯಲ್ಲ. ವಸ್ತುತಃ ಅದು ನಿರವಕಾಶವಲ್ಲ. 'ಘರ್ಮಾ ಸಮಂತಾ' ಎಂಬ ವೇದದಲ್ಲಿ ಉಕ್ತವಾದ ವಿಷ್ಣುವಿನ ಎರಡು ರೂಪಗಳಲ್ಲಿಯೇ ದ್ವಿವಚನಾಂತವಾದ ಶ್ರುತಿಯನ್ನು ಕೂಡಿಸಬಹುದಾಗಿದೆ.

**ವಿವರಣೆ**—'ಋತಂ ಪಿಬಂತೌ' ಎಂಬಲ್ಲಿ ದ್ವಿವಚನವು ಶ್ರುತವಾಗಿರುವುದರಿಂದ ಜೀವ–ಈಶ್ವರರನ್ನೇ ಪರಿಗ್ರಹಿಸಬೇಕು. ಇಲ್ಲಿ ಕರ್ಮಫಲಭೋಗವು ಶ್ರುತವಾಗಿದೆ. ಅದು ಜೀವನಲ್ಲಿ ಕೂಡುತ್ತದೆ. ಆದರೆ ಈಶ್ವರನಲ್ಲಿ ಕೂಡುವುದಿಲ್ಲವಾದ್ದರಿಂದ ಈಶ್ವರನನ್ನು ಸ್ವೀಕರಿಸುವುದು ಹೇಗೆ? ಎಂಬ ಆಕ್ಷೇಪವು ಸರಿಯಲ್ಲ. ಒಂದು ಸಮುದಾಯದಲ್ಲಿ ಕೆಲವರು ಕೊಡೆಯನ್ನು ಹಿಡಿಯದವರು ಇದ್ದರೂ 'ಎಲ್ಲರೂ ಕೊಡೆಯನ್ನು ಹಿಡಿದು ಹೋಗುತ್ತಿದ್ದಾರೆ' ಎಂದು ಹೇಳುವಂತೆ

ಕರ್ಮಫಲಭೋಗವನ್ನು ಜೀವ–ಈಶ್ವರರಲ್ಲಿ ಔಪಚಾರಿಕವಾಗಿ ಕೂಡಿಸಬಹುದು. ''ಛಾಯಾತಪೌ' ಎಂಬ ಪದದ ಬಾಧಕವೂ ಇಲ್ಲ. ಛಾಯಾ=ಅಜ್ಞಾನ, ಆತಪ=ಜ್ಞಾನ. ಇವುಗಳು ಜೀವ–ಈಶ್ವರರಲ್ಲಿ ಕೂಡುವುದರಿಂದ ಜೀವೇಶ್ವರರನ್ನೇ ಗ್ರಹಿಸಬೇಕು ಎಂದು ಪೂರ್ವಪಕ್ಷ.

**ಸಿದ್ಧಾಂತ**—ಗುಹಾಪ್ರವಿಷ್ಟತ್ವ 'ಹೃದಯಾಕಾಶದಲ್ಲಿರುವಿಕೆ' ಎಂಬ ಲಿಂಗವು ಶ್ರುತವಾಗಿರುವುದರಿಂದ ಶ್ರೀಹರಿಯನ್ನೇ ಸ್ವೀಕರಿಸಬೇಕು ಹೊರತು ಜೀವೇಶ್ವರ ರನ್ನಲ್ಲ. ಹೃದಯದಲ್ಲಿರುವ ಜೀವನನ್ನೂ ಸ್ವೀಕರಿಸಬಹುದಲ್ಲ? ಎಂದು ಪ್ರಶ್ನಿಸುವುದು ಸರಿಯಾಗಲಾರದು. 'ಮೈಥಿಲಃ' ಎಂದಾಗ ಮಿಥಿಲಾಪಟ್ಟಣ ದಲ್ಲಿರುವ ಯಾರೋ ಒಬ್ಬ ಅನಾಮಿಕನನ್ನು ಸ್ವೀಕರಿಸುವುದಲ್ಲ. ಮಿಥಿಲೆಯ ಅಧಿ ಪತಿಯನ್ನು ಸ್ವೀಕರಿಸಬೇಕು. ಅದರಂತೆ ಪ್ರಧಾನನಾದ ಈಶ್ವರನನ್ನೇ ಗ್ರಹಿಸಬೇಕೇ ಹೊರತು ಜೀವನನ್ನಲ್ಲ. ಮತ್ತು ಹೃದಯಸ್ಥನಾದ ಆತ್ಮನಿಗೆ 'ಯಃ ಸೇತುಃ' 'ಮುಕ್ತರಿಗೆ ಆಶ್ರಯನು' ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದ ಈಶ್ವರನನ್ನೇ ಸ್ವೀಕರಿಸಬೇಕು.

ನಿರವಕಾಶವಾದ ದ್ವಿವಚನವು ಶ್ರುತವಾಗಿರುವುದರಿಂದ ಈಶ್ವರನನ್ನೊಬ್ಬನನ್ನೇ ಸ್ವೀಕರಿಸುವುದು ಹೇಗೆ? ಎಂದರೆ, 'ಘರ್ಮಾ ಸಮಂತಾ' ಎಂಬ ಶ್ರುತಿಯು ಎರಡು ಭಗವದ್ರೂಪಗಳನ್ನು ಪ್ರತಿಪಾದಿಸುತ್ತದೆ. ಆ ಎರಡು ರೂಪಗಳಲ್ಲಿ ದ್ವಿವಚನವನ್ನು ಕೂಡಿಸಬಹುದು. 'ಋತಂ ಪಿಬಂತೌ' ಎಂಬಲ್ಲಿ ಹೇಳಿದ ಕರ್ಮಫಲಭೋಗವನ್ನು ಶ್ರೀಹರಿಯಲ್ಲಿಯೇ ಒಪ್ಪಿಕೊಳ್ಳಲು ಯಾವ–ಬಾಧಕವೂ ಇಲ್ಲ. 'ಶುಭಂ ಪಿಬತ್ಯಸೌ' ಎಂಬ ಸ್ಮೃತಿಯಲ್ಲಿ ಶ್ರೀಹರಿಗೆ ಶುಭಕರ್ಮಫಲಭೋಗವನ್ನು ಹೇಳಿದ್ದಾರೆ. ಅದರಂತೆ, ಅಜ್ಞಾನಿಗಳಿಗೆ ದುಃಖವನ್ನು ಜ್ಞಾನಿಗಳಿಗೆ ಸುಖವನ್ನು ಕೊಡುವುದರಿಂದ 'ಛಾಯಾತಪೌ' ಎಂಬ ಶಬ್ದದ ಬಾಧಕವೂ ಇಲ್ಲ. ಆದ್ದರಿಂದ 'ಋತಂ ಪಿಬಂತೌ' ಎಂಬಲ್ಲಿ ಎರಡು ಭಗವದ್ರೂಪಗಳೇ ಉಕ್ತವಾಗಿವೆ. ಹೊರತು ಜೀವೇಶ್ವರರಲ್ಲ.

**ಸೂತ್ರಾರ್ಥ**—

**ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ಅದ್ದರ್ಶನಾತ್ ಓಂ**

ಗುಹಾಂ ಪ್ರವಿಷ್ಟೌ=ಹೃದಯಗುಹೆಯನ್ನು ಪ್ರವೇಶಿಸಿ ಸುಕೃತ ಫಲವನ್ನು

ಭೋಗಿಸುವವರು ಆತ್ಮಾನೌ=ಆತ್ಮ, ಅಂತರಾತ್ಮ ಎಂಬ ವಿಷ್ಣುವಿನ ಎರಡು ರೂಪಗಳೇ. ತದ್ದರ್ಶನಾತ್=ಭಗವಂತನೇ ಎರಡು ರೂಪವಾದ ಹೃದಯಗುಹೆಯನ್ನು ಪ್ರವೇಶಿಸಿರುವುದು ಶ್ರುತವಾದ್ದರಿಂದ, ಹಿ=ಪರಮಾತ್ಮನಿಗೆ ಹೃದಯಗುಹಾ ಪ್ರವೇಶವು ಶ್ರುತಿಪ್ರಸಿದ್ಧವಾದ್ದರಿಂದ.

## ಅಂತರಾಧಿಕರಣ (1-2-4)

ಓಂ ಅಂತರ ಉಪಪತ್ತೇಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ 'ಯಂ ಏಷೋಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚೆತದಮೃತಮಭಯಮೇತದ್ ಬ್ರಹ್ಮ' (ಕಣ್ಣಿನ ಒಳಗಡೆ ಪೂರ್ಣಷಡ್ಗುಣನಾದ ಯಾವ ವಾಮನನು ದಿವ್ಯದೃಷ್ಟಿಯಿಂದ ಕಾಣಲ್ಪಡುತ್ತಾನೋ ಅವನು ಮರಣರಹಿತ, ಭಯರಹಿತ ಮತ್ತು ಗುಣಪೂರ್ಣನಾಗಿದ್ದಾನೆ) ಎಂಬ ಶ್ರುತಿಪತಿಪಾದ್ಯವಾದ ಅಕ್ಷಿಸ್ಥತ್ವವು ವಿಷಯ. ಅದು ವಿಷ್ಣುವಿಗೋ? ಅಗ್ನಿಗೋ? ಎಂದು ಸಂದೇಹ. 'ಯಶ್ಚಾಸಾವಾದಿತ್ಯೇ' ಎಂಬ ಮಾತು ಮತ್ತು ಅಗ್ನಿಶ್ರುತಿಯು ಈ ಸಂದೇಹಕ್ಕೆ ಕಾರಣವಾಗಿವೆ. ಈ ಅಧಿಕರಣ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**'ಸೋಽಹಮಸ್ಮಿ', 'ಸ ಏವಾಹಮಸ್ಮಿ' ಇತ್ಯಾದ್ಯಭ್ಯಾಸಾರ್ಥವಾದ-ಸಹಿತಬಹುಶ್ರುತಿಭ್ಯೋಽಪಿ ನಿರವಕಾಶೋಪಪತ್ತೇರೇವ ಪ್ರಾಬಲ್ಯಮ್ ॥ ೪ ॥**

**ಭಾವಾರ್ಥ**—'ಸೋಽಹಮಸ್ಮಿ' 'ಸ ಏವಾಹಮಸ್ಮಿ' ಇವೇ ಮೊದಲಾದ ಅಭ್ಯಾಸ ಮತ್ತು 'ಅಪಹತೇ ಪಾಪಕೃತ್ಯಾಂ' ಎಂಬ ಅರ್ಥವಾದದಿಂದ ಸಹಿತವಾದ ಬಹಳ ಶ್ರುತಿಗಳಿರುವುದರಿಂದ ಅಕ್ಷಿ ಆದಿತ್ಯರಲ್ಲಿರುವವನು ಅಗ್ನಿಯೆಂದು ಹೇಳಬಾರದು. ನಿರವಕಾಶವಾದ ಅಮೃತತ್ವ, ಅಭಯತ್ವ ಮೊದಲಾದ ಶ್ರುತಿಗಳಿಂದ ವಿಷ್ಣುವೇ ಎಂದು ಸಿದ್ಧವಾಗುವುದು.

**ವಿವರಣೆ**—'ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ' ಎಂಬಲ್ಲಿ ಅಕ್ಷಿಯಲ್ಲಿರುವವನೆಂದು ಶ್ರುತನಾದವನು ಅಗ್ನಿಯೇ ಆಗಿದ್ದಾನೆ. ಏಕೆಂದರೆ 'ಯ

ಏಷ ಆದಿತ್ಯೇ ಪುರುಷಃ ಸೋಽಹಮಸ್ಮಿ' ಎಂಬುದಾಗಿ ಅಗ್ನಿಯೇ ಅಕ್ಷಿ ಮತ್ತು ಆದಿತ್ಯರಲ್ಲಿರುವವನು ನಾನೇ ಎಂದು ಹೇಳಿಕೊಂಡಿದ್ದಾನೆ. 'ಅಥ ಹಾಗ್ನಯಃ ಸಮೂದಿರೇ' 'ಆಹವನೀಯೋಽನುಶಶಾಸ' ಎಂಬುದಾಗಿ ಅನೇಕಬಾರಿ ಅಗ್ನಿ ಶಬ್ದವು ಶ್ರುತವಾಗಿದೆ. 'ಮಮಾತ್ಮಾ ಭದ್ರಸೇನಃ' 'ಭದ್ರಸೇನನೆಂಬ ರಾಜನು ನನ್ನ ಆತ್ಮಾ' ಎಂದು ಔಪಚಾರಿಕವಾಗಿ ನುಡಿಯುವಂತೆ 'ಸೋಽಹಮಸ್ಮಿ' ಎಂಬ ವಾಕ್ಯವನ್ನೂ ಔಪಚಾರಿಕವೆನ್ನುವಂತಿಲ್ಲ. ಏಕೆಂದರೆ 'ಸೋಽಹಮಸ್ಮಿ' ಎಂಬ ವಿಷಯದಲ್ಲಿಯೇ ಅಭ್ಯಾಸವು (ಅನೇಕಬಾರಿ ಹೇಳುವಿಕೆ) ಕಂಡಿದೆ. ಅದರಂತೆ, 'ಅಪಹತೇ ಪಾಪಕೃತ್ಯಾಂ' ಎಂದು ಅಗ್ನಿಯನ್ನು ತಿಳಿದವನು ಪಾಪವನ್ನು ಕಳೆದುಕೊಳ್ಳುತ್ತಾನೆ ಎಂಬ ಅರ್ಥವಾದವೂ (ಪ್ರಶಂಸೆ) ಕಂಡಿದೆ. ಈ ಅಭ್ಯಾಸ ಅರ್ಥವಾದಗಳು ಔಪಚಾರಿಕಾರ್ಥಕ್ಕೆ ವಿರೋಧಿಗಳಾದ್ದರಿಂದ ಔಪಚಾರಿಕವೆನ್ನುವಂತಿಲ್ಲ. 'ಪ್ರಾಣೋ ವಾಽಹಮಸ್ಮಿ' ಎಂಬುದನ್ನು ಅಂತರ್ಯಾಮಿ ವಿವಕ್ಷೆಯಿಂದ ಕೂಡಿಸಬೇಕು ಎಂದು ಪ್ರಾಣಾಧಿಕರಣದಲ್ಲಿ ಹೇಳಿದಂತೆ 'ಸೋಽಹಮಸ್ಮಿ' ಎಂಬುದನ್ನೂ ಅಂತರ್ಯಾಮಿ ವಿವಕ್ಷೆಯಿಂದ ಕೂಡಿಸಬೇಕು ಎಂದು ಹೇಳುವುದು ಸರಿಯಲ್ಲ. ಏಕೆಂದರೆ 'ಸೋಽಹಮಸ್ಮಿ' ಎಂದು ಹೇಳಿ ಪುನಃ 'ಸ ಏವಾಹಮಸ್ಮಿ' ಎಂದು ಅವಧಾರಣ (ಏವಕಾರ) ಸಹಿತವಾಗಿ ಹೇಳಿದ್ದರಿಂದ (ಏವಕಾರವು ಇತರವ್ಯಾವೃತ್ತಿಯನ್ನು ಬೋಧಿಸುವುದು. 'ಪಾರ್ಥ ಏವ ಧನುರ್ಧರಃ' ಮುಂತಾದ ಕಡೆಗಳಲ್ಲಿ ಪ್ರಸಿದ್ಧ ವಾಗಿದೆ.) ವಿಷ್ಣು ಮುಂತಾದವರಲ್ಲಿ ಅಗ್ನಿಯೇ ಅಕ್ಷಿ, ಆದಿತ್ಯರಲ್ಲಿರುವುದೆಂದೂ ಸಿದ್ಧವಾಗುತ್ತದೆ ಎಂಬುದು ಪೂರ್ವಪಕ್ಷ.

**ಸಿದ್ಧಾಂತ**—'ಏತದಭಯಮಮೃತಮೇತದ್ ಬ್ರಹ್ಮ ಏಷ ಆತ್ಮಾ' ಎಂಬುದಾಗಿ ಅಭಯತ್ವ=ಭಯರಹಿತತ್ವ ಅಮೃತತ್ವ=ಮರಣರಹಿತತ್ವವೆಂಬ ನಿರವಾಕಾಶವಾದ ಲಿಂಗಗಳು ಶ್ರುತವಾಗಿರುವುದರಿಂದ, ಆತ್ಮಬ್ರಹ್ಮಾದಿ ಶಬ್ದಗಳಿರುವುದರಿಂದಲೂ ಅಕ್ಷಿ ಆದಿತ್ಯರಲ್ಲಿರುವವನು ವಿಷ್ಣುವೇ ಹೊರತು ಅಗ್ನಿಯಲ್ಲ. ಪೂರ್ವಪಕ್ಷಿಯು ಹೇಳಿದ ಅಭ್ಯಾಸ ಅರ್ಥವಾದ ಅವಧಾರಣಗಳು ಸಾವಕಾಶವಾದ್ದರಿಂದ ದುರ್ಬಲವಾಗಿವೆ. ಅದು ಹೇಗೆಂದರೆ— 'ಸೋಽಹಮಸ್ಮಿ' ಎಂಬ ವಾಕ್ಯವು ಅಗ್ನಿಅಂತರ್ಯಾಮಿಯಾದ ಪರಮಾತ್ಮನನ್ನು ಹೇಳುತ್ತದೆ. ಏವಕಾರವು ಅಕ್ಷಿ, ಆದಿತ್ಯರಲ್ಲಿದ್ದರೂ ಪರಮಾತ್ಮನಿಗೆ ವಿಶೇಷವಿಲ್ಲವೆಂದು ತಿಳಿಸುತ್ತದೆ.

**ಸೂತ್ರಾರ್ಥ—**

**ಓಂ ಅಂತರ ಉಪಪತ್ತೇಃ ಓಂ**

ಉಪಪತ್ತೇಃ='ಏತದಮೃತಮೇತದಭಯಮೇತದ್ ಬ್ರಹ್ಮ' ಎಂಬಲ್ಲಿ ಹೇಳಲಾದ ಅಮೃತತ್ವ, ಅಭಯತ್ವ ಮುಂತಾದ ನಿರವಕಾಶಲಿಂಗಗಳು ಬ್ರಹ್ಮಶಬ್ದ ವಿಷ್ಣುವಿನಲ್ಲಿಯೇ ಉಪಪನ್ನವಾಗುವುದರಿಂದ ಅಂತರಃ=ಚಕ್ಷುಸ್ಸಿನ ಒಳಗಿದ್ದು ರಮಿಸುವವನು ವಿಷ್ಣುವೇ.

## ಅಂತರ್ಯಾಮ್ಯಧಿಕರಣ (1-2-5)

ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿ 'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ' (ಯಾವನು ಪೃಥಿವಿಯಲ್ಲಿದ್ದು ಅದಕ್ಕಿಂತ ಭಿನ್ನನಾಗಿರುವನೋ ಯಾವನನ್ನು ಪೃಥಿವಿಯು ತಿಳಿಯಲಾರದೋ ಯಾವನು ಅಲ್ಲಿದ್ದು ಸ್ವರಮಣನಾಗಿ ಪೃಥಿವಿಯನ್ನು ನಿಯಮಿಸುವವನೋ ಅವನು ನಿನ್ನ ಅಂತರ್ಯಾಮಿಯಾಗಿದ್ದು ನಿತ್ಯನಾಗಿದ್ದಾನೆ.) ಎಂಬ ಶ್ರುತ್ಯುಕ್ತನಾದ ಅಂತರ್ಯಾಮಿಯು ವಿಷಯ. ಇಲ್ಲಿ ಅಮೃತತ್ವ ಪೃಥಿವ್ಯಾದಿ ಶರೀರತ್ವಗಳು ಶ್ರುತಿವಾಗಿರುವುದರಿಂದ ಸಂಶಯವು ಬರುತ್ತದೆ. ಅಂತರ್ಯಾಮಿ ವಿಷ್ಣುವೋ? ಬೇರೆಯವರೋ? ಎಂದು. ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ಪೃಥಿವ್ಯಾದಿಶರೀರತ್ವಂ ಚ ನ ನಿರವಕಾಶಮ್ । ಯೌಗಿಕಶರೀರತ್ವೋ-ಪಪತ್ತೇರ್ವಿಷ್ಣೋರಪಿ ॥ ೫ ॥**

**ಭಾವಾರ್ಥ—**'ಏಷ ತ ಆತ್ಮಾ ಅಂತರ್ಯಾಮೀ' ಎಂಬುದಾಗಿ ಅಂತರ್ಯಾಮಿ ಎಂದು ಹೇಳಲ್ಪಟ್ಟವನಿಗೆ ಪೃಥಿವ್ಯಾದಿಶರೀರತ್ವವೆಂಬ ನಿರವಕಾಶ ಲಿಂಗವನ್ನು ಹೇಳಿದ್ದರಿಂದ ವಿಷ್ಣುವಾಗಲು ಸಾಧ್ಯವಿಲ್ಲ ಎಂದು ಹೇಳಬಾರದು.

ಏಕೆಂದರೆ ಯೌಗಿಕವಾದ ಶರೀರತ್ವವು (ಶೀರ್ಯತೇ ನಿತ್ಯಮೇವಾಸ್ಮಾತ್) ವಿಷ್ಣುವಿಗೂ ಕೊಡುತ್ತದೆ.

**ವಿವರಣೆ**—'ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತಿ ಏಷ ತ ಆತ್ಮಾ ಅಂತರ್ಯಾಮ್ಯಮೃತಃ।' ಎಂಬುದಾಗಿ ಯಾಜ್ಞವಲ್ಕ್ಯರು ಗೌತಮನನ್ನು ಕುರಿತು ಹೇಳಿದ ಬೃಹದಾರಣ್ಯಕದಲ್ಲಿ ಅಂತರ್ಯಾಮಿಯ ಪ್ರಸ್ತಾವ ಬಂದಿದೆ. ಹಿಂದೆ ಹೇಳಿದ ಅಮೃತತ್ವ ಮೊದಲಾದ ನಿರವಕಾಶಲಿಂಗಗಳಿಂದ ಚಕ್ಷುಸ್ಸಿನ ಒಳಗಿರುವವನು ವಿಷ್ಣುವೆಂದು ನಿರ್ಣಯಿಸಿದ್ದರೂ ಅಂತರ್ಯಾಮಿಯಾದವನು ವಿಷ್ಣುವಿಗಿಂತ ಭಿನ್ನನೇ ಆಗಬೇಕು. 'ಯಸ್ಯ ಪೃಥಿವೀ ಶರೀರಂ' ಎಂಬುದಾಗಿ ಅಂತರ್ಯಾಮಿಗೆ ಪೃಥಿವಿಯನ್ನೇ ಶರೀರವನ್ನಾಗಿ ಹೇಳಿದ್ದಾರೆ. ಶರೀರರಹಿತವಾದ ವಿಷ್ಣುವಿಗೆ ಪೃಥಿವಿಯು ಶರೀರವಾಗಲಾರದು. ಆದ್ದರಿಂದ ಅಂತರ್ಯಾಮಿಯಾದವನು ವಿಷ್ಣುವಿಗಿಂತ ಭಿನ್ನನೇ ಎಂದು ಪೂರ್ವಪಕ್ಷ.

**ಸಿದ್ಧಾಂತ**—ವಿಷ್ಣುವಿಗೆ ಪಾಂಚಭೌತಿಕವಾದ ಶರೀರವಿಲ್ಲದಿದ್ದರೂ ಯೋಗವೃತ್ತಿಯಿಂದ ಪೃಥಿವ್ಯಾದಿಗಳು ಶರೀರವೆನಿಸುತ್ತವೆ. ಏಕೆಂದರೆ,

ಶೀರ್ಯತೇ ನಿತ್ಯಮೇವಾಸ್ಮಾತ್ ವಿಷ್ಣೋಸ್ತು ಜಗದೀದೃಶಮ್ ।
ರಮತೇ ಚ ಪರೋ ಹ್ಯಸ್ಮಿನ್ ಶರೀರಂ ತಸ್ಯ ತಜ್ಜಗತ್ ॥

'ಇಂತಹ ಅನೇಕ ಜಗತ್ತುಗಳು ಪ್ರತಿಕಲ್ಪದಲ್ಲಿಯೂ ವಿಷ್ಣುವಿನಿಂದ ನಾಶಹೊಂದುವುದರಿಂದ ಹಾಗೂ ಇದರಲ್ಲಿದ್ದು ಕ್ರೀಡಿಸುವುದರಿಂದ ಈ ಜಗತ್ತು ಅವನ ಶರೀರವಾಗಿದೆ' ಎಂದು ಹೇಳಿದ್ದರಿಂದ ಪೃಥಿವಿಯು ವಿಷ್ಣುವಿನಿಂದ ನಾಶ ಹೊಂದುತ್ತದೆ. ಮತ್ತೆ ಅವನು ಪೃಥಿವಿಯಲ್ಲಿದ್ದು ರಮಿಸುವುದರಿಂದ ಪೃಥಿವಿಯು ಅವನ ಶರೀರವೆಂದು ಯೋಗವೃತ್ತಿಯಿಂದ ಉಪಪನ್ನವಾಗುವುದರಿಂದ ಯಾವುದೇ ಅನುಪಪತ್ತಿ ಇಲ್ಲ.

ಶರೀರಶಬ್ದಕ್ಕೆ ರೂಢಾರ್ಥ ಯೌಗಿಕಾರ್ಥ ಎರಡನ್ನೂ ಹೇಳಲು ಬಂದರೂ ಪ್ರಥಮಪ್ರಾಪ್ತವಾದ ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಸ್ವೀಕರಿಸುವುದು ಎಷ್ಟು ಸರಿ? ಎಂದು ಆಕ್ಷೇಪಿಸಬಹುದು. ಆದರೆ 'ಯಂ ಪೃಥಿವೀ

ನ ವೇದ' 'ಪೃಥಿವ್ಯಾದಿದೇವತೆಗಳು ಅಂತರ್ಯಾಮಿಯನ್ನು ತಿಳಿದಿಲ್ಲ' ಎಂದು ಅವಿದಿತತ್ವಲಿಂಗವು ಉಕ್ತವಾಗಿದೆ. ಈ ನಿರವಕಾಶವಾದ ಲಿಂಗದಿಂದ ಪ್ರಥಮ ಪ್ರಾಪ್ತವಾದ ರೂಢಿಯನ್ನು ಬಿಟ್ಟು ಯೋಗವೃತ್ತಿಯನ್ನು ಆಶ್ರಯಿಸುವುದು ಯುಕ್ತವಾಗಿದೆ.

**ಸೂತ್ರಾರ್ಥ—**

**ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ**

ಅಂತರ್ಯಾಮೀ=ಎಲ್ಲ ಪದಾರ್ಥಗಳ ಒಳಗಿರುವವನು ವಿಷ್ಣುವೇ. ಅಧಿದೈವಾದಿಷು=ಅದಿದೈವ, ಅಧ್ಯಾತ್ಮ, ಅಧಿಭೂತ ಪ್ರಕರಣಗಳಲ್ಲಿ ತದ್ಧರ್ಮ ವ್ಯಪದೇಶಾತ್=ಅವಿದಿತತ್ವಾದಿ ವಿಷ್ಣುವಿನ ಧರ್ಮಗಳನ್ನು ಹೇಳಿರುವುದರಿಂದ.

## ಅದೃಶ್ಯತ್ವಾಧಿಕರಣ (1-2-6)

ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ 'ಯತ್ರದದ್ರೇಶ್ಯ ದುಗ್ರಾಹ್ಯಮಗೋತ್ರಮ ವರ್ಣಮಚಷುಃ ಶ್ರೋತ್ರಂ ತದಪಾಣಿಪಾದಂ। ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ ಭೂತಯೋನಿಂ ಪರಿಪಶ್ಯಂತಿ ಧೀರಾಃ' (ಯಾವುದು ಅದೃಶ್ಯವೋ ಯಾವುದನ್ನು ಮನಸ್ಸಿನಿಂದ ತಿಳಿಯಲಾಗದೋ ಯಾವುದಕ್ಕೆ ವಸಿಷ್ಠಾದಿಗೋತ್ರಗಳಿಲ್ಲವೋ ಯಾವುದಕ್ಕೆ ಪ್ರಾಕೃತವಾದ ಕಿವಿ, ಕಣ್ಣು ಮೊದಲಾದವುಗಳು ಇಲ್ಲವೋ ಅಂತಹ ನಿತ್ಯವಾದ ಸಮರ್ಥವಾದ ಸರ್ವಗತವಾದ ಅತ್ಯಂತಸೂಕ್ಷ್ಮವಾದ ದೇಹನಾಶವಿಲ್ಲದ ತತ್ವವನ್ನು ಜ್ಞಾನಿಗಳು ಸಕಲಪ್ರಾಣಿಗಲಿಗೂ ಕಾರಣವನ್ನಾಗಿ ತಿಳಿಯುತ್ತಾರೆ) ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿಗುಣಗಳು ವಿಷಯ. ಈ ಗುಣಗಳು ವಿಷ್ಣುವಿನಲ್ಲಿವೆಯೋ? ಅಥವಾ ಅಕ್ಷರನಲ್ಲಿವೆಯೋ? ಎಂದು ಸಂಶಯ. ಆನಂದಮಯನಲ್ಲಿ ಅದೃಶ್ಯತ್ವವು ಶ್ರುತವಾಗಿರುವುದು, 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂದು ಅಕ್ಷರಶಬ್ದವು ಶ್ರುತವಾಗಿರುವುದು ಈ ಸಂಶಯಕ್ಕೆ ಕಾರಣ. ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**''ಅಕ್ಷರಾತ್ ಪರತಃ ಪರಃ'' ಇತಿ ಶ್ರುತೇರಪಿ ''ನಾಕ್ಷರಾತ್ ಸಂಭವತೀಹ ವಿಶ್ವಮ್'' ಇತ್ಯಸ್ಯಾ ನಿರವಕಾಶತ್ವಮ್ । ಅಕ್ಷರಾತ್ ಪರತಃ ಪರಸ್ಯಾಪ್ಯಕ್ಷರಾಂತರತ್ವವಚನಾತ್ ॥ ೬ ॥**

**ಭಾವಾರ್ಥ—**'ಅಕ್ಷರಾತ್ ಪರತಃ ಪರಃ' ಅಕ್ಷರನಿಗಿಂತ ಉತ್ತಮೋತ್ತಮನಾದವನು ವಿಷ್ಣು ಎಂದು ಹೇಳಿದ್ದರಿಂದ 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಅವಕಾಶವನ್ನು ಹೊಂದಲಾರದು. ಅರ್ಥಾತ್ ಅಕ್ಷರಶಬ್ದವಾಚ್ಯನು ವಿಷ್ಣು ಆಗಲಾರನು ಎಂದು ಆಕ್ಷೇಪಿಸಬಾರದು. ಏಕೆಂದರೆ, 'ಅಕ್ಷರಾತ್ ಪರತಃ ಪರಃ' ಎಂಬ ವಾಕ್ಯದಲ್ಲಿರುವ ಅಕ್ಷರ ಶಬ್ದದಿಂದ ಜಡಪ್ರಕೃತಿಯನ್ನಿಟ್ಟುಕೊಳ್ಳಲು ಯಾವುದೇ ಬಾಧಕವಿಲ್ಲದಿರುವುದರಿಂದ ಅಕ್ಷರಕ್ಕಿಂತ (ಜಡಕ್ಕಿಂತ) ಉತ್ತಮ(ಲಕ್ಷ್ಮೀ ದೇವಿ) ಅವಳಿಗಿಂತ ಉತ್ತಮನು ವಿಷ್ಣು ಎಂದು ಕೂಡಿಸಬಹುದಾಗಿದೆ.

**ವಿವರಣೆ—**'ಯತ್ತದದ್ರೇಶ್ಯಂ...' ಎಂಬ ಶ್ರುತಿಯಲ್ಲಿ ಯಾರಿಗೆ ಅದೃಶ್ಯತ್ವನ್ನು ಹೇಳಲಾಗಿದೆಯೋ ಅವನಲ್ಲಿಯೇ 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬುದಾಗಿ ಶ್ರುತಿಯು ಅಕ್ಷರಶಬ್ದವನ್ನು ಪ್ರಯೋಗಿಸಿದೆ. ಅಕ್ಷರಶಬ್ದವು ಪ್ರಕೃತಿಯಲ್ಲಿ ರೂಢವಾಗಿರುವುದರಿಂದ ಪ್ರಕೃತಿಯಲ್ಲಿಯೇ ಅದೃಶ್ಯತ್ವವು ಕೂಡುತ್ತದೆ ಹೊರತು ವಿಷ್ಣುವಿನಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಿದಂತೆ (ಅವಿದಿತತ್ವಲಿಂಗದಿಂದ ಶರೀರ ಶಬ್ದಕ್ಕೆ ರೂಢಾರ್ಥವನ್ನು ಬಿಟ್ಟು ಯೌಗಿಕಾರ್ಥವನ್ನು ಸ್ವೀಕರಿಸಿದಂತೆ) ಅದೃಶ್ಯತ್ವಲಿಂಗದಿಂದ ರೂಢಾರ್ಥವಾದ ಪ್ರಕೃತಿಯನ್ನು ಬಿಟ್ಟು ಯೌಗಿಕಾರ್ಥವಾದ (ನಾಶರಹಿತನಾದ) ವಿಷ್ಣುವನ್ನು ಸ್ವೀಕರಿಸಬಹುದಿತ್ತು. ಆದರೆ 'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯು 'ಅಕ್ಷರನಿಗಿಂತ ಉತ್ತಮೋತ್ತಮನಿದ್ದಾನೆ' ಎಂದು ಹೇಳಿದೆ. 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬಲ್ಲಿ ಅಕ್ಷರಶಬ್ದದಿಂದ (ಯೌಗಿಕಾರ್ಥವನ್ನು ಇಟ್ಟುಕೊಂಡು) ವಿಷ್ಣುವನ್ನು ಗ್ರಹಿಸಿದರೆ ವಿಷ್ಣುವಿಗಿಂತ ಉತ್ತಮೋತ್ತಮನನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದ್ದರಿಂದ ಅಕ್ಷರಶಬ್ದದಿಂದ ಪ್ರಕೃತಿಯನ್ನು ಸ್ವೀಕರಿಸಿದರೆ ಅದೃಶ್ಯತ್ವವೂ ಪ್ರಕೃತಿಗೇ ಹೊರತು ವಿಷ್ಣುವಿಗಲ್ಲ ಎಂದು ಪೂರ್ವಪಕ್ಷ.

**ಸಿದ್ಧಾಂತ**—'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯಿರುವುದರಿಂದ 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬ ಶ್ರುತಿಯು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ ಎಂದು ಹೇಳಲು ಬರುವುದಿಲ್ಲ. ಅಕ್ಷರಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೆ. ಅಕ್ಷರಶಬ್ದದಿಂದ ವಿಷ್ಣುವನ್ನು ಹೇಳುವುದಾದರೆ ಅಕ್ಷರಕ್ಕಿಂತ ಉತ್ತಮೋತ್ತಮತ್ವವು ಹೇಗೆ ವಿಷ್ಣುವಿಗೆ ಸಿದ್ಧಿಸುತ್ತದೆ? ತನಗಿಂತ ತಾನೇ ಹೇಗೆ ಉತ್ತಮೋತ್ತಮನಾಗುತ್ತಾನೆ? ಎಂದು ಆಕ್ಷೇಪ ಬರುತ್ತದೆ. ಅದಕ್ಕೆ ಉತ್ತರ ಹೀಗೆ– 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬಲ್ಲಿ ಅಕ್ಷರಶಬ್ದದಿಂದ ವಿಷ್ಣುವನ್ನು ಗ್ರಹಿಸಿದರೂ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿರುವ ಅಕ್ಷರಶಬ್ದವು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ ಹೊರತು ಜಡವಾದ ಪ್ರಕೃತಿಯನ್ನು ಹೇಳುತ್ತದೆ—

ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ
ಶ್ರೀಃ ಪರಾ ಪ್ರಕೃತಿಃ ಪ್ರೋಕ್ತಾ ಚೇತನಾ ವಿಷ್ಣುಸಂಶ್ರಯಾ ।
ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಮ್ ।
ಹರಿಮೇವಾಖಿಲಗುಣಮಕ್ಷರತ್ರಯಮೀರಿತಮ್ ॥

ಜಡವಾದ ಪ್ರಕೃತಿಯು ಅಪರ ಅಕ್ಷರವೆನಿಸಿದೆ. ವಿಷ್ಣುವನ್ನೇ ಆಶ್ರಯಿಸಿದ ಚೇತನಳಾದ ಲಕ್ಷ್ಮಿಯು ಪರಅಕ್ಷರ ಎನಿಸಿದ್ದಾಳೆ. (1)ಅಪರ ಅಕ್ಷರ ಜಡ ಪ್ರಕೃತಿ (2) ಪರ ಅಕ್ಷರ ಲಕ್ಷ್ಮೀದೇವಿ (3)ಪರಾತ್ ಪರ ಅಕ್ಷರ. ಮಹಾವಿಷ್ಣು. ಆದ್ದರಿಂದ 'ಅಕ್ಷರಾತ್ ಪರತಃ ಪರಃ' ಎಂಬ ಶ್ರುತಿಯ ವಿರೋಧವಿಲ್ಲ.

ಪ್ರಕೃತವಾದ ಜಡಪ್ರಕೃತಿಯನ್ನು ಬಿಟ್ಟು ಅಪ್ರಕೃತನಾದ ವಿಷ್ಣುವನ್ನು ಅಕ್ಷರಶಬ್ದದಿಂದ ಸ್ವೀಕರಿಸುವುದು ಹೇಗೆ ಸರಿ? ಎಂದು ಆಕ್ಷೇಪಬರಬಹುದು. ಆದರೆ ಇಲ್ಲಿ 'ಯಯಾ ತದಕ್ಷರಮಧಿಗಮ್ಯತೇ' ಎಂದು ಪರವಿದ್ಯಾವಿಷಯತ್ವವನ್ನು ಹೇಳಿದ್ದಾರೆ. ಅದು ವಿಷ್ಣುವಿಗೇ ಕೂಡುತ್ತದೆ. ಆದ್ದರಿಂದ ಅಪ್ರಕೃತನಾದರೂ ಅಕ್ಷರಶಬ್ದದಿಂದ ವಿಷ್ಣುವನ್ನೇ ಗ್ರಹಿಸಬೇಕು. ಅವನಿಗೇನೇ ಸಾಕಲ್ಯೇನ ಅದೃಶ್ಯತ್ವವು ಕೂಡುತ್ತದೆಯೇ ಹೊರತು ಬೇರೆಯವರಿಗಲ್ಲ.

**ಸೂತ್ರಾರ್ಥ**—

## ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ

ಅದೃಶ್ಯತ್ವಾದಿಗುಣಕಃ=ಅದೃಶ್ಯತ್ವವೇ ಮೊದಲಾದ ಗುಣವುಳ್ಳವನು ವಿಷ್ಣುವೇ ಧರ್ಮೋಕ್ತೇ=ಪರವಿದ್ಯಾವಿಷಯತ್ವ ಮೊದಲಾದ ಅವನ ಧರ್ಮಗಳು ಅವನಲ್ಲಿಯೇ ಉಪಪನ್ನವಾಗುವುದರಿಂದ.

## ವೈಶ್ವಾನರಾಧಿಕರಣ (1-2-7)

ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದ ವಿಷಯ 'ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವನರಮುಪಾಸ್ತೇ' (ಯಾವ ಅಧಿಕಾರಿಯು ತನ್ನ ಹೃದಯದಲ್ಲಿ ಚೋಟುದ್ದದ ಜ್ಞಾನಕ್ಕೆ ನಿಲುಕದ ವ್ಯಾಪ್ತವಾದ ಗುಣವುಳ್ಳ ಈ ವೈಶ್ವಾನರವನ್ನು ಉಪಾಸನೆ ಮಾಡುವನೋ ಅವನು ಸ್ನೋಽನ್ನಮತ್ತಿ=ತನಗೆ ಯೋಗ್ಯವಾಗ ಭೋಗಗಳನ್ನು ಅನುಭವಿಸುವನು) ಎಂಬ ಶ್ರುತ್ಯುಕ್ತನಾದ ವೈಶ್ವಾನರನು. ಸರ್ವಗತತ್ವವು ಶ್ರುತವಾಗಿರುವುದರಿಂದ ಮತ್ತು ವೈಶ್ವಾನರ ಶಬ್ದದ ಪ್ರಸಿದ್ಧಿಯು ಬೇರೆ ಕಡೆಗಳಲ್ಲಿರುವುದರಿಂದ ಸಂಶಯ ಬರುತ್ತದೆ— 'ವೈಶ್ವಾನರಶಬ್ದವಾಚ್ಯನು ವಿಷ್ಣುವೋ? ಇತರರೋ?' ಎಂದು. ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತನ್ಯಾಯಗಳನ್ನು ವಿವರಿಸುತ್ತಿದ್ದಾರೆ—

**ಶ್ರುತಿಸಾಧಾರಣ್ಯೇಽಪಿ ವಿಶೇಷಶ್ರುತ್ಯಾದೇರ್ನಿಶ್ಚಯಃ । ಉಭಯತ್ರ ವಿಶೇಷಶ್ರುತ್ಯಾದೌ ಪುನಃ ಸಾವಕಾಶತ್ವನಿರವಕಾಶತ್ವಬಲಾನ್ನಿಶ್ಚಯಃ ॥ ೭ ॥**

**ಭಾವಾರ್ಥ**—'ವೈಶ್ವಾನರಮುಪಾಸ್ತೇ' ಎಂಬಲ್ಲಿರುವ ವೈಶ್ವಾನರಶಬ್ದವು ವಿಷ್ಣುವಿನಲ್ಲೂ, ಅಗ್ನಿಯಲ್ಲೂ ಸಮಾನವಾಗಿದೆ. ಆದ್ದರಿಂದ 'ತತ್ತು ಸಮನ್ವಯಾತ್' 'ವಿಷ್ಣುವೇ ಸಕಲಶಬ್ದವಾಚ್ಯ' ಎಂಬುದು ಕೂಡುವುದಿಲ್ಲ ಎಂದು ಆಕ್ಷೇಪಿಸಬಾರದು. ವೈಶ್ವಾನರ ಶಬ್ದಕ್ಕೆ ಆತ್ಮಶಬ್ದವನ್ನು ವಿಶೇಷಣವನ್ನಾಗಿ ಕೊಟ್ಟಿರುವುದರಿಂದ ವಿಷ್ಣುವೆಂದು ನಿಶ್ಚಯಿಸಬಹುದು ಎಂದು ಹೇಳುವುದು ಸರಿಯಾಗುವುದಿಲ್ಲ. 'ಅಯಮಗ್ನಿರ್ವೈಶ್ವಾನರಃ' ಎಂಬುದಾಗಿ ಅಗ್ನಿಶಬ್ದವನ್ನು ವಿಶೇಷಣವನ್ನಾಗಿ ಹೇಳಿರುವುದರಿಂದ ಅಗ್ನಿಯೆಂದೂ ಹೇಳಬಹುದಲ್ಲ? ಎಂದರೆ ಎರಡು ಕಡೆಗಳಲ್ಲಿಯು ವಿಶೇಷಶ್ರುತಿಯಿರುವಾಗ ಸಾವಕಾಶತ್ವ, ನಿರವಕಾಶತ್ವಗಳಿಂದ ನಿರ್ಧಾರಮಾಡಬೇಕಾಗುತ್ತದೆ.

**ವಿವರಣೆ**—ಶ್ರುತ್ಯುಕ್ತವಾದ ವೈಶ್ವಾನರಶಬ್ದವು ದೇವತೆಯಾದ ಅಗ್ನಿಯಲ್ಲಿ ಜಡವಾದ ಬೆಂಕಿಯಲ್ಲೂ ರೂಢವಾಗಿರುವುದರಿಂದ ಅವುಗಳನ್ನೇ ಪ್ರತಿಪಾದಿಸುತ್ತದೆಯೇ ಹೊರತು ವಿಷ್ಣುವನ್ನಲ್ಲ ಎಂದರೆ, ಅಂತಸ್ಥತ್ವಾಧಿಕರಣನ್ಯಾಯದಿಂದ (ಅಧಿದೈವವಾಚಕವಾದ ಶಬ್ದಗಳೆಲ್ಲವೂ ನಿರವಕಾಶವಾದ ಲಿಂಗದಿಂದ ವಿಷ್ಣುವನ್ನೂ ಪ್ರತಿಪಾದಿಸುತ್ತವೆ ಎಂದು ಹೇಳಿದಂತೆ) ಸರ್ವಗತತ್ವಲಿಂಗದಿಂದ ವಿಷ್ಣುವನ್ನೂ ಪ್ರತಿಪಾದಿಸುತ್ತದೆ ಎಂದು ಉತ್ತರಿಸಬಹುದಾದರೂ ಸಮನ್ವಯಾಧಿಕರಣದಲ್ಲಿ ಹೇಳಿದ 'ಸಕಲಶಬ್ದವಾಚ್ಯನಾದವನು ವಿಷ್ಣುವೇ' ಎಂಬ ಅವಧಾರಣೆಯು ಕೂಡುವುದಿಲ್ಲ ಎಂದು ಆಕ್ಷೇಪಬರುತ್ತದೆ. 'ಆತ್ಮಾನಂ ವೈಶ್ವಾನರಮುಪಾಸ್ತೇ' ಎಂಬುದಾಗಿ ವಿಷ್ಣುವಿನಲ್ಲಿ ಮಾತ್ರ ಅಸಾಧಾರಣವಾದ ಆತ್ಮಶಬ್ದವನ್ನು ವಿಶೇಷಣವಾಗಿ ಹೇಳಿರುವುದರಿಂದ ಮತ್ತು 'ಅಹಂ ವೈಶ್ವಾನರಃ' ಎಂಬ ಶ್ರುತಿಸ್ಮೃತಿಗಳ ಸಮಾಖ್ಯಾಬಲದಿಂದಲೂ ವಿಷ್ಣುವೇ ಎಂದು ನಿರ್ಧರಿಸೋಣ ಎಂಬುದೂ ಸರಿಯಾಗದು. 'ಅಯಮಗ್ನಿರ್ವೈಶ್ವಾನರಃ' ಎಂಬಲ್ಲಿ ಅಗ್ನಿಶಬ್ದವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ಮತ್ತು 'ವೈಶ್ವಾನರೇ ತದ್ಧುತಂ ಭವತಿ' ಎಂದು ಹೋಮಾಧಿಕರಣತ್ವವೆಂಬ ಧರ್ಮವನ್ನು ಹೇಳಿರುವುದರಿಂದಲೂ ವೈಶ್ವಾನರ ಶಬ್ದವಾಚ್ಯವಾದದ್ದು ಅಗ್ನಿಯೋ ವಿಷ್ಣುವೋ ಎಂಬ ಸಂದೇಹವೇ ಬರುತ್ತದೆಯೇ ಹೊರತು ನಿಶ್ಚಯವಾಗುವುದಿಲ್ಲ ಎಂದು ಪೂರ್ವಪಕ್ಷ.

**ಸಿದ್ಧಾಂತ**—ಹೀಗೆ ಎರಡು ಕಡೆಗಳಲ್ಲಿಯೂ ವಿಶೇಷಶ್ರುತಿ ಮುಂತಾದವುಗಳಿದ್ದು ಸಂದೇಹ ಬಂದಾಗ ಸಾವಕಾಶತ್ವ ನಿರವಕಾಶತ್ವಗಳಿಂದ ನಿರ್ಣಯ ಮಾಡಬೇಕು. 'ಅಥ ಹೇಮಮಾತ್ಮಾನಂ... ಸರ್ವನಾಮಾ ಸರ್ವಕರ್ಮಾ ಸರ್ವಲಿಂಗಃ...' ಎಂಬುದಾಗಿ ಎಲ್ಲ ನಾಮಗಳು ವಿಷ್ಣುವಿನ ನಾಮಗಳೇ. ಎಲ್ಲ ಲಿಂಗಗಳೂ ವಿಷ್ಣುವಿನ ಲಿಂಗಗಳೇ ಎಂದು ಹೇಳಿರುವುದರಿಂದ ಅಗ್ನಿಯಲ್ಲಿ ಹೇಳಿದ ವಿಶೇಷ ಶ್ರುತಿಲಿಂಗಗಳು ಸಾವಕಾಶವಾಗಿವೆ. ಆತ್ಮಶಬ್ದವು ನಿರವಕಾಶವಾಗಿದೆ. ನಿರವಕಾಶವಾದ ಆತ್ಮಶಬ್ದದಿಂದ ವೈಶ್ವಾನರಶಬ್ದವಾಚ್ಯನು ವಿಷ್ಣುವೆಂದೇ ನಿರ್ಣಯಿಸಬಹುದು.

ಎಲ್ಲ ಶಬ್ದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂದಾದರೆ, ಅಗ್ನಿ ಮುಂತಾದ ಶಬ್ದಗಳನ್ನು ವಿಶೇಷಣವನ್ನಾಗಿ ಶ್ರುತಿಯಲ್ಲಿ ಹೇಳುವುದೇ

ವ್ಯರ್ಥವಲ್ಲವೇ? ಎಂದರೆ, ಅಗ್ನಿ ಮುಂತಾದ ಶಬ್ದದಿಂದ ಪ್ರತಿಪಾದ್ಯವಾದ ಗುಣಗಳನ್ನು ಭಗವಂತನಲ್ಲಿ ಚಿಂತಿಸಿ ಅವನ ಉಪಾಸನೆ ಮಾಡಿ 'ಯಂ ಯಂ ಯಥೋಪಾಸತೇ ತದೇವ ಭವತಿ' ಎಂಬ ಪ್ರಮಾಣದಂತೆ ಅಗ್ನ್ಯಂತರ್ಗತ ಭಗವಂತನನ್ನು, ಅಥವಾ ವಾಯ್ವಂತರ್ಗತ ಪರಮಾತ್ಮನನ್ನು ಪಡೆಯುವುದಕ್ಕಾಗಿ ಆ ವಿಶೇಷಣಗಳನ್ನು ಕೊಡಲಾಗುತ್ತದೆ. ಹಾಗಾದರೆ ಇದು ಅಗ್ನಿಸೂಕ್ತ. ಇದು ವಾಯುಸೂಕ್ತ. ಇದು ವಿಷ್ಣುಸೂಕ್ತ ಎಂಬೀ ಸೂಕ್ತವ್ಯವಸ್ಥೆಯೇ ಕೂಡದೇ ಹೋಗಬೇಕಾದೀತು ಎಂಬ ಆಕ್ಷೇಪಕ್ಕೆ— ಓಂ ಸಾಕ್ಷಾದಪ್ಯವಿರೋಧಂ ಜೈಮಿನಿಃ ಓಂ, ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ, ಓಂ ಅನುಸ್ಮೃತೇಃ ಬಾದರಿಃ ಓಂ, ಓಂ ಸಂಪತ್ತೇರಿತಿ ಜೈಮಿನಿಸ್ತಥಾ ದರ್ಶಯತಿ ಓಂ ಎಂಬ ನಾಲ್ಕು ಸೂತ್ರಗಳಲ್ಲಿ ವೇದವ್ಯಾಸರೇ ಉತ್ತರಿಸಿದ್ದಾರೆ.

**ಸೂತ್ರಾರ್ಥ—**

**ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ ॥**

ಸಾಧಾರಣಶಬ್ದವಿಶೇಷಾತ್=ಅಗ್ನಿ ಮತ್ತು ವಿಷ್ಣುವಿನಲ್ಲಿ ಸಾಧಾರಣವಾದ ವೈಶ್ವಾನರಶಬ್ದಕ್ಕೆ ಆತ್ಮಶಬ್ದವನ್ನು ವಿಶೇಷಣವನ್ನಾಗಿ ಹೇಳಿದ್ದರಿಂದ ವೈಶ್ವಾನರಃ= 'ವೈಶ್ವಾನರಮುಪಾಸ್ತೇ' ಎಂಬಲ್ಲಿರುವ ವೈಶ್ವಾನರ ಶಬ್ದವಾಚ್ಯನು ವಿಷ್ಣುವೇ.



# ಮೂರನೇ ಪಾದ

ಈ ಮೂರನೆಯ ಪಾದದಲ್ಲಿ ಉಭಯತ್ರ ಪ್ರಸಿದ್ಧವಾದ ನಾಮಾತ್ಮಕ ಮತ್ತು ಲಿಂಗಾತ್ಮಕವಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. ಇಲ್ಲಿ ನಾಮಾತ್ಮಕ ಶಬ್ದಗಳೆಂದರೆ ಹೆಸರುಗಳು. ಲಿಂಗಾತ್ಮಕಶಬ್ದಗಳೆಂದರೆ ಧರ್ಮವಾಚಕವಾದ ಶಬ್ದಗಳು. ವೇದಗಳಲ್ಲಿ ಇವುಗಳ ಪ್ರಯೋಗ ವಿಷ್ಣುವಿನಲ್ಲಿ ಮತ್ತು ಇತರರಲ್ಲಿಯೂ ಕಂಡಿರುತ್ತದೆ. ಆದ್ದರಿಂದ ಇವುಗಳು ಉಭಯತ್ರಪ್ರಸಿದ್ಧಗಳೆನಿಸುತ್ತವೆ. ಈ ಪಾದದಲ್ಲಿ ಒಟ್ಟು 14 ಅಧಿಕರಣಗಳಿವೆ. ಇವುಗಳಲ್ಲಿ ದೇವತಾಧಿಕರಣ ಮತ್ತು ಅಪಶೂದ್ರಾಧಿಕರಣಗಳಲ್ಲಿ ಯಾವುದೇ ಶಬ್ದಗಳ ಸಮನ್ವಯವನ್ನು ಮಾಡಿಲ್ಲ. ಹೊರತಾಗಿ ಸಮನ್ವಯಕ್ಕೆ ಅನುಕೂಲವಾಗುವ ವೇದವಿದ್ಯಾಧಿಕಾರದ ಬಗ್ಗೆ ವಿಚಾರ ಮಾಡಿದ್ದಾರೆ. ಉಳಿದ 12 ಅಧಿಕರಣಗಳ ವಿಷಯಗಳನ್ನು ಅನುವ್ಯಾಖ್ಯಾನ ಶ್ಲೋಕದಲ್ಲಿ ಸಂಗ್ರಹಿಸಿದ್ದಾರೆ—

**ಲಿಂಗಂ ಸಾಧಾರಣಂ ಶಬ್ದೌ ಸ್ಥಾನಂ ಲಿಂಗಮನುಗ್ರಹಃ ।**
**ಪುನಃ ಶಬ್ದಾ ಲಿಂಗಶಬ್ದೌ ವಿಚಾರ್ಯಾ ದ್ವಿಃಸ್ಥಿತಾ ಇಹ ॥**

ಅದರರ್ಥ ಹೀಗಿದೆ– ರುದ್ರ, ಪ್ರಕೃತಿ, ವಾಯು, ಜೀವ, ವಿಷ್ಣು ಇವರಲ್ಲಿ ಸಾಧಾರಣವಾದ ದ್ಯುಭ್ವಾದ್ಯಾತನತ್ವವೆಂಬ ಧರ್ಮವು. ಪ್ರಾಣ ಹಾಗೂ ವಿಷ್ಣುವಿನಲ್ಲಿ ಸಾಧಾರಣವಾದ ಭೂಮಶಬ್ದ, ಚಿತ್‌ಪ್ರಕೃತಿ ಮತ್ತು ವಿಷ್ಣುವಿನಲ್ಲಿ ಸಾಧಾರಣವಾದ ಅಕ್ಷರಶಬ್ದ, ಅಚೇತನಪ್ರಕೃತಿ ಮತ್ತು ವಿಷ್ಣುವಿನಲ್ಲಿ ಸಾಧಾರಣ ವಾದ ಸೃಷ್ಟಿಸ್ಥಾನ, ಜೀವ ಮತ್ತು ಪರಬ್ರಹ್ಮ ಹೃದಯಾಕಾಶದಲ್ಲಿ ಸಾಧಾರಣವಾದ ಹೃತ್‌ಪದ್ಮಸ್ಥತ್ವ, ನಿರ್ನಿಮಿತ್ತ ಪ್ರೇಮಾಸ್ಪದವಾದ ಜ್ಞಾನಿಸುಖ ಹಾಗೂ ವಿಷ್ಣುವಿನಲ್ಲಿ ಸಾಧಾರಣವಾದ ಅನುಕೂಲ್ಯೇನಗೃಹ್ಯಮಾಣತ್ವ, ಈಶಾನ, ವಜ್ರ, ಜ್ಯೋತಿಃ, ಆಕಾಶ ಶಬ್ದಗಳು, ಸ್ವಪ್ನದ್ರಷ್ಟೃತ್ವಲಿಂಗ ಬ್ರಾಹ್ಮಣಶಬ್ದ. ಹೀಗೆ ಇವುಗಳು ಒಂದೊಂದು ಅಧಿಕರಣಗಳಲ್ಲಿ ವಿಚಾರ ವಿಷಯಗಳಾಗಿವೆ.

ಇದರ ಅರ್ಥವನ್ನು ತಿಳಿಯಲು ಕಷ್ಟವಾದ್ದರಿಂದ ನ್ಯಾಯವಿವರಣದಲ್ಲಿ ಅದನ್ನು ವಿವರಿಸುತ್ತಿದ್ದಾರೆ—

'ದ್ಯುಭ್ವಾದ್ಯಾಯತನಂ ಸ್ವಶಬ್ದಾತ್' ಎಂಬ ಈ ಮೊದಲನೆಯ ಅಧಿಕರಣದಲ್ಲಿ 'ಲಿಂಗಂ ಸಾಧಾರಣಂ' ಸಾಧಾರಣವಾದ ಲಿಂಗವು ವಿಚಾರ್ಯವಾಗಿದೆ ಎಂದಿಷ್ಟೇ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಸಾಧಾರಣವಾದ ಲಿಂಗವು ಯಾವುದು? ಎಲ್ಲಿ ಹೇಗೆ ಸಾಧಾರಣ? ಒಂದುವೇಳೆ ಅದು ಸಾಧಾರಣವೇ ಆಗುವುದಾದರೆ ಭಗವಂತನಲ್ಲಿ ಮಾತ್ರ ಇದೆ ಎಂದು ಸಮರ್ಥಿಸುವುದಾದರೂ ಹೇಗೆ? ಮುಂತಾದ ಅನೇಕ ಪ್ರಶ್ನೆಗಳಿಗೆ ಉತ್ತರಿಸುತ್ತಿದ್ದಾರೆ—

**॥ ಹರಿಃ ಓಂ ॥ 'ಪ್ರಾಣಾನಾಂ ಗ್ರಂಥಿರಸಿ' 'ರುದ್ರೋ ವೈ ಲೋಕಾಯತನಮ್' 'ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತಿ' ।**

**'ಸರ್ವೇ ವಾ ಏತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚಾಲೋಕಾಶ್ಚಾಲೋಕಿನಶ್ಚ ವಿಷ್ಣಾವೇವೋತಾಶ್ಚ ಪ್ರೋತಾಶ್ಚ ಭವಂತಿ' ಇತ್ಯಾದೇರ್ದ್ಯುಭ್ವಾದ್ಯಾಯತನತ್ವಮಜ್ಞಾನಾಂ ಸಾಧಾರಣಂ ಲಿಂಗಮ್ ॥ ೧ ॥**

**ಭಾವಾರ್ಥ**—ಈ ಅಧಿಕರಣದಲ್ಲಿ ದ್ಯುಭ್ವಾದ್ಯಾಯತನತ್ವವು ಸಾಧಾರಣ ಲಿಂಗ. ಅದು ಹೇಗೆಂದರೆ—

ಪ್ರಾಣಾನಾಂ ಗ್ರಂಥಿರಸಿ=ರುದ್ರನೇ! ಎಲ್ಲ ಇಂದ್ರಿಯಗಳಿಗೆ ಆಶ್ರಯ ನಾಗಿರುವಿ. ರುದ್ರೋ ವೈ ಲೋಕಾಯತನಂ=ರುದ್ರನು ಲೋಕಾಧಾರನಷ್ಟೇ! ಮೊದಲಾದ ಶ್ರುತಿಯಿಂದ ಲೋಕಾಧಾರತ್ವವು ವಿಷ್ಣುವಿಗಿಂತ ಭಿನ್ನವಾದ ರುದ್ರನಲ್ಲಿ ಪ್ರಸಿದ್ಧವಾಗಿದೆ.

ವಾಯುನಾ ಗೌತಮ ಸೂತ್ರೇಣಾಯಂ ಲೋಕಃ ಪರಸ್ಯ ಲೋಕಃ ಸರ್ವಾಣಿ ಭೂತಾನಿ ಸಂದೃಬ್ಧಾನಿ ಭವಂತಿ ।

ಎಲೈ ಗೌತಮನೇ! ವಾಯುದೇವನಿಂದ ಈ ಲೋಕ ಪರಲೋಕ ಎಲ್ಲ ವಸ್ತುಗಳು ಧರಿಸಲ್ಪಟ್ಟಿವೆ. (ಸಂದೃಬ್ಧಾನಿ=ಸಂಗತವಾಗಿವೆ. ಅಂದರೆ ಅವರ

ಆಶ್ರಯತ್ವದಿಂದ ಇವೆ ಎಂದರ್ಥ) ಈ ರೀತಿಯಲ್ಲಿ ದ್ಯುಭ್ವಾದ್ಯಾಯತನತ್ವವು ವಿಷ್ಣುವಿಗಿಂತ ಬೇರೆಯಾದ ವಾಯುವಿನಲ್ಲಿ ಪ್ರಸಿದ್ಧವಾಗಿದೆ.

ಸರ್ವೇ ವಾ ಏತೇ ಪ್ರಾಣಾಶ್ಚ ಪ್ರಾಣಿನಶ್ಚ ದೇವಾಶ್ಚ ದಿವ್ಯಾನಿ ಚ ಲೋಕಾಶ್ಚ ಲೋಕಿನಶ್ಚ ಅಲೋಕಾಶ್ಚ ಅಲೋಕಿನಶ್ಚ ವಿಷ್ಣಾವೇವೋತಾಶ್ಚ ಪ್ರೋತಾಶ್ಚ ಭವಂತಿ– ಈ ಎದುರಿರುವ ಇಂದ್ರಿಯಗಳು ಮನುಷ್ಯ. ಪಶು ಪಕ್ಷಿ ಮುಂತಾದ ಪ್ರಾಣಿಗಳು, ಬ್ರಹ್ಮಾದಿ ದೇವತೆಗಳು ಹಾಗೂ ಸ್ವರ್ಗದಲ್ಲಿರುವ ಕಲ್ಪವೃಕ್ಷ ಮುಂತಾದ ವಸ್ತುಗಳು, ಭೂರಾದಿಲೋಕಗಳು, ಆ ಲೋಕದಲ್ಲಿರುವ ಜೀವಗಳು, ಪ್ರಾಕೃತ ಲೋಕಗಳಿಗಿಂತ ವಿಲಕ್ಷಣವಾದ ವೈಕುಂಠಾದಿ ವಿಷ್ಣುಲೋಕಗಳು, ಅವುಗಳಲ್ಲಿರುವ ಮುಕ್ತಜೀವರು ವಿಷ್ಣುವಿನಲ್ಲಿಯೇ ಆಶ್ರಯವನ್ನು ಪಡೆದಿದ್ದಾರೆ. ಇದೇ ಮೊದಲಾದ ಶ್ರುತಿಗಳಲ್ಲಿ ದ್ಯುಭ್ವಾದ್ಯಾಯತನತ್ವವು ವಿಷ್ಣುವಿನಲ್ಲಿಯೂ ಸಾಧಾರಣವಾಗಿದೆ.

ಮೇಲಿನ ಶ್ರುತಿಯಲ್ಲಿ 'ವಿಷ್ಣಾವೇವ' ಎಂದು ಅವಧಾರಣಪೂರ್ವಕವಾಗಿ ವಿಷ್ಣುವಿನಲ್ಲಿಯೇ ದ್ಯುಭ್ವಾದ್ಯಾಯತನತ್ವ ಬೇರೆಯವರಲ್ಲಿಲ್ಲ ಎಂದು ಹೇಳಲಾಗಿದೆ. ಆದರೆ (ರುಜಂ ದ್ರಾವಯತೇ ಯಸ್ಮಾತ್ ಮುಂತಾದ) ಯುಕ್ತ್ಯನುಸಂಧಾನ ವಿಲ್ಲದಿರುವವರ ಮತದಂತೆ ದ್ಯುಭ್ವಾದ್ಯಾಯತನತ್ವ ಲಿಂಗವು ಉಭಯತ್ರ ಪ್ರಸಿದ್ಧವಾಗಿದೆ ಎಂದು ತಿಳಿಯಬೇಕು.

## ಭೂಮಾಧಿಕರಣ

'ಲಿಂಗಂ ಸಾಧಾರಣಂ ಶಬ್ದೌ' ಎಂಬ ಅನುವ್ಯಾಖ್ಯಾನದಲ್ಲಿರುವ 'ಸಾಧಾರಣಂ' ಎಂಬ ಶಬ್ದವನ್ನು ಲಿಂಗ ವಚನಗಳನ್ನು ವ್ಯತ್ಯಾಸಮಾಡಿ 'ಶಬ್ದೌ' ಎಂಬುದಕ್ಕೂ ಅನ್ವಯಮಾಡಬೇಕು. ಸಾಧಾರಣೌ ಶಬ್ದೌ ಎಂದಾಗುತ್ತದೆ. ಸಾಧಾರಣವಾದ ಎರಡು ಶಬ್ದಗಳು 'ಭೂಮ' 'ಅಕ್ಷರ' ಶಬ್ದಗಳು ಎರಡನೇ ಅಧಿಕರಣದಲ್ಲಿ ಭೂಮಶಬ್ದವನ್ನು ಮೂರನೇ ಅಧಿಕರಣದಲ್ಲಿ ಅಕ್ಷರ ಶಬ್ದವನ್ನು ಸಮನ್ವಯಮಾಡುತ್ತಿದ್ದಾರೆ ಎಂದರ್ಥವಾಗುತ್ತದೆ. ಭೂಮಶಬ್ದವು ಸಾಧಾರಣ ಹೇಗೆ ಎನ್ನುವುದನ್ನು ಈ ನ್ಯಾಯವಿವರಣದಲ್ಲಿ ತಿಳಿಸುತ್ತಿದ್ದಾರೆ—

**'ಪ್ರಾಣೋ ವಾ ಆಶಾಯಾ ಭೂಯಾನ್', 'ವಿಷ್ಣುರ್ವೈ ದೇವೇಭ್ಯೋ**

**ಭೂಯಾಂಸ್ತಸ್ಮಾದ್ಭೂಯಾನ್ನಾಮ' ಇತ್ಯಾದೇರ್ಭೂಮಶಬ್ದೋಽಜ್ಞಾನಾಂ ಸಾಧಾರಣಃ ॥ ೨ ॥**

'ಪ್ರಾಣೋ ವಾ ಆಶಾಯಾ ಭೂಯಾನ್' ಪ್ರಾಣನು ಭಾರತಿಗಿಂತ ಶ್ರೇಷ್ಠನು ಎಂಬ ಶ್ರುತಿಯಿಂದ ಭೂಮಶಬ್ದವು ಪ್ರಾಣನಲ್ಲಿ ಪ್ರಸಿದ್ಧವಾಗಿದೆ. 'ವಿಷ್ಣುರ್ವೈ ದೇವೇಭ್ಯೋ ಭೂಯಾನ್ ತಸ್ಮಾದ್ ಭೂಯಾನ್ ನಾಮ' ವಿಷ್ಣುವೇ ದೇವತೆಗಳಿಗಿಂತ ಶ್ರೇಷ್ಠ. ಆದ್ದರಿಂದ ಅವನಿಗೆ ಭೂಯಾನ್ ಎಂಬ ಹೆಸರು. ಎಂಬ ಶ್ರುತಿಯಿಂದ 'ಪೂರ್ಣಮದಃ ಪೂರ್ಣಮಿದಂ' ಎಂಬ ಸಮಾಖ್ಯಾಶ್ರುತಿಯಿಂದಲೂ ಭೂಮಶಬ್ದವು ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ.

ಈ ಅಧಿಕರಣದಲ್ಲಿ ಭೂಮಶಬ್ದವನ್ನು ವಿಚಾರಮಾಡಲಾಗುತ್ತದೆ ಎಂದು ಹೇಳಿ ಶ್ರುತಿಯಿಂದ ಭೂಯಾನ್‌ಶಬ್ದದ ಪ್ರಸಿದ್ಧಿಯನ್ನು ತೋರಿಸುವುದು ಹೇಗೆ ಸರಿ? ಮತ್ತು ಭೂಯಾನ್ ಶಬ್ದವು ಧರ್ಮಿವಾಚಕ. ಭೂಮಶಬ್ದವು ಧರ್ಮವಾಚಕ. ಈ ಎರಡು ಶಬ್ದಗಳೂ ಸಮಾನಾರ್ಥಕವಾಗುವುದು ಹೇಗೆ ಎಂಬ ಪ್ರಶ್ನೆ ಬರುತ್ತದೆ. ಆದರೆ 'ಯೋ ವೈ ಭೂಮಾ ತತ್ ಸುಖಂ' ಮುಂದೆ ಹೇಳುವಂತೆ ಧರ್ಮ ಧರ್ಮಿಗಳಿಗೆ ಅಭೇದವಿದೆ ಎಂದು ಅಭಿಪ್ರಾಯದಿಂದ ಇವು ಸಮಾನಾರ್ಥಕಗಳಾಗಿವೆ.

## ಅಕ್ಷರಾಧಿಕರಣ

**ವಿಷ್ಣೋಶ್ಚೇತನಪ್ರಕೃತೇಶ್ಚಾವಿನಾಶಿತ್ವಸಾಮ್ಯಾದಕ್ಷರಶಬ್ದಃ ಸಾಧಾರಣಃ ।**

'ಅಕ್ಷರಂ ಅಂಬರಾಂತಧೃತೇಃ' ಎಂಬ ಅಕ್ಷರಾಧಿಕರಣದಲ್ಲಿ ಅಕ್ಷರಶಬ್ದ ಪ್ರವೃತ್ತಿನಿಮಿತ್ತವಾದ ನಾಶರಹಿತತ್ವವು ವಿಷ್ಣುವಿನಲ್ಲಿ ಹಾಗೂ ಚಿತ್‌ಪ್ರಕೃತಿಯಾದ ಲಕ್ಷ್ಮೀದೇವಿಯಲ್ಲೂ ಸಮಾನವಾದ್ದರಿಂದ ಅಕ್ಷರಶಬ್ದವು ಉಭಯತ್ರಪ್ರಸಿದ್ಧವಾಗಿದೆ.

## ಸದಧಿಕರಣ

**ಕಾರಣತ್ವಸಾಮ್ಯಾದ್ವಿಷ್ಣೋರಚೇತನಪ್ರಕೃತೇಶ್ಚ 'ಸದೇವ ಸೋಮ್ಯೇ-ದಮಗ್ರ ಆಸೀತ್' ಇತ್ಯಾದಿಸೃಷ್ಟಿಸ್ಥಾನಂ ಸಾಧಾರಣಮ್ ॥ ೪ ॥**

ಕಾರಣತ್ವವು ವಿಷ್ಣುವಿಗೂ ಅಚೇತನಪ್ರಕೃತಿಗೂ ಸಮಾನನಾದ್ದರಿಂದ 'ಸದೇವ ಸೋಮ್ಯ' ಇತ್ಯಾದಿಶ್ರುತಿಯಲ್ಲಿ ಹೇಳಿದ ಸೃಷ್ಟಿಸ್ಥಾನವು ಉಭಯತ್ರ ಸಮಾನವಾಗಿದೆ.

**ವಿವರಣೆ :** 'ಸದೇವ ಸೋಮ್ಯೇದಮಗ್ರ ಆಸೀತ್' (ಈ ಪ್ರಪಂಚದ ಪ್ರಾರಂಭದಲ್ಲಿ ಸತ್ ಶಬ್ದವಾಚ್ಯವಾದದ್ದು ಮಾತ್ರ ಇತ್ತು.) ಎಂಬ ಶ್ರುತಿಯಲ್ಲಿ ಹೇಳಿದ ಸೃಷ್ಟಿಸ್ಥಾನವು ಉಪಾದಾನಕಾರಣವಾದ ಅಚಿತ್ ಪ್ರಕೃತಿಯಲ್ಲಿ ನಿಮಿತ್ತ ಕಾರಣನಾದ ವಿಷ್ಣುವಿನಲ್ಲಿ ಸಮಾನವಾದ್ದರಿಂದ ಉಭಯತ್ರ ಪ್ರಸಿದ್ಧವಾಗಿದೆ.

ಅನುವ್ಯಾಖ್ಯಾನದಲ್ಲಿ ಹೇಳಲಾದ 'ಸೃಷ್ಟಿಸ್ಥಾನಂ' ಎಂಬ ಶಬ್ದಕ್ಕೆ 'ಸೃಷ್ಟಿಸ್ಥಾನಂ'ಎಂಬುದಾಗಿ ಅರ್ಥ. ಇದಕ್ಕೆ ಜಗತ್ತಿನ ಸೃಷ್ಟಿಗಾಗಿ ಪ್ರಲಯದಲ್ಲಿರುವಿಕೆ ಎಂಬ ಅರ್ಥವು ವಿವಕ್ಷಿತವಾಗಿದೆ. ಅಥವಾ ಸ್ಥಾನವೆಂದರೆ ಅನೇಕ ಪ್ರಕರಣಗಳ ಸಮುದಾಯ. ಒಂದು ಪ್ರಕರಣವೆಂದರೆ ಅನೇಕವಾಕ್ಯಗಳ ಗುಂಪು. 'ಸದೇವ ಸೋಮ್ಯ' ಎಂದು ಪ್ರಾರಂಭವಾಗುವ ಒಂಭತ್ತು ಪ್ರಕರಣಗಳು ಸೇರಿ ಒಂದು ಸ್ಥಾನ. ಸೃಷ್ಟಿಯ ಬಗ್ಗೆ ತಿಳಿಸಿಕೊಡುವ ಸ್ಥಾನವಾದ್ದರಿಂದ ಇದು ಸೃಷ್ಟಿಸ್ಥಾನವಾಗಿದೆ. ಇದನ್ನು ವಿಷ್ಣುಪರವೆಂದು ಈ ಸದಧಿಕರಣದಲ್ಲಿ ನಿರ್ಣಯಿಸಲಾಗುತ್ತದೆ.

## ದಹರಾಧಿಕರಣ

**ಲಿಂಗಂ ಹೃತ್ಪದ್ಮಸ್ಥಿತತ್ವಂ ಸಾಧಾರಣಮ್ ॥ ೫ ॥**

**ಭಾವಾರ್ಥ**—ಹೃತ್ಪದ್ಮಸ್ಥಿತತ್ವವೆಂಬ ಲಿಂಗವು ವಿಷ್ಣು, ಆಕಾಶ, ಜೀವರಲ್ಲಿ ಸಾಧಾರಣವಾಗಿದೆ.

**ವಿವರಣೆ :** ದಹರಾಧಿಕರಣದಲ್ಲಿ ಹೃತ್ಪದ್ಮಸ್ಥಿತತ್ವವೆಂಬ ಧರ್ಮವು ವಿಚಾರ್ಯವಾಗಿದೆ. 'ಯೋ ವೇದ ನಿಹಿತಂ ಗುಹಾಯಾಂ' ಎಂಬ ಶ್ರುತಿಯಲ್ಲಿ ಬ್ರಹ್ಮನು ಹೃದಯಕಮಲದಲ್ಲಿದ್ದಾನೆ ಎಂದು ಹೇಳಿದ್ದರಿಂದ ಹೃತ್ಪದ್ಮಸ್ಥಿತತ್ವವು ವಿಷ್ಣುವಿನಲ್ಲಿ ಸಾಧಾರಣವಾಗಿದೆ. 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂಬಲ್ಲಿ ಸುಷಿರಶಬ್ದವಾಚ್ಯವಾದ ಆಕಾಶವೂ ಹೃತ್ಪದ್ಮದಲ್ಲಿದೆ ಎಂದು ಹೇಳಲ್ಪಟ್ಟಿದೆ. 'ಹೃದಿ ಹ್ಯೇಷ ಆತ್ಮಾ' ಎಂಬ ಶ್ರುತಿಯಲ್ಲಿ ಜೀವನು ಹೃತ್‌ಪದ್ಮದಲ್ಲಿದ್ದಾನೆ ಎಂದು

ಹೇಳಲಾಗಿದೆ. ಹೀಗೆ ಹೃತ್ಪದ್ಮಸ್ಥಿತತ್ವವು ವಿಷ್ಣು, ಆಕಾಶ, ಜೀವರಲ್ಲಿ ಸಾಧಾರಣ ವಾಗಿದೆ.

## ಅನುಕೃತ್ಯಧಿಕರಣ

**''ಕಥಂ ನು ತದ್ವಿಜಾನೀಯಾಮ್'' ಇತ್ಯಾನುಕೂಲ್ಯೇನ ಗ್ರಹಣಂ ಕಸ್ಯೇತಿ ವಿಚಾರ್ಯಮನುಗ್ರಹಃ ॥ ೬ ॥**

**ಭಾವಾರ್ಥ—**ಯಾವ ಉಪಾಯದಿಂದ ನಾನು ಅದನ್ನು ತಿಳಿಯಲಿ' ಎಂದು ಜ್ಞಾನಕ್ಕಾಗಿ ಪ್ರಾರ್ಥಿಸುವಿಕೆ ಎಂಬ ಅನುಕೂಲ್ಯೇನ ಗೃಹ್ಯಮಾಣತ್ವವೆಂಬ ಲಿಂಗವು ಜ್ಞಾನಿಗಳ ಸುಖವನ್ನು ವಿಷಯೀಕರಿಸುತ್ತದೆಯೋ ಅಥವಾ ವಿಷ್ಣುವನ್ನು ವಿಷಯೀ ಕರಿಸುತ್ತದೆಯೋ ಎಂಬುದು ಈ ಅನುಕೃತ್ಯಧಿಕರಣದಲ್ಲಿ ವಿಚಾರಣೀಯವಾಗಿದೆ.

**ವಿವರಣೆ** : ಅನುಕೃತ್ಯಧಿಕರಣದಲ್ಲಿ ಜ್ಞಾನಕ್ಕಾಗಿ ಪ್ರಾರ್ಥಿಸುವಿಕೆ ಎಂಬ ಅನುಕೂಲ್ಯೇನ ಗೃಹ್ಯಮಾಣತ್ವಲಿಂಗವು ವಿಚಾರ್ಯವಾಗಿದೆ. 'ಕಥಂ ನು ತದ್ವಿಜಾನೀಯಾಂ' ಎಂಬ ಶ್ರುತಿಯಲ್ಲಿ 'ಅದನ್ನು ಯಾವ ಉಪಾಯದಿಂದ ತಿಳಿಯಲಿ' ಎಂದು ಜ್ಞಾನಕ್ಕಾಗಿ ತೋರುವ ಕಾತುರತೆಯೇ ಆನುಕೂಲ್ಯೇನ ಗ್ರಹಣ. ಇದು ನಿರ್ನಿಮಿತ್ತ ಪ್ರೇಮಾಸ್ಪದವಾದ ಜ್ಞಾನಿಸುಖ ಮತ್ತು ಬಯಸಿದ್ದನ್ನು ನೀಡುವ ವಿಷ್ಣುವಿನಲ್ಲಿ ಸಮಾನವಾದ್ದರಿಂದ ಉಭಯತ್ರ ಪ್ರಸಿದ್ಧವಾಗಿದೆ.

## ವಾಮನಾಧಿಕರಣ, ಕಂಪನಾಧಿಕರಣ, ಜ್ಯೋತಿರಧಿಕರಣ, ಆಕಾಶಾಧಿಕರಣ

**ಪುನಃ ಶಬ್ದಾಃ 'ಈಶಾನೋ ವಜ್ರೋ ಜ್ಯೋತಿರಾಕಾಶಃ' ಇತಿ ॥ ೭ ॥**

**॥ ೧೦-೧೨ ॥**

'ಪುನಃ ಶಬ್ದಾಃ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದನ್ನು ವಿವರಿಸುತ್ತಿದ್ದಾರೆ. ವಾಮನಾಧಿಕರಣದಲ್ಲಿ ಈಶಾನಶಬ್ದ, ಕಂಪನಾಧಿಕರಣದಲ್ಲಿ ವಜ್ರಶಬ್ದ, ಜ್ಯೋತಿರಧಿ ಕರಣದಲ್ಲಿ ಜ್ಯೋತಿಃಶಬ್ದ, ಆಕಾಶಾಧಿಕರಣದಲ್ಲಿ ಆಕಾಶಶಬ್ದ ಹೀಗೆ ಉಭಯತ್ರ ಪ್ರಸಿದ್ಧ ನಾಮಾತ್ಮಕ ಶಬ್ದಗಳು ವಿಚಾರಣೀಯವಾಗಿವೆ.

**ವಿವರಣೆ :** ವಾಮನಾಧಿಕರಣದಲ್ಲಿ 'ಈಶಾನೋ ಭೂತಭವ್ಯಸ್ಯ' ಎಂಬಲ್ಲಿ ಪ್ರಕೃತವಾದ ಈಶಾನಶಬ್ದವು ವಿಚಾರ್ಯವಾಗಿದೆ. ಈಶಾನ ಶಬ್ದವು ರುದ್ರನಲ್ಲಿ ಪ್ರಸಿದ್ಧವಾಗಿದ್ದರೂ 'ಊರ್ಧ್ವಂ ಪ್ರಾಣಮನ್ನಮಯತಿ' ಎಂಬಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವವೆಂಬ ಲಿಂಗದಿಂದ ವಾಯುವಿನಲ್ಲಿ ಪ್ರಸಿದ್ಧವಾಗಿದೆ. 'ಈಶನಾ ದೇವ ಚೇಶಾನಃ' ಎಂಬುದಾಗಿ ಹೇಳಿದ್ದರಿಂದ ವಿಷ್ಣುವಿನಲ್ಲೂ ಪ್ರಸಿದ್ಧವಾಗಿದೆ. ಹೀಗೆ ಉಭಯತ್ರ ಪ್ರಸಿದ್ಧವಾಗಿದೆ.

ಕಂಪನಾಧಿಕರಣದಲ್ಲಿ ವಜ್ರಶಬ್ದವು ವಿಚಾರ್ಯವಾಗಿದೆ. ವಜ್ರಶಬ್ದವು ವಜ್ರಾಯುಧದಲ್ಲಿ ಪ್ರಸಿದ್ಧವಾಗಿದೆ. ಆದರಂತೆ 'ಆಯುಧಾನಾಮಹಂ ವಜ್ರಃ' ಎಂದು 'ವಜ್ರಾಯುಧದಲ್ಲಿದ್ದು ಅದಕ್ಕೆ ಶ್ರೇಷ್ಠತೆಯನ್ನು ತಂದವನೇ ನಾನು' ಗೀತೆಯಲ್ಲಿ ಹೇಳಿದ್ದರಿಂದ ವಿಷ್ಣುವಿನಲ್ಲಿಯೂ ಪ್ರಸಿದ್ಧವಾಗಿದೆ. ಹೀಗೆ ವಜ್ರಶಬ್ದವು ಉಭಯತ್ರ ಪ್ರಸಿದ್ಧವಾಗಿದೆ.

ಜ್ಯೋತಿರಧಿಕರಣದಲ್ಲಿ ಜ್ಯೋತಿಃಶಬ್ದವು ವಿಚಾರಣೀಯವಾಗಿದೆ. 'ಜ್ಯೋತಿಶ್ಚರಣಾಭಿಧಾನಾತ್' ಎಂಬಲ್ಲಿ ಜ್ಯೋತಿಶ್ಶಬ್ದವನ್ನು ಸಮನ್ವಯ ಮಾಡಿದ್ದರಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ. ಲೋಕವ್ಯವಹಾರದಿಂದ ತೇಜಸ್ಸಿನಲ್ಲಿಯೂ ಪ್ರಸಿದ್ಧವಾದ್ದರಿಂದ ಉಭಯತ್ರ ಪ್ರಸಿದ್ಧವಾಯಿತು.

ಆಕಾಶಾಧಿಕರಣದಲ್ಲಿ ಆಕಾಶಶಬ್ದವು ವಿಚಾರ್ಯವಾಗಿದೆ. 'ಆಕಾಶಸ್ತಲ್ಲಿಂಗಾತ್' ಎಂಬಲ್ಲಿ ಆಕಾಶಶಬ್ದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿ ತೋರಿಸಿದ್ದರಿಂದ ವಿಷ್ಣುವಿನಲ್ಲಿ ಪ್ರಸಿದ್ಧವಾಗಿದೆ. ಲೋಕವ್ಯವಹಾರದಿಂದ ಬೇರೆ ಕಡೆಯಲ್ಲಿಯೂ ಪ್ರಸಿದ್ಧವಾದ್ದರಿಂದ ಉಭಯತ್ರಪ್ರಸಿದ್ಧವಾಗಿದೆ.

## ಸುಷುಪ್ತ್ಯಧಿಕರಣ

**ಲಿಂಗಂ ಸ್ವಪ್ನಾದಿದರ್ಶನಂ ಕಸ್ಯೇತಿ ॥ ೧೩ ॥**

ಸುಷುಪ್ತ್ಯಧಿಕರಣದಲ್ಲಿ ಸ್ವಪ್ನಾದಿದರ್ಶನ ರೂಪಲಿಂಗವು ಜೀವನಿಗೋ ವಿಷ್ಣುವಿಗೋ ಎಂದು ವಿಚಾರಣೀಯವಾಗಿದೆ.

## ಬ್ರಾಹ್ಮಣಾಧಿಕರಣ

**ಶಬ್ದೋ ಬ್ರಾಹ್ಮಣ ಇತಿ ॥ ೧೪ ॥**

ಬ್ರಾಹ್ಮಣಾಧಿಕರಣದಲ್ಲಿ ಬ್ರಾಹ್ಮಣಶಬ್ದವು ವಿಚಾರಣೀಯವಾಗಿದೆ.

**ವಿವರಣೆ :** 'ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬ ಶ್ರುತ್ಯುಕ್ತವಾದ ನಿತ್ಯಮಹಿಮತ್ವವೆಂಬ ಲಿಂಗದಿಂದ ವಿಷ್ಣುವಿನಲ್ಲಿ, 'ಸ ವಾ ಏಷ ಮಹಾನಜಃ' ಎಂಬಲ್ಲಿ ಹೇಳಲ್ಪಟ್ಟ ಅಜಶಬ್ದದಿಂದ ಚತುರ್ಮುಖನಲ್ಲಿಯೂ ಪ್ರಸಿದ್ಧವಾದ್ದರಿಂದ ಬ್ರಾಹ್ಮಣಶಬ್ದವು ಉಭಯತ್ರ ಪ್ರಸಿದ್ಧವಾಗಿದೆ.

## ದ್ಯುಭ್ವಾದ್ಯಧಿಕರಣ (1-3-1)

'ವ್ಯಾಖ್ಯಾಂ ಕರೋಮ್ಯನ್ವಪಿ' ಬ್ರಹ್ಮಸೂತ್ರಗಳ ಎಲ್ಲ ಅಧಿಕರಣಗಳಿಗೂ ಅನುವ್ಯಾಖ್ಯಾನವನ್ನು ಬರೆಯುತ್ತೇನೆ ಎಂದು ಪ್ರತಿಜ್ಞೆ ಮಾಡಿದ ಶ್ರೀಮದಾಚಾರ್ಯರು ಮೂರನೇ ಪಾದದ ಎಲ್ಲ ಅಧಿಕರಣಗಳಿಗೂ ವ್ಯಾಖ್ಯಾನವನ್ನೇ ಮಾಡಲಿಲ್ಲ. ಅವರು ಪ್ರತಿಜ್ಞೆಯನ್ನು ಮಾಡಿದ್ದು ವ್ಯರ್ಥವಲ್ಲವೇ? ಎಂದರೆ ವ್ಯರ್ಥವಲ್ಲ. ಏಕೆಂದರೆ ಈ ಪಾದದ ಸರ್ವ ಅಧಿಕರಣಗಳಿಗೂ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸಿ ಹೇಳಿದ್ದಾರೆ. ಆದರಿಂದಲೇ ಎಲ್ಲ ಅಧಿಕರಣಗಳನ್ನು ವ್ಯಾಖ್ಯಾನ ಮಾಡಿದಂತಾಯಿತು.

ಅವುಗಳ ಪೈಕಿ ಪೂರ್ವಪಕ್ಷ ನ್ಯಾಯಗಳ ಸಂಗ್ರಹ ಹೀಗಿದೆ—

ಬಾಹುಲ್ಯಂ ಲಿಂಗಶಬ್ದಾನಾಮನುಕ್ತಿಶ್ಚ ವಿರುದ್ಧತಾ ।
ಅದೃಷ್ಟಿರನ್ವಯಾಭಾವೋ ವಿಪರೀತಶ್ರುತಿಭ್ರಮಃ ।
ಲಿಂಗಾವಕಾಶರಾಹಿತ್ಯಭ್ರಮಸ್ಥಾದೃಗ್ದ್ವಯಂ ತಥಾ ।
ಬಹು ತಾದೃಕ್ತ್ವಮುಕ್ತಸ್ಯ ವಿರೋಧೋಽರ್ಥಾತ್ತಥಾಗತಿಃ ।
ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ।

ಈ ಎರಡು ಶ್ಲೋಕಗಳಿಗೆ ಮತ್ತು ಸಿದ್ಧಾಂತಯುಕ್ತಿ ಸಂಗ್ರಾಹಕವಾದ ಮತ್ತೊಂದು ಶ್ಲೋಕಕ್ಕೆ ಟೀಕಾಕೃತ್ಪಾದರು ಶ್ರೀಮನ್ನ್ಯಾಯಸುಧಾದಲ್ಲಿ ವ್ಯಾಖ್ಯಾನವನ್ನು ಮಾಡದೆ 'ಏತಚ್ಚ ನ್ಯಾಯವಿವರಣೇ ಸ್ವಯಮೇವಾಚಾರ್ಯೇಣ

ವ್ಯಾಖ್ಯಾತಮಿತಿ ತತ್ರೈವಾವಗಂತವ್ಯಂ' 'ಈ ಶ್ಲೋಕಗಳ ವ್ಯಾಖ್ಯಾನವನ್ನು ಶ್ರೀಮದಾಚಾರ್ಯರು ತಾವೇ ನ್ಯಾಯವಿವರಣದಲ್ಲಿ ಮಾಡಿರುವುದರಿಂದ ಅದನ್ನು ಅಲ್ಲಿಯೇ ತಿಳಿಯಬೇಕು' ಎಂದು ಹೇಳಿದ್ದಾರೆ. ಅನುವ್ಯಾಖ್ಯಾನದ ವಿವರಣೆಯನ್ನು ನಾವಿಲ್ಲಿ ಕಾಣುತ್ತಿದ್ದೇವೆ—

ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ 'ಯಸ್ಮಿನ್ ದ್ಯೌಃ...' ಮುಂತಾದ ಶ್ರುತಿಯಲ್ಲಿ ಹೇಳಲ್ಪಟ್ಟ ದ್ಯುಭ್ವಾದ್ಯಾಯತನತ್ವವು ವಿಷಯ. ಅದು ರುದ್ರನಿಗೋ? ವಿಷ್ಣುವಿಗೋ? ಎಂಬುದು ಸಂದೇಹ.

ಅನುವ್ಯಾಖ್ಯಾನದ ನ್ಯಾಯಮಾಲೆಯಲ್ಲಿ ಹೇಳಲ್ಪಟ್ಟ ಈ ಅಧಿಕರಣದ ಪೂರ್ವಪಕ್ಷ ಯುಕ್ತಿಯು 'ಬಾಹುಲ್ಯಂ ಲಿಂಗಶಬ್ದಾನಾಂ' ಎಂಬುದು. 'ದ್ಯುಭ್ವಾದ್ಯಾಯತನತ್ವವೇ ಮೊದಲಾದ ಲಿಂಗಗಳು ರುದ್ರನಲ್ಲಿವೆ ಎಂಬುದಕ್ಕೆ ಬಹಳ ಲಿಂಗ, ಶಬ್ದಗಳೇ ಆಧಾರ' ಎಂದು ಅದರ ಅರ್ಥ. ಈ ನ್ಯಾಯವನ್ನು ಕೆಳಗಿನ ಮೂಲದಿಂದ ವಿವರಿಸುತ್ತಿದ್ದಾರೆ—

**''ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನ ಓತಂ ಪ್ರಾಣಾ ಓತಾ' ಇತ್ಯತ್ರೋಕ್ತಾನಾಂ ಲಿಂಗಾನಾಮನ್ಯತ್ರ ರುದ್ರಾದಿವಿಷಯತ್ವೇ ಶಬ್ದಲಿಂಗಬಾಹುಲ್ಯಮ್ । 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾऽऽವಿಶಾಂತಕಃ' 'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ', ''ಮನೋ ವೈ ರುದ್ರ ಓತಂ ಚ ಪ್ರೋತಂ ಚ'', ''ರುದ್ರೋ ವಾವ ಲೋಕಾಧಾರಃ'' ಇತ್ಯಾದಿಕಂ ಶಬ್ದಬಾಹುಲ್ಯಮ್ ॥ ೧ ॥**

**ಭಾವಾರ್ಥ**—ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಂ ಮನ ಓತಂ ಪ್ರಾಣಾ ಓತಾಃ ಎಂಬಲ್ಲಿ ಹೇಳಲ್ಪಟ್ಟ ದ್ಯಾಯತನತ್ವ ಮೊದಲಾದ ಲಿಂಗಗಳು ರುದ್ರಾದಿಗಳನ್ನು ವಿಷಯೀಕರಿಸುತ್ತವೆ. 'ರುದ್ರೋ ಮಾ ವಿಶಾಂತಕಃ' ಎಂಬಲ್ಲಿರುವ ರುದ್ರ ಶಬ್ದ ಮತ್ತು ಅಂತಕಶಬ್ದ, 'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ' ಎಂಬಲ್ಲಿರುವ ಕೃತ್ತಿವಾಸಸ್ ಶಬ್ದ ಮತ್ತು ಪಿನಾಕೀ ಶಬ್ದ. 'ಮನೋ ವೈ ರುದ್ರ ಓತಂ ಚ ಪ್ರೋತಂ

ಚ' ಎಂಬಲ್ಲಿರುವ ರುದ್ರಶಬ್ದ ಮತ್ತು 'ರುದ್ರೋ ವಾವ ಲೋಕಾಧಾರಃ' ಎಂಬಲ್ಲಿರುವ ರುದ್ರಶಬ್ದ ಹೀಗೆ ರುದ್ರನನ್ನು ಪ್ರತಿಪಾದಿಸುವ ಶಬ್ದಬಾಹುಲ್ಯವೆಂಬ ಯುಕ್ತಿಯಿರುವುದರಿಂದ.

**ವಿವರಣೆ:** 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನ ಓತಂ ಪ್ರಾಣಾ ಓತಾಃ' (ಯಾವನಲ್ಲಿ ದ್ಯುಲೋಕ, ಪೃಥಿವೀ, ಅಂತರಿಕ್ಷಗಳು ಮನಸ್ಸು ಪ್ರಾಣಗಳು ಆಶ್ರಿತವಾಗಿವೆಯೋ) ಎಂಬ ಶ್ರುತಿಯಲ್ಲಿ ಪ್ರಕೃತವಾದ ದ್ಯುಭ್ವಾದ್ಯಾಯತನತ್ವ ಲಿಂಗವು ರುದ್ರನನ್ನೇ ವಿಷಯೀಕರಿಸುತ್ತದೆ. ಏಕೆಂದರೆ 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ' (ನೀನು ಇಂದ್ರಿಯಗಳಿಗೆ ಆಶ್ರಯನು. ಅಂತಕನಾಗಿ ನನ್ನನ್ನು ಪ್ರವೇಶಿಸಬೇಡ) 'ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ' (ಇಂದ್ರಿಯಗಳಿಗೆ ಒಡೆಯ ಚರ್ಮವನ್ನುಟ್ಟವನು, ಪಿನಾಕವನ್ನು ಧರಿಸಿದವನು) 'ಮನೋ ವೈ ರುದ್ರ ಓತಂ ಚ ಪ್ರೋತಂ' (ರುದ್ರನು ಮನೋ ನಿಯಾಮಕ, ಎಲ್ಲವೂ ಅವನನ್ನು ಆಶ್ರಯಿಸಿದೆ) 'ರುದ್ರೋ ವಾವ ಲೋಕಾಧಾರಃ' (ರುದ್ರನೇ ಎಲ್ಲ ಲೋಕಗಳಿಗೆ ಆಶ್ರಯನು) ರುದ್ರ, ಪಿನಾಕೀ, ಕೃತ್ತಿವಾಸಸ್ ಮೊದಲಾದ ಶಬ್ದಗಳು, ಅಂತಕತ್ವ ಮುಂತಾದ ಲಿಂಗಗಳು ಅಧಿಕವಾಗಿರುವುದರಿಂದ ದುಭ್ವಾದ್ಯಾಯತನತ್ವವು ರುದ್ರನ ಲಿಂಗವೇ ಆಗಿದೆ ಎಂಬುದು ಪೂರ್ವಪಕ್ಷ.

## ಭೂಮಾಧಿಕರಣ (1-3-2)

ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ 'ಯೋ ವೈ ಭೂಮಾ ತತ್ ಸುಖಂ' ಎಂದು ಹೇಳಲ್ಪಟ್ಟ ಭೂಮನು ವಿಷಯ. ಅವನು ವಿಷ್ಣುವೋ? ಪ್ರಾಣನೋ? ಎಂಬುದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣದ ಪೂರ್ವಪಕ್ಷ ಯುಕ್ತಿಯು **'ಅನುಕ್ತಿ'** ಎಂಬುದು. 'ಪ್ರಾಣನಿಗಿಂತ ಉತ್ತಮನನ್ನು ಹೇಳದಿರುವುದು' ಎಂದು ಅದರ ಅರ್ಥ. ಈ ನ್ಯಾಯವನ್ನು ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ—

**'ಪ್ರಾಣೋ ವಾ ಆಶಾಯಾ ಭೂಯಾನ್' ಇತ್ಯುಕ್ತ್ವಾ ಪ್ರಾಣಾದ್ಭೂಯಸೋಽನುಕ್ತಿಃ ॥ ೨ ॥**

**ಭಾವಾರ್ಥ**—'ಪ್ರಾಣೋ ವಾ ಆಶಾಯಾ ಭೂಯಾನ್' 'ಪ್ರಾಣನು ಭಾರತಿಗಿಂತ ಉತ್ತಮನು' ಎಂದು ಹೇಳಿ ಪ್ರಾಣನಿಗಿಂತ ಉತ್ತಮನನ್ನು ಹೇಳದಿರುವಿಕೆಯೇ ಭೂಮಾಧಿಕರಣದ ಪೂರ್ವಪಕ್ಷದ ಯುಕ್ತಿ.

**ವಿವರಣೆ** : ನಾಮ ವಾಗಾದಿ ದೇವತೆಗಳ ತಾರತಮ್ಯವನ್ನು ಆಶಾಳ (ಭಾರತೀದೇವಿಯ)ವರೆಗೆ ಹೇಳಿ ಅವಳಿಗಿಂತ ಪ್ರಾಣನು ಉತ್ತಮನೆಂದು ಹೇಳಿ ಅವನಿಗಿಂತ ಉತ್ತಮನನ್ನು ಹೇಳಿರುವುದರಿಂದ ಭೂಮಶಬ್ದವಾಚ್ಯನು ಮುಖ್ಯಪ್ರಾಣನೇ ಎಂದು ಪೂರ್ವಪಕ್ಷ.

## ಅಕ್ಷರಾಧಿಕರಣ (1-3-3)

ಓಂ ಅಕ್ಷಮಂಬರಾಂತಧೃತೇ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಅಕ್ಷರಶಬ್ದವಾಚ್ಯವು ವಿಷಯ. ವಿಷ್ಣುವೋ? ಚೇತನ ಪ್ರಕೃತಿಯಾದ ಲಕ್ಷ್ಮಿಯೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಹೇಳಲ್ಪಟ್ಟ ಈ ಅಧಿಕರಣದ ಪೂರ್ವಪಕ್ಷಯುಕ್ತಿ **'ವಿರುದ್ಧತಾ'** ಎಂಬುದು 'ವಿರೋಧ' ಎಂದು ಅದರರ್ಥ. ಈ ನ್ಯಾಯವನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**ಅತ್ತೇತ್ಯುಕ್ತ್ವಾ 'ನ ತದಶ್ನಾತಿ ಕಿಂಚನ' ಇತಿ ವಿರುದ್ಧತಾ ॥ ೩ ॥**

**ಭಾವಾರ್ಥ**—'ಅತ್ತಾ ಚರಾಚರಗ್ರಹಣಾತ್' ಎಂಬಲ್ಲಿ ವಿಷ್ಣುವಿಗೆ ಹೇಳಲ್ಪಟ್ಟ ಸರ್ವಾತ್ತೃತ್ವವು 'ನ ತದಶ್ನಾತಿ ಕಿಂಚನ' 'ಅವನು ಯಾವುದನ್ನೂ ತಿನ್ನುವುದಿಲ್ಲ' ಎಂಬುದಕ್ಕೆ ವಿರುದ್ಧವಾದ್ದರಿಂದ ಅಕ್ಷರಶಬ್ದವಾಚ್ಯನು ವಿಷ್ಣುವಲ್ಲ ಎಂಬುದು ಪೂರ್ವಪಕ್ಷ.

**ವಿವರಣೆ** : 'ಅತ್ತಾ ಚರಾಚರಗ್ರಹಣಾತ್' ಎಂಬಲ್ಲಿ ವಿಷ್ಣುವಿಗೆ ಸರ್ವಅತ್ತೃತ್ವವನ್ನು ಹೇಳಿಯಾಗಿದೆ. ಆದರೆ ಅಕ್ಷರ ಶಬ್ದವಾಚ್ಯನಿಗೆ 'ನ ತದಶ್ನಾತಿ ಕಿಂಚನ' ಎಂದು ಅನಶನವನ್ನು ಹೇಳಿದೆ. ಅಕ್ಷರ ಶಬ್ದವಾಚ್ಯನಾದವನು ವಿಷ್ಣುವೆಂದಾದರೆ ಸರ್ವಾತ್ತೃತ್ವವನ್ನು ಹೇಳಿದ ಅತ್ತೃತ್ವಾಧಿಕರಣದ ವಿರೋಧ ವಿರುವುದರಿಂದ ಅಕ್ಷರಶಬ್ದವಾಚ್ಯವಾದವಳು ಲಕ್ಷ್ಮಿಯೇ ಎಂದು ಪೂರ್ವಪಕ್ಷ.

# ಸದಧಿಕರಣ (1-3-4)

ಓಂ ಈಕ್ಷತಿಕರ್ಮವ್ಯಪದೇಶಾತ್ ಸಃ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಸತ್‌ಶಬ್ದವಾಚ್ಯವು ವಿಷಯ. ಸತ್‌ಶಬ್ದವಾಚ್ಯವು ಜಡಪ್ರಕೃತಿಯೋ? ವಿಷ್ಣುವೋ? ಎಂಬುದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣದ ಪೂರ್ವಪಕ್ಷ ಯುಕ್ತಿಯು **'ಅದೃಷ್ಟಿ'** ಎಂಬುದು. 'ಒಂದು ಪದಾರ್ಥಕ್ಕೆ ಭಿನ್ನವಾದ ಬೇರೊಂದು ಪದಾರ್ಥದ ಪರಿಣಾಮವು ಕಾಣದಿರುವುದು' ಎಂದು ಅದರರ್ಥ. ಅದನ್ನು ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ—

**''ಬಹು ಸ್ಯಾಂ ಪ್ರಜಾಯೇಯ'' ಇತ್ಯನ್ಯಸ್ಯಾನ್ಯಭಾವಾದೃಷ್ಟಿಃ ॥ ೪ ॥**

**ಭಾವಾರ್ಥ—**'ಬಹು ಸ್ಯಾಂ ಪ್ರಜಾಯೇಯ' ಎಂಬಲ್ಲಿ ಹೇಳಲ್ಪಟ್ಟ ಪ್ರಪಂಚ ರೂಪವಾಗಿ ಪರಿಣಾಮವು ಪ್ರಪಂಚಕ್ಕಿಂತ ಭಿನ್ನನಾದ ನಿರ್ವಿಕಾರಿಯಾದ ವಿಷ್ಣುವಿಗೆ ಕೂಡುವುದಿಲ್ಲವಾದ್ದರಿಂದ ಸತ್‌ಶಬ್ದವಾಚ್ಯವಾದದ್ದು ಪ್ರಕೃತಿಯೇ ಹೊರತು ವಿಷ್ಣುವಲ್ಲ ಎಂಬುದು ಪೂರ್ವಪಕ್ಷ.

**ವಿವರಣೆ :** 'ಬಹು ಸ್ಯಾಂ ಪ್ರಜಾಯೇಯ' ಎಂಬುದಾಗಿ ವಿಕಾರವು ಶ್ರುತವಾಗಿದೆ. ಅದು ನಿರ್ವಿಕಾರನಾದ ವಿಷ್ಣುವಿಗೆ ಕೂಡುವುದಿಲ್ಲ. ಏಕೆಂದರೆ, 'ಅನ್ಯಸ್ಯ ಅನ್ಯಭಾವಾದೃಷ್ಟಿಃ' ಒಂದು ಪದಾರ್ಥಕ್ಕೆ ಅದಕ್ಕಿಂತ ಭಿನ್ನವಾದ ಪದಾರ್ಥದ ಸ್ವಭಾವವು ಕಾಣುವುದಿಲ್ಲವೆಂಬುದು ಪ್ರಸಿದ್ಧವಾಗಿದೆ. ವಿಷ್ಣು ಪ್ರಪಂಚಕ್ಕಿಂತ ಭಿನ್ನನಾಗಿದ್ದಾನೆ. ಮತ್ತು ಅವನಿಗೆ ವಿಕಾರವೂ ಇಲ್ಲ. ಪ್ರಪಂಚರೂಪವಾಗಿ ಪರಿಣಾಮವು ಕೂಡುವುದಿಲ್ಲವಾದ್ದರಿಂದ ಸತ್ ಶಬ್ದವಾಚ್ಯವಾದದ್ದು ಜಡಪ್ರಕೃತಿಯೇ ಹೊರತು ವಿಷ್ಣುವಲ್ಲ ಎಂಬುದು ಪೂರ್ವಪಕ್ಷ.

# ದಹರಾಧಿಕರಣ (1-3-5)

ಓಂ ದಹರ ಉತ್ತರೇಭ್ಯಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ

ಅಧಿಕರಣಕ್ಕೆ ಹೃತ್‌ಪದ್ಮಸ್ಥನು ವಿಷಯ. ಅದು ವಿಷ್ಣುವೋ? ಆಕಾಶವೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣ ಪೂರ್ವಪಕ್ಷ ಯುಕ್ತಿ **'ಅನ್ವಯಾಭಾವ'** ಎಂಬುದು. 'ಹೃತ್‌ಪದ್ಮಸ್ಥನು ವಿಷ್ಣುವೆಂದು ಇಟ್ಟುಕೊಂಡರೆ ಅನ್ವಯವು ಕೂಡುವುದಿಲ್ಲ' ಎಂದು ಅದರರ್ಥ. ಅದನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**'ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಮ್' ಇತ್ಯ-ನೇನ, 'ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ' ಇತ್ಯಸ್ಯಾನ್ವಯಾಭಾವಃ ॥ ೫ ॥**

**ಭಾವಾರ್ಥ**—'ಈ ಶರೀರದೊಳಗೆ ಪುಟ್ಟ ಆಕಾಶವಿದೆ. ಅದರ ಒಳಗಿರುವುದನ್ನು ವಿಚಾರ ಮಾಡಬೇಕು' ಎಂದು ಹೇಳಲ್ಪಟ್ಟಾಗ ಉತ್ತರರೂಪದಲ್ಲಿ ಉಕ್ತವಾದ 'ಹೊರಗಡೆ ಎಷ್ಟು ವಿಸ್ತಾರವಾದ ಆಕಾಶವಿದೆಯೋ ಅಷ್ಟೇ ಆಕಾಶ ಹೃದಯದೊಳಗಿದೆ' ಎಂಬುದಕ್ಕೆ ವಿಷ್ಣುವೆಂದಿಟ್ಟುಕೊಂಡರೆ ಅನ್ವಯವು ಕೂಡುವುದಿಲ್ಲವಾದ್ದರಿಂದ ಹೃತ್ಪದ್ಮಸ್ಥವಾದದ್ದು ಆಕಾಶವೆಂದು ಪೂರ್ವಪಕ್ಷ.

**ವಿವರಣೆ :** ಒಂದು ವೇಳೆ ಹೃತ್ಪದ್ಮಸ್ಥನು ವಿಷ್ಣುವಾದರೆ 'ಕಿಂ ತದತ್ರ ವಿದ್ಯತೇ' ಎಂಬ ಶಿಷ್ಯನ ಪ್ರಶ್ನೆಗೆ 'ಬ್ರಹ್ಮ ವಿದ್ಯತೇ' ಎಂದು ಗುರುವು ಉತ್ತರಿಸ ಬೇಕಿತ್ತು. ಅದನ್ನು ಬಿಟ್ಟು 'ಯಾವಾನ್ ವಾಽಯಮಾಕಾಶಃ ತಾವಾನೇಷೋಽಂತ ರ್ಹೃದಯ ಆಕಾಶಃ' ಬಾಹ್ಯಾಕಾಶದಷ್ಟೇ ವಿಸ್ತಾರವಾದ ಆಕಾಶ ಹೃದಯದ ಒಳಗಿದೆ' ಎಂದು ಪ್ರಶ್ನೆಗೆ ಪರಿಹಾರವನ್ನು ಹೇಳಿದ್ದಾನೆ. ಇದಕ್ಕೆ ಹೃತ್ಪದ್ಮಸ್ಥನು ವಿಷ್ಣುವು ಎಂದಿಟ್ಟುಕೊಂಡರೆ ಅನ್ವಯವು ಕೂಡುವುದಿಲ್ಲ. ಆಕಾಶವೆಂದಿಟ್ಟುಕೊಂಡರೆ ಅನ್ವಯವು ಕೂಡುವುದರಿಂದ ಹೃತ್ಪದ್ಮಸ್ಥವಾದದ್ದು ಆಕಾಶವೇ ಎಂಬುದು ಪೂರ್ವಪಕ್ಷ.

## ಅನುಕೃತ್ಯಸ್ಥಧಿಕರಣ (1-3-6)

ಓಂ ಅನುಕೃತೇಸ್ತಸ್ಯ ಚ ಓಂ ಎಂಬ ಸೂತ್ರದಿಂದ ಆರಂಭವಾಗವ ಈ ಅಧಿ

ಕರಣದ ವಿಷಯ ಅನುಕೂಲ್ಯೇನ ಗೃಹ್ಯಮಾಣತ್ವವೆಂಬುದು. ಅನಿರ್ದೇಶ್ಯತ್ವವು (ಅದೃಶ್ಯತ್ವವು) ಜ್ಞಾನಿಸುಖದಲ್ಲಿ ವಿಷ್ಣುವಿನಲ್ಲಿಯೂ ಸಮಾನವಾದ್ದರಿಂದ ಅನುಕೂಲ್ಯೇನ ಗೃಹ್ಯಮಾಣತ್ವವು ವಿಷ್ಣುವಿಗೋ? ಜ್ಞಾನಿಸುಖಕ್ಕೋ? ಎಂಬುದು ಸಂದೇಹ.

ನ್ಯಾಯಮಾಲೆಯಲ್ಲಿ ಹೇಳಲ್ಪಟ್ಟ ಈ ಅಧಿಕರಣದ ಪೂರ್ವಪಕ್ಷ ಯುಕ್ತಿ **'ವಿಪರೀತಶ್ರುತಿಭ್ರಮ'** ಎಂಬುದು. 'ಪೂರ್ವಪಕ್ಷಿಯು ಶ್ರುತಿಗೆ ವಿಪರೀತವಾಗಿ ಯೋಜನೆ ಮಾಡಿದ್ದರಿಂದ ಶ್ರುತಿಯು ವಿಪರೀತಶ್ರುತಿಯೆನಿಸಿದೆ. ಈ ವಿಪರೀತಶ್ರುತಿಯು ತನಗೆ ಅನುಕೂಲವಾಗುವುದು ಎಂಬ ಪೂರ್ವಪಕ್ಷಿಯ ಭ್ರಮೆಯೇ ವಿಪರೀತಶ್ರುತಿಭ್ರಮ'ವೆನಿಸಿದೆ. ಈ ನ್ಯಾಯವನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**''ತದೇತದಿತಿ ಮನ್ಯಂತೇ'' ''ಕಥಂ ನು ತದ್ವಿಜಾನೀಯಾಮ್'' ಇತಿ ''ತೇಷಾಂ ಸುಖಂ ಶಾಶ್ವತಂ ನೇತರೇಷಾಮ್'' ಇತ್ಯುಕ್ತಜ್ಞಾನಿಸುಖಗ್ರಹಣ-ಮಿತಿ ವಿಪರೀತಶ್ರುತಿಭ್ರಮಃ ॥ ೬ ॥**

**ಭಾವಾರ್ಥ—**'ತದೇತದಿತಿ ಮನ್ಯಂತೇ' ಎಂಬ ವಾಕ್ಯದಲ್ಲಿ ಪ್ರಕೃತವಾದ ತತ್, ಏತತ್ ಶಬ್ದಗಳಿಂದ 'ಕಥಂ ನು ತದ್ವಿಜಾನೀಯಾಂ' ಎಂಬಲ್ಲಿರುವ ತತ್ ಶಬ್ದದಿಂದ 'ತೇಷಾಂ ಸುಖಂ ಶಾಶ್ವತಂ ನೇತರೇಷಾಂ' ಎಂಬಲ್ಲಿ ಪ್ರಕೃತವಾದ ಜ್ಞಾನಿಸುಖವನ್ನೇ ಪರಾಮರ್ಶೆಮಾಡಬೇಕು ಹೊರತು ವಿಷ್ಣುವನ್ನಲ್ಲ. ಎಂಬುದಾಗಿ ಪೂರ್ವಪಕ್ಷಿಯು ವಿಪರೀತವಾಗಿ ಗ್ರಹಿಸಿದ ಶ್ರುತಿಯೇ ಪೂರ್ವಪಕ್ಷಸಾಧಕಯುಕ್ತಿ. ಪೂರ್ವಪಕ್ಷಿಯ ಜ್ಞಾನವು ಭ್ರಮವಾದ್ದರಿಂದ ವಿಪರೀತಶ್ರುತಿಭ್ರಮವೆಂದಿದ್ದಾರೆ.

**ವಿವರಣೆ :** 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ' (ಅದನ್ನು ಪರಮಸುಖರೂಪವನ್ನಾಗಿ ತಿಳಿಯುತ್ತಾರೆ) ಎಂಬಲ್ಲಿರುವ ತತ್, ಏತತ್ ಶಬ್ದಗಳಿಂದ 'ಕಥಂ ನು ತದ್ವಿಜಾನೀಯಾಂ' (ಅದನ್ನು ನಾನು ಹೇಗೆ ತಿಳಿಯಲಿ) ಎಂಬಲ್ಲಿರುವ ತತ್‌ಶಬ್ದದಿಂದಲೂ 'ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾ ಯಃ ಕರೋತಿ। ತಮಾತ್ಮಸ್ಥಂ ಯೇಽನು ಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥ (ಸ್ವತಂತ್ರನೂ, ಎಲ್ಲರನ್ನೂ ತನ್ನ

ಅಧೀನದಲ್ಲಿಟ್ಟುಕೊಂಡಿರುವ ಎಲ್ಲ ಪ್ರಾಣಿಗಳ ಒಳಗಿದ್ದು ನಿಯಮಿಸುವ ಒಂದೇ ರೂಪವನ್ನು ಬಹುಪ್ರಕಾರವಾಗಿ ಮಾಡುವ ಹೃದಯಸ್ಥವಾದ ಶ್ರೀಹರಿಯನ್ನು ಯಾವ ಜ್ಞಾನಿಗಳು ತಿಳಿಯುತ್ತಾರೋ ಅಂತಹವರಿಗೇ ಶಾಶ್ವತವಾದ ಸುಖ. ಬೇರೆಯವರಿಗೆ ಇಲ್ಲ) ಎಂಬಲ್ಲಿ ಪ್ರಕೃತವಾದ ಜ್ಞಾನಿಸುಖವನ್ನೇ ಪರಾಮರ್ಶೆಮಾಡಬೇಕು. ಏಕೆಂದರೆ ಜ್ಞಾನಿಸುಖವು ನಪುಂಸಕಲಿಂಗ ಶಬ್ದದಿಂದ ಪ್ರಸ್ತುತವಾಗಿದೆ. ಅದನ್ನು ತದ್, ಏತತ್ ಮೊದಲಾದ ನಪುಂಸಕಶಬ್ದದಿಂದ ಪರಾಮರ್ಶೆ ಕೂಡುತ್ತದೆ. 'ಏಕೋ ವಶೀ' ಎಂಬುದಾಗಿ ಪುಲ್ಲಿಂಗ ಶಬ್ದದಿಂದ ಪ್ರಕೃತನಾದ ವಿಷ್ಣುವನ್ನಲ್ಲ ಎಂಬುದಾಗಿ ಪೂರ್ವಪಕ್ಷಿಯ ವಿಪರೀತವಾದ ತಿಳುವಳಿಕೆಯೇ (ವಿಪರೀತಶ್ರುತಿಭ್ರಮ) ಯುಕ್ತಿಯಾಗಿದೆ.

## ವಾಮನಾಧಿಕರಣ (1-3-7)

ಓಂ ಶಬ್ದಾದೇವ ಪ್ರಮಿತಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ 'ಈಶಾನೋ ಭೂತಭವ್ಯಸ್ಯ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಈಶಾನ ಶಬ್ದವಾಚ್ಯನು ಮುಖ್ಯಪ್ರಾಣನೋ? ವಿಷ್ಣುವೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣದ ಪೂರ್ವಪಕ್ಷಯುಕ್ತಿ '**ಲಿಂಗಾವಕಾಶರಾಹಿತ್ಯಭ್ರಮ**' ಎಂಬುದು. 'ಪ್ರಾಣವ್ಯವಸ್ಥಾಪಕತ್ವವೆಂಬ ಲಿಂಗಕ್ಕೆ ವಿಷ್ಣುವಿನಲ್ಲಿ ಅವಕಾಶವಿಲ್ಲ ಎಂಬ ಪೂರ್ವಪಕ್ಷಿಯ ಭ್ರಮೆ' ಎಂದು ಅದರರ್ಥ. ಅದನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**''ಊರ್ಧ್ವಂ ಪ್ರಾಣಮುನ್ನಯತಿ'' ಇತ್ಯಾದಿಲಿಂಗಾನಾಂ ಪ್ರಾಣಾದನ್ಯತ್ರಾವಕಾಶರಾಹಿತ್ಯಮಿತಿ ಭ್ರಮಃ । ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ'' ಇತ್ಯಾದಿವಾಕ್ಯಾದ್ ಭ್ರಮಃ ॥ ೭ ॥**

**ಭಾವಾರ್ಥ**—'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಶ್ರುತಿಯಲ್ಲಿ ಉಕ್ತವಾದ ಪ್ರಾಣವ್ಯವಸ್ಥಾಪಕತ್ವ ಮೊದಲಾದ ಶ್ರುತಿಗಳಲ್ಲಿ ಮುಖ್ಯಪ್ರಾಣನಿಗಿಂತ ಭಿನ್ನನಾದ ವಿಷ್ಣುವಿನಲ್ಲಿ ಅವಕಾಶವಿಲ್ಲದಿರುವಿಕೆಯೇ ಪೂರ್ವಪಕ್ಷಯುಕ್ತಿ.

(ಪೂರ್ವಪಕ್ಷಿಯ ಈ ಜ್ಞಾನವು ಭ್ರಮವಾದ್ದರಿಂದ ಲಿಂಗರಾಹಿತ್ಯಭ್ರಮವು ಯುಕ್ತಿಯೆಂದು ಹೇಳಲಾಗಿದೆ.) 'ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ' ಎಂಬ ವಾಕ್ಯದಿಂದ ಭ್ರಮವು ಉಂಟಾಗುತ್ತದೆ. ಪ್ರಾಣವ್ಯವಸ್ಥಾಪಕತ್ವ ಮೊದಲಾದ ಲಿಂಗಗಳು ಮುಖ್ಯಪ್ರಾಣನಲ್ಲಿರುವುದರಿಂದ ಮುಖ್ಯಪ್ರಾಣನೇ ಈಶಾನ ಶಬ್ದವಾಚ್ಯನು ಎಂದು ಪೂರ್ವಪಕ್ಷ.

**ವಿವರಣೆ :** 'ಊರ್ಧ್ವಂ ಪ್ರಾಣಮುನ್ನಯತಿ' ಮುಂತಾದ ವಾಕ್ಯಗಳಲ್ಲಿ ಹೇಳಲ್ಪಟ್ಟ ಪ್ರಾಣವ್ಯವಸ್ಥಾಪಕತ್ವ, ಮಧ್ಯಮತ್ವ, ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳಿಗೆ ಮುಖ್ಯಪ್ರಾಣನಿಗಿಂತ ಭಿನ್ನನಾದ ವಿಷ್ಣುವಿನಲ್ಲಿ ಅವಕಾಶವಿಲ್ಲವೆಂಬ ಭ್ರಮೆಯು ಪೂರ್ವಪಕ್ಷಯುಕ್ತಿಯಾಗಿದೆ. ಈ ಭ್ರಮೆ ಬರಲು ಕಾರಣವಾದವುಗಳು 'ಏವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸನ್ನಿಧತ್ತೇ' (ಈ ಮುಖ್ಯಪ್ರಾಣನು ಇತರ ಪ್ರಾಣಗಳನ್ನು ಪ್ರತ್ಯೇಕಪ್ರತ್ಯಕವಾಗಿಯೇ ಇರಿಸುತ್ತಾನೆ) 'ಯೋಽಯಂ ಮಧ್ಯಮಃ ಪ್ರಾಣಃ', 'ಕುವಿದಂಗ ನಮಸಾ ವಿಧೇಯತೇ' ಮುಂತಾದ ಶ್ರುತಿಗಳು. ಪ್ರಾಣವ್ಯವಸ್ಥಾಪಕತ್ವ, ಮಧ್ಯಮತ್ವ, ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗ ಸಮೂಹದಿಂದ ಈಶಾನ ಶಬ್ದವಾಚ್ಯನಾದವನು. ಮುಖ್ಯಪ್ರಾಣನೇ ಹೊರತು ವಿಷ್ಣುವಲ್ಲ ಎಂಬುದು ಪೂರ್ವಪಕ್ಷ.

## ಕಂಪನಾಧಿಕರಣ (1-3-10)

ಓಂ ಕಂಪನಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ವಜ್ರಶಬ್ದವು ವಿಷಯ. ಈ ವಜ್ರವು ವಜ್ರಾಯುಧವೋ? ವಿಷ್ಣುವೋ? ಎಂಬುದು ಸಂದೇಹ.

ನ್ಯಾಯಮಾಲೆಯಲ್ಲಿ ಹೇಳಲ್ಪಟ್ಟ ಈ ಅಧಿಕರಣದ ಪೂರ್ವಪಕ್ಷ ಯುಕ್ತಿ **'ತಾದೃಗ್‌ದ್ವಯ'** ಎಂಬುದು. 'ವಿಷ್ಣುವಿನಲ್ಲಿ ಅವಕಾಶ ಪಡೆಯದಿರುವ ಶಬ್ದ, ಲಿಂಗಗಳು' ಎಂದು ಅದರ ಅರ್ಥ. ಇದನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**ವಜ್ರಶಬ್ದ ಉದ್ಯತತ್ವಲಿಂಗಂ ಚ ತಾದೃಗ್ದ್ವಯಮ್ ॥ ೧೦ ॥ ೮ ॥**

**ಭಾವಾರ್ಥ**—ವಜ್ರಶಬ್ದ ಮತ್ತು ಉದ್ಯತತ್ವವೆಂಬ ಲಿಂಗವೂ ಕಂಪನಾಧಿಕರಣ ಪೂರ್ವಪಕ್ಷ ಯುಕ್ತಿಯಾಗಿವೆ.

**ವಿವರಣೆ :** 'ಯದಿದಂ ಕಿಂಚ ಜಗತ್ ಸರ್ವಂ ಪ್ರಾಣ ಏಜತಿ ನಿಸ್ಸೃತಂ ಮಹದ್ಭಯಂ ವಜ್ರಮುದ್ಯತಂ ಯ ಏತದ್ ವಿದುರಮೃತಾಸ್ತೇ ಭವಂತಿ' (ಪ್ರಾಣನಿಂದ ಹೊರಬಂದ ಈ ಎಲ್ಲ ಜಗತ್ತು ಯಾವ ವಜ್ರದಿಂದ ಪ್ರವೃತ್ತಿ ಮಾಡುತ್ತಿದೆಯೋ ಆ ವಜ್ರವನ್ನು ತಿಳಿದವರು ಮುಕ್ತರಾಗುತ್ತಾರೆ) ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ವಜ್ರಶಬ್ದವು ಆಯುಧದಲ್ಲಿಯೇ ಪ್ರಸಿದ್ಧವಾಗಿದೆ. ಹಾಗೂ ಉದ್ಯತತ್ವ (ಎತ್ತಲ್ಪಡುವಿಕೆ) ವೆಂಬ ಲಿಂಗವೂ ಆಯುಧದಲ್ಲಿ ಯುಕ್ತವಾಗತ್ತದೆ. (ಆಯುಧವನ್ನು ಎತ್ತಬಹುದು. ಪರಮಾತ್ಮನನ್ನು ಎತ್ತಲಾಗುವುದಿಲ್ಲ) ಆದ್ದರಿಂದ ನಿರವಕಾಶವಾದ ವಜ್ರಶಬ್ದ ಉದ್ಯತತ್ವಲಿಂಗಗಳು ಪೂರ್ವಪಕ್ಷಕ್ಕೆ ಆಧಾರವಾಗಿವೆ.

## ಜ್ಯೋತಿರಧಿಕರಣ (1-3-11)

ಓಂ ಜ್ಯೋತಿರ್ದರ್ಶನಾತ್ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿ ಕರಣಕ್ಕೆ ಜ್ಯೋತಿಶ್ಶಬ್ದವಾಚ್ಯವು ವಿಷಯ. ಜ್ಞಾನಸ್ವರೂಪರಾದ್ದರಿಂದ ಜ್ಯೋತಿಶ್ಶಬ್ದವಾಚ್ಯವು ವಿಷ್ಣುವೋ? ಜೀವನೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣದ ಪೂರ್ವಪಕ್ಷಯುಕ್ತಿ 'ಬಹುತಾದೃಕ್ತ್ವ' ಎಂಬುದು. 'ವಿಷ್ಣುವಿನಲ್ಲಿ ಅವಕಾಶ ಪಡೆಯದ ಬಹು ಲಿಂಗಗಳು' ಎಂದು ಅದರ ಅರ್ಥ. ಅದನ್ನು ಈ ಮೂಲದಿಂದ ವಿವರಿಸುತ್ತಿದ್ದಾರೆ—

**ಆದಿತ್ಯಾದಿಜ್ಯೋತಿಷ್ಟ್ವಮುಭಯಲೋಕಸಂಚರಣವಸ್**
**''ಆದಿತ್ಯೇನ್ಯೆ- ವಾಯಂ ಜ್ಯೋತಿಷಾऽಸ್ತೇ'' ಇತ್ಯವಧಾರಣಮಿತ್ಯಾದೀನಾಂ**
**ಪರಮಾತ್ಮ- ನ್ಯವಕಾಶಾಭಾವೋ ಬಹುತಾದೃಕ್ತ್ವಮ್ ॥ ೧೧ ॥ ೯ ॥**

**ಭಾವಾರ್ಥ**—'ಕಿಂ ಜ್ಯೋತಿರಯಂ ಪುರುಷಂ ಇತ್ಯಾದಿತ್ಯಜ್ಯೋತಿಃ' ಎಂಬುದಾಗಿ ಹೇಳಲ್ಪಟ್ಟ ಆದಿತ್ಯಾದಿ ಜ್ಯೋತಿಷ್ಟ್ವವು, 'ಸ ಸಮಾನಸ್ಸನ್ ಉಭೌ

ಲೋಕಾವನುಸಂಚರತಿ' ಎಂದು ಹೇಳಲ್ಪಟ್ಟ ಉಭಯಲೋಕಸಂಚರಣವು, 'ಆದಿತ್ಯೇನೈವಾಽಯಂ ಜ್ಯೋತಿಷಾಽಸ್ತೇ' ಮುಂತಾದ ಕಡೆಗಳಲ್ಲಿ ಉಕ್ತವಾದ ಅವಧಾರಣವು ಮೊದಲಾದ ಜೀವಲಿಂಗಗಳಿಗೆ ವಿಷ್ಣುವಿನಲ್ಲಿ ಅವಕಾಶವಿಲ್ಲವೆಂಬ ಬಹುತಾದೃಕ್ತ್ವವೇ ಪೂರ್ವಪಕ್ಷ ಪ್ರಾಪಕವಾದ ಯುಕ್ತಿಯಾಗಿದೆ.

**ವಿವರಣೆ :** 'ಕಿಂ ಜ್ಯೋತಿರಯಂ ಪುರುಷ ಇತಿ । ಆದಿತ್ಯಜ್ಯೋತಿಃ ಸಮ್ರಾಳಿತ ಹೋವಾಚ' (ಈ ಜೀವನಿಗೆ ಜ್ಞಾನಸಾಧನವಾದದ್ದು ಯಾವುದು? ಸೂರ್ಯನೇ ಜ್ಞಾನಸಾಧನ) ಎಂದು ಆದಿತ್ಯನಿಗೆ ಜ್ಯೋತಿಷ್ಟ್ವವನ್ನು ಹೇಳಿದ್ದಾರೆ. 'ಅಸ್ತಮಿತೇ ಆದಿತ್ಯೇ ಯಾಜ್ಞವಲ್ಕ್ಯ ಕಿಂ ಜ್ಯೋತಿರೇವಾಯಂ ಪುರುಷ ಇತಿ । ಚಂದ್ರಮಾ ಏವಾಸ್ಯ ಜ್ಯೋತಿರ್ಭವತೀತಿ' (ಸೂರ್ಯನು ಅಸ್ತಂಗತನಾದಾಗ ಈ ಜೀವನಿಗೆ ಜ್ಞಾನಸಾಧನ ವಾದದ್ದು ಯಾವುದು? ಚಂದ್ರನೇ ಇವನಿಗೆ ಜ್ಞಾನಸಾಧನವಾಗುತ್ತಾನೆ) ಎಂದು ಚಂದ್ರನಿಗೆ ಜ್ಯೋತಿಷ್ಟ್ವವನ್ನು ಹೇಳಿದ್ದಾರೆ. ಇದರಂತೆ, ಚಂದ್ರನು ಅಸ್ತಂಗತನಾದಾಗ ಅಗ್ನಿಗೆ ಜ್ಯೋತಿಷ್ಟ್ವವನ್ನು ಹೇಳಿದ್ದಾರೆ. ನಿದ್ರಾವಸ್ಥೆಯಲ್ಲಿದ್ದಾಗ 'ಆತ್ಮೈವಾಸ್ಯ ಜ್ಯೋತಿರ್ಭವತಿ' ಆತ್ಮನೇ ಜ್ಯೋತಿಯಾಗುತ್ತಾನೆ. ಆ ಆತ್ಮನ ಸ್ವರೂಪವೇನು? ಎಂದು ಪ್ರಶ್ನಿಸಿದಾಗ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ' (ಹೃದಯದ ಒಳಗೆ ಇಂದ್ರಿಯಗಳ ಒಳಗೆ ಇರುವ ಪುರುಷನು ವಿಜ್ಞಾನಮಯನು ಹಾಗೂ ಜ್ಯೋತಿಯು) ಎಂದು ಆತ್ಮನಿಗೆ ಜ್ಯೋತಿಷ್ಟ್ವವನ್ನು ಹೇಳಿದ್ದಾರೆ. ಇಲ್ಲಿ ಉಕ್ತವಾದ ಜ್ಯೋತಿಃ ವಿಷ್ಣುವೇ ಎಂದಾದಲ್ಲಿ ವಿಷ್ಣುವೆಂಬ ಜ್ಯೋತಿಸ್ಸು ಯಾವಾಗಲೂ ಇರುವುದರಿಂದ ಒಂದರ ಅಸ್ತವನ್ನು ಹೇಳಿ ಮತ್ತೊಂದರ ಅಸ್ತಿತ್ವವನ್ನು ಹೇಳುವುದನ್ನು ಅನ್ವಯಿಸಲಾಗುವುದಿಲ್ಲ. ಮತ್ತು ಆದಿತ್ಯಾದಿಗಳ ಜ್ಞಾನಸಾಧನ ಜೀವನಿಗೆ ಆಗಬಹುದೇ ಹೊರತು ವಿಷ್ಣುವಿಗಲ್ಲ. ಅನಂತರ 'ಸ ಸಮಾನಃ ಸನ್ ಉಭೌ ಲೋಕಾವನುಸಂಚರತಿ' (ಅವನು ವಿಕಾರರಹಿತನಾಗಿದ್ದು ಸ್ವರ್ಗ ಭೂಮಿಗಳೆಂಬ ಎರಡು ಲೋಕಗಳನ್ನು ಸಂಚರಿಸುತ್ತಾನೆ) ಎಂದು ಹೇಳಿದ ಸಂಚಾರವನ್ನು ಸಂಸಾರಿಯಾದ ಹುಟ್ಟುಸಾವುಗಳಿರುವ ಜೀವನಿಗೆ ಕರ್ಮಾನುಸಾರ ವಾಗಿ ಕೂಡಿಸಬಹುದು. ಕರ್ಮದ ಲೇಪವಿಲ್ಲದಿರುವ ವಿಷ್ಣುವಿಗಲ್ಲ.

'ಆದಿತ್ಯೇನೈವಾಯಂ ಜ್ಯೋತಿಷಾ ಆಸ್ತೇ' ಎಂದು ಆದಿತ್ಯಾದಿಗಳಿಗಿಂತ

ಭಿನ್ನನಾದ ವಿಷ್ಣುವಿಗೆ ಜ್ಯೋತಿಷ್ಟ್ವವನ್ನು ಏವಕಾರದಿಂದ (ಅವಧಾರಣದಿಂದ) ನಿಷೇಧ ಮಾಡಿದ್ದಾರೆ.

## ಆಕಾಶಾಧಿಕರಣ (1-3-12)

ಓಂ ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ 'ಆಕಾಶೋ ವೈ ನಾಮ...' ಇತ್ಯಾದಿ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶವೇ ವಿಷಯ. ಆಕಾಶ ಶಬ್ದವಾಚ್ಯವಾದದ್ದು ಭೂತಾಕಾಶವೋ? ವಿಷ್ಣುವೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣದ ಪೂರ್ವಪಕ್ಷನ್ಯಾಯ **'ಉಕ್ತಸ್ಯ ವಿರೋಧಃ'** ಎಂಬುದು 'ವಿಷ್ಣುವನ್ನು ಸ್ವೀಕರಿಸಿದರೆ ಉಕ್ತವಾದ ನಿಪಾತಗಳ ವಿರೋಧ' ಎಂಬುದು ಇದರ ಅರ್ಥ. ಅದನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**''ವೈ, ನಾಮ'' ಇತಿ ಪ್ರಸಿದ್ಧಿದ್ಯೋತಕನಿಪಾತದ್ವಯಂ, ರೂಢಿ-ತ್ಯಾಗೇನೋಕ್ತಯೌಗಿಕಾರ್ಥಸ್ವೀಕಾರೇ ವಿರೋಧಿ ॥ ೧೨ ॥ ೧೦ ॥**

**ಭಾವಾರ್ಥ**—ರೂಢಿ ಅರ್ಥವಾದ ಆಕಾಶವನ್ನು ಬಿಟ್ಟು (ಆ=ಸಮಂತಾತ್ ಕಾಶತೇ ಎಂಬ) ಯೌಗಿಕಾರ್ಥನಾದ ವಿಷ್ಣುವನ್ನು ಸ್ವೀಕರಿಸಲು ಆಕಾಶ ಶಬ್ದಕ್ಕೆ ಪ್ರಸಿದ್ಧಿಯನ್ನು ತಿಳಿಸುವ 'ವೈ ನಾಮ'ವೆಂಬ ಎರಡು ನಿಪಾತಗಳ ವಿರೋಧವು ಬರುತ್ತದೆ.

**ವಿವರಣೆ** : 'ಆಕಾಶೋ ವೈನಾಮ ನಾಮರೂಪಯೋರ್ನಿರ್ವಹಿತಾ' (ಆಕಾಶವೇ ಎಲ್ಲ ನಾಮರೂಪಾತ್ಮಕ ಪ್ರಪಂಚಕ್ಕೆ ಆಧಾರ) ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಆಕಾಶವು ಭೂತಾಕಾಶವೆಂದು ಪೂರ್ವಪಕ್ಷ. ಹಿಂದೆ ಹೇಳಿದಂತೆ ಆ=ಸಮಂತಾತ್ ಕಾಶತೇ ಮುಂತಾದ ರೀತಿಯಾದ ಯೌಗಿಕಾರ್ಥನಾದ ವಿಷ್ಣುವನ್ನಿಟ್ಟುಕೊಂಡರೆ 'ವೈ ನಾಮ'ವೆಂಬ ಪ್ರಸಿದ್ಧಿದ್ಯೋತಕಗಳಾದ ನಿಪಾತಗಳ ವಿರೋಧವು ಬರುತ್ತದೆ. ಆದ್ದರಿಂದ ಆಕಾಶ ಶಬ್ದವಾಚ್ಯವಾದದ್ದು ಭೂತಾಕಾಶವೇ ಆಗಿದೆ.

# ಸುಷುಪ್ತ್ಯಧಿಕರಣ (1-3-13)

ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಸ್ವಪ್ನದ್ರಷ್ಟೃತ್ವವು ವಿಷಯ. ಲೋಕಪ್ರಸಿದ್ಧಿಯಿರುವುದರಿಂದ ಸ್ವಪ್ನದ್ರಷ್ಟೃತ್ವವು ಜೀವನಿಗೋ? ಅಥವಾ ಅಸಂಗತ್ವಲಿಂಗವಿರುವುದರಿಂದ ವಿಷ್ಣುವಿಗೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಉಕ್ತವಾದ ಈ ಅಧಿಕರಣದ ಪೂರ್ವಪಕ್ಷಯುಕ್ತಿ **'ಅರ್ಥಾತ್ ತಥಾಗತಿಃ'** ಎಂಬುದು. 'ಅರ್ಥಾತ್=ಜೀವೇಶ್ವರರಲ್ಲಿ ಅಭೇದ ವಿರುವುದರಿಂದ ಜೀವನಲ್ಲಿ ತಾಥಾ=ಅಸಂಗತ್ವದ ಆಗತಿಃ=ಬರುವುದು' ಎಂದು ಅದರರ್ಥ. ಅದನ್ನು ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ—

**ಜೀವೇಶ್ವರಾಭೇದೇ ಈಶ್ವರೋಕ್ತಾವಪ್ಯರ್ಥಾಜ್ಜೀವ ಏವೋಚ್ಯತ ಇತ್ಯರ್ಥಾತ್ ತಥಾಗತಿಃ ॥ ೧೩ ॥ ೧೧ ॥**

**ಭಾವಾರ್ಥ**—ಜೀವ, ಈಶ್ವರನಲ್ಲಿ ಅಭೇದವಿರುವುದರಿಂದ ಈಶ್ವರನಲ್ಲಿರುವ ಅಸಂಗತ್ವವು ಜೀವನಲ್ಲಿಯೂ ಕೂಡುತ್ತದೆ ಎಂಬ 'ಅರ್ಥಾತ್ ತಥಾ ಆಗತಿಃ' ಎಂಬುದು ಪೂರ್ವಪಕ್ಷಯುಕ್ತಿಯಾಗಿದೆ.

**ವಿವರಣೆ**— 'ಸ ಯತ್ತತ್ರ ಪಶ್ಯತ್ಯನ್ವಾಗತಸ್ತೇನ ಭವತ್ಯಸಂಗೋ ಹ್ಯಯಂ ಪುರುಷಃ' (ಸ್ವಪ್ನಕಾಲದಲ್ಲಿ ಜೀವನು ಏನು ನೋಡುತ್ತಾನೋ ಅದರ ಲೇಪ ಅವನಿಗಿರುವುದಿಲ್ಲ, ಅವನು ಅಸಂಗ) ಎಂಬಲ್ಲಿ ಶ್ರುತವಾದ ಸ್ವಪ್ನದ್ರಷ್ಟೃತ್ವವು ಜೀವನಿಗೇ ಎಂಬುದು ಪೂರ್ವಪಕ್ಷ. ಅಸಂಗತ್ವವನ್ನು ಹೇಳಿದ್ದರಿಂದ ವಿಷ್ಣುವಿಗೇ ಎಂದು ಏಕೆ ಹೇಳಬಾರದು ಎಂದು ಆಕ್ಷೇಪಿಸಬಾರದು. ಜೀವೇಶ್ವರರಲ್ಲಿ ಅಭೇದವಿರುವುದರಿಂದ ಈಶ್ವರನು ಅಸಂಗನಾದರೆ ಜೀವನು ಅಸಂಗನಾಗಬಹುದು. ಆದ್ದರಿಂದ ಜೀವನಿಗೇ ಸ್ವಪ್ನದ್ರಷ್ಟೃತ್ವವು ಎಂದು ಪೂರ್ವಪಕ್ಷ. ಜೀವ, ಈಶ್ವರರಲ್ಲಿ ಅಭೇದವಿರುವುದರಿಂದ ಈಶ್ವರನಲ್ಲಿರುವ ಅಸಂಗತ್ವವನ್ನು ಜೀವನಲ್ಲಿ ಹೇಳುವು ದಾದರೆ, ಜೀವನಲ್ಲಿರುವ ಸ್ವಪ್ನದ್ರಷ್ಟೃತ್ವವನ್ನು ಈಶ್ವರನಿಗೂ ಹೇಳಬಹುದಾದ್ದರಿಂದ 'ಜೀವ ಏವ ಉಚ್ಯತೇ' ಎಂದು ಅವಧಾರಣಪೂರ್ವಕವಾಗಿ ಜೀವನಿಗೇ ಎಂದು

ಹೇಗೆ ಹೇಳುವುದು? ಎಂದರೆ ಅದಕ್ಕೆ ಉತ್ತರ ಹೀಗಿದೆ— ಅಭೇದವಿರುವುದರಿಂದ ಜೀವನಲ್ಲಿ ಅಮುಖ್ಯವಾಗಿಯಾಗಿ ಅಸಂಗತ್ವವನ್ನು ಒಪ್ಪಬಹುದು. ಆದರೆ ಸ್ವಪ್ನದ್ರಷ್ಟೃತ್ವವು ವಿಶಿಷ್ಟನಲ್ಲಿಯೇ ಇರುವಂತಹುದು. ಅದನ್ನು ಈಶ್ವರನಲ್ಲಿ ಅಮುಖ್ಯವಾಗಿಯೂ ಹೇಳಲು ಬರುವುದಿಲ್ಲವಾದ್ದರಿಂದ ಜೀವನಲ್ಲಿಯೇ ಇದೆ ಎಂದು ಪೂರ್ವಪಕ್ಷಿಯು ನಿರ್ಧರಿಸಿದ್ದಾನೆ.

ಅರ್ಥಾತ್=ಅಸಂಗತ್ವ, ಸ್ವಪ್ನದ್ರಷ್ಟೃತ್ವಗಳೆಂಬ ವಿಶೇಷಣಗಳ ಅನ್ಯಥಾನುಪಪತ್ತಿಯಿಂದ ತಥಾ=ಜೀವೇಶ್ವರರು ಅಭಿನ್ನರೆಂದು ಗತಿಃ=ಅವವಗತಿಃ= ತಿಳಿಯುವುದು ಎಂದೂ ಪೂರ್ವಪಕ್ಷಯುಕ್ತಿಗೆ ಅರ್ಥವನ್ನು ಮಾಡಬಹುದಾಗಿದೆ. ಅಭೇದಸಿದ್ಧವಾಗುವುದರಿಂದ ಜೀವನೇ ಸ್ವಪ್ನದ್ರಷ್ಟೃ ಎಂದು ಪೂರ್ವಪಕ್ಷ.

## ಬ್ರಾಹ್ಮಣಾಧಿಕರಣ (1-3-14)

ಓಂ ಪತ್ಯಾದಿಶಬ್ದೇಭ್ಯಃ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ 'ಏಷ ನಿತ್ಯೋ ಮಹಿಮಾಬ್ರಾಹ್ಮಣಸ್ಯ' ಎಂಬಲ್ಲಿ ಉಕ್ತವಾದ ಬ್ರಾಹ್ಮಣಶಬ್ದವು ವಿಷಯ. ಅಜಶಬ್ದವಿರುವುದರಿಂದ ಬ್ರಾಹ್ಮಣಶಬ್ದವಾಚ್ಯನಾದವನು ಚತುರ್ಮುಖನೋ! ನಿತ್ಯಮಹಿಮತ್ವ ಲಿಂಗವಿರುವುದರಿಂದ ವಿಷ್ಣುವೋ? ಎಂದು ಸಂದೇಹ.

ನ್ಯಾಯಮಾಲೆಯಲ್ಲಿ ಹೇಳಲ್ಪಟ್ಟ ಈ ಅಧಿಕರಣದ ಪೂರ್ವಪಕ್ಷಯುಕ್ತಿ **'ಅರ್ಥಾತ್ ತಥಾಗತಿಃ'** ಎಂಬುದು. 'ಅರ್ಥಾತ್=ಶಬ್ದ, ಲಿಂಗಗಳ ಅನ್ಯಥಾನುಪಪತ್ತಿಯಿಂದ ತಥಾ=ವಿಷ್ಣು, ಚತುರ್ಮುಖರಲ್ಲಿ ಅಭೇದವು ಆಗತಿಃ=ಪ್ರಾಪ್ತವಾಗುವುದು' ಎಂದು ಅದರ ಅರ್ಥ. ಅದನ್ನು ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ—

**ಬ್ರಾಹ್ಮಣಶಬ್ದಸ್ಯ ಪಾಪಾಲೇಪಲಿಂಗಸ್ಯ ಚ ಚತುರ್ಮುಖಸ್ಯ ಸಹ ಪರಮಾತ್ಮನಾಽಭೇದಂ ವಿನಾಽವಕಾಶರಾಹಿತ್ಯಾದರ್ಥಾದಭೇದಪ್ರಾಪ್ತಿರಿತಿ ಸಮಸ್ತಮೇತತ್ ॥ ೧೪ ॥ ೧೨ ॥ ಪೂರ್ವಪಕ್ಷಃ ।**

**ಭಾವಾರ್ಥ**—ಬ್ರಾಹ್ಮಣ ಶಬ್ದ ಮತ್ತು ಪಾಪಲೇಪರಾಹಿತ್ಯ ಇವೆರಡು ಚತುರ್ಮುಖನಿಗೂ ವಿಷ್ಣುವಿಗೂ ಅಭೇದವನ್ನು ಹೇಳದಿದ್ದರೆ ಒಂದು ಕಡೆಯಲ್ಲಿ ಕೂಡುವುದಿಲ್ಲವಾದ್ದರಿಂದ ವಿಷ್ಣು ಚತುರ್ಮುಖರಲ್ಲಿ ಅಭೇದವು ಪ್ರಾಪ್ತವಾಗುತ್ತದೆ ಎಂಬುದು ಪೂರ್ವಪಕ್ಷಯುಕ್ತಿಯಾಗಿದೆ.

**ವಿವರಣೆ :** 'ಸ ನ ಸಾಧುನಾ ಕರ್ಮಣಾ ಭೂಯಾನ್ ನೋ ಸಾಧುನಾ ಕರ್ಮಣಾ ಕನೀಯಾನ್' ಎಂಬಲ್ಲಿ ಹೇಳಲ್ಪಟ್ಟ ಪಾಪಲೇಪರಾಹಿತ್ಯ ಮತ್ತು ಬ್ರಾಹ್ಮಣ ಶಬ್ದವು ಒಬ್ಬನಲ್ಲಿಯೇ ತೋರುತ್ತವೆ. ಚತುರ್ಮುಖನಿಗೂ ವಿಷ್ಣುವಿಗೂ ಅಭೇದವನ್ನು ಹೇಳಿದರೆ ಮಾತ್ರ ಇದು ಕೂಡುವುದರಿಂದ ಅಭೇದವು ಪ್ರಾಪ್ತವಾಗುತ್ತದೆ. ಇದನ್ನೇ 'ಅರ್ಥಾತ್‌ತಥಾಗತಿಃ' ಎಂಬ ಪದದಿಂದ ಸೂಚಿಸಿದ್ದಾರೆ.

ಇಲ್ಲಿ ಬ್ರಾಹ್ಮಣಶಬ್ದ ಮತ್ತು ಪಾಪಲೇಪರಾಹಿತ್ಯಗಳು ಒಬ್ಬರಲ್ಲಿಯೇ ಹೇಳಿರುವಿಕೆಯು ಉಪಪಾದಕ (ಆಕ್ಷೇಪಕ)ವಾಗಿದೆ. ಚತುರ್ಮುಖ ವಿಷ್ಣು ಇವರಿಬ್ಬರ ಅಭೇದವು ಉಪಪಾದ್ಯ(ಆಕ್ಷೇಪ್ಯ)ವಾಗಿದೆ ಎಂಬುದನ್ನು ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಎಲ್ಲವನ್ನೂ ಇಟ್ಟುಕೊಳ್ಳಬೇಕು ಎಂಬುದನ್ನು **'ಸಮಸ್ತಮೇತತ್'** ಎಂಬ ಪದದಿಂದ ತಿಳಿಸಿದ್ದಾರೆ.

ಮೂಲದಲ್ಲಿರುವ 'ಇತಿ ಸಮಸ್ತಮೇತತ್' ವಾಕ್ಯಕ್ಕೆ ಭಾವಬೋಧಕಾರರು ಬೇರೆ ರೀತಿಯಾದ ಅರ್ಥವನ್ನು ಹೇಳಿದ್ದಾರೆ. 'ಇತಿ' ಶಬ್ದಕ್ಕೆ ಆದಿ, ಮತ್ತು ಪ್ರಕಾರ ಎಂಬ ಎರಡರ್ಥಗಳನ್ನು ಇಟ್ಟುಕೊಂಡಾಗ 'ಇವೇ ಮೊದಲಾದ ಈರೀತಿಯಾದ ಹಿಂದಿನ ಅಧಿಕರಣಗಳಲ್ಲಿ ಹೇಳಿದ ಹತ್ತು ಲಿಂಗಗಳನ್ನೂ ಇಲ್ಲಿ ಹೇಳಬಹುದಾಗಿದೆ' ಎಂದರ್ಥವಾಗುತ್ತದೆ.

(1) ಉಕ್ತಸ್ಯ='ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ' ಎಂಬಲ್ಲಿ ಹೇಳಲ್ಪಟ್ಟ ಬ್ರಾಹ್ಮಣಶಬ್ದಕ್ಕೆ ವಿರೋಧಃ=ನಿತ್ಯಮಹಿಮತ್ವವೆಂಬ ಲಿಂಗದ ವಿರೋಧವಿರುವುದರಿಂದ ಚತುರ್ಮುಖ, ವಿಷ್ಣು ಇವರಿಬ್ಬರಲ್ಲಿ ಅಭೇದವನ್ನು ಒಪ್ಪಬೇಕು.

(2) ಬಹುತಾದ್ರೂಕ್ತ್ವಂ=ಬ್ರಾಹ್ಮಣ, ಅಜ ಮೊದಲಾದ ಶಬ್ದಗಳು, ನಿತ್ಯಮಹಿಮತ್ವ, ಪಾಪರಹಿತತ್ವ ಮೊದಲಾದ ಅನೇಕ ಲಿಂಗಗಳು ಇರುವುದರಿಂದ ಚತುರ್ಮುಖ, ವಿಷ್ಣು ಇವರಿಗೆ ಅಭೇದವನ್ನು ಒಪ್ಪಬೇಕು.

(3) ತಾದೃಗ್ದ್ವಯಂ=ಬ್ರಾಹ್ಮಣಶಬ್ದ ಮತ್ತು ಪಾಪರಹಿತತ್ವವೆಂಬ ಲಿಂಗವಿರುವುದರಿಂದ ಅಭೇದವನ್ನು ಒಪ್ಪಬೇಕು.

(4) ಲಿಂಗಾವಕಾಶರಾಹಿತ್ಯಭ್ರಮಃ=ಚತುರ್ಮುಖನಿಗೆ ಪರಮಾತ್ಮನೊಂದಿಗೆ ಅಭೇದವನ್ನೊಪ್ಪದಿದ್ದರೆ ಪಾಪರಹಿತತ್ವವೆಂಬ ಲಿಂಗಕ್ಕೆ ಅವಕಾಶವಿಲ್ಲವೆಂಬ ಪೂರ್ವಪಕ್ಷಿಯ ಭ್ರಮ.

(5) ವಿಪರೀತಶ್ರುತಿಭ್ರಮಃ=ವಿಷ್ಣುವಿನಲ್ಲಿ ವರ್ಣವಿಲ್ಲದಿರುವುದರಿಂದ ರೂಢಿವೃತ್ತಿಯಿಂದ ಬ್ರಾಹ್ಮಣಶಬ್ದಕ್ಕೆ ಅವಕಾಶವಿಲ್ಲ, ಮತ್ತು ಅಜ ಎಂದರೆ ವಿಷ್ಣುವಿನಿಂದ ಹುಟ್ಟಿದವನು ಎಂದರ್ಥ. ವಿಷ್ಣುವಿಗೆ ವಿಷ್ಣುಜಾತತ್ವವು ಕೂಡುವುದಿಲ್ಲವಾದ್ದರಿಂದ ಅಜಶಬ್ದಕ್ಕೆ ವಿಷ್ಣುವಿನಲ್ಲಿ ಎಂದು ಹೇಳುವುದರಿಂದ ವಿಪರೀತಶ್ರುತಿಭ್ರಮವಿದೆ. ಆದ್ದರಿಂದ ಅಭೇದವನ್ನು ಒಪ್ಪಬೇಕು.

(6) ಅನ್ವಯಾಭಾವಃ=ಐಕ್ಯವನ್ನು ಒಪ್ಪದಿದ್ದರೆ ವಿಷ್ಣು ವಿರಿಂಚರನ್ನು ಪ್ರತಿಪಾದನೆ ಮಾಡುವ ವಾಕ್ಯಕ್ಕೆ ಏಕಾರ್ಥಪ್ರತಿಪಾದಕತ್ವವೆಂಬ ಅನ್ವಯವು ಇರುವುದಿಲ್ಲ.

(7) ಅದೃಷ್ಟಿಃ=ಪಾಪರಹಿತತ್ವ, ನಿತ್ಯಮಹಿಮತ್ವವೆಂಬ ಲಿಂಗಗಳು ವಿಷ್ಣುವನ್ನು ಹೊರತುಪಡಿಸಿ ಇತರರಲ್ಲಿ ಕಾಣದಿರುವುದು. ಹಾಗೆಯೇ, ಬ್ರಾಹ್ಮಣ, ಅಜ ಮೊದಲಾದ ಶಬ್ದಗಳು ಚತುರ್ಮುಖನನ್ನು ಬಿಟ್ಟು ಬೇರೆಯವರಲ್ಲಿ ಕಾಣದಿರುವುದು ಅಭೇದಕ್ಕೆ ಸಾಧಕವಾಗಿದೆ.

(8) ವಿರುದ್ಧತಾ=ವಿಷ್ಣು, ವಿರಿಂಚರನ್ನು ಪ್ರತಿಪಾದಿಸುವ ಲಿಂಗ, ಶಬ್ದಗಳಲ್ಲಿ ವಿರೋಧವಿರುವುದರಿಂದ ಅಭೇದವನ್ನು ಒಪ್ಪಬೇಕು.

(9) ಅನುಕ್ತಿಃ=ವಿಷ್ಣು, ವಿರಿಂಚರಲ್ಲಿ ಭೇದವನ್ನು ಹೇಳದಿರುವುದರಿಂದ ಅಭೇದವು ಸಿದ್ಧವಾಗುವುದು.

(10) ಬಾಹುಲ್ಯಂ ಲಿಂಗಶಾಬ್ದಾನಾಂ=ವಿಷ್ಣು, ವಿರಿಂಚರಲ್ಲಿ ಅಭೇದವನ್ನು ಅಂಗೀಕರಿಸುವ ವಿಷಯದಲ್ಲಿ ಪಾಪರಹಿರತತ್ವ, ನಿತ್ಯಮಹಿಮತ್ವ ಮೊದಲಾದ ಬಹಳ ವಿಷ್ಣುಲಿಂಗಗಳು ಮತ್ತು ಬ್ರಾಹ್ಮಣ, ಅಜ ಮೊದಲಾದ ಅನೇಕ ವಿರಿಂಚವಾಚಕ ಶಬ್ದಗಳು ಪ್ರಮಾಣವಾಗಿವೆ.

ಹೀಗೆ ಈ ಪಾಪದ ಎಲ್ಲ ಅಧಿಕರಣಗಳ ಲಿಂಗಗಳನ್ನೂ ಈ ಅಧಿಕರಣ ಪೂರ್ವಪಕ್ಷಲಿಂಗಗಳನ್ನಾಗಿ ಸ್ವೀಕರಿಸಬಹುದು.

## ಸಿದ್ಧಾಂತ ಯುಕ್ತಿಗಳು

ತಾ ಏವ ಬಲವತ್ಯಸ್ತು ಗತ್ಯಂತರವಿವರ್ಜಿತಾಃ ।
ಸಿದ್ಧಾಂತಯುಕ್ತಯೋ ಜ್ಞೇಯಾ ದೃಶ್ಯಂತೇ ತಾಶ್ಚ ಸರ್ವಶಃ ॥

ಹಿಂದೆ ಹೇಳಿದ ಪೂರ್ವಪಕ್ಷಯುಕ್ತಿಗಳೇ ನಿರವಕಾಶಗಳಾಗಿ ಸಿದ್ಧಾಂತಯುಕ್ತಿಗಳಾಗುತ್ತವೆ ಎಂದು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಪೂರ್ವಪಕ್ಷಯುಕ್ತಿಗಳು ಸಿದ್ಧಾಂತಯುಕ್ತಿಗಳನ್ನಾಗಿ ವಿವರಿಸುತ್ತಿದ್ದಾರೆ.

# ದ್ಯುಭ್ವಾದ್ಯಧಿಕರಣ (1-3-1)

'ಬಾಹುಲ್ಯಂ ಲಿಂಗಶಬ್ದಾನಾಂ' (ಪ್ರಬಲವಾದ ಅನೇಕ ಲಿಂಗಶಬ್ದಗಳು ವಿಷ್ಣುವನ್ನೇ ಪ್ರತಿಪಾದಿಸುತ್ತಿವೆ) ಎಂಬ ಯುಕ್ತಿಯನ್ನು ಸಿದ್ಧಾಂತಪರವಾಗಿ ವ್ಯಾಖ್ಯಾನಿಸಿ ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ—

**ತೇಷಾಮೇವ ಲಿಂಗಶಬ್ದಾನಾಂ ''ಪ್ರಾಣಾನಾಂ ಗ್ರಂಥಿರಸಿ''. ಇತ್ಯಾದೀನಾಂ ವಿಷ್ಣೌ ಮುಖ್ಯವೃತ್ತಿರಿತಿ ಬಲವತ್ತ್ವಮ್। ತಸ್ಯ ಹಿ ರುಗ್ದ್ರಾವಣಾದಿಕರ್ತೃತ್ವಂ ಮುಖ್ಯಮ್ ॥ ೧ ॥**

**ಭಾವಾರ್ಥ**—'ಪ್ರಾಣಾನಾಂ ಗ್ರಂಥಿರಸಿ' ಎಂಬಲ್ಲಿ ಹೇಳಲ್ಪಟ್ಟ ಅಂತಕತ್ವ ಪ್ರಾಣೇಶ್ವರತ್ವ ಮೊದಲಾದ ಲಿಂಗಗಳಿಗೆ ಮತ್ತು ರುದ್ರ, ಕೃತ್ತಿವಾಸಸ್ ಮೊದಲಾದ ಶಬ್ದಗಳಿಗೆ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿಯಿರುವುದರಿಂದ ಪ್ರಬಲವಾಗಿವೆ. 'ರೋಗವನ್ನು ದೂರ ಓಡಿಸುವುದು' ಎಂಬ ರುದ್ರಶಬ್ದ ಪ್ರವತ್ತಿನಿಮಿತ್ತವು ವಿಷ್ಣುವಿನಲ್ಲಿಯೇ ಮುಖ್ಯವಾಗಿ ಕೂಡುತ್ತದೆಯೇ ಹೊರತು ರುದ್ರನಲ್ಲಿ ಅಲ್ಲ. ಆದ್ದರಿಂದ ದ್ಯುಭ್ವಾದ್ಯಾಯತ್ವವು ವಿಷ್ಣುವಿಗೇ ಎಂದು ಸಿದ್ಧವಾಗುತ್ತದೆ.

**ವಿವರಣೆ :** 'ಪ್ರಾಣಾನಾಂ ಗ್ರಂಥಿರಸಿ' ಎಂಬಲ್ಲಿ ಹೇಳಲ್ಪಟ್ಟ ಪ್ರಾಣ ಗ್ರಂಥಿತ್ವ

ಪ್ರಾಣೇಶ್ವರತ್ವ, ಲೋಕಾಯತನತ್ವ ಮೊದಲಾದ ಲಿಂಗಗಳು 'ಸರ್ವೇ ವಾ ಏತೇ ಪ್ರಾಣಾಶ್ಚ' ಎಂಬ ಶ್ರುತಿಯಲ್ಲಿ, 'ವಿಷ್ಣಾವೇವ ಓತಾಶ್ಚ ಪ್ರೋತಾಶ್ಚ' ಎಂಬುದಾಗಿ ವಿಷ್ಣುವಿನಲ್ಲಿಯೇ ಯುಕ್ತವಾಗುತ್ತವೆ ಎಂದು ಹೇಳಿದ್ದರಿಂದ ಪೂರ್ವೋಕ್ತಲಿಂಗಗಳಿಗೆ ರುದ್ರನಲ್ಲಿ ಅವಕಾಶವಿಲ್ಲವೆಂದು ತಿಳಿಯುತ್ತದೆ. ಅದರಂತೆ ಕಂಠದಲ್ಲಿ ವಿಷವನ್ನು ತುಂಬಿಕೊಂಡು ಅದನ್ನು ಪರಿಹರಿಸಿಕೊಳ್ಳಲಾಗದ ಶಿವನಲ್ಲಿ ರುದ್ರ (ರೋಗ ಪರಿಹಾರಕವೆಂಬ) ಶಬ್ದ, ವೃತ್ರಾಸುರನನ್ನು ಸಂಹರಿಸಲು ಅಶಕ್ತನಾದವನಲ್ಲಿ ಅಂತಕ (ಸರ್ವಸಂಹಾರಕ)ವೆಂಬ ಶಬ್ದಗಳೂ ಕೂಡುವುದಿಲ್ಲ. ಹಾಗೆಯೇ ರುದ್ರ, ಅಂತಕ ಶಬ್ದಗಳೊಂದಿಗೆ ಹೇಳಲ್ಪಟ್ಟ ಪಿನಾಕೀ, ಕೃತ್ತಿವಾಸಸ್ ಎಂಬ ಶಬ್ದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂದೇ ಹೇಳಬೇಕು. ಇಲ್ಲವಾದರೆ ವಾಕ್ಯಭೇದ ದೋಷವು ಬರುತ್ತದೆ. 'ಬ್ರಹ್ಮಚರ್ಮಶಿರಃ ಪಟ್ಟೀ' ಎಂಬ ವಾಸುದೇವಸಹಸ್ರನಾಮದಲ್ಲಿ ಕೃತ್ತಿವಾಸಸ್ (ಚರ್ಮಾಂಬರ)ವೆಂಬ ಶಬ್ದವನ್ನು ವಿಷ್ಣುವಿನಲ್ಲಿಯೇ ಪ್ರಯೋಗಿಸ ಲಾಗಿದೆ. 'ಪಿನಾಕೋಽಜಗವಂ ಧನುಃ' ಎಂಬ ಕೋಶದಂತೆ ಆಡು, ಹಸುಗಳ ಕೊಂಬುಗಳಿಂದ ಮಾಡಿದ ಧನುಸ್ಸು ಪಿನಾಕ. ಇದನ್ನು ಧರಿಸುವವನು ವಿಷ್ಣುವೇ ಹೊರತು ರುದ್ರನಲ್ಲ. ಆದ್ದರಿಂದ ಪಿನಾಕೀ ಶಬ್ದ ವಿಷ್ಣುವನ್ನು ಪ್ರತಿಪಾದಿಸುತ್ತದೆ. ಎಲ್ಲ ದೇವತೆಗಳ ನಾಮಗಳನ್ನು ಧರಿಸುವವನು ವಿಷ್ಣುವೇ (ಯೋ ದೇವಾನಾಂ ನಾಮಧಾ ಏಕ ಏವ) ಆದ್ದರಿಂದ ರುದ್ರಾದಿ ಸರ್ವನಾಮಗಳೂ ಅವನಲ್ಲಿಯೇ ಕೂಡುತ್ತವೆ. ಈ ಅಧಿಕರಣದಲ್ಲಿ ಪೂರ್ವಪಕ್ಷಿಯಿಂದ ಹೇಳಲ್ಪಟ್ಟ ಲಿಂಗಗಳು ಶಬ್ದಗಳು ರುದ್ರನಲ್ಲಿ ಬಹಳವಿದ್ದರೂ ನಿರವಕಾಶವಾದ ಅನೇಕ ಲಿಂಗಶಬ್ದಗಳು ವಿಷ್ಣುವಿನಲ್ಲಿರುವುದರಿಂದ ಸಿದ್ಧಾಂತಿಯ ಯುಕ್ತಿಗಳೇ ಪ್ರಬಲವಾಗಿವೆ.

ಇದರೊಂದಿಗೆ ನಿರವಕಾಶಗಳಾದ ಆತ್ಮಶಬ್ದ ಮುಕ್ತೋಪಸೃಪ್ಯತ್ವ ಮೊದಲಾದ ಲಿಂಗಗಳೂ ಇರುವುದರಿಂದ ಸಿದ್ಧಾಂತಯುಕ್ತಿಗಳು ಪ್ರಬಲವೆಂದು ಸುತರಾಂ ಸಿದ್ಧವಾಗುತ್ತವೆ.

**ಸೂತ್ರಾರ್ಥ—**

## ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ

ದ್ಯುಭ್ವಾದ್ಯಾಯತನಂ=ಸ್ವರ್ಗ, ಭೂಮಿ ಮುಂತಾದವುಗಳಿಗೆ ಆಶ್ರಯನು ವಿಷ್ಣುವೇ. ಏಕೆಂದರೆ ಸ್ವಶಬ್ದಾತ್=ಬ್ರಹ್ಮವಾಚಕವಾದ ಆತ್ಮಶಬ್ದವಿರುವುದರಿಂದ.

# ಭೂಮಾಧಿಕರಣ (1-3-2)

ಪೂರ್ವಪಕ್ಷಿ ಹೇಳಿದ 'ಅನುಕ್ತಿ' (ಪ್ರಾಣನನ್ನು ವಿಷ್ಣುವಿಗಿಂತ ಉತ್ತಮನೆಂದು ಎಲ್ಲಿಯೂ ಹೇಳದಿರುವುದು) ಎಂಬ ಭೂಮಾಧಿಕರಣದ ಲಿಂಗವನ್ನು ಸಿದ್ಧಾಂತ ಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ—

**ಪ್ರಾಣಸ್ಯ ವಿಷ್ಣೋಃ ಸಕಾಶಾದ್ಭೂಯಸ್ತ್ವಾನುಕ್ತಿಃ । ಚ ಶಬ್ದೇನ ''ಏಷ ತು ವಾ ಅತಿವದತಿ'' ಇತಿ ಪ್ರಾಣಾದ್ವಿಷ್ಣೋರ್ಭೂಯಸ್ತ್ವೋಕ್ತಿಶ್ಚ ।**

**ಭಾವಾರ್ಥ**—ಪ್ರಾಣನಿಗೆ ವಿಷ್ಣುವಿಗಿಂತ ಶ್ರೇಷ್ಠತ್ವವನ್ನು ಹೇಳಲಿಲ್ಲ. ಮತ್ತು 'ಅನುಕ್ತಿಶ್ಚ' ಎಂಬಲ್ಲಿರುವ 'ಚ'ಶಬ್ದದಿಂದ 'ಏಷ ತು ವಾ ಅತಿ ವದತಿ ಯಃ ಸತ್ಯೇನಾತಿವದತಿ' ಎಂಬ ಶ್ರುತಿಯನ್ನು ಗ್ರಹಿಸಬೇಕು. ಈ ಶ್ರುತಿಯಲ್ಲಿ ವಿಷ್ಣುವನ್ನೇ ಪ್ರಾಣನಿಗಿಂತ ಶ್ರೇಷ್ಠನೆಂದು ಹೇಳಿದ್ದರಿಂದ ವಿಷ್ಣುವೇ ಭೂಮಶಬ್ದ ವಾಚ್ಯನೆಂದು ಸಿದ್ಧವಾಗುತ್ತದೆ.

**ವಿವರಣೆ :** 'ಪ್ರಾಣೋ ವಾ ಆಶಾಯಾ ಭೂಯಾನ್' ಪ್ರಾಣನು ಉಷೆಗಿಂತ ಶ್ರೇಷ್ಠನೆಂಬುದಾಗಿ ಆರಂಭಿಸಿ ಭಾರತಿಗಿಂತ ಉತ್ತಮನೆಂದು ಹೇಳಿದ್ದಾರೆಯೇ ಹೊರತು ವಿಷ್ಣುವಿಗಿಂತ ಉತ್ತಮನೆಂದು ಹೇಳಲಿಲ್ಲ. ಆದ್ದರಿಂದ 'ಅನುಕ್ತಿ' ಎಂದು ವಿಷ್ಣುವಿಗಿಂತ ಪ್ರಾಣನಿಗೆ ಉತ್ತಮತ್ವವನ್ನು ಹೇಳದಿರುವಿಕೆಯೇ ಸಿದ್ಧಾಂತಯುಕ್ತಿಯಾಗಿದೆ. ಮತ್ತು ಪೂರ್ಣಸುಖತ್ವವೂ ನಿರವಕಾಶವಾಗಿ ವಿಷ್ಣುವಿಗೇ ಕೂಡುವುದರಿಂದ ಭೂಮಶಬ್ದವಾಚ್ಯನು ವಿಷ್ಣುವೇ.

ಈ ಪ್ರಕರಣದಲ್ಲಿ ಮಾತ್ರವಲ್ಲದೆ ಎಲ್ಲಿಯೂ ಪ್ರಾಣನಿಗೆ ವಿಷ್ಣುವಿಗಿಂತ ಉತ್ತಮತ್ವವನ್ನು ಹೇಳಲಿಲ್ಲವಾದ್ದರಿಂದ ಪ್ರಾಣನಿಗೆ ವಿಷ್ಣುವಿಗಿಂತ ಉತ್ತಮತ್ವವು ಸಿದ್ಧಿಸಲಾರದು. 'ಅನುಕ್ತಂ ಪಂಚಭಿರ್ವೇದೈಃ ನ ವಸ್ತ್ವಸ್ತಿ ಕುತಶ್ಚನ' (ನಾಲ್ಕು ವೇದ ಮತ್ತು ಮಹಾಭಾರತದಲ್ಲಿ ಹೇಳದಿರುವ ವಿಷಯವೇ ಇಲ್ಲ) ಎಂದು ಹೇಳಿದ್ದರಿಂದ. ಆದರೆ ವಿಷ್ಣುವಿಗೆ ಪ್ರಾಣನಿಗಿಂತ ಉತ್ತಮತ್ವವು 'ಏಷ ತು ವಾ ಅತಿವದಿತಿ ಯಃ ಸತ್ಯೇನಾತಿವದತಿ' ಎಂಬ ಶ್ರುತಿಯಿಂದ ಸಿದ್ಧವಾಗುತ್ತದೆ. ಆದ್ದರಿಂದ ವಿಷ್ಣುವೇ ಭೂಮಶಬ್ದವಾಚ್ಯನು.

**ಸೂತ್ರಾರ್ಥ—**

**ಓಂ ಭೂಮಾ ಸಂಪ್ರಸಾದಾದಧ್ಯುಪದೇಶಾತ್ ಓಂ**

ಭೂಮಾ=ಭೂಮಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ಸಂಪ್ರಸಾದಾತ್= ಪೂರ್ಣಸುಖರೂಪತ್ವವನ್ನು ಹೇಳಿದ್ದರಿಂದ ಅಧ್ಯುಪದೇಶಾತ್=ನಾಮಾದಿ ದೇವತೆ ಗಳಿಗಿಂತ ಉತ್ತಮನೆಂದು ಹೇಳಲ್ಪಟ್ಟಿದ್ದರಿಂದ.

## ಅಕ್ಷರಾಧಿಕರಣ (1-3-3)

'ವಿರುದ್ಧತಾ' (ಪಕೃತ್ಯಾಧಾರತ್ವ ವಿಷ್ಣುವಿಗಿಂತ ಇತರರಿಗೆ ವಿರುದ್ಧ) ಎಂಬ ಪೂರ್ವಪಕ್ಷದ ಯುಕ್ತಿಯನ್ನು ಸಿದ್ಧಾಂತಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ—

**ಸರ್ವಾಧಾರಪ್ರಕೃತ್ಯಾಧಾರತ್ವಂ, ವಿಷ್ಣೋರನ್ಯಸ್ಯ ವಿರುದ್ಧಮ್ । 'ಪತಿಂ ವಿಶ್ವಸ್ಯಾತ್ಮೇಶ್ವರಂ', ''ವಿಶ್ವಾತ್ಮಾನಂ ಪರಾಯಣಮ್'' ಇತ್ಯಾದಿಶ್ರುತೇಃ । ಅನಶನತ್ವೋಕ್ತಿಸ್ತ್ವನುಪಜೀವನಾರ್ಥತ್ವೇನೈವ ಸಾವಕಾಶಾ ॥ ೩ ॥**

**ಭಾವಾರ್ಥ—**ಸರ್ವಾಧಾರವಾದ ಪ್ರಕೃತಿಗೆ ಆಶ್ರಯತ್ವವು ವಿಷ್ಣುವನ್ನು ಬಿಟ್ಟು ಬೇರೆಯವರಿಗೆ ವಿರುದ್ಧವು. 'ಪತಿಂ ವಿಶ್ವಸ್ಯಾತ್ಮೇಶ್ವರಂ' 'ವಿಶ್ವಾತ್ಮಾನಂ ಪರಾಯಣಂ' ಮುಂತಾದ ಶ್ರುತಿಯಿಂದ ವಿಷ್ಣುವಿಗೇ ಸರ್ವಾಧಾರತ್ವವು ಶ್ರುತವಾಗಿದೆ. ಪೂರ್ವಪಕ್ಷದಲ್ಲಿ ಹೇಳಿದ ಅನಶನವು ವಿಷ್ಣು ಯಾವ ಭೋಗವನ್ನೂ ಉಪಜೀವಿಸಿಕೊಂಡಿರುವುದಿಲ್ಲ ಎಂಬ ಅರ್ಥದಲ್ಲಿರುವುದರಿಂದ ಅನಶನೋಕ್ತಿಯೂ ವಿಷ್ಣುವಿನಲ್ಲಿ ಸಾವಕಾಶವಾಗಿದೆ. ಆದ್ದರಿಂದ ಅಕ್ಷರಶಬ್ದವಾಚ್ಯನು ವಿಷ್ಣುವೇ.

**ವಿವರಣೆ :** 'ಯದ್ ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಆಕಾಶ ಏವ ತದೋತಂ ಪ್ರೋತಂ ಚ' ಎಂಬುದಾಗಿ ಶ್ರುತಿಯಲ್ಲಿ ಆಕಾಶಶಬ್ದವಾಚ್ಯವಾದ ಪ್ರಕೃತಿಗೆ ಸರ್ವಾಧಾರತ್ವವನ್ನೂ ಹೇಳಿ 'ಏತಸ್ಮಿನ್ ಖಲ್ವಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ' ಎಂಬುದಾಗಿ ಆ ಸರ್ವಾಧಾರವಾದ ಪ್ರಕೃತಿಗೆ ಆಶ್ರಯವಾದದ್ದು ಅಕ್ಷರವೆಂದು ಹೇಳಲ್ಪಟ್ಟಿದೆ. ಸರ್ವಾಧಾರವಾದ ಪ್ರಕೃತಿಗೆ ಆಶ್ರಯತ್ವವು ವಿಷ್ಣುವಿಗಲ್ಲದೆ ಬೇರೆಯವರಿಗೆ ಕೂಡುವುದಿಲ್ಲ. ಆದ್ದರಿಂದ ಅಕ್ಷರನು ವಿಷ್ಣುವೇ

ಆಗಬೇಕು. ಸರ್ವಾಶ್ರಯತ್ವವು ವಿಷ್ಣುವಿಗೇ ಎಂಬ ವಿಷಯದಲ್ಲಿ 'ಪತಿಂ ವಿಶ್ವಸ್ಯಾತ್ಮೇಶ್ವರಂ' (ಎಲ್ಲರನ್ನೂ ಪಾಲಿಸುವುದರಿಂದ, ಲಕ್ಷ್ಮೀ ಮೊದಲಾದ ಚೇತನರಿಗೆ ನಿಯಾಮಕನಾದ್ದರಿಂದ ಎಲ್ಲರಿಗೂ ಆಶ್ರಯನು) 'ವಿಶ್ವಾತ್ಮಾನಂ ಪರಾಯಣಂ' (ಈ ಶ್ರುತಿಯೂ ಸರ್ವಾಶ್ರಯನೆಂಬ ಪೂರ್ವೋಕ್ತವಾದ ಅರ್ಥ ವನ್ನೇ ಹೇಳುತ್ತದೆ) ಶ್ರುತಿಗಳೇ ಪ್ರಮಾಣವಾಗಿವೆ.

'ಅತ್ತಾ ಚರಾಚರಗ್ರಹಣಾತ್' ಎಂಬಲ್ಲಿ ವಿಷ್ಣುವಿಗೆ ಸರ್ವಾತ್ತೃತ್ವವನ್ನು (ಸರ್ವ ಅಶನವನ್ನು) ಹೇಳಿದ್ದಾರೆ. 'ನ ತದಶ್ನಾತಿ ಕಿಂಚನ' ಎಂದು ಈ ಪ್ರಕರಣದಲ್ಲಿ ಹೇಳಿದ ಅನಶನವು ವಿರುದ್ಧವಾಗುತ್ತದೆ ಎಂದು ಹೇಳಿದ ಪೂರ್ವಪಕ್ಷಿಯ ಯುಕ್ತಿಯು ಸಾವಕಾಶವಾಗಿದೆ. ಇಲ್ಲಿ ಅನಶನ ಶಬ್ದಕ್ಕೆ ಭೋಗಗಳನ್ನು ಉಪಜೀವಿಸಿಕೊಳ್ಳ ದಿರುವುದು ಎಂದರ್ಥ. ಆದ್ದರಿಂದ ವಿರೋಧವಿಲ್ಲ. ಆದ್ದರಿಂದ ವಿಷ್ಣುವೇ ಅಕ್ಷರಶಬ್ದವಾಚ್ಯನೆಂದು ಹೇಳುವುದಕ್ಕೆ ಯಾವುದೇ ಬಾಧಕವಿಲ್ಲ.

**ಸೂತ್ರಾರ್ಥ—**

**ಓಂ ಅಕ್ಷರಮಂಬರಾಂತಧೃತೇಃ ಓಂ**

ಅಕ್ಷರಂ=ಅಕ್ಷರಶಬ್ದವಾಚ್ಯನು ವಿಷ್ಣುವೇ. ಏಕೆಂದರೆ ಅಂಬರಾಂತಧೃತೇಃ= ಲಕ್ಷ್ಮಿಯವರೆಗಿನ ಎಲ್ಲ ಪದಾರ್ಥವನ್ನು ಧರಿಸಿದವನು ಅವನೇ ಎಂದು ಶ್ರುತವಾದ್ದರಿಂದ.

## ಸದಧಿಕರಣ (1-3-4)

**'ಅದೃಷ್ಟಿ'** (ಜಡಕ್ಕೆ ಈಕ್ಷಣ ಕಾಣದಿರಬಹುದು)ಯೆಂಬ ಯುಕ್ತಿಯನ್ನು ಸಿದ್ಧಾಂತ ಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ–

**ಅಚೇತನಸ್ಯೇಕ್ಷಣಾದೃಷ್ಟಿಃ। ಬಹುಭಾವಶ್ರುತಿಸ್ತ್ವನ್ಯಭಾವಂ ವಿನಾ ತತ್ತನ್ನಿಯಾಮಕತಯಾ ಸ್ವರೂಪಬಹುತ್ವಾರ್ಥತ್ವೇನೈವ ಯುಜ್ಯತೇ ॥ ೪ ॥**

**ಭಾವಾರ್ಥ—**'ತದೈಕ್ಷತ' ಎಂಬಲ್ಲಿ ಹೇಳಲ್ಪಟ್ಟ ಈ ಕ್ಷಣವು ಅಚೇತನಕ್ಕೆ (ಪ್ರಕೃತಿಗೆ) ಎಲ್ಲಿಯೂ ಕಂಡಿಲ್ಲ. ಮತ್ತು 'ಬಹು ಸ್ಯಾಂ ಪ್ರಜಾಯೇಯ' ಎಂಬಲ್ಲಿ

ಹೇಳಲಾದ ಬಹುಭಾವವು ವಿಷ್ಣುವಿಗೆ ಪರಿಣಾಮವು ಇಲ್ಲದಿದ್ದರೂ ವಿಕಾರಗೊಂಡ ಆಯಾಯಾ ವಸ್ತುಗಳಿಗೆ ನಿಯಾಮಕಗಳಾದ ಭಗವಂತನ ರೂಪಗಳಿಗೆ ಬಹುತ್ವವಿರುವುದರಿಂದ ಬಹುಭಾವವು ಕೂಡುತ್ತದೆ.

**ವಿವರಣೆ**—ಈಕ್ಷಣವು 'ನಾನ್ಯೋಽತೋಽಸ್ತಿ ದ್ರಷ್ಟಾ' ಎಂಬ ಶ್ರುತಿಯಿರುವುದರಿಂದ ಪರಮಾತ್ಮನಿಗೇ ಉಪಪನ್ನವಾಗುತ್ತದೆ. ಸತ್‌ಶಬ್ದವಾಚ್ಯವಾದದಕ್ಕೆ 'ಬಹುಸ್ಯಾಂ ಪ್ರಜಾಯೇಯ' ಎಂಬ ಶ್ರುತಿಯಲ್ಲಿ ಬಹುಭಾವವನ್ನು ಹೇಳಿದ್ದಾರೆ. ಅದು ನಿರ್ವಿಕಾರಿಯಾದ ವಿಷ್ಣುವಿಗೆ ಕೂಡುವುದಿಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯವಾಗಿತ್ತು. ಆದರೆ ವಿಕಾರವನ್ನು ಹೊಂದುವ ಅನೇಕ ವಸ್ತುಗಳಲ್ಲಿ ಭಗವಂತನು ಅನೇಕರೂಪಗಳಿಂದ ನಿಯಾಮಕನಾಗಿರುವುದರಿಂದ ಬಹುಭಾವವು ವಿಷ್ಣುವಿಗೆ ಕೂಡುತ್ತದೆ. ಈ ವಿಷಯದಲ್ಲಿ 'ಅಜಾಯಮಾನೋ ಬಹುಧಾ ವಿಜಾಯತೇ' ಎಂಬ ಶ್ರುತಿಯೇ ಆಧಾರ. ಆದ್ದರಿಂದ ಸತ್‌ಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

ಪೂರ್ವಪಕ್ಷದಲ್ಲಿ 'ಅದೃಷ್ಟಿಃ' ಚೇತನಕ್ಕೆ ವಿಕಾರವು ಎಲ್ಲಿಯೂ ಕಂಡಿಲ್ಲವೆಂಬ ಅರ್ಥದಲ್ಲಿ ಬಳಸಿಕೊಳ್ಳಲಾಗಿತ್ತು. ಸಿದ್ಧಾಂತದಲ್ಲಿ 'ಅದೃಷ್ಟಿಃ' ಜಡಕ್ಕೆ ಈ ಕ್ಷಣವು ಎಲ್ಲಿಯೂ ಕಂಡಿಲ್ಲವೆಂಬ ಅರ್ಥದಲ್ಲಿ ಬಳಸಿದ್ದಾರೆ.

**ಸೂತ್ರಾರ್ಥ—**

**ಓಂ ಈಕ್ಷತಿ ಕರ್ಮವ್ಯಪದೇಶಾತ್ ಸಃ ಓಂ**

ಸಃ=ಸತ್ ಶಬ್ದವಾಚ್ಯನು ವಿಷ್ಣುವೇ. ಈಕ್ಷತಿಕರ್ಮವ್ಯಪದೇಶಾತ್=ಈಕ್ಷಣ ಎಂಬ ಕ್ರಿಯೆಯನ್ನು ಹೇಳಿದ್ದರಿಂದ.

## ದಹರಾಧಿಕರಣ (1-3-5)

**'ಅನ್ವಯಾಭಾವಃ'** (ಆಕಾಶವನ್ನು ಸ್ವೀಕರಿಸಿದರೇ ಅನ್ವಯ ಕೂಡುವುದಿಲ್ಲ) ಎಂದು ಹೇಳಿದ ಯುಕ್ತಿಯನ್ನು ಸಿದ್ಧಾಂತಪರವಾಗಿ ಅರ್ಥೈಸುತ್ತಿದ್ದಾರೆ—

**ಆಕಾಶಪಕ್ಷ ಏವಾನ್ವಯಾಭಾವಃ । ವಿಷ್ಣುಪಕ್ಷೇ ತು, ಯೋಽನ್ವೇಷ್ಟವ್ಯೋ**

**ಭಗವಾನ್, ತಸ್ಯಾಂತರ್ಹೃದಯೇ ಯಾವಾನ್ವಾಽಯಮಾಕಾಶ-ಸ್ತಾವಾನಾಕಾಶಃ, ತಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ, ಸ ಭಗವಾನಪಹತಪಾಪ್ಮೇತ್ಯನ್ವಯಃ ॥ ೫ ॥**

**ಭಾವಾರ್ಥ**—'ಬ್ರಹ್ಮಪುರೇ ದಹರಂ ಪುಂಡರೀಕಂ ದಹರೋಽಸ್ಮಿನ್ನಂತರ ಆಕಾಶಃ' ಎಂಬಲ್ಲಿ ಹೇಳಲ್ಪಟ್ಟ ಆಕಾಶವು ಭೂತಾಕಾಶವೆಂದಿಟ್ಟುಕೊಂಡರೇನೇ ಅನ್ವಯವು ಕೂಡುವುದಿಲ್ಲ. ಆದರೆ ವಿಷ್ಣುವೆಂದಿಟ್ಟುಕೊಂಡರೆ, 'ಯೋಽನ್ವೇಷ್ಟವ್ಯೋ ಭಗವಾನ್ ತಸ್ಯಾಂತರ್ಹೃದಯೇ ಯಾವಾನ್ವಾಽಯಮಾಕಾಶಸ್ತಾವಾನಾಕಾಶಃ' (ಯಾವ ಪರಮಾತ್ಮನನ್ನು ಹುಡುಕಬೇಕೋ ಅವನು, ಬಹಿಃಸ್ಥಿತನಾದ ಪರಮಾತ್ಮನಲ್ಲಿ ಯಾವ ರೂಪ, ಗುಣ, ಪರಿಮಾಣಗಳಿವೆಯೋ ಅದೇ ರೂಪ ಗುಣ, ಪರಿಮಾಣ ಗಳುಳ್ಳವನಾಗಿ ಜೀವಿಯ ಹೃದಯದೊಳಗಿದ್ದಾನೆ) 'ತಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ ಸ ಚ ಭಗವಾನಪಹತಪಾಪ್ಮಾ' (ಸ್ವರ್ಗ ಭೂಮಿ ಅಭಿಮಾನಿಯಾದ ದೇವತೆಗಳು ಯಾವ ಆಕಾಶಶಬ್ದವಾಚ್ಯನಾದ ಪರಮಾತ್ಮನಲ್ಲಿ ಆಶ್ರಿತರಾಗಿದ್ದಾರೋ ಅವನು ಪಾಪರಹಿತನಾಗಿದ್ದಾನೆ) ಎಂಬ ವಾಕ್ಯಗಳ ಅನ್ವಯವು ಕೂಡುತ್ತದೆ.

**ವಿವರಣೆ**— ಈ ಶರೀರದಲ್ಲಿರುವ ಅಲ್ಪವಾದ ಪದ್ಮರೂಪ ಸನದಲ್ಲಿದಲ್ಲಿರುವ ಅಲ್ಪವಾದ ದಹರ (ಅಲ್ಪವಾದ) ಆಕಾಶದಲ್ಲಿರುವುದನ್ನು ಉಪಾಸನೆ ಮಾಡಬೇಕು ಎಂದು ಹೇಳಿದಾಗ 'ಕಿಂ ತದತ್ರ ವಿದ್ಯತೇ' (ಅಲ್ಪ ಆಕಾಶದಲ್ಲಿ ಏನಿದೆ?) ಎಂದು ಶಿಷ್ಯನು ಪ್ರಶ್ನಿಸಿದಾಗ 'ಯಾವಾನ್ ವಾಽಯಮಾಕಾಶಃ' ಎಂದು ಉತ್ತರಿಸುವುದು ಸರಿಯಾಗುವುದಿಲ್ಲ. ಏಕೆಂದರೆ ಅಲ್ಪವಾದ ಆಕಾಶದಲ್ಲಿ ವ್ಯಾಪ್ತವಾದ ಆಕಾಶವು ಇರಲು ಸಾಧ್ಯವೇ ಇಲ್ಲ. ಆದ್ದರಿಂದ ಭೂತಾಕಾಶವೆಂದು ಹೇಳಲು ಸಾಧ್ಯವಿಲ್ಲ. ಆದರೆ ವಿಷ್ಣುವೆಂದಿಟ್ಟುಕೊಂಡರೆ ಮೇಲೆ ಹೇಳಿದಂತೆ ಎಲ್ಲ ವಾಕ್ಯಗಳ ಅನ್ವಯವು ಅಪಹತಪಾಪ್ಮತ್ವ (ಪಾಪರಹಿತತ್ವವೆಂಬ) ವಿಶೇಷದ ಅನ್ವಯವೂ ಕೂಡುತ್ತದೆ.

'ಕಿಂ ತದತ್ರ ವಿದ್ಯತೇ' ಎಂಬ ಶಿಷ್ಯನ ಪ್ರಶ್ನೆಗೆ 'ಬ್ರಹ್ಮ ವಿದ್ಯತೇ' ಎಂದು ಉತ್ತರಕೊಟ್ಟಿದ್ದರೆ ವಿಷ್ಣುವೆಂದು ಒಪ್ಪಬಹುದಿತ್ತು ಎಂಬ ಪೂರ್ವಪಕ್ಷಿಯ ಆಕ್ಷೇಪಕ್ಕೆ ಏನು ಉತ್ತರ? ಎಂದರೆ, 'ಬ್ರಹ್ಮ ವಿದ್ಯತೇ' ಎಂದು ಉತ್ತರವನ್ನು ಹೇಳದಿದ್ದರೂ

'ಬ್ರಹ್ಮಪುರೇ' ಎಂದು 'ವಿಷ್ಣುವಿನ ಪಟ್ಟಣವೆ'ಂದು ಹೇಳಿದ್ದರಿಂದಲೇ ವಿಷ್ಣುವೆಂದು ಸಿದ್ಧವಾಗುತ್ತದೆ. ಹಾಗಾದರೆ 'ಕಿಂ ತದತ್ರ ವಿದ್ಯತೇ' ಎಂದು ಏಕೆ ಪ್ರಶ್ನಿಸುತ್ತಾನೆ ಎಂದರೆ 'ಒಳಗಿರುವುದು ಯಾವುದು' ಎಂದು ಈ ಪ್ರಶ್ನೆಯ ಅಭಿಪ್ರಾಯವಲ್ಲ. ಒಳಗಿರುವ ವಸ್ತುವಿನ ಸ್ವರೂಪವೆಂತದ್ದು ಎಂಬುದಾಗಿ ಧರ್ಮಗಳ ಬಗ್ಗೆ ಪ್ರಶ್ನೆಯಾಗಿದೆ. ಅದಕ್ಕೆ ಉತ್ತರವಾಗಿ 'ಯಾವಾನ್ ವಾಽಯಮಾಕಾಶಃ' ಮೊದಲಾದ ಮಾತುಗಳು ಹೊರಟಿವೆ. ಆದ್ದರಿಂದ 'ಬ್ರಹ್ಮಪುರೇ' ಎಂಬ ಪದದ ಅನ್ವಯವು ಆಕಾಶಪಕ್ಷಕ್ಕೆ ಕೂಡುವುದಿಲ್ಲ. ವಿಷ್ಣುವಿಗೇ ಕೂಡುತ್ತವೆ. ಅದರಂತೆ, ನಾಸ್ಯ ಜರಯೈತಜ್ಜೀರ್ಯತೇ ನ ವಧೇನಾಸ್ಯ ಹನ್ಯತೇ' (ಜೀವನ ಮುಪ್ಪಿನಿಂದ ವಿಷ್ಣು ಮುದುಕನಾಗುವುದಿಲ್ಲ. ಜೀವನ ಸಂಹಾರದಿಂದ ವಿಷ್ಣುವು ವಧ್ಯನಾಗುವುದಿಲ್ಲ) ಮೊದಲಾದ ವಾಕ್ಯಗಳ ಅನ್ವಯವೂ ಆಕಾಶಕ್ಕೆ ಕೂಡುವುದಿಲ್ಲ. ವಿಷ್ಣುವಿಗೆ ಕೂಡುತ್ತವೆ. ಆದ್ದರಿಂದ ಹೃತ್ಪದ್ಮಸ್ಥನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

'ಬ್ರಹ್ಮಪುರೇ ದಹರಂ ಪುಂಡರೀಕಂ...' ಇತ್ಯಾದಿಯಾದ ಶ್ರುತಿಗೆ ಸಿದ್ಧಾಂತ ರೀತ್ಯಾ ಈರೀತಿಯಾದ ಭಾವವಿದೆ– 'ಪರಬ್ರಹ್ಮನಿಗೆ ಆಧಾರವಾದ ಈ ಶರೀರದಲ್ಲಿ ಅಲ್ಪವಾದ ಪದ್ಮರೂಪಸದನವಿದೆ. ಅದರೊಳಗೆ ಅಲ್ಪವಾದ ಭೂತಾಕಾಶವಿದೆ. ಅದರೊಳಗೆ ಯಾವುದಿದೆಯೋ ಅದನ್ನು ಜಿಜ್ಞಾಸೆ ಮಾಡಬೇಕು' ಎಂದು ಗುರುಗಳು ಹೇಳಿದಾಗ ಶಿಷ್ಯರು ಕೇಳುತ್ತಾರೆ— 'ಈ ಶರೀರದಲ್ಲಿರುವ ಅಲ್ಪವಾದ ಪದ್ಮಸದನದಲ್ಲಿರುವ ಅಲ್ಪವಾದ ಭೂತಾಕಾಶದಲ್ಲಿ ಜಿಜ್ಞಾಸ್ಯವೆಂದು ಹೇಳಲ್ಪಟ್ಟಿರುವ ವಸ್ತುವಿನ ಸ್ವರೂಪವೇನು?' ಇದಕ್ಕುತ್ತರವಾಗಿ ಗುರುಗಳು— 'ಬಹಿಃಸ್ಥಿತನಾದ ಆಕಾಶಾಖ್ಯ ಭಗವಂತನು ಗುಣತಃ ಪರಿಮಾಣತಃ ಎಷ್ಟಿರುವನೋ ಅಷ್ಟೇ ಇರುವ ಆಕಾಶಾಖ್ಯ ಭಗವಂತನು ಹೃತ್ಪದ್ಮಗತವಾದ ಭೂತಾಕಾಶದಲ್ಲೂ ದ್ಯಾವಾಪೃಥಿ ವ್ಯಾಪ್ಯಾಶ್ರಯನಾಗಿ ನೆಲೆಸಿರುವನು' ಎಂದು.

**ಸೂತ್ರಾರ್ಥ—**

## ಓಂ ದಹರ ಉತ್ತರೇಭ್ಯಃ ಓಂ

ದಹರೇ=ಹೃತ್ಪದ್ಮದ ಅಲ್ಪವಾದ ಆಕಾಶದಲ್ಲಿರುವುದು ವಿಷ್ಣುವೇ. ಏಕೆಂದರೆ, ಉತ್ತರೇಭ್ಯಃ=ಮುಂದಿನ ವಾಕ್ಯಗಳಲ್ಲಿ ಹೇಳಲ್ಪಟ್ಟ ಅಪಹತಪಾಪ್ಮತ್ವಾದಿ ಧರ್ಮಗಳಿಂದ.

# ಅನುಕೃತ್ಯಧಿಕರಣ (1-3-6)

'ವಿಪರೀತಶ್ರುತಿಭ್ರಮಃ' (ಪೂರ್ವಪಕ್ಷಿಗೆ ಅನನುಕೂಲವಾದ ಶ್ರುತಿಯನ್ನು ಅನುಕೂಲವೆಂದು ಭ್ರಮಿಸಿರುವುದು) ಎಂದು ಹೇಳಿದ ಯುಕ್ತಿಯನ್ನು ಸಿದ್ಧಾಂತ ಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ—

**ಯಜ್ಜ್ಞಾನಾಚ್ಛಾಶ್ವತಂ ಸುಖಂ ಸ ಭಗವಾನ್ ಯದ್ಬ್ರಹ್ಮಾನಿರ್ದೇಶ್ಯಂ ಸುಖಮಿತಿ ವದಂತಿ ತದೇತತ್ಸ್ವರೂಪಮಿತಿ ಮನ್ಯಂತೇ। ಅತಃ ಪೂರ್ವವಾದವಿಪರೀತೈವ ಶ್ರುತಿಃ। ಪೂರ್ವವಾದೋಕ್ತಯೋಜನಾ ತು ಭ್ರಮ ಏವ ॥ ೬ ॥**

**ಭಾವಾರ್ಥ**—'ತದೇತದಿತಿ ಮನ್ಯಂತೇ' ಎಂಬಲ್ಲಿರುವ ತತ್‌ಶಬ್ದದಿಂದ ವಿಷ್ಣುವನ್ನೇ ಗ್ರಹಣಮಾಡಬೇಕೇ ಹೊರತು ಜ್ಞಾನಿಸುಖವನ್ನಲ್ಲ. 'ಯಾರ ಜ್ಞಾನದಿಂದ ಶಾಶ್ವತವಾದ ಸುಖವು ಲಭಿಸುವುದೋ ಅವನೇ ಭಗವಂತ. ಯಾವ ಬ್ರಹ್ಮನನ್ನು ಅನಿರ್ದೇಶ್ಯಸುಖವೆನ್ನುವರೋ ಆ ಸುಖವನ್ನು ಪರಮಾತ್ಮನ ಸ್ವರೂಪವೆಂದು ತಿಳಿಯುತ್ತಾರೆ'. ಈ ರೀತಿಯಾಗಿ ಅನ್ವಯವನ್ನು ಮಾಡುವುದರಿಂದ 'ತದೇತದಿತಿ ಮನ್ಯಂತೇ' ಎಂಬ ಶ್ರುತಿಯು ಪೂರ್ವಪಕ್ಷಕ್ಕೆ ಬಾಧಕವೇ ಆಗಿದೆ. ಪೂರ್ವಪಕ್ಷಿಯು ತೋರಿಸಿದ ಯೋಜನೆಯಾದರೂ ಭ್ರಾಂತಿಮೂಲಕವೇ ಆಗಿದೆ.

**ವಿವರಣೆ**— 'ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಂ ಸುಖಂ' ಎಂಬ ಶ್ರುತಿಗೆ 'ಯಜ್ಜ್ಞಾನಾತ್ ಶಾಶ್ವತಂ ಸುಖಂ ಸ ಭಗವಾನ್ ಬ್ರಹ್ಮ ಅನಿರ್ದೇಶ್ಯಂ ಪರಮಂ ಸುಖಮಿತಿ ವದಂತಿ ತದೇತತ್ ಸ್ವರೂಪಸುಖಮಿತಿ ಮನ್ಯಂತೇ' ಎಂಬುದಾಗಿ ಅನ್ವಯವನ್ನು ಮಾಡುವುದರಿಂದ ತತ್ ಶಬ್ದವಾಚ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹೊರತು ಜ್ಞಾನಿಸುಖವಲ್ಲ, ಏಕೆಂದರೆ, 'ತಮೇವ ಭಾಂತಮನುಭಾತಿ ಸರ್ವಂ' (ಸ್ವಯಂ ಪ್ರಕಾಶಮಾನನಾದ ಪರಮಾತ್ಮನನ್ನು ಆಧರಿಸಿ ಎಲ್ಲವೂ ಪ್ರಕಾಶಿಸುತ್ತದೆ.) ಎಂಬ ಶ್ರುತಿಯ ಅನ್ವಯವೂ ಕೂಡುತ್ತದೆ. ಜ್ಞಾನಿಸುಖದ ಪ್ರಕಾಶವನ್ನು ಅನುಸರಿಸಿ ಯಾವುದೂ ಪ್ರಕಾಶಮಾನವಾಗುವುದಿಲ್ಲವಷ್ಟೇ!

**ಸೂತ್ರಾರ್ಥ—**

### ಓಂ ಅನುಕೃತೇಸ್ತಸ್ಯ ಚ ಓಂ

'ಕಥಂ ನು ತದ್ವಿಜಾನೀಯಾಂ' ಎಂಬ ಶ್ರುತಿಯಲ್ಲಿ ಜ್ಞಾನಕ್ಕಾಗಿ ಪ್ರಾರ್ಥಿಸಲ್ಪಟ್ಟವನು ಬ್ರಹ್ಮ. ಏಕೆಂದರೆ, ಅನುಕೃತೇಃ=ಸೂರ್ಯಾದಿಗಳ ಪ್ರಕಾಶನ ಶಕ್ತಿಯು ಭಗವಂತನ ಅಧೀನವೆಂದು ಶ್ರುತವಾದ್ದರಿಂದ. ತಸ್ಯ ಚ='ತಸ್ಯ ಭಾಸಾ ಸರ್ವಮಿದಂ ವಿಭಾತಿ' ಎಂಬ ಶ್ರುತಿ ಇರುವುದರಿಂದ.

## ವಾಮನಾಧಿಕರಣ (1-3-7)

**'ಲಿಂಗಾವಕಾಶರಾಹಿತ್ಯಭ್ರಮಃ'** (ಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶ ವಿಲ್ಲವೆಂಬುದೇ ಭ್ರಮೆ)ಎಂಬ ಯುಕ್ತಿಯನ್ನು ಸಿದ್ಧಾಂತಪರವಾಗಿ ಅರ್ಥೈಸು ತ್ತಿದ್ದಾರೆ—

**ಲಿಂಗಾನಾಂ ಪರಮಾತ್ಮನ್ಯವಕಾಶೋ ವಿದ್ಯತ ಏವೇತಿ ತದ್ರಾಹಿತ್ಯಂ ಭ್ರಮ ಏವ । ವಾಮನಶ್ರುತೇರೇವಾನವಕಾಶ ಇತಿ ಈಶಾನಶಬ್ದೋಕ್ತೋ ವಿಷ್ಣುರೇವ ॥ ೭ ॥**

**ಭಾವಾರ್ಥ—**'ಊರ್ಧ್ವಂ ಪ್ರಾಣಮುನ್ನಯತಿ' ಎಂಬ ಶ್ರುತಿಯಲ್ಲಿ ಹೇಳಿದ ಪ್ರಾಣವ್ಯವಸ್ಥಾಪಕತ್ವ ಸರ್ವದೇವೋಪಾಸ್ಯತ್ವ ಮೊದಲಾದ ಲಿಂಗಗಳಿಗೆ ಪರಮಾತ್ಮನಲ್ಲಿ ಅವಕಾಶವಿದ್ದೇ ಇದೆ. ಅವಕಾಶವಿಲ್ಲವೆಂದು ತಿಳಿಯುವುದೇ ಭ್ರಮೆ. ವಾಮನಶ್ರುತಿಗೆ ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಅವಕಾಶವಿಲ್ಲ. ಆದ್ದರಿಂದ ಈಶಾನ ಶಬ್ದದಿಂದ ವಾಚ್ಯನು ವಿಷ್ಣುವೇ.

**ವಿವರಣೆ—** 'ಲೀನಂ ಗಮಯತಿ ಇತಿ ಲಿಂಗಂ' ಲೀನನಾದ ವಿಷ್ಣುವನ್ನು ತಿಳಿಸಿಕೊಡುವ ವಾಮನಶಬ್ದವೇ ಲಿಂಗ. ಅದಕ್ಕೆ ವಿಷ್ಣುವಿನಲ್ಲಿ ಅವಕಾಶವು ಕಾಣದಿರುವುದು ಭ್ರಮವೆಂಬ ಅರ್ಥದಲ್ಲಿ 'ಲಿಂಗರಾಹಿತ್ಯಭ್ರಮ' ಅನ್ವರ್ಥ ವಾಗಿದೆ.

**ಸೂತ್ರಾರ್ಥ—**

**ಓಂ ಶಬ್ದಾದೇವ ಪ್ರಮಿತಃ ಓಂ**

ಶಬ್ದಾದೇವ=ಮುಂದಿನ ವಾಕ್ಯದಲ್ಲಿರುವ ವಾಮನಶಬ್ದದಿಂದಲೇ ಪ್ರಮಿತಃ= ಈಶಾನಶಬ್ದವಾಚ್ಯನಾದವನು ವಿಷ್ಣುವೇ ಎಂದು ಪ್ರಮಾಣಸಿದ್ಧವಾಗಿದ್ದಾನೆ.

## ಕಂಪನಾಧಿಕರಣ (1-3-8)

**'ತಾದೃಗ್‍ದ್ವಯಂ'** (ಲಿಂಗ, ಶಬ್ದಗಳೆರಡೂ ವಿಷ್ಣುವಿನಲ್ಲಿ ಅವಕಾಶವನ್ನು ಹೊಂದಿವೆ) ಎಂಬ ಯುಕ್ತಿಯನ್ನು ಸಿದ್ಧಾಂತವಾಗಿ ವಿವರಿಸುತ್ತಿದ್ದಾರೆ—

**ವಜ್ರಶಬ್ದಸ್ಯೋದ್ಯತತ್ವಸ್ಯ ಚ ವಿಷ್ಣಾವೇವಾವಕಾಶಃ । ಉದ್ಯಮಿತ್ವ-ಮೇವೋದ್ಯತತ್ವಮಿತಿ ॥ ೧೦ ॥ ೮ ॥**

**ಭಾವಾರ್ಥ—**ವಜ್ರಶಬ್ದ ಮತ್ತು ಉದ್ಯತತ್ವವೆಂಬ ಲಿಂಗ ಇವೆರಡಕ್ಕೂ ವಿಷ್ಣುವಿನಲ್ಲಿಯೇ ಅವಕಾಶ. ವಿಷ್ಣುವನ್ನು ಬಿಟ್ಟು ಬೇರೆಯವರಲ್ಲಿ ಅವಕಾಶವಿಲ್ಲ. ಇಲ್ಲಿ ಉದ್ಯತತ್ವವೆಂದರೆ ಉದ್ಯಮತ್ವ (ಚೇಷ್ಟಕತ್ವ) ಅದು ವಿಷ್ಣುವಿನಲ್ಲಿಯೇ ಕೂಡುತ್ತದೆ.

**ವಿವರಣೆ—** 'ದೋಷಾನ್ ವರ್ಜಯತೀತಿ ವಜ್ರಃ' (ಜಾಡ್ಯ ಮೊದಲಾದ ದೋಷಗಳು ಓಡಿಸುವವನು) ಎಂಬ ವಜ್ರಶಬ್ದಕ್ಕೆ ವಿಷ್ಣುವಿನಲ್ಲಿಯೇ ಅವಕಾಶ. ಅದರಂತೆ ಉದ್ಯತತ್ವವೆಂದರೆ ಉದ್ಯಮತ್ವ. ಉದ್ಯಮತ್ವವೆಂದರೆ ಚೇಷ್ಟಕತ್ವ. 'ಕೋ ಹ್ಯೇವಾನ್ಯಾತ್ (ಪರಮಾತ್ಮನಿಲ್ಲದೆ ಯಾರು ತಾನೆ ಪ್ರವೃತ್ತಿ ಮಾಡುತ್ತಾರೆ?) ಎಂಬ ಶ್ರುತಿಯಿಂದ ಚೇಷ್ಟಕತ್ವವು ಪರಮಾತ್ಮನಲ್ಲಿಯೇ ಸಿದ್ಧವಾಗಿದೆ. ಆದ್ದರಿಂದ ವಜ್ರಶಬ್ದವಾಚ್ಯನಾದವನು ವಿಷ್ಣುವೇ.

**ಸೂತ್ರಾರ್ಥ—**

**ಓಂ ಕಂಪನಾತ್ ಓಂ**

ಕಂಪನಾತ್=ಜಗತ್ತಿನ ಚೇಷ್ಟಕನು ವಿಷ್ಣುವೇ ಆದ್ದರಿಂದ 'ಮಹದ್ ಭಯಂ ವಜ್ರಮುದ್ಯತಂ' ಎಂಬಲ್ಲಿರುವ ವಜ್ರಶಬ್ದವಾಚ್ಯನು ವಿಷ್ಣುವೇ

# ಜ್ಯೋತಿರಧಿಕರಣ (1-3-10)

ಬಹುತಾದ್ಯಕ್ತ್ವ(ನಿರವಕಾಶವಾದ ಬಹುಲಿಂಗಗಳು ವಿಷ್ಣುವಿನಲ್ಲಿಯೇ ಕೂಡುತ್ತವೆ)ವೆಂಬ ಯುಕ್ತಿಯನ್ನು ಸಿದ್ಧಾಂತ ಪರವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ—

**''ಅಯಂ ಪುರುಷಃ'' ಇತಿ ಸಂಸಾರೀ । ಆತ್ಮಶಬ್ದೋದಿತ ಏವ ವಿಷ್ಣುಃ । ಅತ ಆದಿತ್ಯಾದಿಜ್ಯೋತಿಷ್ಟ್ವಂ ಸಂಸಾರಿಣ ಏವ । ''ಆದಿತ್ಯೇನೈವ'' ಇತ್ಯವಧಾರಣಂ ಬಾಹ್ಯಜ್ಯೋತಿಷ್ಟು ಪ್ರಾಧಾನ್ಯಾಪೇಕ್ಷಯೇತ್ಯಾದಿ । ಲೋಕಸಂಚರಣಂ ತು ಜೀವಮಾದಾಯ ತಸ್ಯೈವಾದುಃಖೇನ ಸ್ವಾತಂತ್ರ್ಯಾತ್ ॥ ೧೧ ॥**

**ಭಾವಾರ್ಥ**—'ಕಿಂಜ್ಯೋತಿರಯಂ ಪುರುಷಃ' ಎಂಬ ವಾಕ್ಯದಲ್ಲಿ 'ಅಯಂ' ಎಂಬುದು ಹೇಳಲ್ಪಟ್ಟವನು ಸಂಸಾರಿಜೀವನಾಗಿದ್ದಾನೆ. 'ಆತ್ಮೈವಾಸ್ಯ ಜ್ಯೋತಿಃ' ಎಂಬ ವಾಕ್ಯದಲ್ಲಿ ಆತ್ಮಶಬ್ದದಿಂದ ಹೇಳಲ್ಪಟ್ಟವನು ಪರಮಾತ್ಮನು. ಆದ್ದರಿಂದ ಆದಿತ್ಯಾದಿಜ್ಯೋತಿಷ್ಟ್ವವು ಸಂಸಾರಿಜೀವನಿಗೆ ಹೇಳಲಾಗಿದೆ. 'ಆದಿತ್ಯೇನೈವ ಜ್ಯೋತಿಃ' ಎಂಬಲ್ಲಿರುವ ಏವಕಾರವು (ಅವಧಾರಣವು) ಹೊರಗಿನ ಜ್ಯೋತಿಗಳಲ್ಲಿ ಆದಿತ್ಯನಿಗೆ ಪ್ರಾಧಾನ್ಯವಿರುವುದರಿಂದ ಕೂಡುತ್ತದೆ. ಭೂ ಸ್ವರ್ಗಾದಿಲೋಕ ಸಂಚರಣವೂ ಪರಮಾತ್ಮನಲ್ಲಿಯೇ ಕೂಡುತ್ತದೆ. ಏಕೆಂದರೆ, ಸ್ವತಂತ್ರನಾದ್ದರಿಂದ ದುಃಖಾದಿಗಳ ಸಂಬಂಧವಿಲ್ಲದೆ ಜೀವನನ್ನು ಹಿಡಿದುಕೊಂಡೇ ಸಂಚಾರಿಸುವುದರಿಂದ.

**ವಿವರಣೆ**— 'ಹೃದ್ಯಂತರ್ಜ್ಯೋತಿಃ' ಎಂಬಲ್ಲಿ 'ಜ್ಯೋತಿಃ' ಶಬ್ದವು ವಿಷ್ಣುವನ್ನೇ ಹೇಳುತ್ತದೆ. ಹಾಗಾದರೆ 'ಕಿಂ ಜ್ಯೋತಿರಯಂ ಪುರುಷಃ' ಎಂಬ ಪ್ರಶ್ನೆಯು ಯಾರ ಬಗ್ಗೆ? ಇಲ್ಲಿರುವ 'ಅಯಂ' ಶಬ್ದದಿಂದ ಯಾರನ್ನು ಸ್ವೀಕರಿಸಬೇಕು? ಎಂದರೆ, ಸಂಸಾರಿ ಜೀವನನ್ನು ಸ್ವೀಕರಿಸಬೇಕು. ಈ ಪ್ರಶ್ನೆಯೂ ಅವನ ಕುರಿತೇ ಆಗಿದೆ. ಮುಂದೆ ಉತ್ತರ ರೂಪವಾಗಿ ಹೇಳಿದ ಆದಿತ್ಯಾದಿ ಜ್ಯೋತಿಷ್ಟ್ವವೂ ಸಂಸಾರಿ ಜೀವನಿಗೇ ಕೂಡುತ್ತದೆ. ಹೊರತು ಮುಕ್ತಾತ್ಮನಿಗಲ್ಲ. 'ನ ತದ್ ಭಾಸಯತೇ

ಸೂರ್ಯಃ ನ ಶಶಾಂಕೋ ನ ಪಾವಕಃ' (ಆ ಪರಮಾತ್ಮನ ಲೋಕವನ್ನು ಅಥವಾ ಸ್ವರೂಪವನ್ನು ಸೂರ್ಯನೂ ಚಂದ್ರನೂ ಅಗ್ನಿಯೂ ಬೆಳಗಿಸಲಾರರು) ಎಂಬ ವಾಕ್ಯದ ವಿರೋಧವು ಬರುತ್ತದೆ.

ಈ ಸಂಸಾರಿಜೀವನಿಗೆ ವಾಗಾದಿಗಳು ಶಾಂತವಾದಾಗ (ನಿದ್ರೆಯಲ್ಲಿದ್ದಾಗ) 'ಆತ್ಮೈವಾಸ್ಯ ಜ್ಯೋತಿಃ' ಎಂದು ಪ್ರಸ್ತುತವಾಗಿದೆ. 'ಕತಮ ಆತ್ಮಾ' (ಆ ಆತ್ಮನು ಯಾರು?) ಎಂದಾಗ 'ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತ ರ್ಜ್ಯೋತಿಃ' ಎಂದು ಹೇಳಿದ್ದರಿಂದ 'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿ 'ಅಸ್ಯ' ಎಂಬ ಶಬ್ದಕ್ಕೆ ಜೀವಾತ್ಮನೆಂದರ್ಥ. 'ಆತ್ಮಾ' ಶಬ್ದಕ್ಕೆ ಪರಮಾತ್ಮನೆಂಬ ಅರ್ಥವನ್ನು ನಿರವಕಾಶವಾಗಿ ಮಾಡಬಹುದು.

'ಆತ್ಮೈವಾಸ್ಯ ಜ್ಯೋತಿಃ' ಎಂಬಲ್ಲಿರುವ ಆತ್ಮಶಬ್ದಕ್ಕೆ ವಿಷ್ಣುವೆಂದು ಅರ್ಥ ಮಾಡಿದರೆ ವಿಷ್ಣುವೆಂಬ ಜ್ಯೋತಿ ಅಸ್ತಂಗತನಾಗುವುದಿಲ್ಲವಾದ್ದರಿಂದ 'ಆದಿತ್ಯೇನೈವ ಜ್ಯೋತಿಷಾ' ಎಂಬ ಏವಕಾರವು (ಅವಧಾರಣವು) ಕೂಡುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಬಾಹ್ಯ ಜ್ಯೋತಿಸ್ಸುಗಳಲ್ಲಿ ಆದಿತ್ಯಾದಿಗಳಿಗೆ ಪ್ರಾಧಾನ್ಯವನ್ನು ಇಟ್ಟುಕೊಂಡು ಹೇಳಿದ್ದೇ ಹೊರತು ವಿಷ್ಣುವನ್ನು ವ್ಯಾವೃತ್ತಿಗೊಳಿಸಲಿಲ್ಲ. ಈ ಅರ್ಥವನ್ನು ಪೂರ್ವಪಕ್ಷಿಯೂ ಒಪ್ಪಲೇಬೇಕು. ಮುಂದೆ ವಾಗಾದಿಗಳನ್ನು ಜ್ಯೋತಿಸ್ಸು ಎಂದು ಹೇಳಿರುವಾಗ ಹೇಗೆ ಅವಧಾರಣವು ಕೂಡುತ್ತದೆ ಎಂಬ ಪ್ರಶ್ನೆಯು ಅವರಿಗೂ ಬರುತ್ತದೆ.

'ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ' ಎಂಬಲ್ಲಿ ಹೇಳಿರುವ ಸಂಚಾರವು ಹುಟ್ಟು ಸಾವುಗಳಿಲ್ಲದ ಕರ್ಮಬಂಧನವಿಲ್ಲದ ಜೀವನಿಗೆ ಹೇಗೆ ಕೂಡುತ್ತದೆ? ಎಂದರೆ 'ಪ್ರಾಜ್ಞೇನಾತ್ಮನಾ ಅನ್ವಾರೂಢ ಉತ್ಸರ್ಜದ್ ಯಾತಿ' (ಪ್ರಾಜ್ಞನಾಮಕ ಪರಮಾತ್ಮನಿಂದ ಕೂಡಿಕೊಂಡು ಹಿಂದಿನ ದೇಹವನ್ನು ಬಿಟ್ಟು ಹೋಗುತ್ತಾನೆ) ಎಂಬ ಶ್ರುತಿಯಿಂದ ಪರಮಾತ್ಮನಿಗೂ ಭೂಮಿ ಸ್ವರ್ಗ ಮೊದಲಾದ ಲೋಕಸಂಚಾರವು ಯುಕ್ತವಾಗಿದೆ. ಇಲ್ಲವಾದರೆ 'ಸ ಸಮಾನಃ ಸನ್' ಎಂಬಲ್ಲಿ ಹೇಳಿರುವ ಸಮಾನತ್ವ (ನಿರ್ವಿಕಾರತ್ವ) ಬೇರೆಯವರಿಗೆ ಕೂಡಲಾರದು.

'ಆತ್ಮಶಬ್ದ, ಜ್ಯೋತಿಃಶಬ್ದ (ಸದಾಪ್ರಕಾಶಮಾನತ್ವ)ಗಳು ಅಸ್ತಂಗತರಾಗುವ ಆದಿತ್ಯಾದಿಗಳಲ್ಲಿ ಕೂಡುವುದಿಲ್ಲ. ಯಾವ ಕಾಲದಲ್ಲಿಯೂ ಅಸ್ತಂಗತನಾಗದ

ವಿಷ್ಣುವಿನಲ್ಲಿಯೇ ಮುಖ್ಯವಾಗಿ ಕೂಡುತ್ತವೆ. ಹೀಗೆ ಬಹುತಾದೃಕ್ತ್ವ ಲಿಂಗವು ವಿಷ್ಣುವಿನಲ್ಲೇ ಕೂಡುವುದರಿಂದ ಜ್ಯೋತಿಃ ಶಬ್ದವಾಚ್ಯನು ವಿಷ್ಣುವೇ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಜ್ಯೋತಿರ್ದರ್ಶನಾತ್ ಓಂ**

ದರ್ಶನಾತ್='ವಿಷ್ಣುರೇವ ಜ್ಯೋತಿಃ, ವಿಷ್ಣುರೇವ ಬ್ರಹ್ಮ' ಎಂದು ಶ್ರುತಿಯಿರುವುದರಿಂದ ಜ್ಯೋತಿಃ=ಜ್ಯೋತಿಶ್ಶಬ್ದವಾಚ್ಯನಾದವನು ವಿಷ್ಣುವೇ.

## ಆಕಾಶಾಧಿಕರಣ (1-3-12)

'ಉಕ್ತಸ್ಯ ವಿರೋಧಃ' (ಈ ಪ್ರಕರಣದಲ್ಲಿಯೇ ಹೇಳಲ್ಪಟ್ಟ ನಾಮರೂಪ ರಹಿತತ್ವದ ವಿರೋಧ) ಎಂಬ ನ್ಯಾಯವನ್ನು ಸಿದ್ಧಾಂತಪರವಾಗಿ ವ್ಯಾಖ್ಯಾನಿಸು ತ್ತಿದ್ದಾರೆ—

**'ವೈ ನಾಮ' ಇತಿ ನಿರ್ವಹಿತೃತ್ವೇ ಶ್ರುತ್ಯಾದಿಪ್ರಸಿದ್ಧಿಬಾಹುಲ್ಯಮ್, ಪ್ರಸಿದ್ಧಾಕಾಶಸ್ಯೋಕ್ತಮನಾಮರೂಪತ್ವಂ ವಿರುದ್ಧಮ್ ॥ ೧೨ ॥**

**ಭಾವಾರ್ಥ—**'ವೈ, ನಾಮ'ವೆಂಬ ನಿಪಾತಗಳು 'ಶ್ರೀಹರಿಯು ನಾಮರೂಪ ಗಳನ್ನು ನಿರ್ವಹಿಸುತ್ತಾನೆ' ಎಂಬ ವಿಷಯದಲ್ಲಿ 'ಏಕೋ ದಧಾರ ಭುವನಾನಿ ವಿಶ್ವಾ' ಮುಂತಾದ ಶ್ರುತಿಪ್ರಸಿದ್ಧಿಯನ್ನು ತಿಳಿಸುತ್ತವೆ. ಇಲ್ಲಿ ಪ್ರಸಿದ್ಧವಾದ ಭೂತಾಕಾಶವನ್ನು ಇಟ್ಟುಕೊಂಡರೆ 'ತೇ ಯದಂತರಾ ತದ್ ಬ್ರಹ್ಮ' ಎಂಬಲ್ಲಿ ಉಕ್ತವಾದ ನಾಮರೂಪರಹಿತತ್ವವು ವಿರುದ್ಧವಾಗುತ್ತದೆ.

**ವಿವರಣೆ—** 'ಆಕಾಶೋ ವೈ ನಾಮರೂಪಯೋರ್ನಿರ್ವಹಿತಾ (ಆಕಾಶನಾಮಕ ನಾದ ಭಗವಂತನು ನಾಮರೂಪಗಳನ್ನು ನಿರ್ವಹಿಸುತ್ತಾನೆ) ಎಂಬಲ್ಲಿ ಹೇಳಿದ 'ವೈ, ನಾಮ'ವೆಂಬ ನಿಪಾತಗಳು ವಿಷ್ಣುವಿಗೆ ನಾಮರೂಪಗಳ ನಿರ್ವಹಣೆಗೆ ಶ್ರುತಿ ಪ್ರಸಿದ್ಧಿಯನ್ನು ತಿಳಿಸುತ್ತವೆ. ಭೂತಾಕಾಶವನ್ನು ಇಟ್ಟುಕೊಂಡರೆ 'ತೇ ಯದಂತರಾ ತದ್ ಬ್ರಹ್ಮ' (ನಾಮರೂಪ ರಹಿತವಾದದ್ದು ಯಾವುದೋ ಅದೇ ಬ್ರಹ್ಮ. ಅದೇ

ಆಕಾಶ) ಎಂಬ ಶ್ರುತಿಯ ವಿರೋಧವು ಬರುತ್ತದೆ. ಮತ್ತು ಬ್ರಹ್ಮ ಶಬ್ದದ ವಿರೋಧವೂ ಬರುತ್ತದೆ.

ಆಕಾಶ ಶಬ್ದವಾಚ್ಯನು ವಿಷ್ಣುವೆಂದಿಟ್ಟುಕೊಂಡರೂ ವಿರೋಧವು (ನಾಮರೂಪ ನಿರ್ವಹಿತೃತ್ವ ನಾಮರೂಪ ರಹಿತತ್ವಗಳ ವಿರೋಧವು) ಬರುತ್ತದಲ್ಲ? ಎಂದರೆ 'ಅನಾಮಾಽಪ್ರಸಿದ್ಧತ್ವಾದರೂಪೋ ಭೂತವರ್ಜನಾತ್। ವಿರುದ್ಧಧರ್ಮ ರೂಪೋಽಸಾವೈಶ್ವರ್ಯಾತ್ ಪುರುಷೋತ್ತಮಃ॥ (ಶಬ್ದಾದಿ ಪ್ರಮಾಣಗಳಿಂದ ಸಾಕಲ್ಯೇನ ಅಗೋಚರನಾದ್ದರಿಂದ ನಾಮರಹಿತನಾಗಿದ್ದಾನೆ. ಭೌತಿಕದೇಹ ಅಥವಾ ಭೌತಿಕರೂಪವಿಲ್ಲದಿರುವುದರಿಂದ ರೂಪರಹಿತನಾಗಿದ್ದಾನೆ. ನಾಮರೂಪವತ್ವ ನಾಮರೂಪರಹಿತತ್ವಗಳು ವಿರುದ್ಧವಾದರೂ ಐಶ್ವರ್ಯವಿರುವುದರಿಂದ ಪುರುಷೋತ್ತಮನಾದ ಹರಿಯಲ್ಲಿ ಕೂಡುತ್ತವೆ) ಎಂಬ ಪ್ರಮಾಣಾನುಸಾರ ವಿಷ್ಣುವಿಗೆ ವಿರುದ್ಧವಲ್ಲ. ಆದರೆ ಭೂತಾಕಾಶಕ್ಕೆ ವಿರುದ್ಧವಾಗುತ್ತದೆ. ಆದ್ದರಿಂದ ಆಕಾಶಶಬ್ದವಾಚ್ಯನಾದವನು ವಿಷ್ಣುವೇ.

**ಸೂತ್ರಾರ್ಥ—**

**ಓಂ ಆಕಾಶೋಽರ್ಥಾಂತರಾದಿವ್ಯಪದೇಶಾತ್ ಓಂ**

ಅರ್ಥಾಂತರತ್ವಾದಿವ್ಯಪದೇಶಾತ್='ತೇಯಿದಂತರಾ...' ಎಂಬ ಶ್ರುತಿಯು ಭಗವಂತನನ್ನು ನಾಮರೂಪಗಳಿಲ್ಲದವನು ಹಾಗೂ ಬ್ರಹ್ಮತ್ವ, ಅಮೃತತ್ವಾದಿ ಧರ್ಮಗಳುಳ್ಳವನೆಂದು ಪ್ರತಿಪಾದಿಸಿರುವುದರಿಂದ ಆಕಾಶಃ=ಆಕಾಶಶಬ್ದವಾಚ್ಯನು ವಿಷ್ಣುವೇ.

## ಸುಷುಪ್ತ್ಯಧಿಕರಣ (1-3-13)

**'ಅರ್ಥಾತ್ ತಥಾಗತಿಃ'** (ಶ್ರುತಿ ಮತ್ತು ಯುಕ್ತಿ ಬಲದಿಂದ ಜೀವೇಶ್ವರರಲ್ಲಿ ಭೇದವೇ ಪ್ರಾಪ್ತವಾಗುವುದು) ಎಂಬ ನ್ಯಾಯವನ್ನು ಸಿದ್ಧಾಂತಪರವಾಗಿ ಅರ್ಥೈಸುತ್ತಿದ್ದಾರೆ—

**ಸುಷುಪ್ತ್ಯುತ್ಕ್ರಾಂತ್ಯೋರ್ಜೀವೇಶ್ವರಯೋರ್ಭೇದೋಕ್ತೇರಸಂಗತ್ವಾದಿ**

**ಚೇಶ್ವರಸ್ಯೈವೇತ್ಯರ್ಥಾದ್ಭೇದ ಏವ ಭವತಿ । ಜೀವಸ್ಯ ತದಯುಕ್ತೇರೀಶೇ ಸಾವಕಾಶತ್ವಾಚ್ಚ ॥ ೧೩ ॥**

**ಭಾವಾರ್ಥ—**ಸುಷುಪ್ತಿ ಮತ್ತು ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವ-ಈಶ್ವರರಲ್ಲಿ ಭೇದವನ್ನೇ ಹೇಳಿದ್ದರಿಂದ ಅಸಂಗಿತ್ವ ಸ್ವಪ್ನಾದ್ರಷ್ಟೃತ್ವ ಮುಂತಾದವುಗಳು ವಿಷ್ಣುವಿಗೇನೇ ಕೂಡುವುದರಿಂದ ಅರ್ಥಾತ್ ಜೀವೇಶ್ವರರಲ್ಲಿ ಭೇದವೇ ಸಿದ್ಧವಾಗುತ್ತದೆ. ಅಸಂಗಿತ್ವ ಸ್ವಪ್ನದ್ರಷ್ಟೃತ್ವಗಳು ಜೀವನಲ್ಲಿ ಕೂಡುವುದಿಲ್ಲ ಹೊರತು ಪರಮಾತ್ಮನಲ್ಲಿ ಅವಕಾಶವನ್ನು ಹೊಂದಿವೆ.

**ವಿವರಣೆ—** 'ಪ್ರಾಜ್ಞೇನಾऽತ್ಮಾನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ' (ಪ್ರಾಜ್ಞನಾಮಕ ಪರಮಾತ್ಮನಿಂದ ಆಲಿಂಗಿತನಾಗಿ ಸ್ವಪ್ನಕಾಲದಲ್ಲಿ ಜೀವನು ಹೊರಗಿನ ಒಳಗಿನ ಯಾವ ವಿಷಯವನ್ನೂ ತಿಳಿಯುವುದಿಲ್ಲ) ಮತ್ತು 'ಪ್ರಾಜ್ಞೇನಾತ್ಮಾನಾऽನ್ವಾರೂಢ ಉದ್ಯತ್ಸರ್ಜದ್ಯಾತಿ' (ಜೀವನು ಪ್ರಾಜ್ಞನನ್ನು ಹೊತ್ತುಕೊಂಡು ಆಯಾ ದೇಹಗಳನ್ನು ಬಿಟ್ಟು ತೆರಳುತ್ತಾನೆ) ಹೀಗೆ ಭೇದವನ್ನು ಹೇಳಿದ್ದರಿಂದ ಅಸಂಗತ್ವವು ಜೀವನಿಗೆ ಬರುವುದಿಲ್ಲ. 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯಿರುವುದರಿಂದ ಅಸಂಗತ್ವವು ವಿಷ್ಣುವಿಗೆ ಕೂಡುತ್ತದೆ. ಪರಮಾತ್ಮನು ಸರ್ವಜ್ಞನಾದ್ದರಿಂದ ಸ್ವಪ್ನದ್ರಷ್ಟೃತ್ವವೂ ಅವನಿಗೆ ಕೂಡುತ್ತದೆ.

**ಸೂತ್ರಾರ್ಥ—**

## ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ

ಸುಷುಪ್ತ್ಯುತ್ಕ್ರಾಂತ್ಯೋಃ=ಸುಷುಪ್ತಿ ಮತ್ತು ಉತ್ಕ್ರಾಂತಿ ಪ್ರಕರಣಗಳಲ್ಲಿ ಭೇದೇನ=ಜೀವ, ಈಶ್ವರರಲ್ಲಿ ಭೇದವನ್ನು ಹೇಳಿದ್ದರಿಂದ ಸ್ವಪ್ನಾದ್ರಷ್ಟೃ ಪರಮಾತ್ಮನೇ.

## ಬ್ರಾಹ್ಮಣಾಧಿಕರಣ (1-3-14)

**'ಅರ್ಥಾತ್ ತಥಾಗತಿಃ'** (ಬ್ರಾಹ್ಮಣಶಬ್ದ, ಅಜ ಶಬ್ದಗಳು ವಿಷ್ಣುವಿನಲ್ಲಿಯೇ ಕೂಡುವುದರಿಂದ ಭೇದವು ಪ್ರಾಪ್ತವಾಗುವುದು) ಎಂಬ ನ್ಯಾಯವನ್ನು ಸಿದ್ಧಾಂತಪರವಾಗಿ ಅರ್ಥೈಸುತ್ತಿದ್ದಾರೆ—

**ಬ್ರಹ್ಮಣಾ ವೇದೇನ ಗಮ್ಯತ ಇತಿ ''ಬ್ರಾಹ್ಮಣ'' ಶಬ್ದೋ ವಿಷ್ಣಾವೇವ ಯುಜ್ಯತ ಇತ್ಯರ್ಥಾದಜಶಬ್ದೋಽಪಿ ತಸ್ಮಿನ್ನೇವ । ಚತುರ್ಮುಖಸ್ಯ ಕರ್ಮಫಲಾಭಾವಾಯುಕ್ತೇಸ್ತಯೋರ್ಭೇದೋಽರ್ಥಾದಾಪದ್ಯತ ಏವ । ಉಕ್ತಿವಿರೋಧಶ್ಚ ತತ್ರೈವ । ಭೇದಶ್ರುತಿಬಾಹುಲ್ಯಾತ್ । ತಲ್ಲಿಂಗಂ ಸ ಶಬ್ದಶ್ಚ ಚತುರ್ಮುಖೇಽನವಕಾಶ ಇತಿ ಸಮಸ್ತಮೇತತ್ ॥ ೧೪ ॥**

**ಭಾವಾರ್ಥ**—ಬ್ರಹ್ಮಣಾ=ವೇದೇನ=ವೇದದಿಂದ ಗಮ್ಯತೇ ಇತಿ=ತಿಳಿಯಲ್ಪಡುತ್ತಾನೆ ಎಂಬ ವ್ಯುತ್ಪತ್ತಿಯಂತೆ ಬ್ರಾಹ್ಮಣಶಬ್ದವು ವಿಷ್ಣುವಿನಲ್ಲಿಯೇ ಯುಕ್ತವಾಗುತ್ತದೆ. ಅದರಂತೆ ಬ್ರಾಹ್ಮಣಶಬ್ದದೊಂದಿಗೆ ಪಠಿತವಾದ ಅಜಶಬ್ದವೂ ನ ಜಾಯತೇ=ಹುಟ್ಟುವವನಲ್ಲ ಎಂಬ ವ್ಯುತ್ಪತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತದೆ. ಚತುರ್ಮುಖನಲ್ಲಿ ಕರ್ಮಫಲಾಭಾವವು ಕೂಡುವುದಿಲ್ಲವಾದ್ದರಿಂದ ವಿಷ್ಣುವಿಗೂ ಚತುರ್ಮುಖನಿಗೂ ಅನ್ಯಥಾನುಪಪತ್ತಿಯಿಂದ ಭೇದವು ಸಿದ್ಧವಾಗುತ್ತದೆ. ರೂಢಿಯಿಂದ ಬ್ರಾಹ್ಮಣ ಅಜಶಬ್ದಗಳಿಂದ ಚತುರ್ಮುಖನನ್ನು ಇಟ್ಟುಕೊಂಡರೆ 'ಸರ್ವಸ್ಯ ವಶೀ, ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ' ಮೊದಲಾದ ವಾಕ್ಯಗಳ ವಿರೋಧವೂ ಬರುತ್ತದೆ. 'ವಿಷ್ಣೋ ಹಿರಣ್ಯಗರ್ಭಃ' ಮೊದಲಾದ ಭೇದವನ್ನು ಪ್ರತಿಪಾದಿಸುವ ಬಹಳ ಶ್ರುತಿಗಳಿರುವುದರಿಂದ ವಿಷ್ಣು, ಚತುರ್ಮುಖರಿಗೆ ಭೇದವೇ ಸಿದ್ಧವಾಗುತ್ತದೆ. ಪಾಪಲೇಶರಾಹಿತ್ಯವೆಂಬ ಲಿಂಗ ಮತ್ತು ಬ್ರಾಹ್ಮಣಶಬ್ದಗಳಿಗೆ ಚತುರ್ಮುಖನಲ್ಲಿ ಅವಕಾಶವಿಲ್ಲದಿರುವುದರಿಂದ ಬ್ರಾಹ್ಮಣಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಎಂದು ಸಿದ್ಧವಾಗುತ್ತದೆ. ಹೀಗೆ ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ಅರ್ಥಾತ್‌ತಥಾಗತಿ ಎಂಬ ನ್ಯಾಯವು ಇಲ್ಲಿಯೂ ಉಕ್ತವಾಯಿತು.

**ವಿವರಣೆ**— ಬ್ರಾಹ್ಮಣಶಬ್ದದಿಂದ ಚತುರ್ಮುಖ ಬ್ರಹ್ಮನನ್ನು ಗ್ರಹಿಸಿದರೆ ಕರ್ಮಫಲ ಭೋಕ್ತೃವಾದ ಅವನಲ್ಲಿ ಕರ್ಮಫಲಾಭಾವ ಕೂಡುವುದಿಲ್ಲವಾದ್ದರಿಂದ ಕರ್ಮಫಲ ವನ್ನು ಭೋಗಿಸದಿರುವ ವಿಷ್ಣುವಿಗೂ ಅವನಿಗೂ ಕರ್ಮಫಲಭೋಕ್ತೃತ್ವಾಭಾವ, ಕರ್ಮಫಲಭೋಕ್ತೃತ್ವವೆಂಬ ವಿರುದ್ಧಧರ್ಮಗಳು ಇರುವುದರಿಂದ ಐಕ್ಯವು ಕೂಡದೆ ಅರ್ಥಾತ್ ತಥಾ=ಹಾಗೆ ಅಂದರೆ,

ವಿರುದ್ಧಧರ್ಮವುಳ್ಳ ನೀರು, ಬೆಂಕಿಗಳಂತೆ ಆಗತಿಃ=ಬರುತ್ತದೆ. ಆದ್ದರಿಂದ ಹಿಂದೆ ಹೇಳಿದ ವಿರೋಧವು ಪೂರ್ವಪಕ್ಷಕ್ಕೇ ಬರುತ್ತದೆ.

ತಥಾ=ಹಾಗಾದರೂ ಬ್ರಾಹ್ಮಣಶಬ್ದದಿಂದ ಚತುರ್ಮುಖನನ್ನು ಗ್ರಹಿಸುವುದಾದರೆ, ವಿಷ್ಣು ಚತುರ್ಮುಖರಿಗೆ ಭೇದ ಬರುವಂತೆ ಭೋಕ್ತೃತ್ವ, ಭೋಕ್ತೃತ್ವಾಭಾವವೆಂಬ ಧರ್ಮಗಳ ವಿರೋಧವೂ ಪೂರ್ವಪಕ್ಷದಲ್ಲಿ ಭೇದವು ಆಗತಿಃ=ಬರುತ್ತದೆ.

ತಥಾ=ಹಾಗೆಯೇ ಭೇದವನ್ನು ಹೇಳುವ ಬಹಳ ಶ್ರುತಿಗಳಿರುವುದರಿಂದ ನಿರ್ಲೇಪತ್ವವೆಂಬ ಲಿಂಗ ಮತ್ತು ನಿತ್ಯಮಹಿಮಾತ್ವವೆಂಬ ನಿರವಕಾಶಲಿಂಗದಿಂದ ಸಹಿತವಾದ ಬ್ರಾಹ್ಮಣಶಬ್ದ ಪರಾಂತದವರೆಗಿನ ಆಯುಷ್ಯವುಳ್ಳ ಚತುರ್ಮುಖನಲ್ಲಿ ಅಗತಿಃ=ಕೂಡುವುದಿಲ್ಲ.

ಹೀಗೆ ಪೂರ್ವಪಕ್ಷಕ್ಕೆ ಉಪಯುಕ್ತಗಳಾದ ಯುಕ್ತಿಗಳಿಂದಲೇ ಅವರ ಪಕ್ಷವನ್ನು ನಿರಾಕರಿಸುವ ಭಾಷ್ಯಕಾರರಾದ ಶ್ರೀಮಧ್ವಾಚಾರ್ಯರು ಕುವಲಯಾಪೀಡದ ದಂತಗಳಿಂದಲೇ ಅವರನ್ನು ಸಂಹರಿಸಿದ ಕೃಷ್ಣನ ಭಕ್ತಾಗ್ರೇಸರರೆಂದು ಸ್ಪಷ್ಟವಾಗುತ್ತದೆ. ರಾವಣನು ಹಚ್ಚಿದ ಬೆಂಕಿಯಿಂದಲೇ ರಾವಣನ ಪಟ್ಟಣವನ್ನು ಸುಟ್ಟ ಹನುಮಂತ ಮೂರನೆಯ ಅವತಾರವೆಂದು ಸ್ಪಷ್ಟವಾಗುತ್ತದೆ.

'ಇತಿ ಸಮಸ್ತಮೇತತ್' ಎಂಬ ಪದದಿಂದ ಶ್ರೀಮದಾಚಾರ್ಯರು ಈ ಅಧಿಕರಣದಲ್ಲಿ ಈ ಪಾದದ ಎಲ್ಲ ಅಧಿಕರಣಗಳ ಯುಕ್ತಿಗಳನ್ನೂ ಸಿದ್ಧಾಂತಪರವಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಅವುಗಳಲ್ಲಿ 'ಅರ್ಥಾತ್ ತಥಾಗತಿಃ' ಎಂಬ ನ್ಯಾಯವು ಅವ್ಯವಹಿತ ಪೂರ್ವಾಧಿಕರಣದಲ್ಲಿ ಹೇಳಲ್ಪಟ್ಟಿದ್ದರಿಂದ ಶೀಘ್ರವಾಗಿ ಉಪಸ್ಥಿತವಾಗುವುದರಿಂದ ಅದನ್ನು ಮೊದಲು ನಿರೂಪಿಸಿ ಇತರ ನ್ಯಾಯಗಳನ್ನು ನಿರೂಪಿಸುತ್ತಿದ್ದಾರೆ.

(1) 'ಉಕ್ತಸ್ಯ ವಿರೋಧಃ' ಎಂಬ ನ್ಯಾಯಕ್ಕೆ 'ಉಕ್ತವಿರೋಧಶ್ಚ ತತ್ರೈವ' ಎಂಬ ಮೂಲದಿಂದ ಸಿದ್ಧಾಂತ ಪರವಾಗಿ ವಿವರಣೆ ನೀಡುತ್ತಿದ್ದಾರೆ. ತತ್ರೈವ=ಬ್ರಾಹ್ಮಣ ಶಬ್ದವು ಚತುರ್ಮುಖನನ್ನು ಪ್ರತಿಪಾದಿಸುತ್ತದೆ ಎಂದಿಟ್ಟುಕೊಂಡರೆ ಉಕ್ತವಿರೋಧಃ- 'ಸರ್ವಸ್ಯಾಧಿಪತಿಃ...' ಮೊದಲಾದ ಶ್ರುತಿಯಲ್ಲಿ ಹೇಳಲ್ಪಟ್ಟ ಪತಿ ಮೊದಲಾದ ಶಬ್ದಗಳ ವಿರೋಧವು ಪೂರ್ವಪಕ್ಷಿಗೆ ಬರುತ್ತದೆ. ಬ್ರಾಹ್ಮಣಶಬ್ದವನ್ನು

'ಬ್ರಹ್ಮಣಾ=ವೇದೇನ ಗಮ್ಯತೇ' ಎಂಬ ವ್ಯುತ್ಪತ್ತಿಯಂತೆ ವಿಷ್ಣುವಿನಲ್ಲಿಯೇ ಸಮನ್ವಯ ಮಾಡಿದ್ದರಿಂದ 'ಬ್ರಾಹ್ಮಣಶಬ್ದಕ್ಕೆ ನಿತ್ಯಮಹಿಮತ್ವಲಿಂಗದ ವಿರೋಧ ವಿದೆ' ಎಂಬ ಪೂರ್ವಪಕ್ಷಿಯು ಆಕ್ಷೇಪಕ್ಕೆ ಅವಕಾಶವಿಲ್ಲ ಎಂದು ತಿಳಿಯುತ್ತದೆ.

(2) 'ಬಹು ತಾದೃಕ್ತ್ವಂ' ಎಂಬ ನ್ಯಾಯಕ್ಕೆ 'ಭೇದಶ್ರುತಿ ಬಾಹುಲ್ಯಾತ್' ಎಂಬ ವಾಕ್ಯದಿಂದ ಸಿದ್ಧಾಂತರವಾಗಿ ಅರ್ಥ ಮಾಡುತ್ತಿದ್ದಾರೆ. 'ವಿಷ್ಣೋ ಹಿರಣ್ಯಗರ್ಭಃ' ಮುಂತಾದ ಬಹುಶ್ರುತಿಗಳು ವಿಷ್ಣು ವಿರಿಂಚರಲ್ಲಿ ಭೇದವನ್ನು ಪ್ರತಿಪಾದಿಸುತ್ತಿರುವುದರಿಂದ ತಾದೃಕ್ತ್ವಂ=ನಿರವಕಾಶತ್ವವು ಸಿದ್ಧವಾಗುತ್ತದೆ. ಅಂದರೆ ನಿರವಕಾಶ ಶ್ರುತಿಗಳಿರುವುದರಿಂದ ಭೇದವೇ ಸಿದ್ಧವಾಗುತ್ತದೆ ಎಂದರ್ಥ.

(3) 'ತಾದೃಗ್ದ್ವಯಂ' ಎಂಬ ನ್ಯಾಯವನ್ನು 'ತಲ್ಲಿಂಗಂ ಸ ಶಬ್ದಶ್ಚ ಚತುರ್ಮುಖೇऽನವಕಾಶ ಏವ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ತಾದೃಗ್ದ್ವಯಂ=ನಿರವಕಾಶವಾದ ಪಾಪರಹಿತತ್ವವೆಂಬ ಲಿಂಗ, ಪತಿ ಮೊದಲಾದ ಶಬ್ದ ಎಂಬ ಇವೆರಡಕ್ಕೂ ಚತುರ್ಮುಖನಲ್ಲಿ ಅವಕಾಶವಿಲ್ಲ ಎಂದರ್ಥ.

(4) 'ಲಿಂಗಾವಕಾಶರಾಹಿತ್ಯಂ' ಎಂಬ ನ್ಯಾಯವನ್ನು 'ತಲ್ಲಿಂಗಂ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ನಿರವಕಾಶವಾದ ನಿತ್ಯಮಹಿಮತ್ವವೆಂಬ ಲಿಂಗಕ್ಕೆ ಚತುರ್ಮುಖನಲ್ಲಿ ಅವಕಾಶವಿಲ್ಲ ಎಂದರ್ಥ. 'ಚತುರ್ಮುಖನಿಗೂ ವಿಷ್ಣುವಿಗೂ ಅಭೇದವನ್ನು ಒಪ್ಪದಿದ್ದರೆ ಪಾಪರಹಿತತ್ವವೆಂಬ ಲಿಂಗಕ್ಕೆ ಅವಕಾಶವಿಲ್ಲವೆಂದಾಗುತ್ತದೆ' ಎಂಬ ಪೂರ್ವಪಕ್ಷಿಯ ಆಶಯವು ಭ್ರಮಯೆಂದು ತಿಳಿಯುತ್ತದೆ. ಈ ಭ್ರಮೆಯಿಂದಲೇ ಅವನು ಪೂರ್ವಪಕ್ಷವನ್ನು ಮಾಡಿದ್ದಾನೆ.

(5) 'ವಿಪರೀತಶ್ರುತಿಭ್ರಮ' ಎಂಬ ನ್ಯಾಯವನ್ನು 'ಸ ಶಬ್ದಶ್ಚ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ಸರ್ವವೇದಮುಖ್ಯಾರ್ಥತ್ವ ವೆಂಬ ಅರ್ಥವನ್ನು ಪ್ರತಿಪಾದಿಸುವ ಬ್ರಾಹ್ಮಣಶಬ್ದ ಮತ್ತು ಸರ್ವಥಾ ಜನನರಹಿತ ಎಂಬ ಅರ್ಥವನ್ನು ತಿಳಿಸುವ ಅಜ ಶಬ್ದಗಳು ಚತುರ್ಮುಖನಲ್ಲಿ ಹೊಂದುವುದಿಲ್ಲವಾದ್ದರಿಂದ ಅವುಗಳು ಪೂರ್ವಪಕ್ಷಿಗೆ ವಿಪರೀತವಾದ್ದರಿಂದ ವಿಪರೀತಶ್ರುತಿಯೆನಿಸಿವೆ. ಆದರೆ ಪೂರ್ವಪಕ್ಷಿಯು ಬ್ರಾಹ್ಮಣಶಬ್ದ

ಬ್ರಾಹ್ಮಣಜಾತಿಯನ್ನು, ಅಜ ಶಬ್ದವು ಅ=ವಿಷ್ಣುವಿನಿಂದ ಜ=ಹುಟ್ಟಿದವನು ಎಂಬ ಅರ್ಥವನ್ನು ತಿಳಿಸುತ್ತಿವೆ ಎಂಬ ಭ್ರಮೆಯಿಂದ ಪೂರ್ವಪಕ್ಷವನ್ನು ಮಾಡಿದ್ದರಿಂದ ವಿಪರೀತಶ್ರುತಿಭ್ರಮವು ಅನ್ವರ್ಥವಾಗುತ್ತದೆ.

(6) 'ಅನ್ವಯಾಭಾವಃ' ಎಂಬ ನ್ಯಾಯವನ್ನು 'ಚತುರ್ಮುಖಸ್ಯ ಕರ್ಮಫಲಾಭಾಯುಕ್ತೇಸ್ತಯೋರ್ಭೇದೋऽರ್ಥಾದಾಪದ್ಯತೇ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ಈ ಪ್ರಕರಣದಲ್ಲಿ 'ನ ಕರ್ಮಣಾ ವರ್ಧಂತೇ ನೋ ಕನೀಯಾನ್' ಎಂದು ಕರ್ಮಫಲಾಭಾವವನ್ನು ಹೇಳಿದ್ದಾರೆ. ಆದರೆ ಕರ್ಮದಿಂದ ಜ್ಞಾನಾಂದಾದಿಫಲವನ್ನು ಹೊಂದಿರುವ ಚತುರ್ಮುಖನಿಗೆ ಕರ್ಮಫಲಾಭಾವದ ಅನ್ವಯವು ಕೂಡುವುದಿಲ್ಲ. ವಿಷ್ಣುವಿಗೆ ಕರ್ಮಫಲಾಭಾವವು ಕೂಡುತ್ತದೆ. ಆದ್ದರಿಂದ ಅವರಿಬ್ಬರಲ್ಲಿ ಭೇದವು ಅರ್ಥಾತ್ ಸಿದ್ಧವಾಗುತ್ತದೆ.

(7) 'ಅದೃಷ್ಟಿಃ' ಎಂಬ ನ್ಯಾಯವನ್ನು 'ಚತುರ್ಮುಖಸ್ಯ...' ಇತ್ಯಾದಿ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ಯಾವ ವಸ್ತುಗಳಲ್ಲಿ ವಿರುದ್ಧಧರ್ಮವಿರುವುದೋ ಅಲ್ಲಿ ಅಭೇದವು ಕಂಡಿಲ್ಲ. ವಿಷ್ಣು ವಿರಿಂಚರಲ್ಲಿ ವಿರುದ್ಧಧರ್ಮವು ಸಿದ್ಧವಾದ್ದರಿಂದ ಭೇದವೂ ಅರ್ಥಾತ್ ಸಿದ್ಧವಾಗುವುದು.

(8) 'ವಿರುದ್ಧತಾ' ಎಂಬ ನ್ಯಾಯವನ್ನು 'ಉಕ್ತವಿರೋಧಶ್ಚ ತತ್ರೈವ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ತತ್ರೈವ=ಅಭೇದದಲ್ಲಿ ಉಕ್ತವಿರೋಧಃ=ಶ್ರುತಿಯಲ್ಲಿ ಹೇಳಲ್ಪಟ್ಟ ವಿರೋಧವು ಬರುತ್ತದೆ. ಏಕೆಂದರೆ ಭೇದಶ್ರುತುಬಾಹುಲ್ಯಾತ್=ಭೇದವನ್ನು ಹೇಳುವ ಅನೇಕ ಶ್ರುತಿಗಳಿರುವುದರಿಂದ.

(9) 'ಅನುಕ್ತಿ' ಎಂಬ ನ್ಯಾಯವನ್ನು 'ಉಕ್ತವಿರೋಧಶ್ಚ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ಅರ್ಥೈಸುತ್ತಿದ್ದಾರೆ. ಇಲ್ಲಿ 'ಅನುಕ್ತಿ' ಎಂದರೆ ಉಕ್ತ್ಯಭಾವ ಎಂದರ್ಥವಲ್ಲ. ಉಕ್ತಿವಿರೋಧ ಎಂದರ್ಥ. ಅಭೇದವನ್ನು ಹೇಳಿದರೆ ಉಕ್ತಿವಿರೋಧ ಬರುವುದರಿಂದ ಭೇದವನ್ನು ಒಪ್ಪಬೇಕು. 'ಸ್ಥಿತ್ಯಾದಯೇ ಹರಿ–ವಿರಿಂಚ–ಹರೇತಿ ಸಂಜ್ಞಾಃ' ಎಂಬಿವೇ ಮೊದಲಾದ ಆಗಮಗಳಲ್ಲಿ ಅಭೇದವನ್ನು ಹೇಳಲಾಗಿದೆ ಯಲ್ಲ? ಎಂದರೆ ಅದಕ್ಕೆ ಉತ್ತರ 'ಭೇದಶ್ರುತಿಬಾಹುಲ್ಯಾತ್' ಎಂದು. ಅಂದರೆ

ಭೇದವನ್ನು ಹೇಳುವ ಅನೇಕ ಶ್ರುತಿಗಳಿರುವುದರಿಂದ ಅದರ ವಿರೋಧ ಬಾರದಂತೆ ಅಂತರ್ಯಾಮಿಗಳಿಗೆ ಅಭೇದವನ್ನು ಹೇಳುತ್ತಿದೆ ಎಂದೇ ಅಭೇದವನ್ನು ಹೇಳುವ ಶ್ರುತಿಗೆ ಅರ್ಥಮಾಡಬೇಕು.

(10) 'ಬಾಹುಲ್ಯಂ ಲಿಂಗಶಬ್ದಾನಾಂ' ಎಂಬ ನ್ಯಾಯವನ್ನು 'ತಲ್ಲಿಂಗಂ ಸ ಶಬ್ದಶ್ಚ ಚತುರ್ಮುಖೇಽನವಕಾಶಃ' ಎಂಬ ವಾಕ್ಯದಿಂದ ಸಿದ್ಧಾಂತಪರವಾಗಿ ವಿವರಿಸುತ್ತಿದ್ದಾರೆ. ನಿತ್ಯಮಹಿಮತ್ವ ಮೊದಲಾದ ಲಿಂಗ, ಪತಿ ಮೊದಲಾದಿಗಳಿಗೆ ಚತುರ್ಮುಖನಲ್ಲಿ ಅವಕಾಶವಿಲ್ಲ. ಈ ಬಹಳವಾದ ಲಿಂಗ, ಶಬ್ದಗಳು ವಿಷ್ಣುವಿನಲ್ಲಿಯೇ ಅವಕಾಶವನ್ನು ಹೊಂದಿವೆ.

ಹೀಗೆ ಹಿಂದಿನ ಸಕಲ ಅಧಿಕರಣಗಳಲ್ಲಿ ಉಕ್ತವಾದ ಯಾವುದೋ ಒಂದು ನ್ಯಾಯ ಮಾತ್ರ ಬ್ರಾಹ್ಮಣಾಧಿಕರಣಕ್ಕೆ ಅನ್ವಯವಾಗುವುದಿಲ್ಲ. ಹೊರತು ಸಕಲ ನ್ಯಾಯಗಳೂ ಅನ್ವಯವಾಗುತ್ತವೆ ಎಂಬುದನ್ನು 'ಸಮಸ್ತಮೇತತ್' ಎಂಬ ಶಬ್ದದಿಂದ ಶ್ರೀಮದಾಚಾರ್ಯರು ತಿಳಿಸಿದ್ದಾರೆ. 'ಪತ್ಯಾದಿಶಬ್ದೇಭ್ಯಃ' ಎಂಬ ಸೂತ್ರದಲ್ಲಿರುವ ಬಹುವಚನಕ್ಕೆ ಆದಿ ಎಂದರ್ಥವನ್ನು ಇಟ್ಟುಕೊಂಡರೆ ಶ್ರೀಮದಾಚಾರ್ಯರ ವ್ಯಾಖ್ಯಾನಕ್ಕೆ ಸೂತ್ರಕಾರರ ಸಮ್ಮತಿಯೂ ಸಿಗುತ್ತದೆ ಎಂದು ಭಾವಬೋಧದಲ್ಲಿ ರಘೂತ್ತಮಸ್ವಾಮಿಗಳು ಸುಂದರವಾಗಿ ವ್ಯಾಖ್ಯಾನವನ್ನು ಮಾಡಿರುವರು.

**ಸೂತ್ರಾರ್ಥ—**

## ಓಂ ಪತ್ಯಾದಿಶಬ್ದೇಭ್ಯಃ ಓಂ

'ಸರ್ವಸ್ಯಾಧಿಪತಿಃ, ಸರ್ವಸ್ಯೇಶಾನಃ' ಇವೇ ಮುಂತಾದ ಶ್ರುತಿಗಳಿಂದ ಬ್ರಾಹ್ಮಣಶಬ್ದದಿಂದ ವಾಚ್ಯನಾದವನು ವಿಷ್ಣುವೆಂದು ಸಿದ್ಧವಾಗುತ್ತದೆ.



# ಪ್ರಥಮಾಧ್ಯಾಯ-ನಾಲ್ಕನೆಯ ಪಾದ

ಅನ್ಯತ್ರೈವ ಪ್ರಸಿದ್ಧಗಳಾದ 'ಅವ್ಯಕ್ತ, ಅವರ' ಮೊದಲಾದ ಶಬ್ದಗಳ ಸಮನ್ವಯವನ್ನು ಈ ನಾಲ್ಕನೆಯ ಪಾದದಲ್ಲಿ ಮಾಡಲಾಗಿದೆ. ಈ ಪಾದದ ಪೂರ್ವ ಪಕ್ಷ ಮತ್ತು ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ.

ಸರ್ವಮಾನವಿರೋಧಶ್ಚ ವ್ಯುತ್ಪತ್ತೇರಪ್ಯಶಕ್ಯತಾ ।
ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ ॥
ಸ್ತ್ರೀಲಿಂಗತ್ವಂ ನಿಷೇಧಶ್ಚ ಯುಕ್ತಯಃ ಪೂರ್ವಪಕ್ಷಗಾಃ ।

ಸರ್ವಪ್ರಮಾಣವಿರೋಧ, ವ್ಯುತ್ಪತ್ತಿ ಕೂಡದಿರುವುದು, ಪರಸ್ಪರ ವಿರೋಧ, ಕಾರ್ಯಕಾರಣ ವಿರೋಧ, ಸ್ತ್ರೀಲಿಂಗ, ನಿಷೇಧ, ಇವು ಪೂರ್ವಪಕ್ಷ ಯುಕ್ತಿಗಳು.

ದೋಷಾತ್ಯಸ್ಪೃಷ್ಟನಿಯಮಃ ಶಬ್ದಾರ್ಥಾನೇಕತಾ ತಥಾ ।
ಬಹುರೂಪತ್ವಮೀಶಸ್ಯ ವ್ಯಕ್ತಾವ್ಯಕ್ತಿವಿಶೇಷಿತಾ ।
ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ ॥
ಇತ್ಯಾದಿಯುಕ್ತಯಃ ಸಾಕ್ಷಾತ್ ಸಿದ್ಧಾಂತಸ್ಥಾಪಿಕಾ ಇಹ ।

ಸರ್ವಥಾ ದೋಷಸ್ಪರ್ಶವಿಲ್ಲದಿರುವಿಕೆ, ಶಬ್ದಾರ್ಥಗಳು ಅನೇಕವಾಗಿರುವುದು, ಪರಮಾತ್ಮನಿಗೆ ಬಹುರೂಪವಿರುವುದು, ವ್ಯಕ್ತತ್ವ–ಅವ್ಯಕ್ತತ್ವಗಳಿಂದ ವಿಶೇಷವಿರುವುದು, ತನ್ನ ಶರೀರದಿಂದ ನೇರವಾಗಿ ಸೃಷ್ಟಿಸುವುದು, ದುಷ್ಟರಿಗೆ ವ್ಯಕ್ತನಾಗದಿರುವುದು ಮುಂತಾದವು ಮುಖ್ಯವಾಗಿ ಸಿದ್ಧಾಂತ ಸಾಧಕಯುಕ್ತಿಗಳು.

## ಆನುಮಾನಿಕಾಧಿಕರಣ (1-4-1)

'ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪ ವಿನ್ಯಸ್ತ ಗೃಹೀತೇರ್ದರ್ಶಯತಿ ಚ' ಎಂಬ ಸೂತ್ರದಿಂದ ಪ್ರಾರಂಭವಾಗುವ ಆನುಮಾನಿಕಾಧಿಕರಣದಲ್ಲಿ ಅವ್ಯಕ್ತ ಮೊದಲಾದ ಶಬ್ದವನ್ನು ಸಮನ್ವಯ ಮಾಡಲಾಗಿದೆ. ಸಮನ್ವಯಾಧಿಕರಣದಲ್ಲಿ ಸಕಲ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಹೇಳಿದ್ದರಿಂದ ಅವ್ಯಕ್ತಶಬ್ದವಾಚ್ಯನಾದವನು ವಿಷ್ಣುವೋ? ಅಥವಾ ಅವರತ್ವಲಿಂಗವಿರುವುದರಿಂದ ಮತ್ತು ಅನ್ಯತ್ರಪ್ರಸಿದ್ಧಿಯಿರುವುದರಿಂವಲೂ

ಪ್ರಧಾನವೋ? ಎಂದು ಸಂದೇಹ.

ವಿಷ್ಣುವಲ್ಲ. ಹೊರತು ಪ್ರಕೃತಿಯೇ ಎಂದು ಪೂರ್ವಪಕ್ಷ. **'ಅವ್ಯಕ್ತಾತ್ ಪುರುಷಃ ಪರಃ'** ಎಂಬಲ್ಲಿ (ಅವ್ಯಕ್ತಕ್ಕಿಂತ ಪುರುಷನು ಉತ್ತಮ) ಹೇಳಿರುವುದರಿಂದ ಅವ್ಯಕ್ತಶಬ್ದದಿಂದ ಪರಮಾತ್ಮನು ವಾಚ್ಯನಾಗಲಾರ. ಪುರುಷನಿಗಿಂತ ವಿಷ್ಣುವಿಗೆ ಅವರತ್ವವನ್ನು ಒಪ್ಪಬೇಕಾದೀತು. ಒಂದುವೇಳೆ ವಿಷ್ಣುವಿಗೆ ಅವರತ್ವವನ್ನು ಒಪ್ಪಿದರೆ ಸರ್ವೋತ್ತಮತ್ವವನ್ನು ಸಾರುವ ಎಲ್ಲ ಪ್ರಮಾಣಗಳ ವಿರೋಧವು ಬರುತ್ತದೆ. ಆದ್ದರಿಂದ ಅವ್ಯಕ್ತಶಬ್ದವಾಚ್ಯನಾದವನು ವಿಷ್ಣುವಲ್ಲ. ಇದನ್ನು ಮಧ್ವಾಚಾರ್ಯರು ಅನುವ್ಯಾಖ್ಯಾನದಲ್ಲಿ **'ಸರ್ವೈಃ ಮಾನೈಃ ವಿರೋಧಶ್ಚ'** (ಸಕಲಪ್ರಮಾಣಗಳ ವಿರೋಧ) ಎಂದು ಹೇಳಿದ್ದು.

**'ದೋಷಾತ್ಯಸ್ಪೃಷ್ಟಿನಿಯಮಃ'** (ಸರ್ವಥಾ ದೋಷಸ್ಪರ್ಶವಿಲ್ಲದಿರುವಿಕೆ) ಎಂಬ ಸಿದ್ಧಾಂತಯುಕ್ತಿಯ ವಿವರಣೆಯ ರೂಪವಾಗಿ ಮುಂದಿನ ನ್ಯಾಯ ವಿವರಣೆಯು ಹೊರಟಿದೆ—

**॥ ಹರಿಃ ಓಂ ॥ ಅವರತ್ವಾದಿಧರ್ಮನಿಯಂತೃತ್ವಂ, ತತ್ತಾದಾತ್ಮ್ಯವತ್ತ್ವಂ ಚೇತಿ ದ್ವಿವಿಧಂ ಹ್ಯವರತ್ವಾದಿ । ''ನಿರನಿಷ್ಟೋ ನಿರವದ್ಯಃ'' ಇತ್ಯಾದಿಶ್ರುತೇಸ್ತತ್ತದ್ದೋಷತಾದಾತ್ಮ್ಯಾತ್ಯಸ್ಪೃಷ್ಟಿನಿಯಮಾತ್ ವಿಷ್ಣೋಃ, 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತಿ ಶ್ರುತಿಬಲಾಚ್ಚ ನಿಯಂತೃತ್ವಮವರತ್ವಾದಿಕಮಿತ್ಯಾಪತತಿ । ಶ್ರುತಿದ್ವಯಸ್ಯಾಪಿ ನಿರವಕಾಶತ್ವಾತ್ । ಮೃತ್ಯುಶಬ್ದಾದಿಷು ಪ್ರಸಿದ್ಧೇಶ್ಚ । ಪ್ರಸಿದ್ಧತ್ವಾಚ್ಚ ಕರ್ತ್ರ್ಯವ್ಯುತ್ಪತ್ತೇಃ । 'ತಮೇವ ಮೃತ್ಯುಮಮೃತಮ್, ತಾತ ದೈವ ಸರ್ವಾತ್ಮನಾ ವೈ ಹಿ ಪರಂ ಪರಾಯಣಮ್' ಇತ್ಯಾದೇಶ್ಚ । ಉಪಚಾರಕಲ್ಪನಾಯಾಶ್ಚ ಕ್ಲಿಷ್ಟತ್ವಾತ್ । ಪ್ರಮಾಣಾಭಾವಾಚ್ಚ । ನಾವ್ಯಕ್ತದಿಶಬ್ದಾನಾಂ ಪರಮಾತ್ಮವಿಷಯತ್ವಾಂಗೀಕಾರೇ ಸರ್ವಮಾನವಿರೋಧಃ ॥ ೧ ॥**

**ಭಾವಾರ್ಥ**—'ಅವರ' ಮೊದಲಾದ ಶಬ್ದಗಳ ಪ್ರವೃತ್ತಿ ನಿಮಿತ್ತವು. ಎರಡು

ವಿಧವಾಗಿರುತ್ತದೆ. (1) ಪರರಲ್ಲಿರುವ ಅವರತ್ವ (ನೀಚತ್ವ) ಧರ್ಮಕ್ಕೆ ನಿಯಾಮಕವಾಗಿರುವುದು. (2) ಅವರ ವಸ್ತುವಿನ ತಾದಾತ್ಮ್ಯವನ್ನು ಹೊಂದುವುದು. (ತಾನೇ ಅವರನಾಗಿರುವುದು) 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯಿಂದ ವಿಷ್ಣುವಿಗೆ ಯಾವ ದೋಷಗಳೂ ಇಲ್ಲವೆಂದು ಸಿದ್ಧವಾಗುವುದರಿಂದ ಮತ್ತು 'ನಾಮಾನಿ ಸರ್ವಾಣಿ ಯಮಾವಿಶಂತಿ' (ಎಲ್ಲ ನಾಮಗಳೂ ಮುಖ್ಯವಾಗಿ ಪರಮಾತ್ಮನನ್ನೇ ಪ್ರತಿಪಾದಿಸುತ್ತವೆ) ಎಂಬ ಶ್ರುತಿಯಿಂದಲೂ ಪರಮಾತ್ಮನಲ್ಲಿ ಅವರಶಬ್ದ ಪ್ರವೃತ್ತಿ ನಿಮಿತ್ತವಾದ ಅವರ ನಿಯಾಮಕತ್ವವೆಂದೇ ಪರ್ಯವಸಾನವಾಗುತ್ತದೆ. ಹಿಂದೆ ಹೇಳಿದ ಎರಡು ಶ್ರುತಿಗಳು ನಿರವಕಾಶವಾದ್ದರಿಂದ ಬೇರೆ ಅರ್ಥವನ್ನು ಮಾಡಲು ಬರುವುದಿಲ್ಲ. ಮೃತ್ಯು ಮೊದಲಾದ ಶಬ್ದಗಳು ಅನ್ಯರ ಮಾರಕತ್ವಕ್ಕೆ ನಿಯಾಮಕವಾದ್ದರಿಂದ ಯಮ ಮೊದಲಾದವರಲ್ಲಿ ಬಹುಪ್ರಯೋಗದಿಂದ ಪ್ರಸಿದ್ಧವಾಗಿವೆ. ಮೃತ್ಯುಶಬ್ದಕ್ಕೆ ಯಮನಲ್ಲಿ ಪ್ರಸಿದ್ಧಿಯಿರುವಂತೆ ವಿಷ್ಣುವಿನಲ್ಲಿಯೂ ಕರ್ತೃವ್ಯುತ್ಪತ್ತಿಯು (ಅನ್ಯರಲ್ಲಿರುವ ಪ್ರವೃತ್ತಿನಿಮಿತ್ತದ ನಿಯಾಮಕತ್ವವು) ಬದ್ಧ, ದುಃಖೀ ಮೊದಲಾದ ಶಬ್ದಗಳಲ್ಲಿ ''ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' (ಸಂಸಾರಿಗಳನ್ನು ಬಂಧನಕ್ಕೆ ಒಳಪಡಿಸುವುದರಿಂದ ಬದ್ಧ, ದುಃಖ ಪ್ರಾಪಕನಾದ್ದರಿಂದ ದುಃಖೀ) ಇದೇ ಮೊದಲಾದ ಶ್ರುತಿಗಳಿಂದ ಪ್ರಸಿದ್ಧವಾಗಿದೆ. ಮತ್ತು 'ತಮೇವ ಮೃತ್ಯುಮಮೃತಂ...' (ವಿಷ್ಣುವನ್ನು ಮಾರಕನಾದ್ದರಿಂದ ಮೃತ್ಯುವೆಂದು ಸಂಸಾರದಿಂದ ಮೋಚಕನಾದ್ದರಿಂದ ಅಮೃತನೆಂದೂ ತಿಳಿಯಬೇಕು. ಆ ವಿಷ್ಣುವು ಸರ್ವರೀತಿಯಿಂದಲೂ ಸರ್ವೋತ್ತಮನು, ಮುಖ್ಯಾಶ್ರಯನು) ಇವೇ ಮೊದಲಾದ ಸ್ಮೃತಿಯಿಂದಲೂ ಕರ್ತೃವ್ಯುತ್ಪತ್ತಿಯು ಸಿದ್ಧವಾಗಿದೆ. ಮೃತ್ಯು ಮೊದಲಾದ ಶಬ್ದಗಳಿಗೆ ಔಪಚಾರಿಕ ಅರ್ಥವನ್ನು ಮಾಡುವುದು ಕ್ಲಿಷ್ಟವಾಗಿದೆ. ಪ್ರಮಾಣವೂ ಇಲ್ಲದಿರುವುದರಿಂದ ಔಪಚಾರಿಕ ಅರ್ಥವನ್ನು ಮಾಡಲೂಬಾರದು. ಆದ್ದರಿಂದ ಅವ್ಯಕ್ತ ಮೊದಲಾದ ಶಬ್ದಗಳು ಪರಮಾತ್ಮನನ್ನು ಪ್ರತಿಪಾದಿಸುತ್ತವೆ ಎಂದು ಅಂಗೀಕರಿಸಿದರೆ ಸರ್ವಪ್ರಮಾಣ ವಿರೋಧವು ಬರುವುದಿಲ್ಲ.

ವಿವರಣೆ— ಅವರ ಶಬ್ದವನ್ನು ಎರಡು ಸಂದರ್ಭಗಳಲ್ಲಿ ಪ್ರಯೋಗ ಮಾಡಬಹುದು. ಒಂದು ವಸ್ತುವು ಅವರವಾಗಿದ್ದರೆ (ನೀಚವಾಗಿದ್ದರೆ) ಅದರಲ್ಲಿ

ಅವರ ಶಬ್ದವನ್ನು ಪ್ರಯೋಗಿಸಬಹುದು. ಪರರಲ್ಲಿರುವ ಅವರತ್ವಕ್ಕೆ ನಿಯಾಮಕನಾಗಿದ್ದರೂ ಅವರ ಶಬ್ದವನ್ನು ಪ್ರಯೋಗಿಸಬಹುದು. ರಾಜನ ಸೈನಿಕರು ಯುದ್ಧಮಾಡಿ ಜಯಗಳಿಸಿದಾಗ ಆ ಜಯವು ರಾಜನ ಅಧೀನವಾದ್ದರಿಂದ 'ರಾಜಾ ಜಯೀ' (ರಾಜನು ಜಯಗಳಿಸಿದ) ಎಂದು ಪ್ರಯೋಗವಿದೆ. ಅದರಂತೆ ಅವರತ್ವಾದಿಗಳು ಪರಮಾತ್ಮನ ಅಧೀನವಾದ್ದರಿಂದ 'ಅವರ' ಶಬ್ದವಾಚ್ಯನಾಗಿದ್ದಾನೆ. ಆದರೆ ರಾಜನ ಸೈನಿಕರು ಬದ್ಧರಾದಾಗ ಸೋತಾಗ 'ರಾಜಾ ಬದ್ಧಃ' (ರಾಜನ ಬಂಧನಕ್ಕೊಳಗಾದ) ಎಂದು ಪ್ರಯೋಗಿಸುವುದಿಲ್ಲ. ಏಕೆಂದರೆ ರಾಜನೇ ಬಂಧನಕ್ಕೊಳಗಾದನೋ? ಅವನೋ ಸೈನಿಕರೋ? ಎಂಬ ಸಂಶಯ ಬರಲು ಕಾರಣವಿರುವುದರಿಂದ. ಆದರೆ ಪ್ರಕೃತದಲ್ಲಿ ಪರಮಾತ್ಮನು ಸ್ವತಃ ತಾನೇ ಅವರನಾದನೋ? ಎಂಬ ಸಂಶಯಕ್ಕೆ ಅವಕಾಶವಿಲ್ಲ. ಏಕೆಂದರೆ 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯು ಅವನಲ್ಲಿ ಯಾವುದೇ ದೋಷಗಳಲ್ಲಿಲ್ಲ ಎಂದು ಸಾರುತ್ತಿದೆ. ಇದನ್ನೇ ಅನುವ್ಯಾಖ್ಯಾನದಲ್ಲಿ 'ದೋಷಾತ್ಯಸ್ಪೃಷ್ಟಿನಿಯಮಃ' (ಪರಮಾತ್ಮನಲ್ಲಿ ದೋಷಗಳ ಸ್ಪರ್ಶವಿಲ್ಲವೆಂಬ ನಿಯಮ) ಎಂದು ಸಿದ್ಧಾಂತ ಯುಕ್ತಿಯನ್ನಾಗಿ ಹೇಳಲಾಗಿದೆ.

ಮರಣನಿಯಾಮಕನಾದ್ದರಿಂದ ಯಮನಲ್ಲಿ ಮೃತ್ಯುಶಬ್ದದ ಪ್ರಯೋಗ ವಿರುವಂತೆ ಸಂಸಾರಿಗಳ ದುಃಖಕ್ಕೆ ಕಾರಣನಾದ್ದರಿಂದ ದುಃಖೀ ಎಂದು ಬಂಧನಕ್ಕೆ ನಿಯಾಮಕನಾದ್ದರಿಂದ ಬದ್ಧ ಎಂದೂ, ಮಾರಕನಾದ್ದರಿಂದ ಮೃತ್ಯು ಎಂದೂ, ಮೋಚಕನಾದ್ದರಿಂದ ಅಮೃತ ಎಂದೂ ಶಾಸ್ತ್ರದಲ್ಲಿ ವ್ಯವಹರಿಸುತ್ತಾರೆ. ಪರಮಾತ್ಮನಲ್ಲಿ ಮೃತ್ಯು ಮೊದಲಾದ ಶಬ್ದಗಳನ್ನು ಔಪಚಾರಿಕವೆಂದು ಹೇಳೋಣವೆಂದರೆ ಹೇಳಲು ಬರುವುದಿಲ್ಲ. ಹಾಗಾದರೆ 'ಸಿಂಹೋ ದೇವದತ್ತಃ' ಎಂಬ ಪ್ರಯೋಗವನ್ನೂ ಔಪಚಾರಿಕವೆಂದು ಹೇಳುವುದು ಬೇಡವೆಂದರೆ ಅದೂ ಸಾಧ್ಯವಿಲ್ಲ. ಒಂದು ಪ್ರಯೋಗವನ್ನು ಔಪಚಾರಿಕವೆಂದು ಹೇಳಲು ಮುಖ್ಯಾರ್ಥಕ್ಕೆ ಬಾಧವಿರಬೇಕು. ದೇವದತ್ತನಲ್ಲಿ ಸಿಂಹಾಶ್ರಯತ್ವವಾಗಲೀ ಸಿಂಹನಿಯಾಮಕತ್ವ ವಾಗಲೀ ಇಲ್ಲದಿರುವುದರಿಂದ ಅಭೇದವನ್ನು ಇಟ್ಟುಕೊಂಡು ಪ್ರಯೋಗ ಕೂಡುವುದಿಲ್ಲ. ಆದ್ದರಿಂದ 'ದೇವದತ್ತನು ಸಿಂಹಸದೃಶ' ಎಂದು ಔಪಚಾರಿಕ ಅರ್ಥವನ್ನು ಮಾಡಬೇಕು. ಆದರೆ ಮಾರಕನಾದ್ದರಿಂದ 'ಪರಮಾತ್ಮನು ಮೃತ್ಯು'

ಎಂದು ಹೇಳಲು ಯಾವುದೇ ಬಾಧಕವಿಲ್ಲವಾದ್ದರಿಂದ ಔಪಚಾರಿಕ ಅರ್ಥವನ್ನು ಮಾಡಬಾರದು.

ಅವ್ಯಕ್ತಮಚಲಂ ಶಾಂತಂ ನಿಷ್ಕಲಂ ನಿಷ್ಕ್ರಿಯಂ ಪರಂ ।
ಯೋ ವೇದ ಹರಿಮಾತ್ಮಾನಂ ಸ ಭಯಾದನುಮುಚ್ಯತೇ ॥

ಎಂದು ಪಿಪ್ಪಲಾದಶಾಖೆಯಲ್ಲಿ ಹೇಳಿದಂತೆ ಹರಿಯೇ ಮುಖ್ಯವಾಗಿ ಅವ್ಯಕ್ತ ಶಬ್ದವಾಚ್ಯ. ಪ್ರಕೃತಿಯು ಪರಮಾತ್ಮನ ಶರೀರರೂಪವಾದ್ದರಿಂದ ಅಮುಖ್ಯವಾಗಿ ಅವ್ಯಕ್ತಶಬ್ದವಾಚ್ಯವಾಗಿದೆ. ಪ್ರಕೃತ್ಯಾದಿಗಳಲ್ಲಿರುವ ಅವರತ್ವ ಧರ್ಮ ನಿಯಾಮಕ ನಾದ್ದರಿಂದ ಪರಮಾತ್ಮನು ಅವರ ಶಬ್ದವಾಚ್ಯನಾಗಿದ್ದಾನೆ.

**ಸೂತ್ರಾರ್ಥ—**

## ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ ಓಂ

ಏಕೇಷಾಂ=ಕೆಲವು ಶಾಖಿಗಳ ಶಾಖೆಗಳಲ್ಲಿ ಅನುಮಾನಿಕಮಪಿ ಅನುಮಾನ ದಿಂದ ಕಲ್ಪಿತವಾದ ಪ್ರಧಾನಾದಿಗಳೇ ಅವ್ಯಕ್ತ ಶಬ್ದದಿಂದ ವಾಚ್ಯವಾಗಿವೆ ಇತಿ ಚೇನ್ನ=ಅದು ಸರಿಯಲ್ಲ. ಏಕೆಂದರೆ ದರ್ಶಯತಿ= ಶ್ರುತಿಸ್ಮೃತಿಗಳೆಲ್ಲವೂ ವಿಷ್ಣುವೇ ಅವ್ಯಕ್ತಾದಿ ಶಬ್ದದಿಂದ ವಾಚ್ಯನೆಂದು ಪ್ರತಿಪಾದಿಸುತ್ತವೆ. ಅವ್ಯಕ್ತಾದಿಶಬ್ದ ವಾಚ್ಯತ್ವವು ಪ್ರಧಾನಾದಿಗಳಿಗೆ ಹೇಗೆ? ಎಂದರೆ ಶರೀರರೂಪಕ=ಅಸ್ವತಂತ್ರತೆಯಿಂದ ಪ್ರಾಕೃತ ಶರೀರದಿಂದ ಸದೃಶವಾದ ಪ್ರಕೃತಿಯಲ್ಲಿ ವಿನ್ಯಸ್ತ=ಇರುವ ಪರಮಾತ್ಮನನ್ನು ಗೃಹೀತೇಃ=ಅವ್ಯಕ್ತಾದಿ ಶಬ್ದಗಳಿಂದ ಸ್ವೀಕರಿಸಿದ್ದರಿಂದ.

# ಜ್ಯೋತಿರುಪಕ್ರಮಾಧಿಕರಣ (1-4-2)

'ಜ್ಯೋತಿರೂಪಕ್ರಮಾತ್ತು ತಥಾ ಹ್ಯಧೀಯತ ಏಕೇ' ಎಂಬ ಸೂತ್ರದಿಂದ ಆರಂಭವಾಗಿರುವ ಈ ಅಧಿಕರಣದಲ್ಲಿ ಕರ್ಮವಾಚಕಗಳೆಂದು ಪ್ರಸಿದ್ಧವಾದ ಜ್ಯೋತಿರಾದಿಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. 'ವಸಂತೇ ವಸಂತೇ ಜ್ಯೋತಿಷಾ ಯಜೇತ' (ಪ್ರತಿವಸಂತ ಮಾಸದಲ್ಲಿ ಜ್ಯೋತಿಷ್ಟೋಮಯಾಗ ಮಾಡಬೇಕು) ಎಂಬಲ್ಲಿರುವ ಜ್ಯೋತಿರಾದಿ ಶಬ್ದಗಳಿಂದ ವಾಚ್ಯನಾದವನು

ವಿಷಯ. ಈ ಜ್ಯೋತಿರಾದಿಶಬ್ದಗಳು ಸಮನ್ವಯಾಧಿಕರಣದಲ್ಲಿ ಸಕಲ ಶಬ್ದವಾಚ್ಯತ್ವವನ್ನು ಭಗವಂತನಿಗೆ ಹೇಳಿದ್ದರಿಂದ ಭಗವಂತನನ್ನು ಹೇಳುತ್ತವೋ? ಅಥವಾ ಜ್ಯೋತಿರಾದಿ ಶಬ್ದಗಳು ಅನ್ಯತ್ರೈವ ಪ್ರಸಿದ್ಧವಾದ್ದರಿಂದ ಕರ್ಮಗಳನ್ನು ಹೇಳುತ್ತವೋ? ಎಂಬುದು ಸಂದೇಹ.

ಜ್ಯೋತಿಃ ಮುಂತಾದ ಶಬ್ದಗಳು ಪರಮಾತ್ಮನನ್ನೇ ಹೇಳುವುದಾದರೆ ಎಲ್ಲ ಕರ್ಮಗಳೂ ಲೋಪವಾಗಬೇಕಾದೀತು. ಆದ್ದರಿಂದ ಕರ್ಮಗಳನ್ನೇ ಹೇಳುತ್ತವೆಯೇ ಹೊರತು ಪರಮಾತ್ಮನನ್ನಲ್ಲ ಎಂಬುದು ಪೂರ್ವಪಕ್ಷ. ಅನುವ್ಯಾಖ್ಯಾನದಲ್ಲಿ ಉಕ್ತವಾದ ಪೂರ್ವಪಕ್ಷಯುಕ್ತಿಯು 'ವ್ಯುತ್ಪತ್ತೇರಪ್ಯಶಕ್ಯತಾ' (ಅವಯವಶಃ ಅರ್ಥವನ್ನು ಹೇಳಲಾಗದಿರುವುದು) ಜ್ಯೋತಿಷಾಂ ಸ್ತೋಮಃ ಪದಗಳ ಅರ್ಥವು ಯಾಗದಲ್ಲಿಯೇ ಕೂಡುತ್ತದೆಯೇ ಹೊರತು ಪರಮಾತ್ಮನಲ್ಲಲ್ಲ. ಒಂದುವೇಳೆ ಜ್ಯೋತಿಷ್ಟೋಮ ಎಂಬ ಶಬ್ದ ಸಮುದಾಯವು ಪರಮಾತ್ಮನನ್ನು ಹೇಳುವುದಾದರೆ ಜ್ಯೋತಿಶ್ಶಬ್ದ ಮತ್ತು ಸ್ತೋಮಶಬ್ದಗಳು ಪರಮಾತ್ಮನ ನಾಮಗಳಾಗಲಾರವು. ಪಂಕಜ ಶಬ್ದದಿಂದ ವಾಚ್ಯವಾಗುವ ಕಮಲವು ಪಂಕ ಮತ್ತು ಜ ಎಂಬ ಈ ಎರಡು ಪದಗಳಿಂದ ವಾಚ್ಯವಾಗಲಾರದಷ್ಟೇ!

ಸಿದ್ಧಾಂತಯುಕ್ತಿಯು 'ಶಬ್ದಾರ್ಥಾನೇಕತಾ' (ಒಂದು ಶಬ್ದಕ್ಕೆ ಅನೇಕ ಅರ್ಥಗಳಿವೆ) ಇದನ್ನು ವಿವರಿಸುತ್ತಿದ್ದಾರೆ.

**ರೂಢೋ ರೂಢಿಯೋಗೋ ಮಹಾಯೋಗೋ ಮಹಾರೂಢಿ-ಯೋಗೋ ರೂಢೋಪಚಾರೋ ರೂಢಲಕ್ಷಣೋಪಚಾರೋ ಲಕ್ಷಣೇತಿ ಶಬ್ದವೃತ್ತಿಭೇದಾದ್ರೂಢಿಪೂರ್ವಕತ್ವೇನ ಮಹಾಯೋಗವೃತ್ತ್ಯಾ ಪರಮೇಶ್ವರೇऽಖಿಲಶಬ್ದವ್ಯುತ್ಪತ್ತ್ಯುಪಪತ್ತಿಃ ।। ೨ ।।**

**ಭಾವಾರ್ಥ**—ರೂಢ, ರೂಢಯೋಗ, ಮಹಾರೂಢ, ಮಹಾಯೋಗ, ಮಹಾರೂಢ ಯೋಗ, ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ ಎಂಬುದಾಗಿ ಶಬ್ದಾರ್ಥಗಳು ಬಹಳ ಇದ್ದಪ್ರಯುಕ್ತ ಜ್ಯೋತಿ ಮೊದಲಾದ ಶಬ್ದಗಳಿಗೆ ಯಾಗಾದಿಗಳಲ್ಲಿ ರೂಢಿವೃತ್ತಿಯನ್ನು ಅಂಗೀಕರಿಸಿ ಮಹಾಯೋಗ ವೃತ್ತಿಯಿಂದ ಎಲ್ಲ ಶಬ್ದಗಳೂ ಪರಮಾತ್ಮನನ್ನು ಪ್ರತಿಪಾದಿಸುತ್ತವೆ ಎಂದು ಕೂಡಿಸಬಹುದು.

ವಿವರಣೆ— ಜ್ಯೋತಿ ಶಬ್ದಕ್ಕೆ 'ಜಾತಮೋತಂ ಯಸ್ಮಿನ್ನಸೌ ಜ್ಯೋತಿಃ' (ಈ ಪರಮಾತ್ಮನಲ್ಲಿಯೇ ಜಗತ್ತು ಪ್ರವಿಷ್ಟವಾಗಿದೆ) ಎಂಬ ವ್ಯುತ್ಪತ್ತಿಯಿಂದ ಪರಮಾತ್ಮನಲ್ಲಿ ಸಮನ್ವಯವನ್ನು ಮಾಡಬಹುದಾಗಿದೆ. ರೂಢಿಯಿಂದ ಯಾಗವನ್ನೂ ಪ್ರತಿಪಾದಿಸುತ್ತದೆ. ಆದ್ದರಿಂದ ಕರ್ಮಲೋಪದ ಪ್ರಸಂಗವೂ ಇಲ್ಲ. ಇದನ್ನೇ 'ಶಬ್ದಾರ್ಥಾನೇಕತಾ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದ್ದು.

ರೂಢಿ=ಅವಯಾವಾರ್ಥ ಸಾದೃಶ್ಯ ಇವುಗಳನ್ನು ಅಪೇಕ್ಷಿಸದೆ ನಿರ್ದಿಷ್ಟ ವಸ್ತುವಿನಲ್ಲಿ ಬಹಳವಾಗಿ ಶಬ್ದವನ್ನು ಪ್ರಯೋಗಿಸುವುದು ರೂಢಿ. ಉದಾ: ಗೋಶಬ್ದ ಹಸುವಿನಲ್ಲಿ ಪ್ರಯೋಗವಾಗುವುದು ರೂಢಿವೃತ್ತಿಯಿಂದ.

ರೂಢಿಯೋಗ=ಅವಯವಾರ್ಥ ಮತ್ತು ಬಹಳ ಪ್ರಯೋಗ ಇವೆರಡರನ್ನು ಅವಲಂಬಂಸಿ ವಸ್ತುವನ್ನು ಪ್ರತಿಪಾದಿಸುವ ವೃತ್ತಿ ರೂಢಿಯೋಗ. ಉದಾ: ಪಂಕಜ ಶಬ್ದದಿಂದ ಕಮಲವನ್ನು ಬೋಧಿಸುವುದು. ಪಂಕ=ಕೆಸರಿನಲ್ಲಿ ಜ=ಹುಟ್ಟಿದು ಎಂಬ ಅವಯವಾರ್ಥ ಮತ್ತು ಬಹಳ ಪ್ರಯೋಗವೂ ಕಮಲದಲ್ಲಿಯೋ ಹೊಂದುವುದು.

ಮಹಾಯೋಗ=ನಿರ್ವಚನ ಲಭ್ಯವಾದ ಅರ್ಥವು ಎಲ್ಲಿ ನಿರವಧಿಕವಾಗಿರುವುದೋ ಅದನ್ನು ಮಹಾಯೋಗವೆನ್ನುವರು. ಉದಾ: ಇಂದ್ರ ಶಬ್ದದಿಂದ ಪರಮಾತ್ಮನ ಪ್ರತಿಪಾದನೆ. ಇಂದ್ರಶಬ್ದದ ನಿರ್ವಚನಲಭ್ಯವಾದ ಅರ್ಥಐಶ್ವರ್ಯ. ಅದು ನಿರವಧಿಕವಾಗಿ ಪರಮಾತ್ಮನಲ್ಲಿದೆ.

ಮಹಾರೂಢಿಯೋಗ=ನಿರ್ವಚಲಭ್ಯವಾದ ಅರ್ಥವು ಅಪರಿಮಿತವಾಗಿದ್ದು ಪ್ರಯೋಗವೂ ಅಧಿಕವಾಗಿದ್ದರೆ ಮಹಾಯೋಗರೂಢಿ. ಉದಾ: ನಾರಾಯಣಶಬ್ದ ಪರಮಾತ್ಮಬೋಧಕ. ನಿರ್ವಚನಲಭ್ಯವಾದ ಗುಣಪೂರ್ಣತ್ವವೆಂಬ ಅರ್ಥ, ಮತ್ತು ಪ್ರಯೋಗ ಬಾಹುಲ್ಯವೂ ಪರಮಾತ್ಮನಲ್ಲಿರುವುದರಿಂದ ನಾರಾಯಣ ಶಬ್ದವು ಮಹಾಯೋಗರೂಢಿಯಿಂದ ಪರಮಾತ್ಮನನ್ನು ತಿಳಿಸುತ್ತದೆ.

ರೂಢೋಪಚಾರಃ=ಔಪಚಾರಿಕ ಪ್ರಯೋಗವೂ ಇದ್ದು ಬಹಳ ಪ್ರಯೋಗವಿದ್ದರೆ ರೂಢೋಪಚಾರವೆನ್ನುತ್ತಾರೆ. ಉದಾ: 'ಅಯಃಪಿಂಡಃ ದಹತಿ' ಎಂಬ ಪ್ರಯೋಗ ಸುಡುವುದು ಬೆಂಕಿಯೇ ಹೊರತು ಕಬ್ಬಿಣವಲ್ಲ. ಇದು ಔಪಚಾರಿಕ ಪ್ರಯೋಗ. ಪ್ರಯೋಗಬಾಹುಲ್ಯವೂ ಇದೆ.

ರೂಢಲಕ್ಷಣಾ=ಮುಖ್ಯಾರ್ಥಕ್ಕೆ ಬಾಧವಿದ್ದು ಪ್ರಯೋಗಬಾಹುಲ್ಯದಿಂದ ಮುಖ್ಯಾರ್ಥದ ಸಂಬಂಧದಿಂದ ಬೇರೆಯದನ್ನು ಬೋಧಿಸುವುದು. ಉದಾ: 'ಮಾರ್ಗಾಃ ಚಲಂತಿ' ಮಾರ್ಗ ಚಲಿಸಲಾರದು. ಬಹು ಜನರ ಪ್ರಯೋಗವೂ ಇರುತ್ತದೆ. ಆದ್ದರಿಂದ 'ಮಾರ್ಗಸ್ಥರು ಚಲಿಸುತ್ತಾರೆ' ಎಂಬ ಅರ್ಥವನ್ನು ತಿಳಿಸುತ್ತದೆ.

ಉಪಚಾರಃ=ಇದು ಔಪಚಾರಿಕ ಪ್ರಯೋಗ. ಉದಾ: ಚಿತ್ರದಲ್ಲಿರುವ ಸಿಂಹವನ್ನು ಸಿಂಹವೆಂದು ಕರೆಯುವುದು.

ಲಕ್ಷಣಾ=ಮುಖ್ಯಾರ್ಥಕ್ಕೆ ಬಾಧವಿದ್ದಾಗ ಬೇರೆ ವಸ್ತುವನ್ನು ಪ್ರತಿಪಾದಿಸಿದರೆ ಅದು ಲಕ್ಷಣಾ. ಇದು ಮೂರು ವಿಧ. ಜಹಲ್ಲಕ್ಷಣಾ, ಅಜಹಲ್ಲಕ್ಷಣಾ, ಲಕ್ಷಿತಲಕ್ಷಣಾ ಎಂದು.

**ಸೂತ್ರಾರ್ಥ—**

**ಓಂ ಜ್ಯೋತಿರುಪಕ್ರಮಾತ್ತು ತಥಾಹ್ಯಧೀಯತ ಏಕೇ ಓಂ**

ಹಿ=ಯಾವ ಕಾರಣದಿಂದ ಉಪಕ್ರಮಾತ್ತತು='ಏಷ ಇಮಂ ಲೋಕಮಭ್ಯಾರ್ಚತ್' ಎಂದು ಉಪಕ್ರಮಮಾಡಿ ತಥಾ=ಎಲ್ಲ ಶಬ್ದಗಳು ಯೋಗವೃತ್ತಿಯಿಂದ ವಿಷ್ಣುಮಾತ್ರ ಪ್ರತಿಪಾದಕಗಳೆಂದು ಏಕೇ=ಕೆಲವು ಶಾಖೆಗಳು ಅಧೀಯತೇ=ಹೇಳುತ್ತಾರೆ. ಆದ್ದರಿಂದ ಜ್ಯೋತಿಃ=ಜ್ಯೋತಿಷ್ಟೋಮಾದಿಕರ್ಮ ವಾಚಕವೆಂದು ಪ್ರಸಿದ್ಧವಾದ 'ವಸಂತೇ ವಸಂತೇ' ಎಂಬ ಶ್ರುತಿಯಲ್ಲಿನ ಜ್ಯೋತಿಃ ಶಬ್ದವು ವಿಷ್ಣುವನ್ನೇ ಹೇಳುತ್ತದೆ.

## ನ ಸಂಖ್ಯೋಪಸಂಗ್ರಹಾಧಿಕರಣ (1-4-3)

ಓಂ ನ ಸಂಖ್ಯೋಪಸಂಗ್ರಹಾದೇವ ನಾನಾಭಾವಾದತಿರೇಕಾಚ್ಚ' ಎಂಬ ಸೂತ್ರದಿಂದ ಆರಂಭಗೊಂಡು ಈ ಅಧಿಕರಣದಲ್ಲಿ ಪಂಚಜನ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. 'ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ತಿಷ್ಠತಃ' ಎಂಬ ಶ್ರುತಿಯಲ್ಲಿ ಪಂಚಜನ ಶಬ್ದವು ಶ್ರುತವಾಗಿದೆ. ಸಮನ್ವಯಾಧಿ ಕರಣದಲ್ಲಿ ಸಕಲಶಬ್ದವಾಚ್ಯತ್ವವನ್ನು ವಿಷ್ಣುವಿಗೆ ಸಮರ್ಥನೆ ಮಾಡಿದ್ದರಿಂದ ಈ

ಪಂಚಜನ ಶಬ್ದವಾಚ್ಯನೂ ವಿಷ್ಣುವೋ? ಅಥವಾ ಬಹುತ್ವ ಶ್ರುತವಾಗಿರುವುದರಿಂದ ಇತರರೋ? ಎಂಬುದು ಸಂದೇಹ.

'ಯಸ್ಮಿನ್ ಪಂಚ...' ಎಂಬಲ್ಲಿ 'ಯಸ್ಮಿನ್' ಎಂಬುದಾಗಿ ಆಶ್ರಯನಾಗಿ ಉಕ್ತನಾದವನು ವಿಷ್ಣುವೆಂದಾದರೆ ಆಧೇಯವಾಗಿ ಹೇಳಲ್ಪಟ್ಟ ಪಂಚಜನವಾಗಲೀ ಆಕಾಶವಾಗಲೀ ವಿಷ್ಣುವಾಗಲು ಸಾಧ್ಯವಿಲ್ಲ. ಒಬ್ಬನೇ ಆಧಾರವೂ ಆಧೇಯವೂ ಆಗುವುದು ವಿರುದ್ಧವಾಗಿದೆ. ಇದನ್ನೇ ಅನುವ್ಯಾಖ್ಯಾನದಲ್ಲಿ 'ಪರಸ್ಪರವಿರೋಧಃ' (ಒಬ್ಬನಲ್ಲಿ ಆಧೇಯತ್ವ, ಆಧಾರತ್ವಗಳು ವಿರುದ್ಧ) ಎಂಬುದನ್ನು ತಿಳಿಸಿದ್ದಾರೆ.

'ಬಹುರೂಪತ್ವಮೀಶಸ್ಯ' (ಪರಮಾತ್ಮನಿಗೆ ಬಹಳ ರೂಪಗಳಿವೆ) ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ಬಹುರೂಪತ್ವಾದಧಿಕರಣಾಧೇಯತ್ವಾದಿಕಂ ತಸ್ಯೈವ ಯುಜ್ಯತೇ ॥ ೩ ॥**

**ಭಾವಾರ್ಥ**—ಬಹಳ ರೂಪಗಳಿರುವುದರಿಂದ ಅಧಿಕರಣತ್ವ, ಆಧೇಯತ್ವ ಮುಂತಾದ ಧರ್ಮಗಳು ಒಬ್ಬನಿಗೇ ಕೂಡುತ್ತವೆ.

**ವಿವರಣೆ**— ಪರಮಾತ್ಮನೇ ಪಂಚಜನ ಶಬ್ದವಾಚ್ಯ ಎಂಬುದು ಸಿದ್ಧಾಂತ. ಅವನು ಒಬ್ಬನೇ ಆಗಿದ್ದರೂ ನಾನಾರೂಪಗಳನ್ನು ಧರಿಸಿರುವುದರಿಂದ ಒಬ್ಬನಿಗೇ ಆಧಾರತ್ವ ಆಧೇಯತ್ವವೂ ಉಪಪನ್ನವಾಗುತ್ತದೆ.

ಮೂಲದಲ್ಲಿರುವ ಆದಿಶಬ್ದದಿಂದ ಈಶತ್ವ-ಆಧೇಯತ್ವಗಳನ್ನು ಏಕತ್ವ-ಬಹುತ್ವ ಗಳನ್ನು ಸ್ವೀಕರಿಸಬೇಕು. ಬೇರೆ ಕಡೆಯಲ್ಲಿ ವಿರುದ್ಧವಾದ ಆಧಾರತ್ವ-ಆಧೇಯತ್ವ ಗಳು ಅವನೊಬ್ಬನಲ್ಲಿಯೇ ಹೇಗೆ ಕೂಡುತ್ತವೆ? ಎಂದರೆ 'ಬಹುರೂಪತ್ವಾದ್ ಈಶಸ್ಯ' ಅವನು ಈಶ್ವರನಾದ್ದರಿಂದ ಅವನಲ್ಲಿ ಐಶ್ವರ್ಯವಿರುವುದರಿಂದ ಕೂಡುತ್ತವೆ. ಬೇರೆಯವರಲ್ಲಿ ಐಶ್ವರ್ಯವಿಲ್ಲದಿರುವುದರಿಂದ ಆಧಾರತ್ವ-ಆಧೇಯತ್ವಗಳು ವಿರುದ್ಧವೇ ಆಗುತ್ತವೆ.

**ಸೂತ್ರಾರ್ಥ**—

**ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ ಓಂ**

ನಾನಾಭಾವತ್=ಪರಮಾತ್ಮನಿಗೆ ಬಹುರೂಪಗಳಿರುವುದರಿಂದ ಅತಿರೇಕಾಚ್ಚ ಸಂಖ್ಯೋಪಸಂಗ್ರಹಾದಪಿ='ಪಂಚ' ಎಂದು ಬಹುತ್ವಸಂಖ್ಯೆಯನ್ನು ಹೇಳಿದ್ದರೂ 'ಯಸ್ಮಿನ್' ಎಂದು ಆಧಾರಾಧೇಯಭಾವವನ್ನು ಹೇಳಿದ್ದರೂ ವಿಷ್ಣುವಿಗೆ ಪಂಚಜನ ಶಬ್ದವಾಚ್ಯತ್ವಕ್ಕೆ ವಿರೋಧವಿಲ್ಲ.

## ಆಕಾಶಾಧಿಕರಣ (1-4-4)

'ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ' ಎಂಬ ಅಧಿಕರಣದಲ್ಲಿ ಕಾರಣಪದೋಕ್ತಗಳಾದ ಅವಾಂತರಕಾರಣವಾಚಕಗಳಾದ ಆಕಾಶಾದಿ ಪದಗಳ ಸಮನ್ವಯವನ್ನು ಮಾಡಲಾಗಿದೆ. ಸಕಲಶಬ್ದವಾಚ್ಯತ್ವವು ವಿಷ್ಣುವಿಗೆ ಇರುವುದರಿಂದ ಇಲ್ಲಿರುವ ಆಕಾಶಾದಿಶಬ್ದಗಳಿಂದ ವಿಷ್ಣು ವಾಚ್ಯನೋ? ಒಬ್ಬನಿಗೆ ಕಾರ್ಯತ್ವ ಕಾರಣತ್ವಗಳು ವಿರುದ್ಧವಾದ್ದರಿಂದ ವಿಷ್ಣುವಾಚ್ಯನಾಗದೇ ಆಕಾಶಾದಿಗಳು ಮಾತ್ರ ವಾಚ್ಯವಾಗುವವೋ? ಎಂಬುದು ಸಂದೇಹ.

'ಆತ್ಮನ ಆಕಾಶಃ ಸಂಭೂತಃ. ಆಕಾಶಾದ್ ವಾಯುಃ' (ಆತ್ಮನಿಂದ ಆಕಾಶವು ಹುಟ್ಟಿತು. ಆಕಾಶದಿಂದ ವಾಯು ಹುಟ್ಟಿದೆ) ಎಂಬ ಶ್ರುತಿಯಲ್ಲಿ ಆತ್ಮನ ಕಾರ್ಯವಾದದ್ದು ವಾಯುವಿಗೆ ಕಾರಣವಾದದ್ದು ಎಂದು ಹೇಳಲ್ಪಟ್ಟಿರುವ ಆಕಾಶವು ವಿಷ್ಣುವಾಗಲು ಸಾಧ್ಯವಿಲ್ಲ. ಸಮಸ್ತ ಪ್ರಪಂಚಕ್ಕೆ ಕಾರಣನಾದ ಆವನಲ್ಲಿ 'ನ ಜಾಯತೇ' ಎಂಬ ವಾಕ್ಯವು ಕಾರ್ಯತ್ವವನ್ನು ನಿಷೇಧಮಾಡುತ್ತಿದೆ. ಮತ್ತು ಕಾರ್ಯತ್ವ ಕಾರಣತ್ವಗಳು ಒಬ್ಬನಲ್ಲಿಯೇ ಬರುವುದು ವಿರುದ್ಧ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಯುಕ್ತಿಯನ್ನೇ ಅನುವ್ಯಾಖ್ಯಾನದಲ್ಲಿ '**ವಿರೋಧಃ ಕಾರ್ಯತದ್ವತ್ತೋಃ**' (ಕಾರ್ಯ ಕಾರಣಗಳಿಗೆ ವಿರೋಧವಿರುವುದರಿಂದ) ಎಂದು ಹೇಳಿದ್ದಾರೆ.

'ಈಶಸ್ಯ ವ್ಯಕ್ತವ್ಯಕ್ತಿವಿಶೇಷಿತಾ' (ಪರಮಾತ್ಮನಿಗೆ ಅಭಿವ್ಯಕ್ತಿ ಅನಭಿವ್ಯಕ್ತಿಗಳೆಂಬ ವಿಶೇಷವಿರುವುದರಿಂದ) ಎಂದು ಹೇಳಿದ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ವ್ಯಕ್ತ್ಯಪೇಕ್ಷಯಾ ಕಾರ್ಯತ್ವಂ ಚ ॥ ೪ ॥**

**ಭಾವಾರ್ಥ—**ಅಭಿವ್ಯಕ್ತಿಯನ್ನಿಟ್ಟುಕೊಂಡು ಕಾರ್ಯತ್ವವು ಕೂಡುತ್ತದೆ. ಚಶಬ್ದವು 'ಅವ್ಯಕ್ತಪೇಕ್ಷಯಾ ಕಾರಣತ್ವಂ' ಎಂಬುದಕ್ಕೆ ಸಮುಚ್ಚಾಯಕವಾಗಿದೆ. ಅನಭಿವ್ಯಕ್ತಿಯನ್ನಿಟ್ಟುಕೊಂಡು ಕಾರಣತ್ವವೂ ಕೂಡುತ್ತದೆ ಎಂದರ್ಥ.

**ವಿವರಣೆ—** ವಿಷ್ಣುವೇ ಅವಾಂತರಕಾರಣಗಳಾದ ಆಕಾಶಾದಿಗಳಲ್ಲಿರುವವನಾಗಿ ಆಕಾಶಾದಿ ಶಬ್ದವಾಚ್ಯನಾಗಿದ್ದಾನೆ ಎಂಬುದು ಸಿದ್ಧಾಂತ. ಅದು ಹೇಗೆಂದರೆ ವಿಷ್ಣುವಿನಿಂದ ಆಕಾಶ ಮೊದಲಾದವು ಹುಟ್ಟುವಾಗ ಆಕಾಶಾದಿಗಳಲ್ಲಿರುವ ಬ್ರಹ್ಮನು ಅಭಿವ್ಯಕ್ತನಾಗುತ್ತಾನೆ. ಹೀಗೆ ಅಭಿವ್ಯಕ್ತಿ ರೂಪದಿಂದ ಕಾರ್ಯತ್ವವು ಬ್ರಹ್ಮನಿಗೆ ಇದೆ. ವಾಯುಮುಂತಾದವುಗಳಲ್ಲಿರುವ ರೂಪದ ಅಭಿವ್ಯಕ್ತಿಗೆ ಕಾರಣನಾದ್ದರಿಂದ ಅವನಲ್ಲಿ ಕಾರಣತ್ವವೂ ಇದೆ. 'ಯ ಆಕಾಶೇ ತಿಷ್ಠನ್, ಯೋ ವಾಯೌ ತಿಷ್ಠನ್' ಎಂಬುದಾಗಿ ಶ್ರುತಿಗಳಲ್ಲಿ ಆಕಾಶ, ವಾಯು ಮೊದಲಾದವುಗಳಲ್ಲಿ ನಿಯಾಮಕನಾಗಿದ್ದಾನೆ ಎಂದು ಪರಮಾತ್ಮನಿಗೆ ಬಹುರೂಪಗಳಿರುವುದರಿಂದ ಅವುಗಳಲ್ಲಿ ಅಭಿವ್ಯಕ್ತಿ ಅನಭಿವ್ಯಕ್ತಿಗಳನ್ನಿಟ್ಟುಕೊಂಡು ಕಾರ್ಯತ್ವ, ಕಾರಣತ್ವಗಳನ್ನು ಹೇಳಲು ಯಾವುದೇ ಬಾಧಕವಿಲ್ಲ.

**ಸೂತ್ರಾರ್ಥ—**

**ಓಂ ಕಾರಣತ್ವೇನ ಚಾಕಾಶಾದಿಷು ಯಥಾವ್ಯಪದಿಷ್ಟೋಕ್ತೇಃ ಓಂ ॥**

ಯಥಾವ್ಯಪದಿಷ್ಟೋಕ್ತೇಃ='ಸ ಯೋಽತೋಽಶ್ರುತಃ' ಮುಂತಾದ ಶ್ರುತಿಗಳಲ್ಲಿ ಯಾವರೀತಿ ಅವಿದಿತತ್ವಾದಿರೂಪಗಳಿಂದ ಹೇಳಲ್ಪಟ್ಟಿದ್ದಾನೋ ಹಾಗೆಯೇ ಆಕಾಶಾದಿಷು ಚ=ಆಕಾಶಾದಿಗಳಲ್ಲಿಯೂ 'ಯಮಾಕಾಶೋ ನ ವೇದ' ಮುಂತಾದ ವಾಕ್ಯಗಳಲ್ಲಿ ಹೇಳಲ್ಪಟ್ಟಿದ್ದಾನೆ. ಕಾರಣತ್ವೇನ 'ಆತ್ಮನ ಆಕಾಶಃ ಸಂಭೂತಃ ಆಕಾಶಾದ್ ವಾಯುಃ' ಮುಂತಾದ ಶ್ರುತಿಗಳಲ್ಲಿ ಕಾರ್ಯವೆಂದೂ ಕಾರಣನೆಂದೂ ಹೇಳಲ್ಪಟ್ಟಿರುವ ಆಕಾಶ ಮುಂತಾದವು ಆಕಾಶಾದಿಷು=ಆಕಾಶ, ವಾಯು ಮೊದಲಾದ ಕಾರ್ಯ, ಕಾರಣವಸ್ತುಗಳಲ್ಲಿರುವವನು ವಿಷ್ಣುವೇ ಹೊರತು ಭೂತಾಕಾಶ ಮೊದಲಾದವುಗಳಲ್ಲ.

# ಪ್ರಕೃತ್ಯಧಿಕರಣ (1-4-6)

ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿ ಪ್ರಕೃತಿ ಮೊದಲಾದ ಸ್ತ್ರೀಲಿಂಗ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಸಕಲ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಹೇಳಿದ್ದರಿಂದ ಪ್ರಕೃತಿಶಬ್ದವಾಚ್ಯನಾದವನು ವಿಷ್ಣುವೋ? ಪ್ರಕೃತಿಶಬ್ದಕ್ಕೆ ಅನ್ಯತ್ರೈವ (ಪ್ರಕೃತಿಯಲ್ಲಿಯೇ) ಪ್ರಸಿದ್ಧಿಯಿರುವುದರಿಂದ ಪ್ರಕೃತಿಯೋ? ಎಂಬುದು ಸಂದೇಹ.

'ಏಷಾ ಹ್ಯೇವ ಪ್ರಕೃತಿಃ' ಎಂಬಲ್ಲಿರುವ ಪ್ರಕೃತಿಶಬ್ದವಾಚ್ಯನು ವಿಷ್ಣುವಲ್ಲ. ಸ್ತ್ರೀಲಿಂಗ ಶಬ್ದದಿಂದ ವಾಚ್ಯನಾಗಬೇಕಾದರೆ ಸ್ತ್ರೀತ್ವವಿರಬೇಕು. 'ನೈನಂ ವಾಚಾ ಸ್ತ್ರೀಯಂ ಬ್ರುವನ್' (ವಿಷ್ಣುವನ್ನು ಸ್ತ್ರೀಲಿಂಗದಿಂದ ಹೇಳಬಾರದು) ಎಂಬ ಶ್ರುತಿಯು ವಿಷ್ಣುವಿಗೆ ಸ್ತ್ರೀತ್ವವನ್ನು ನಿಷೇಧಿಸಿದೆ. ಆದ್ದರಿಂದ ಸ್ತ್ರೀಲಿಂಗದ ಪ್ರಕೃತಿ ಮೊದಲಾದ ಶಬ್ದದಿಂದ ವಾಚ್ಯನಾದವನು ವಿಷ್ಣುವಲ್ಲ ಹೊರತು ಜಡಪ್ರಕೃತಿಯೇ ಎಂಬುದು ಪೂರ್ವಪಕ್ಷ. ಇದೇ ಅನುವ್ಯಾಖ್ಯಾನದಲ್ಲಿ 'ಸ್ತ್ರೀಲಿಂಗತ್ವಂ' (ಸ್ತ್ರೀಲಿಂಗದ ಶಬ್ದವಿರುವುದರಿಂದ ವಿಷ್ಣು ಪ್ರಕೃತಿಶಬ್ದವಾಚ್ಯನಲ್ಲ) ಎಂದು ಪೂರ್ವಪಕ್ಷ ಯುಕ್ತಿಯಾಗಿ ಹೇಳಲ್ಪಟ್ಟಿದೆ.

ಪ್ರಕೃತಿಶಬ್ದವಾಚ್ಯನಾದವನು ವಿಷ್ಣುವೇ ಎಂಬುದು ಸಿದ್ಧಾಂತ. 'ಹಂತೈ ತಮೇವ ಪುರುಷಂ ಸರ್ವಾಣಿ ನಾಮಾನಿ' (ಎಲ್ಲ ನಾಮಗಳೂ ಈ ವಿಷ್ಣುವನ್ನು ಹೇಳುತ್ತವೆ) ಎಂದು ಶ್ರುತಿಯು ಪ್ರತಿಜ್ಞೆ ಮಾಡಿ 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ' (ನದಿಗಳು ಸಮುದ್ರಾಭಿಮುಖವಾಗಿ ಹರಿದು ಸಮುದ್ರವನ್ನೇ ಸೇರುವಂತೆ ಸಕಲ ಶಬ್ದಗಳೂ ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂದು ದೃಷ್ಟಾಂತಪೂರ್ವಕವಾಗಿ ಎಲ್ಲ ಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ ಎಂದು ತಿಳಿಸುತ್ತಿದೆ.) ಪರಮಾತ್ಮನು ಸ್ತ್ರೀರೂಪಿಯೂ ಪುರುಷರೂಪಿಯೂ ಆಗಿದ್ದಾನೆ. ಆದ್ದರಿಂದ ಸ್ತ್ರೀಲಿಂಗದ ಪ್ರಕೃತಿ ಮುಂತಾದ ಶಬ್ದದಿಂದ ವಾಚ್ಯನಾಗಿದ್ದಾನೆ. 'ನೈನಂ ವಾಚಾ ಸ್ತ್ರೀಯಂ ಬ್ರುವನ್' ಎಂಬ ವಾಕ್ಯವು ಕೇವಲ ಸ್ತ್ರೀತ್ವವನ್ನು ನಿಷೇಧ ಮಾಡುತ್ತಿದೆ. ಪರಮಾತ್ಮನಿಗಾದರೂ ಕೇವಲ ಸ್ತ್ರೀತ್ವವಿಲ್ಲವೇ

ಇಲ್ಲ. ಪುರುಷತ್ವವೂ ಇರುವುದರಿಂದ ಅದರ ವಿರೋಧವೂ ಬರುವುದಿಲ್ಲ. ಸ್ತ್ರೀತ್ವವೆಂದರೆ ಅವ್ಯವಧಾನೇನ ಪ್ರಸೂತಿಕಾರಣತ್ವ (ಯಾವ ತಡೆಯೂ ಇಲ್ಲದೆ ಪ್ರಸವಕ್ಕೆ ಕಾರಣವಾಗುವುದು.) ಎಂದು. ಇಂತಹ ಸ್ತ್ರೀತ್ವವು ತನ್ನ ಮುಖ ಬಾಹು ಮುಂತಾದವುಗಳಿಂದ ನೇರವಾಗಿ (ವ್ಯವಧಾನವಿಲ್ಲದೆ) ಬ್ರಾಹ್ಮಣ ಕ್ಷತ್ರಿಯಾದಿಗಳ ಪ್ರಸವಕ್ಕೆ ಕಾರಣನಾದ ವಿಷ್ಣುವಿನಲ್ಲಿ ಇದ್ದೇ ಇದೆ. ಆದ್ದರಿಂದ ಸ್ತ್ರೀಲಿಂಗ-ಶಬ್ದಗಳಿಂದ ವಾಚ್ಯನಾಗಲು ಯಾವುದೇ ಅಡ್ಡಿಯಿಲ್ಲ. ಇದನ್ನೇ ಶ್ರೀಮದಾಚಾರ್ಯರು **'ಉತ್ಪಾದನಂ ಸ್ವದೇಹಾಚ್ಚ'** (ತನ್ನ ಶರೀರದಿಂದಲೇ ಜಗತ್ತನ್ನು ಉತ್ಪಾದಿಸುವುದು) ಎಂಬುದಾಗಿ ಸಿದ್ಧಾಂತ ಪ್ರಾಪಕ ಯುಕ್ತಿಯನ್ನು ತಿಳಿಸಿದ್ದಾರೆ.

**ಸೂತ್ರಾರ್ಥ—**

**ಓಂ ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ ॥**

ಪ್ರಕೃತಿಶ್ಚ=ಪ್ರಕೃತಿಯೇ ಮೊದಲಾದ ಸ್ತ್ರೀಲಿಂಗ ಶಬ್ದಗಳಿಂದ ವಿಷ್ಣುವಾಚ್ಯನಾಗಿದ್ದಾನೆ ಎಂದು ಒಪ್ಪಬೇಕು. ಆವಾಗಲೇ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ =ಪ್ರತಿಜ್ಞೆ ಮತ್ತು ದೃಷ್ಟಾಂತಗಳ ವಿರೋಧವಿಲ್ಲದಂತಾಗುತ್ತದೆ.

## ಏತೇನ ಸರ್ವೇ ವ್ಯಾಖ್ಯಾತಾಧಿಕರಣ (1-4-7)

'ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ' ಎಂಬ ಸೂತ್ರದಿಂದ ಪ್ರಾರಂಭವಾದ ಅಧಿಕರಣದಲ್ಲಿ 'ಅಸದ್ ವಾ ಇದಮಗ್ರ ಆಸೀತ್', 'ಏಷ ಹ್ಯೇವ ಶೂನ್ಯ' ಮುಂತಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಅಸತ್, ಶೂನ್ಯ ಮೊದಲಾದ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. 'ತತ್ತು ಸಮನ್ವಯಾತ್' ಎಂಬಲ್ಲಿ ಸರ್ವಶಬ್ದವಾಚ್ಯತ್ವವನ್ನು ಹೇಳಿದ್ದರಿಂದ ಈ ಅಸದಾದಿಶಬ್ದವಾಚ್ಯನು ವಿಷ್ಣುವೋ? ಈ ಶಬ್ದಗಳಿಗೆ ಅನ್ಯತ್ರೈವ (ಅಭಾವಾದಿಗಳಲ್ಲಿಯೇ) ಪ್ರಸಿದ್ಧಿಯಿರುವುದರಿಂದ ಅಭಾವಾದಿಗಳು ವಾಚ್ಯವೋ? ಎಂಬುದು ಸಂದೇಹ. ಅಸದಾದಿ ಶಬ್ದಗಳು ಅಭಾವ ರೂಪವಾದ ವಸ್ತುವನ್ನು ಬೋಧಿಸುತ್ತವೆ. ವಿಷ್ಣುವು ಭಾವರೂಪನಾಗಿದ್ದಾನೆ. ಒಂದುವೇಳೆ ಅಸತ್ ಮೊದಲಾದ ಶಬ್ದಗಳಿಂದ ವಾಚ್ಯನಾದರೆ ವಿಷ್ಣುವು ಅಭಾವಾದಿಗಳಂತೆ ಸ್ವರೂಪವೇ ಇಲ್ಲದವನಾಗಬೇಕಾದೀತು.

ಆದ್ದರಿಂದ ಅಸತ್ ಶೂನ್ಯ ಮೊದಲಾದ ಶಬ್ದಗಳಿಂದ ವಿಷ್ಣುವಾಚ್ಯನಲ್ಲ ಎಂಬುದು ಪೂರ್ವಪಕ್ಷ. ಇದನ್ನೇ ಅನುವ್ಯಾಖ್ಯಾನದಲ್ಲಿ ನಿಷೇಧಃ (ಅಭಾವರೂಪತ್ವ) ಎಂದು ಪೂರ್ವಪಕ್ಷಯುಕ್ತಿಯನ್ನಾಗಿ ಹೇಳಲಾಗಿದೆ.

'ಏಷ ಹ್ಯೇವ ಶೂನ್ಯಃ' ಎಂಬ ಶ್ರುತಿಯು ಪರಮಾತ್ಮನನ್ನೇ ಶೂನ್ಯನೆಂದು ಪ್ರತಿಪಾದಿಸುವುದರಿಂದ ಪರಮಾತ್ಮನು ಶೂನ್ಯ ಮೊದಲಾದ ಶಬ್ದವಾಚ್ಯನಾಗಿದ್ದಾನೆ ಎಂಬುದು ಸಿದ್ಧಾಂತ. ಪರಮಾತ್ಮನು ದುರ್ಜನರಿಗೆ ವ್ಯಕ್ತವಾಗುವುದಿಲ್ಲವಾದ್ದರಿಂದ ನಿಷೇಧ ಪ್ರತೀತಿಗೆ ವಿಷಯನಾದ್ದರಿಂದ ಶೂನ್ಯ ಶಬ್ದವಾಚ್ಯನಾಗಬಹುದು. ಇದರಂತೆ ತುಚ್ಛ, ಅಸತ್ ಮೊದಲಾದ ಶಬ್ದಗಳಿಂದಲೂ ವಾಚ್ಯನಾಗಿದ್ದಾನೆ. ಇದನ್ನು ಶ್ರೀಮದಾಚಾರ್ಯರು 'ದುರ್ಜನಾವ್ಯಕ್ತತಾ' (ದುರ್ಜನರಿಗೆ ವ್ಯಕ್ತವಾಗದಿರುವುದು) ಎಂಬುದಾಗಿ ಸಿದ್ಧಾಂತಯುಕ್ತಿಯನ್ನಾಗಿ ಹೇಳಿದ್ದಾರೆ.

**ಸೂತ್ರಾರ್ಥ—**

**ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ ॥**

ಏತೇನ=ತದಧೀನತ್ವವೇ ಮೊದಲಾದ ಹಿಂದೆ ಹೇಳಿದ ಯುಕ್ತಿಗಳ ಸಮುದಾಯದಿಂದ ಸರ್ವೇ=ಶೂನ್ಯ ಮೊದಲಾದ ಎಲ್ಲ ಶಬ್ದಗಳೂ ವ್ಯಾಖ್ಯಾತಾಃ= ಮುಖ್ಯವೃತ್ತಿಯಿಂದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂದು ವ್ಯಾಖ್ಯಾತಾಃ= ನಿರ್ಣೀತವಾಗಿವೆ.

**ಇಲ್ಲಿಗೆ ಪ್ರಥಮಾಧ್ಯಾಯದ ನಾಲ್ಕನೇ ಪಾದವು ಮುಗಿಯಿತು.**

# ದ್ವಿತೀಯಾಧ್ಯಾಯ

ಪ್ರಥಮಾಧ್ಯಾಯದಲ್ಲಿ 'ವಿಷ್ಣುವೇ ಜಗತ್ಕಾರಣನೆಂದು ಸಕಲಶಾಸ್ತ್ರಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ' ಎಂದು ಪ್ರತಿಪಾದಿಸಲಾಗಿದೆ. ಈ ವಿಷಯದಲ್ಲಿ ಬರಬಹುದಾದ ವಿರೋಧವನ್ನು ಎರಡನೆಯ ಅಧ್ಯಾಯದಲ್ಲಿ ಪರಿಹರಿಸುತ್ತಿದ್ದಾರೆ. ವಿರೋಧವಾದರೂ ಯುಕ್ತಿಗಳಿಂದ, ಸಮಯಗಳಿಂದ (ಮತಗಳಿಂದ) ಶ್ರುತಿಗಳಿಂದ, ಯುಕ್ತಿಯುಕ್ತವಾದ ಶ್ರುತಿಗಳಿಂದ ಎಂದು ನಾಲ್ಕು ವಿಧವಾಗಿರುತ್ತದೆ. ಎಲ್ಲ ಸಮಯಗಳು ಶ್ರುತಿಗಳು ಯುಕ್ತಿಮೂಲಕವೇ ಆಗಿವೆ. ಎಲ್ಲ ಸಮಯಗಳು ತಾವು ಹೇಳುವ ವಿಷಯವನ್ನು ಯುಕ್ತಿ ಮೂಲಕವೇ ಸಮರ್ಥಿಸುತ್ತವೆ. ಶ್ರುತಿಯ ಅರ್ಥವೂ ಯುಕ್ತಿಯಿಂದಲೇ (ಉಪಕ್ರಮಾದಿಲಿಂಗಗಳಿಂದಲೇ) ನಿರ್ಣಯ ವಾಗುವುದರಿಂದ ಯುಕ್ತಿಯೇ ಪ್ರಧಾನವಾಗಿದೆ. ಆದ್ದರಿಂದ ಯುಕ್ತಿವಿರೋಧವನ್ನು ಮೊದಲನೆಯ ಪಾದದಲ್ಲಿ ಪರಿಹರಿಸುತ್ತಿದ್ದಾರೆ. ಈ ಪಾದದ ಪೂರ್ವಪಕ್ಷ ನ್ಯಾಯಗಳನ್ನು ಮತ್ತು ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೀಗೆ ಸಂಗ್ರಹಿಸಿದ್ದಾರೆ.

ಆಪ್ತತಾ ಸಮತಾಽದೃಷ್ಟಿಃ ಶ್ರುತಿಸಾಮ್ಯಂ ಬಲೋದ್ಭವಃ ।
ಸರ್ವಾನುಸಾರೋ ಲಘುತಾ ವಿಶೇಷಾದರ್ಶನಾಽಫಲೇ ॥
ಇಷ್ಟಾಸಿದ್ಧಿಶ್ಚ ನಿಯಮಃ ಪೂರ್ವಪಕ್ಷೇಷು ಯುಕ್ತಯಃ ।
ತಾ ಏವ ತ್ವತಿಬಲಾಃ ಸಿದ್ಧಾಂತಸ್ಯ ನಿಯಾಮಿಕಾಃ ॥

ಆಪ್ತತ್ವ, ಸಮತಾ, ಅದೃಷ್ಟಿ, ಶ್ರುತಿಸಾಮ್ಯ, ಬಲೋದ್ಭವ, ಸರ್ವಾನು ಸಾರ, ಲಾಘವ, ವಿಶೇಷಾದರ್ಶನ, ಅಫಲ, ಇಷ್ಟಾಸಿದ್ಧಿ, ಯುಕ್ತಿನಿಯಮ, ಇವುಗಳು ಪೂರ್ವಪಕ್ಷ ಯುಕ್ತಿಗಳು. ಈ ಯುಕ್ತಿಗಳೇ ಅತಂತ್ಯ ಬಲಿಷ್ಠಗಳಾಗಿ ಸಿದ್ಧಾಂತ ಸಾಧಕಗಳೂ ಆಗಿವೆ.

ಈ ಪಾದದಲ್ಲಿ ಒಟ್ಟು ಹನ್ನೊಂದು ಅಧಿಕರಣಗಳಿವೆ. ಅವುಗಳ ಪೂರ್ವಪಕ್ಷಯುಕ್ತಿಗಳನ್ನು ಮತ್ತು ಸಿದ್ಧಾಂತಯುಕ್ತಿಗಳನ್ನು ಕೇವಲ ಸಪಾದ ಶ್ಲೋಕದಿಂದ (ಒಂದು ಶ್ಲೋಕ, ಮತ್ತೊಂದು ಶ್ಲೋಕದ ಪಾದ) ಸಂಗ್ರಹಿಸಿದ

ಮಧ್ವಮುನಿಗಳ ಕೌಶಲದ ಮುಂದೆ ಯಾವ ವಾದಿಯೂ ನಿಲ್ಲಲಾರ ಎಂಬುದು ಪಂಡಿತರಿಗೆ ಅರ್ಥವಾಗುತ್ತದೆ. (ಗು.ದೀ.)

## ಸ್ಮೃತ್ಯಧಿಕರಣ (2-1-1)

ಓಂ ಸ್ಮೃತ್ಯನವಕಾಶದೋಷ ಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷ ಪ್ರಸಂಗಾತ್ ಓಂ ಎಂಬ ಸೂತ್ರದಿಂದ ಆರಂಭಗೊಂಡಿರುವ ಈ ಸ್ಮೃತ್ಯಧಿಕರಣದಲ್ಲಿ ಜಗಜ್ಜನ್ಮಾದಿಕರಣತ್ವವನ್ನು ವಿಷ್ಣುವಿಗೆ ಯುಕ್ತವೆಂದು ಸಮರ್ಥಿಸುತ್ತಿದ್ದಾರೆ. ಆದ್ದರಿಂದ ಜಗಜ್ಜನ್ಮಾದಿಕಾರಣತ್ವವೇ ಈ ಅಧಿಕರಣದ ವಿಷಯ. ಇತರ ದರ್ಶನಗಳ ವಿರೋಧವಿರುವುದರಿಂದ ಜಗಜ್ಜನ್ಮಾದಿಕರಣತ್ವವು ವಿಷ್ಣುವಿಗೆ ಯುಕ್ತವೋ ಅಯುಕ್ತವೋ ಎಂಬುದು ಸಂದೇಹ.

**ಪೂರ್ವಪಕ್ಷ**— ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು '**ಆಪ್ತತಾ**' (ರುದ್ರಾದಿಗಳಲ್ಲಿಯೇ ಆಪ್ತತ್ವವಿದೆ) ಎಂದು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ಸಿದ್ಧಾಂತಯುಕ್ತಿಯೂ **ಆಪ್ತತ್ವವೇ** (ರುದ್ರಾದಿಗಳಿಗಿಂತ ವಿಷ್ಣುವಿಗೇ ಆಪ್ತತ್ವವಿದೆ) ಆಗಿದೆ. ಅದನ್ನು ವಿವರಿಸುತ್ತಿದ್ದಾರೆ—

**॥ ಹರಿಃ ಓಂ ॥ ರುದ್ರಾದೀನಾಂ ಸಕಾಶಾದ್ವಿಷ್ಣ್ವಾದೀನಾಮೇವಾಪ್ತ-ತ್ವಮ್ । ಶ್ರುತ್ಯನುಸಾರಿತ್ವಾತ್ ॥ ೧ ॥**

**ಭಾವಾರ್ಥ**—ವಿಷ್ಣು ಮೊದಲಾದವರು ರಚಿಸಿರುವ ಪಂಚರಾತ್ರಸ್ಮೃತಿಗಳು ಶ್ರುತಿಸಂವಾದವುಳ್ಳವುಗಳೂ ಶ್ರುತಿ ಮೂಲಕಗಳೂ ಆದ್ದರಿಂದ ರುದ್ರಾದಿಗಳಿಗಿಂತ ವಿಷ್ಣು ಮೊದಲಾದವರಿಗೆ ಆಪ್ತತ್ವವು ನಿಶ್ಚಿತವಾಗುತ್ತದೆ.

**ವಿವರಣೆ**— ಸರ್ವಜ್ಞರಾದ ರುದ್ರಾದಿಗಳು ರಚಿಸಿದ ಪಾಶುಪತಾದಿ ಸ್ಮೃತಿಗಳು ಪ್ರಮಾಣವಾಗಿವೆ. ಅವುಗಳ ವಿರೋಧ ಬರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸುವ 'ಯತೋ ವಾ ಇಮಾನಿ...' ಮುಂತಾದ ವೇದವಾಕ್ಯಗಳು ಅಪ್ರಮಾಣ. ರುದ್ರಾದಿಗಳಲ್ಲಿ ವಿವಕ್ಷಿತಾರ್ಥತತ್ವಜ್ಞಾನ, ವಿವಕ್ಷಾ, ಕರಣಪಾಟವ ಮುಂತಾದ ಆಪ್ತತ್ವವಿದೆ. ಆದ್ದರಿಂದ ಅವರ ವಾಕ್ಯಗಳು ಆಪ್ತಿಮೂಲಕ ಮತ್ತು ನಿರ್ದುಷ್ಟಗಳಾದ್ದರಿಂದ ಪ್ರಬಲವಾಗಿವೆ. ಯಾರೂ ರಚಿಸದೇ

ಇರುವುದರಿಂದ (ಅಪೌರುಷೇಯಗಳಾದ್ದರಿಂದ) ವೇದಗಳು ಆಪ್ತಿಮೂಲಕ ವಲ್ಲವಾದ್ದರಿಂದ ದುರ್ಬಲಗಳು. ಆದ್ದರಿಂದ ಪ್ರಥಮಾಧ್ಯಾಯದಲ್ಲಿ ವೇದಗಳ ಆಧಾರದಿಂದ ಸಮರ್ಥಿಸಿದ ವಿಷ್ಣುವಿನ ಜಗಜ್ಜನ್ಮಾದಿಕಾರಣತ್ವವು ಸರಿಯಲ್ಲ ಎಂದು ಪೂರ್ವಪಕ್ಷ. ಪಂಚರಾತ್ರಾದಿಸ್ಮೃತಿಗಳು ಸರ್ವಜ್ಞರಾದ ವಿಷ್ಣ್ವಾದಿಗಳಿಂದ ಪ್ರಣೀತವಾಗಿವೆ. ಪಂಚರಾತ್ರಾದಿಗಳಲ್ಲಿ ಪ್ರತಿಪಾದಿಸಲ್ಪಟ್ಟ ವಿಷಯದಲ್ಲಿ ಶ್ರುತಿಸಂವಾದವೂ ಇದೆ. ರುದ್ರಾದಿಗಳಿಂದ ಹೇಳಲ್ಪಟ್ಟ ವಿಷಯಗಳಲ್ಲಿ ಶ್ರುತಿಸಂವಾದವಿಲ್ಲದಿರುವುದು ಮಾತ್ರವಲ್ಲದೆ ಶ್ರುತಿಗಳ ವಿರೋಧವೂ ಇದೆ. ಆದ್ದರಿಂದ ಪಂಚರಾತ್ರಾದಿಸ್ಮೃತಿಗಳು ಪಾಶುಪತಾದಿ ಸ್ಮೃತಿಗಳಿಗಿಂತ ಪ್ರಬಲ ವಾಗಿವೆ. ಹೀಗೆ ವೈಷ್ಣವಸ್ಮೃತಿ ಸಹಿತ ಶ್ರುತಿಗಳ ವಿರೋಧ ಪಾಶುಪತಾದಿ ಸ್ಮೃತಿಗಳಿಗೆ ಬರುವುದರಿಂದ ಪಾಶುಪತಾದಿಸ್ಮೃತಿಗಳೇ ಅಪ್ರಮಾಣವಾಗುತ್ತವೆ. ಶ್ರುತ್ಯನುಸಾರಿ ಯಾದ್ದರಿಂದ ವಿಷ್ಣುವಿನ ಆಪ್ತತ್ವವೇ ಮುಖ್ಯವಾದದ್ದೆಂದು ತಿಳಿಯುತ್ತದೆ. ರುದ್ರಾದಿಗಳಲ್ಲಿ ಅಜ್ಞಾನಾದಿಗಳಿವೆಯೆಂದು ಶ್ರುತಿಸಿದ್ಧವಾದ್ದರಿಂದ ಇಂತಹ ಆಪ್ತತ್ವವಿಲ್ಲ. ಆಪ್ತರಾದ ವಿಷ್ಣು ಮೊದಲಾದವರಿಂದ ರಚಿಸಲ್ಪಟ್ಟ ಪಂಚರಾತ್ರಾದಿಗಳ ಸಂವಾದವಿರುವುದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿಕಾರಣತ್ವವು ವಿಷ್ಣುವಿಗೆ ಯುಕ್ತವೇ ಆಗಿದೆ ಎಂಬುದು ಸಿದ್ಧಾಂತ.

ಈ ಅಧಿಕರಣದ ಪೂರ್ವಪಕ್ಷವು ಪಾಶುಪತಮತ, ಬೌದ್ಧಮತ, ಸಾಂಖ್ಯಮತ ಮೊದಲಾದ ಮತಗಳನ್ನು ಆಧರಿಸಿ ಹೊರಟಿದೆ. ಆದರೆ ಶ್ರೀಮದಾಚಾರ್ಯರು ಆ ಯಾವ ದುಷ್ಟಮತಗಳನ್ನೂ ಕಂಠತಃ ಹೇಳದೇ 'ರುದ್ರಾದೀನಾಂ' ಎಂಬ ಪದದಿಂದ ಸೂಚಿಸಿದ್ದಾರೆ. ಏಕೆಂದರೆ ಅಂತಹ ದುಷ್ಟಮತಗಳನ್ನೂ ಕಂಠತಃ ಹೇಳುವುದು ಪರಮಾತ್ಮನ ಅಚ್ಛಿನ್ನಭಕ್ತರಾದ ತನಗೆ ಉಚಿತವಲ್ಲವೆಂದು ಭಾವಿಸಿ ಸೂಚನೆಯನ್ನು ಮಾತ್ರ ನೀಡಿದ್ದಾರೆ.

ರುದ್ರದೇವರಿಗೆ ಆಪ್ತತ್ವವಿಲ್ಲವೆಂಬುದನ್ನು ಗುರ್ವರ್ಥದೀಪಿಕೆಯಲ್ಲಿ ವಿವರ ವಾಗಿ ಪ್ರತಿಪಾದಿಸಿದ್ದಾರೆ. ಹುಟ್ಟಿದೊಡನೆಯೇ ಸ್ಥಾನ ಸಂಪತ್ತುಗಳಲ್ಲಿ ಆಸೆಯನ್ನು ತೋರಿಸಿದ್ದರಿಂದ ರುದ್ರನಲ್ಲಿ ರಾಗವಿದೆ ಎಂದು ತಿಳಿಯುತ್ತದೆ. 'ತೇನೋಪಸೃಷ್ಟಃ ಸಂತ್ರಸ್ತಃ ಪರಾಧಾವನ್ ಸವೇಪಥುಃ' (ಭಸ್ಮಾಸುರನು ಸಮೀಪಿಸಿದಾಗ ರುದ್ರನು ಹೆದರಿದವನಾಗಿ ಬೆದರುತ್ತಾ ಓಡಿದನು.)

ಎಂಬ ಭಾಗವತದ ಮಾತಿನಿಂದ ತನ್ನನ್ನು ಕೊಲ್ಲಲು ಬಂದ ಭಸ್ಮಾಸುರನನ್ನು ಹೇಗೆ ಕೊಲ್ಲಬೇಕೆಂಬ ಉಪಾಯ ತಿಳಿಯದಿರುವುದರಿಂದ ಅಜ್ಞಾನವಿದೆ ಎಂದು ತಿಳಿಯುತ್ತದೆ. 'ರುದ್ರಸ್ಯ ತ್ವೇವ ಧನುರಾರ್ತಿಃಶಿರ ಉತ್ಪಿಪೇಕ್ಷ' ಎಂಬ ಶ್ರುತಿಯಿಂದ ತನ್ನನ್ನು ಕೊಲ್ಲಲು ಬಂದ ದೂರ್ತನ ರೂಪದಲ್ಲಿರುವ ಇಂದ್ರನ ಕಾಪಟ್ಯವನ್ನು ತಿಳಿಯದಿರುವುದರಿಂದಲೂ ಅಜ್ಞಾನವಿದೆಯೆಂದು ಸಿದ್ಧವಾಗುತ್ತದೆ. ತಾನೇ ರಾವಣನಿಗೆ 'ಚಿರಾಯುವಾಗು' ಎಂದು ವರಕೊಟ್ಟು ಅವನನ್ನು ಕೊಲ್ಲಲು ಮುಂದಾದ್ದರಿಂದ ವಿಪ್ರಲಿಪ್ಸಾ ಸಿದ್ಧವಾಗುತ್ತದೆ. ಅದರಂತೆ ಪಾರಿಜಾತಾಪಹರಣದ ಕಾಲದಲ್ಲಿ ಶ್ರೀಹರಿಯನ್ನೇ ಕೊಂದು ಬಿಡುತ್ತೇನೆ ಎಂದು ಉದ್ಯುಕ್ತನಾದ್ದರಿಂದ ಭ್ರಮವಿದೆ ಎಂದೂ ಒಪ್ಪಬೇಕಾಗುವುದರಿಂದ ರುದ್ರನಿಗೆ ಆಪ್ತತ್ವವು ಕೂಡುವುದಿಲ್ಲ. ಇದೇ ಮೊದಲಾದ ಅನೇಕ ಪ್ರಮಾಣವನ್ನು ನೀಡಿ ರುದ್ರನಿಗೆ ಆಪ್ತತ್ವವನ್ನು ನಿರಾಕರಿಸುವ ಸುಂದರವಾದ ಹೆಚ್ಚಿನ ವಿಷಯವನ್ನು ಗುರ್ವರ್ಥದೀಪಿಕೆಯಿಂದ ಜಿಜ್ಞಾಸುಗಳು ತಿಳಿದುಕೊಳ್ಳಬಹುದು. ವಿಸ್ತಾರ ಭಯದಿಂದ ಇಲ್ಲಿ ತಿಳಿಸುತ್ತಿಲ್ಲ.

**ಸೂತ್ರಾರ್ಥ—**

### ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯ ನವಕಾಶ ದೋಷ ಪ್ರಸಂಗಾತ್ ಓಂ

ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇತ್=ನಿರವಕಾಶವಾದ ಪಾಶುಪತಾದಿ ಸ್ಮೃತಿಗಳಿಂದ ವಿರೋಧವಿರುವುದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯರೂಪ ದೋಷ ಸಂಭವಿಸುತ್ತದೆ. ಎಂದರೆ ನ=ಅಲ್ಲ. ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್= ಪಾಶುಪತಾದಿಸ್ಮೃತಿಗಳಿಗಿಂತ ಪ್ರಬಲವಾದ ನಿರವಕಾಶವಾದ ಪಂಚರಾತ್ರಾದಿಸ್ಮೃತಿ ಗಳಿಂದ ವಿರೋಧ ಉಂಟಾಗುವುದರಿಂದ ಪಾಶುಪತಾದಿಸ್ಮೃತಿಗಳಿಗೇ ಅಪ್ರಾಮಾಣ್ಯರೂಪ ದೋಷವು ಬರುತ್ತದೆ.

## ನವಿಲಕ್ಷಣತ್ವಾಧಿಕರಣ (2-1-2)

ಓಂ ನವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿ ಶ್ರುತಿಸ್ಮೃತಿಗಳ ಪ್ರಾಮಾಣ್ಯವು ವಿಷಯ.

ಪ್ರಾಮಾಣ್ಯ-ಅಪ್ರಾಮಾಣ್ಯ ಪ್ರತಿಪಾದಕಗಳಾದ ಎರಡು ರೀತಿಯ ವಾಕ್ಯಗಳು ಉಪಲಬ್ಧವಾಗುವುದರಿಂದ ಶ್ರುತಿಸ್ಮೃತಿಗಳು ಪ್ರಮಾಣಗಳೋ? ಅಪ್ರಮಾಣ ಗಳೋ? ಎಂಬುದು ಸಂಶಯ.

**ಪೂರ್ವಪಕ್ಷ—** ಪಾಶುಪತಾದಿಸ್ಮೃತಿಗಳಲ್ಲಿ ಹೇಳಿರುವ ಕಾರ್ಯವನ್ನು ಮಾಡಿದಾಗ ಫಲಸಿದ್ಧಿಸುವುದಿಲ್ಲವೆಂಬ ಕಾರಣದಿಂದ ಪಾಶುಪತಾದಿಸ್ಮೃತಿಗಳು ಅಪ್ರಮಾಣಗಳಾಗುವುದಾದರೆ ವೇದದಲ್ಲಿ ಮಳೆ ಬರಲಿಕ್ಕಾಗಿ ಹೇಳಿದ ಕಾರೀರಿಯಾಗವನ್ನು ಮಾಡಿದಾಗಲೂ ಮಳೆ ಬರದಿರುವುದು ಕಂಡಿದೆ. ಹೀಗೆ ಕೆಲವು ವೇದವಾಕ್ಯಗಳು ಅಪ್ರಮಾಣವಾಗುವುದಾದರೆ ಅವುಗಳ ದೃಷ್ಟಾಂತದಿಂದ ಸಮಸ್ತ ವೇದವಾಕ್ಯಗಳೂ ಅಪ್ರಮಾಣಗಳೇ. ಇಂತಹ ವೇದವಾಕ್ಯಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವನ್ನಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ ಯುಕ್ತಿಯು 'ಸಮತಾ' (ಪಾಶುಪತಸ್ಮೃತಿಗಳಂತೆ ವೇದವಾಕ್ಯಗಳಿಗೂ ಅಪ್ರಾಮಾಣ್ಯ ಸಮಾನ) ಎಂಬುದು. ಸಿದ್ಧಾಂತ ಸಾಧಕವಾದ ಯುಕ್ತಿಯೂ 'ಸಮತಾ' ಎಂಬುದೇ (ನಿರ್ದೋಷವಾದ ಸಾಕ್ಷಿಗೆ ವೇದವು ಸಮಾನವಾಗಿದೆ) ಅದನ್ನೇ ವಿವರಿಸುತ್ತಿದ್ದಾರೆ.

**ನ ಚ ಶ್ರುತೇಃ ರುದ್ರಾದಿಸ್ಮೃತಿಸಾಮ್ಯಂ, ಕಿಂತು ಸಾಕ್ಷಿಪ್ರತ್ಯಕ್ಷಸಾಮ್ಯ ಮೇವ ನಿರಪೇಕ್ಷತ್ವಾತ್ ॥ ೨ ॥**

**ಭಾವಾರ್ಥ—**ವೇದಕ್ಕೆ ಪಾಶುಪತಸ್ಮೃತಿಯಂತೆ ಅಪ್ರಾಮಾಣ್ಯವನ್ನು ಶಂಕಿಸಬಾರದು. ಸಾಕ್ಷಿಪ್ರತ್ಯಕ್ಷಕ್ಕೆ ಹೇಗೆ ಪ್ರಾಮಾಣ್ಯವು ನಿಯತವೋ ಹಾಗೆಯೇ ಶ್ರುತಿಗೂ ಪ್ರಾಮಾಣ್ಯವು ನಿಯತವಾಗಿದೆ. ಫಲಸಂವಾದ ಮೊದಲಾದವುಗಳ ಅಪೇಕ್ಷೆಯಿಲ್ಲದಿರುವುದರಿಂದ ಸ್ವತಃ ಪ್ರಮಾಣಗಳಾದ್ದರಿಂದ ಶ್ರುತಿಗೆ ಸಾಕ್ಷಿ ಪ್ರತ್ಯಕ್ಷ ಸಾಮ್ಯವೇ ಇದೆ.

**ವಿವರಣೆ—** ಸಾಕ್ಷಿಯು ಹೇಗೆ ನಿಯಮೇನ ಪ್ರಮಾಣವೋ ಅದರಂತೆ ವೇದವೂ ನಿಯಮೇನ ಪ್ರಮಾಣವೇ ಆಗಿದೆ ಎಂದರ್ಥ.

ವಾಕ್ಯವು ಅಪ್ರಮಾಣವಾಗಬೇಕಾದರೆ ಅದನ್ನು ರಚಿಸಿದ ವ್ಯಕ್ತಿಯ ದೋಷವೇ ಕಾರಣ. ಆದ್ದರಿಂದ ಅಪೌರುಷೇಯವಾದ ವೇದವು ಅಪ್ರಮಾಣವಾಗಲು

ಸಾಧ್ಯವೇ ಇಲ್ಲ. ಆದ್ದರಿಂದ ವೇದೋಕ್ತಕರ್ಮಗಳಿಂದ ಫಲವು ಸಿಗದಿದ್ದರೆ ಕರ್ಮದಲ್ಲಿ ಉಂಟಾಗುವ ಲೋಪದೋಷಗಳೇ ಅದಕ್ಕೆ ಕಾರಣ. ಆದರೆ ಪಾಶುಪತಸ್ಮೃತಿಯು ವೇದದಂತೆ ಅಲ್ಲ. ಅದನ್ನು ರಚಿಸಿರುವ ರುದ್ರನಲ್ಲಿ ದೋಷವಿರುವುದರಿಂದ ಗ್ರಂಥದಲ್ಲಿಯೂ ದೋಷವು ಬರುತ್ತದೆ. ಆದ್ದರಿಂದ ಪಾಶುಪತಾಗಮದಲ್ಲಿ ಹೇಳಿದ ಕರ್ಮದಿಂದ ಫಲ ಸಿಗದಿದ್ದರೆ ಆ ಆಗಮವನ್ನೇ ಅಪ್ರಮಾಣವೆಂದು ಹೇಳಬೇಕಾಗುತ್ತದೆ. ಅಷ್ಟೇ ಅಲ್ಲದೆ, ವೇದೋಕ್ತಕರ್ಮಗಳನ್ನು ಅನುಷ್ಠಾನ ಮಾಡಿದಾಗ ಅದರ ಫಲ ಸಿಕ್ಕಾಗ ಮಾತ್ರ ವೇದವನ್ನು ಪ್ರಮಾಣವೆನ್ನುವುದಿಲ್ಲ. ವೇದದಲ್ಲಿ ಸಾಕ್ಷಿಯಲ್ಲಿರುವಂತೆ ಸ್ವತಃಪ್ರಾಮಾಣ್ಯವಿದೆ. ಜ್ಞಾನಕ್ಕೆ ಸಾಧನವಾದ ಆಧಾರಗಳಿಂದ ಹುಟ್ಟಿದ ಪ್ರತಿಯೊಂದು ಜ್ಞಾನವೂ ಯಥಾರ್ಥವೇ ಆಗಿರುತ್ತದೆ. ಪಾಶುಪತಾದಿಸ್ಮೃತಿಗಳಿಂದ ಉಂಟಾದ ಜ್ಞಾನದ ಪ್ರಾಮಾಣ್ಯವೂ ಸ್ವತೋಗ್ರಾಹ್ಯವೇ ಆದರೂ ಆ ಸ್ಮೃತಿಗಳು ನಿರ್ದೋಷವೆಂದು ನಿಶ್ಚಯವಾಗಿಲ್ಲದಿರುವುದರಿಂದ ಪ್ರಾಮಾಣ್ಯಗ್ರಹಣವು ಪ್ರತಿಬದ್ಧವಾಗುತ್ತದೆ. ಆನೆಯು ತಾನೇ ನಡೆಯಲು ಸಮರ್ಥವಾಗಿರುತ್ತದೆ. ಆದರೆ ದಾರಿಯಲ್ಲಿ ಮುಳ್ಳು ಇದ್ದರೆ ನಿಂತುಕೊಳ್ಳುತ್ತದೆ. ಮುಳ್ಳು ಸರಿಸಿದಾಗ ತಾನೇ ಮುಂದೆ ನಡೆಯುತ್ತದೆ. ಅದರಂತೆ ದೋಷವಿರುವುದರಿಂದ ಪಾಶುಪತಾದಿಸ್ಮೃತಿಗಳಲ್ಲಿ ಪ್ರಾಮಾಣ್ಯವನ್ನು ಗ್ರಹಿಸುವುದಿಲ್ಲ. ಅಲ್ಲಿ ಮನಸ್ಸು ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ವೇದದಲ್ಲಿ ದೋಷವಿಲ್ಲದಿರುವುದರಿಂದ ವೇದಜನ್ಯಜ್ಞಾನಕ್ಕೆ ಪ್ರಾಮಾಣ್ಯವು ಸಿದ್ಧಿಸುತ್ತದೆ. ಆದ್ದರಿಂದ ವೇದಜನ್ಯಜ್ಞಾನದ ಪ್ರಾಮಾಣ್ಯವು ಸ್ವತೋಗ್ರಾಹ್ಯವೇ ಆಗಿದೆ.

**ಸೂತ್ರಾರ್ಥ—**

## ಓಂ ನವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ

ಅಸ್ಯ=ಶ್ರುತಿಗೆ ಹಾಗೂ ವೈಷ್ಣವಸ್ಮೃತಿಗಳಿಗೆ ತಥಾತ್ವಂ=ಪಾಶುಪತಾದಿಸ್ಮೃತಿಗಳಂತೆ ಅಪ್ರಾಮಾಣ್ಯವು ನ=ಇಲ್ಲ. ಏಕೆಂದರೆ, ವಿಲಕ್ಷಣತ್ವಾತ್=ಸ್ವತಃಪ್ರಾಮಾಣ್ಯ ರೂಪ ವೈಲಕ್ಷಣ್ಯವಿರುವುದರಿಂದ ತಥಾತ್ವಂ ಚ=ಅಪೌರುಷೇಯತ್ವ ಶ್ರುತ್ಯನುಸಾರಿತ್ವ, ಸ್ವತಃ ಪ್ರಾಮಾಣ್ಯರೂಪವಾದ ವೈಲಕ್ಷಣ್ಯವಾದರೂ ಶಬ್ದಾತ್= 'ವಾಚಾ ವಿರೂಪ ನಿತ್ಯಯಾ' ಎಂಬಿವೇ ಮುಂತಾದ ವಾಕ್ಯದಿಂದ ಸಿದ್ಧವಾಗಿದೆ.

# ಅಭಿಮಾನ್ಯಧಿಕರಣ (2-1-3)

ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ ಎಂಬ ಸೂತ್ರದಿಂದ ಆರಂಭವಾಗುವ ಅಭಿಮಾನ್ಯಧಿಕರಣದಲ್ಲಿ ವೇದಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತಿದ್ದಾರೆ. ಪ್ರಾಮಾಣ್ಯ-ಅಪ್ರಾಮಾಣ್ಯ ಪ್ರತಿಪಾದಕಗಳಾದ ಉಭಯ ವಿಧವಾದ ವಾಕ್ಯಗಳಿರುವುದರಿಂದ ವೇದಗಳು ಪ್ರಮಾಣಗಳೋ? ಅಪ್ರಮಾಣ ಗಳೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಮೃದಬ್ರವೀತ್, ಆಪೋಽಬ್ರುವನ್ (ಮಣ್ಣು ಮಾತನಾಡಿತು, ನೀರು ಮಾತನಾಡಿತು) ಎಂದು ಶ್ರುತಿಗಳು ಪ್ರತಿಪಾದಿಸುತ್ತಿವೆ. 'ಮಣ್ಣು ನೀರುಗಳು ಜಡವಾದ್ದರಿಂದ ಮಾತನಾಡಲಾರವು' ಎಂಬ ಯುಕ್ತಿಯ ವಿರೋಧವಿರುವುದರಿಂದ ಈ ಶ್ರುತಿಗಳು ಅಪ್ರಮಾಣವಾಗುತ್ತವೆ. ಇವುಗಳ ದೃಷ್ಟಾಂತದಿಂದ ಉಳಿದ ವೇದವಾಕ್ಯಗಳೂ ಅಪ್ರಮಾಣ. ಆದ್ದರಿಂದ ಇಂತಹ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಸಾಧಕವಾಗಿ 'ಅದೃಷ್ಟಿಃ' (ಮಣ್ಣು ನೀರು ಮೊದಲಾದವು ಗಳಿಗೆ ವಚನಕರ್ತೃತ್ವವು ಕಾಣದೇ ಇರುವುದು) ಎಂಬ ಯುಕ್ತಿಯು ಹೇಳಲ್ಪಟ್ಟಿದೆ. ಆ ಯುಕ್ತಿಯನ್ನು 'ಅದೃಷ್ಟಿ' (ಅಪೌರುಷೇಯವಾದ ವೇದಕ್ಕೆ ಅಪ್ರಾಮಾಣ್ಯ ಕಾಣದಿರಲು) ಎಂಬ ಸಿದ್ಧಾಂತಸಾಧಕಯುಕ್ತಿಯನ್ನಾಗಿ ವಿವರಿಸುತ್ತಿದ್ದಾರೆ.

**ನ ಮೃದಾದೀನಾಂ ವಚನಾದ್ಯದೃಷ್ಟಿಃ ಶ್ರುತ್ಯಪ್ರಾಮಾಣ್ಯಕಾರಣಮ್ । ಅಪಿ ತು, ವಚನಾದಿಶಕ್ತಾಯಾ ದೇವತಾಯಾ ಮೃದಾದಿಶಬ್ದವಾಚ್ಯತ್ವ-ದ್ಯೋತಿಕೈವ ॥ ೩ ॥**

**ಭಾವಾರ್ಥ—**ಮಣ್ಣು ನೀರು ಮೊದಲಾದವುಗಳಿಗೆ ವಚನ ಈಕ್ಷಣ ಮೊದಲಾದದ್ದು ಕಾಣದಿರುವುದು, 'ಮೃದಬ್ರವೀತ್' ಮೊದಲಾದ ವೇದಗಳ ಅಪ್ರಾಮಾಣ್ಯಕ್ಕೆ ಕಾರಣವಾಗಲಾರದು. ಹೊರತಾಗಿ ವಚನ ಈಕ್ಷಣಾದಿಗಳಲ್ಲಿ ಸಮರ್ಥವಾದ ವಕ್ತೃತ್ವಾದಿಗಳಿಗೆ ಉಪಯುಕ್ತವಾದ ಶರೀರಾದಿಗಳುಳ್ಳ ಮಣ್ಣು ಮೊದಲಾದವುಗಳಿಗೆ ಅಭಿಮಾನಿಗಳಾದ ದೇವತೆಗಳಿಗೆ ಮೃದಾದಿ ಶಬ್ದವಾಚ್ಯತ್ವ ವನ್ನು ತಿಳಿಸಿಕೊಡುತ್ತದೆ.

**ವಿವರಣೆ—** ಒಂದು ವೇಳೆ ಯುಕ್ತಿವಿರೋಧವು ಬರುವುದಾದರೆ ವೇದಗಳಿಗೆ ಅಪ್ರಾಮಾಣ್ಯವು ಬರಬೇಕಾದೀತು. ವೇದಗಳಿಗೆ ಅಪ್ರಾಮಾಣ್ಯವು ಎಲ್ಲಿಯೂ ಕಂಡಿಲ್ಲವಾದ್ದರಿಂದ 'ಮೃದಬ್ರವೀತ್' ಮುಂತಾದವುಗಳಿಗೆ ಮಣ್ಣಿನ ಒಳಗಿರುವ ದೇವತೆಯು ಮಾತನಾಡಿತು ಎಂದರ್ಥವನ್ನು ಮಾಡಬೇಕು. ದೇವತೆಯು ಮಾತನಾಡುವುದ ರಿಂದ ಆ ವಾಕ್ಯಗಳಿಗೆ ಅಪ್ರಾಮಾಣ್ಯವು ಬರುವುದಿಲ್ಲ. ಆದ್ದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುತ್ತದೆ.

**ಸೂತ್ರಾರ್ಥ :**

### ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ

''ಮೃದಬ್ರವೀತ್'', ''ಆಪೋಽಬ್ರುವನ್'' ಇತ್ಯಾದಿ ವಾಕ್ಯಗಳಲ್ಲಿ ಅಭಿಮಾನಿವ್ಯಪದೇಶಃ ತು=ಆಯಾ ವಸ್ತುಗಳ ಅಭಿಮಾನಿಗಳಾದ ದೇವತೆಗಳನ್ನೇ ಹೇಳಿರುವುದು ಅಚೇತನವನ್ನಲ್ಲ. 'ಮಣ್ಣು ಜಡವಾದ್ದರಿಂದ ಮಾತನಾಡಲಾರದು' ಮೊದಲಾದ ಯುಕ್ತಿವಿರೋಧವು ಬರುವುದರಿಂದ ವಿಶೇಷಾನುಗತಿಭ್ಯಾಂ= ಅಭಿಮಾನಿ ಚೇತನಕ್ಕೆ ಸಾಮರ್ಥ್ಯ ಮತ್ತು ಆಯಾ ವಸ್ತುಗಳಲ್ಲಿ ವ್ಯಾಪ್ತಿ ಇವೆರಡೂ ಇರುವುದರಿಂದ ಯುಕ್ತವೇ ಆಗಿದೆ.

## ಅಸದಧಿಕರಣ (2-1-4)

ಓಂ ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್ ಓ ಎಂಬ ಸೂತ್ರದಿಂದ ಆರಂಭವಾದ ಈ ಅಧಿಕರಣದಲ್ಲಿ ಜಗತ್ಕಾರಣತ್ವವನ್ನು ವಿಷ್ಣುವಿಗೇ ವ್ಯವಸ್ಥೆಯನ್ನು ಮಾಡಿದ್ದರಿಂದ ಜಗತ್ಕಾರಣತ್ವವೇ ವಿಷಯ. 'ಯತೋ ವಾ ಇಮಾನಿ ಭೂತಾನಿ' ಎಂಬ ಶ್ರುತಿಯು ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುತ್ತಿದೆ. 'ಅಸದೇವ ಇದಮಗ್ರ ಆಸೀತ್' ಎಂಬ ಶ್ರುತಿಯು ಅಸತ್‌ಗೆ ಕಾರಣತ್ವವನ್ನು ತಿಳಿಸುತ್ತಿದೆ. ಆದ್ದರಿಂದ ಜಗತ್ಕಾರಣತ್ವವು ವಿಷ್ಣುವಿಗೆ ಯುಕ್ತವೋ? ಅಯುಕ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಕಾರ್ಯಕ್ಕಿಂತ ಪೂರ್ವದಲ್ಲಿ ಯಾವುದು ನಿಯತ ವಾಗಿರುವುದೋ ಅದನ್ನೇ ಕಾರಣವೆನ್ನುವರು. 'ಅಸದೇವ ಇದಮಗ್ರ ಆಸೀತ್'

ಎಂಬ ಶ್ರುತಿಯು ಸೃಷ್ಟಿಯ ಪೂರ್ವದಲ್ಲಿ ಅಸತ್ (ಪ್ರಾಗಭಾವವು) ಇತ್ತು ಎಂದು ತಿಳಿಸುತ್ತಿದೆ. ಅಂದರೆ ಈ ಶ್ರುತಿಯಿಂದ ಅಸತ್ತಿಗೆ ಕಾರಣತ್ವವು ಸಿದ್ಧವಾಗುತ್ತಿದೆ. 'ಯತೋ ವಾ ಇಮಾನಿ ಭೂತಾನಿ' ಎಂಬ ಶ್ರುತಿಯು ವಿಷ್ಣುವಿಗೇ ಕಾರಣತ್ವವನ್ನು ತಿಳಿಸುತ್ತದೆ. ಎರಡೂ ಶ್ರುತಿಗಳೇ ಆದ್ದರಿಂದ ಪ್ರಾಮಾಣ್ಯವು ಸಮಾನವಾಗಿದೆ. ಆದ್ದರಿಂದ ವಿಷ್ಣುವೇ ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ.

ಈ ಅಧಿಕರಣದ ಪೂರ್ವಪಕ್ಷ ಸಾಧಕವಾದ ಯುಕ್ತಿಯು **'ಶ್ರುತಿಸಾಮ್ಯ'** (ಜಗತ್ಕಾರಣತ್ವವನ್ನು ಹೇಳುವ ಶ್ರುತಿಯು ಅಸತ್ತಿನಲ್ಲೂ ಸಮಾನ) ಎಂದು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ಅದನ್ನು **'ಶ್ರುತಿಸಾಮ್ಯ'** (ಬ್ರಹ್ಮ ಶಬ್ದಕ್ಕಿರುವಂತೆ ಅಸತ್ ಶಬ್ದಕ್ಕೆ ವಿಷ್ಣುವಿನಲ್ಲಿ ನಿರ್ವಚನವನ್ನು ಹೇಳುವ ಶ್ರುತಿಯು ಸಮಾನವಾಗಿದೆ) ಎಂಬ ಸಿದ್ಧಾಂತ ಸಾಧಕ ಯುಕ್ತಿಯನ್ನಾಗಿ ವಿವರಿಸುತ್ತಿದ್ದಾರೆ—

**ಈಶ್ವರಸ್ಯ ಸ್ರಷ್ಟೃತ್ವವದಸತೋಽಪಿ ಸ್ರಷ್ಟೃತ್ವಂ ಶ್ರೂಯತ ಇತಿ ನಾಸ್ತಿ । ಸೋಽಸಚ್ಛಬ್ದೋ ಬ್ರಹ್ಮಶಬ್ದವದೇವ ಬ್ರಹ್ಮವಾಚಕ ಇತಿ ಶ್ರುತಿಸಾಮ್ಯಮ್ ॥ ೪ ॥**

**ಭಾವಾರ್ಥ**—ವಿಷ್ಣುವಿಗೆ ಜಗತ್ಸ್ರಷ್ಟೃತ್ವವು ಶ್ರುತವಾದಂತೆ ಅಸತ್ತಿಗೂ ಜಗತ್‌ಸ್ರಷ್ಟೃತ್ವವು ಶ್ರುತವಾಗಿದೆ. ಆದ್ದರಿಂದ ವಿಷ್ಣುವೇ ಜಗತ್ಕಾರಣನೆಂಬುದು ಸಿದ್ಧವಾಗುವುದಿಲ್ಲ ಎಂಬ ಆಕ್ಷೇಪವು ಸರಿಯಲ್ಲ. ಹೇಗೆ ಬ್ರಹ್ಮಶಬ್ದವು ವಿಷ್ಣುವನ್ನು ಪ್ರತಿಪಾದಿಸುತ್ತದೋ ಅದರಂತೆ ಅಸತ್ ಶಬ್ದವೂ ವಿಷ್ಣುವನ್ನು ಪ್ರತಿಪಾದಿಸುತ್ತದೆ ಎಂಬ ವಿಷಯದಲ್ಲಿ ಶ್ರುತಿಸಾಮ್ಯವೇ ಇದೆ.

**ವಿವರಣೆ**— 'ಬೃಹಂತೋ ಹ್ಯಸ್ಮಿನ್ ಗುಣಾಃ' (ಬಹಳ ಗುಣವುಳ್ಳವನಾದ್ದರಿಂದ ಬ್ರಹ್ಮ) ಎಂದು ಬ್ರಹ್ಮಶಬ್ದದ ನಿರ್ವಚನವನ್ನು ಶ್ರುತಿಯು ವಿಷ್ಣುವಿನಲ್ಲಿ ಹೇಳುವಂತೆ, 'ತದ್ವಾ ಏತದಸದಾಹುಃ ನಹ್ಯಾಸಾದಯತಿ ಕಶ್ಚನ' (ಯಾರನ್ನೂ ಆಶ್ರಯಿಸಿಲ್ಲವಾದ್ದರಿಂದ ವಿಷ್ಣುವನ್ನೇ ಅಸತ್ ಎನ್ನುವರು) ಎಂಬ ಶ್ರುತಿಯೂ ವಿಷ್ಣುವಿನಲ್ಲಿ ಅಸತ್ ಶಬ್ದದ ನಿರ್ವಚನವನ್ನು ತಿಳಿಸುತ್ತಿದೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವಿದೆ ಎಂದು ಸಿದ್ಧವಾಗುತ್ತದೆ.

ಅಸತ್‌ಗೆ (ಪ್ರಾಗಭಾವಕ್ಕೆ) ಕಾರಣತ್ವವಿದ್ದರೂ ಕರ್ತೃತ್ವವಿಲ್ಲ. ಕರ್ತೃತ್ವವೆಂದರೆ

ಬುದ್ಧಿಪೂರ್ವಕ ಕಾರಣತ್ವ. ಇದು ಜಡವಾದ ಅಸತ್‌ಗೆ ಕೂಡುವುದಿಲ್ಲವೆಂದೂ ತಿಳಿಯಬೇಕು.

ಈ ಮೂಲದಲ್ಲಿ 'ಅಸತೋಽಪಿ' ಎಂಬಲ್ಲಿರುವ ಅಸತ್ ಶಬ್ದದಿಂದ 'ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ' ಎಂಬಲ್ಲಿ ನಿರಾಕರಿಸಲ್ಪಟ್ಟ ಜೀವ, ಪ್ರಧಾನಾದಿಗಳನ್ನೂ (ಉಪಲಕ್ಷಣತ್ವೇನ) ಸ್ವೀಕರಿಸಬೇಕು. ಹೀಗೆ ಸ್ವೀಕರಿಸಿದಾಗ 'ಅಸಜ್ಜೀವ ಪ್ರಧಾನಾದಿ ಶಬ್ದಾ ಬ್ರಹ್ಮೈವ ನಾಪರಮ್ । ವದಂತಿ ಕಾರಣತ್ವೇನ' (ಅಸತ್, ಜೀವ, ಪ್ರಧಾನ ಮೊದಲಾದ ಶಬ್ದಗಳು ವಿಷ್ಣುವನ್ನೇ ಜಗತ್‌ಕಾರಣವನ್ನಾಗಿ ಹೇಳುತ್ತವೆ ಹೊರತು ಬೇರೆಯವರನ್ನಲ್ಲ) ಎಂಬ ಅಣುಭಾಷ್ಯವು ಯುಕ್ತವಾಗುತ್ತದೆ. ಜೀವ, ಪ್ರಧಾನಾದಿಗಳಿಗೆ ಕಾರಣತ್ವವನ್ನು ಹೇಳುವ ಶ್ರುತಿಗಳು ಕಂಡರೂ ಅವುಗಳಿಗೆ ವಿಷ್ಣುಪರವಾಗಿಯೇ ಅರ್ಥವನ್ನು ಮಾಡಬೇಕು. 'ಯತ್ರಾನ್ಯವಾಚಕತ್ವೇಽಪ್ಯವಿರೋಧಸ್ತತ್ರಾನ್ಯದಪ್ಯಮುಖ್ಯತಯೋಚ್ಯತೇ, ಯತ್ರ ವಿರೋಧಸ್ತತ್ರ ಬ್ರಹ್ಮೈವೋಚ್ಯತೇ ಇತಿ ನಿಯಮಃ' (ಯಾವ ಶ್ರುತಿಯಲ್ಲಿ ವಿಷ್ಣುವಿಗಿಂತ ಇತರವು ವಾಚ್ಯವಾದಾಗ ಬಾಧಕವಿಲ್ಲವೋ ಅಲ್ಲಿ ಮಾತ್ರ ಇತರವು ಅಮುಖ್ಯವಾಗಿ ಹೇಳಲ್ಪಡುತ್ತದೆ. ಇತರವು ವಾಚ್ಯವಾಗುವುದಕ್ಕೆ ವಿರೋಧವು ಕಂಡಾಗ ಬ್ರಹ್ಮನು ಮಾತ್ರ ವಾಚ್ಯನಾಗುತ್ತಾನೆ ಎಂದು ಭಾಷ್ಯದಲ್ಲಿ ಹೇಳಿದಂತೆ ತಿಳಿಯಬೇಕು.

**ಸೂತ್ರಾರ್ಥ :**

### ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ ॥

ಅಸತ್ ಇತಿ ಚೇತ್=ಅಸತ್ತೇ ಜಗತ್ತಿನ ಕಾರಣವೆನ್ನುವುದು ನ=ಸರಿಯಲ್ಲ. ಏಕೆಂದರೆ, ಪ್ರತಿಷೇಧ ಮಾತ್ರತ್ವಾತ್=ಅಸತ್ತು ನಿಷೇಧರೂಪವಾದ್ದರಿಂದ ಅದಕ್ಕೆ ಕಾರಣತ್ವವು ಕೂಡುವುದಿಲ್ಲ.

## ಭೋಕ್ತ್ರಧಿಕರಣ (2-1-5)

ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿಯೂ ವಿಷ್ಣುವಿನ ಜಗತ್ಕರಣತ್ವವೇ ವಿಷಯ.

ವಾದಿಗಳಲ್ಲಿ ಪರಸ್ಪರ ವಿವಾದವಿರುವುದರಿಂದ ಜಗತ್ಕಾರಣತ್ವವು ವಿಷ್ಣುವಿಗೆ ಯುಕ್ತವೋ? ಅಯುಕ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' (ಕರ್ಮಗಳು ಮತ್ತು ವಿಜ್ಞಾನಮಯ ಎನಿಸುವ ಜೀವ ಇವರೆಲ್ಲರೂ ನಾಶರಹಿತನಾದ ಸರ್ವೋತ್ತಮನಾದ ವಿಷ್ಣುವಿನಲ್ಲಿ ಐಕ್ಯವನ್ನು ಹೊಂದುತ್ತಾರೆ) ಎಂಬ ಶ್ರುತಿಯು ಮುಕ್ತಜೀವನಿಗೂ ಈಶ್ವರನಿಗೂ ಅಭೇದವನ್ನು ಹೇಳುತ್ತಿದೆ. ಹಾಗಿದ್ದಮೇಲೆ ಮೋಕ್ಷಕ್ಕಿಂತ ಮೊದಲು ಸಂಸಾರದಲ್ಲಿಯೂ ಜೀವನೂ ಬ್ರಹ್ಮನಾಗಿರಲೇಬೇಕು. ಏಕೆಂದರೆ ಭಿನ್ನವಾದ ಎರಡು ವಸ್ತುಗಳು ಎಂದೂ ಅಭಿನ್ನವಾಗಲಾರವು. ಹೀಗೆ ಜೀವನಲ್ಲಿ ಜಗತ್ಕಾರಣತ್ವವು ಕೂಡುವುದಿಲ್ಲವೆಂದರೆ ಜೀವಾಭಿನ್ನನಾದ ವಿಷ್ಣುವಿನಲ್ಲಿಯೂ ಜಗತ್ಕಾರಣತ್ವವು ಕೂಡುವುದಿಲ್ಲ ಎಂಬುದು ಪೂರ್ವಪಕ್ಷ.

'ಶ್ರುತಿಬಲೋದ್ಭವಃ' ಎಂಬ ಯುಕ್ತಿಯನ್ನು ಪೂರ್ವಪಕ್ಷ ಸಾಧಕವನ್ನಾಗಿ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಇದರ ಅರ್ಥ 'ಶ್ರುತಿಬಲಾತ್ ಉದ್ಭವಃ=ಜ್ಞಾನಂ ಯಸ್ಯ ಜೀವೇಶ್ವರೈಕ್ಯಸ್ಯ' ಎಂಬ ವ್ಯುತ್ಪತ್ತಿಯಂತೆ, ಶ್ರುತಿಯ ಬಲದಿಂದ ತಿಳಿಯಲ್ಪಡುವ ಜೀವೇಶ್ವರಾಭೇದವೆಂಬುದು. ಅಥವಾ 'ಶೃತಿಬಲಾತ್ ಜೀವಸ್ಯ ಉತ್=ಉಚ್ಚತ್ವಂ ಬ್ರಹ್ಮತ್ವಂ ಭವತೀತಿ ಶಂಕಾ ಶ್ರುತಿಬಲೋದ್ಭವಃ' ಶ್ರುತಿಯ ಬಲದಿಂದ ಜೀವನಿಗೆ ಬ್ರಹ್ಮತ್ವವು ಪ್ರಾಪ್ತವಾಗುತ್ತದೆ ಎಂಬ ಆಕ್ಷೇಪವನ್ನೇ ಶ್ರುತಿಬಲೋದ್ಭವ ಎನ್ನುವರು.

ಸಿದ್ಧಾಂತಯುಕ್ತಿಯೂ 'ಶ್ರುತಿಬಲೋದ್ಭವ'ವೇ ಆಗಿದೆ. 'ಶ್ರುತಿಬಲಾತ್ ಉದ್ಭವಃ=ಜ್ಞಾನಂ ಯಸ್ಯ ಜೀವೇಶ್ವರಭೇದಸ್ಯ' ಎಂಬ ವ್ಯುತ್ಪತ್ತಿಯಂತೆ ಬೇರೆ ಬೇರೆ ಭೇದಬೋಧಕವಾದ ಶ್ರುತಿಗಳಿಂದ ತಿಳಿಯಲ್ಪಡುವ ಜೀವೇಶ್ವರ ಭೇದವೆಂದರ್ಥ.

ಈ ಪೂರ್ವಪಕ್ಷ ಯುಕ್ತಿ ಮತ್ತು ಸಿದ್ಧಾಂತ ಯುಕ್ತಿಗಳನ್ನು ವಿವರಿಸು ತ್ತಿದ್ದಾರೆ—

**'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' ಇತಿ ಶ್ರುತಿಬಲಾನ್ನೈಕ್ಯಮ್ । ಕಿಂತು, ಭೇದಾಪಾದಕಮೇವೈ-**

**ತತ್, 'ನಿರಂಜನಃ ಪರಮಂ ಸಾಮ್ಯಮುಪೈತಿ' 'ಪರಾತ್ಪರಂ ಪುರುಷಮುಪೈತಿ ದಿವ್ಯಮ್' ಇತಿ ಸನ್ನಿಹಿತವಾಕ್ಯಬಲಾತ್ । ಏಕೀಭಾವಶಬ್ದಸ್ತು ಸಾನ್ನಿಧ್ಯೇಽಪಿ ಭವತಿ । 'ಏಕೀಭೂತಾ ತು ಸಾ ಸೇನಾ ಪಾಂಡವಾನಭ್ಯವರ್ತತ' ಇತಿವತ್ ।**

**'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ'॥**

**ಇತಿ ವಾಕ್ಯಾಂತರಾಚ್ಚ ॥ ೫ ॥**

**ಭಾವಾರ್ಥ**—'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಯ ಬಲದಿಂದಾಗಿ ಜೀವಶ್ವರರಲ್ಲಿ ಅಭೇದವಿದೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದಿಲ್ಲ ಎಂದು ಆಕ್ಷೇಪಿಸಬಾರದು. 'ನಿರಂಜನಃ ಪರಮಂ ಸಾಮ್ಯಮುಪೈತಿ' (ದೋಷರಹಿತನಾದ ಮುಕ್ತಜೀವನು ಪರಮಾತ್ಮನಂತೆ ಜ್ಞಾನಾನಂದಾದಿ ರೂಪವನ್ನು ಹೊಂದುತ್ತಾನೆ) ಮತ್ತು 'ಪರಾತ್ ಪರಂ ಪುರುಷಮುಪೈತಿ ದಿವ್ಯಂ' (ಉತ್ತಮೋತ್ತಮನಾದ ಸರ್ವರ ಹೃದಯದಲ್ಲಿ ನಿಯಾಮಕನಾಗಿರುವ ಲೋಕವಿಲಕ್ಷಣನಾದ ಶ್ರೀಹರಿಯ ಸಾಮೀಪ್ಯವನ್ನು ಹೊಂದುತ್ತಾನೆ) ಎಂಬ ಸನ್ನಿಹಿತವಾದ ಬೇರೆ ವಾಕ್ಯಗಳಿರುವುದರಿದ 'ಕರ್ಮಾಣಿ...' ಎಂಬ ವಾಕ್ಯವು ಅಭೇದವನ್ನು ತಿಳಿಸುವುದಿಲ್ಲ, ಭೇದವನ್ನೇ ತಿಳಿಸುತ್ತದೆ. 'ಏಕೀಭವಂತಿ' ಎಂಬಲ್ಲಿರುವ ಏಕೀಭಾವ ಶಬ್ದವು ಅಭೇದದಲ್ಲಿ ಮಾತ್ರವಲ್ಲದೆ ಸಾಮೀಪ್ಯದಲ್ಲಿಯೂ ಪ್ರಯೋಗಿಸಲಾಗುತ್ತದೆ. ಏಕೀಭಾವಶಬ್ದವನ್ನು ಮತ್ಯೈಕ್ಯ ಮತ್ತು ಸ್ಥಾನೈಕ್ಯವಿದ್ದಲ್ಲಿಯೂ ಪ್ರಯೋಗಿಸಲಾಗುವುದು. 'ಏಕೀಭೂತಾ ತು ಸಾ ಸೇನಾ ಪಾಂಡವಾನಭ್ಯವರ್ತತ್' (ಒಂದೇ ಕಡೆಯಲ್ಲಿರುವ ಕೌರವರ ಸೇನೆಯು ಐಕ್ಯಮತ್ಯದಿಂದ ಪಾಂಡವರನ್ನು ಎದಿರಿಸಿತು) 'ಯಥೋದಕಂ...ಗೌತಮ' ಎಲೈ ಗೌತಮಗೋತ್ರದವನಾದ ನಚಿಕೇತನೇ! ಶುದ್ಧವಾದ ನೀರನ್ನು ಶುದ್ಧವಾದ ನೀರಿನಲ್ಲಿ ಸೇರಿಸಿದಾಗ ಅದು ಅಂತಹುದೇ ಹೇಗೆ ಆಗುವುದೋ ಅದರಂತೆ ಮುನಿಗಳಿಗೆ ಅಧಿಪತಿಯಾದ ಚತುರ್ಮುಖನೂ ಮುಕ್ತನಾಗಿ ಪರಮಾತ್ಮನನ್ನು ಹೊಂದಿ ಸದೃಶನೇ ಆಗುತ್ತಾನೆ. ಹೀಗೆ ಚತುರ್ಮುಖನೇ ಅಭೇದವನ್ನು ಪಡೆಯಲಾರನೆಂದ ಮೇಲೆ

ಉಳಿದ ಜೀವರ ಪಾಡೇನು? ಎಂಬ ವಾಕ್ಯಾಂತರದಿಂದ ಜೀವೇಶ್ವರರಲ್ಲಿ ಭೇದವೇ ಇರುವುದರಿಂದ ಜಗತ್ಕರ್ತೃತ್ವವು ವಿಷ್ಣುವಿಗೇ ಕೂಡುತ್ತದೆ.

**ವಿವರಣೆ**—ಏಕೀಭಾವ ಶಬ್ದವನ್ನು ವಸ್ತುಗಳಲ್ಲಿ ಸಾಮೀಪ್ಯವಿದ್ದಾಗ ಸ್ಥಾನೈಕ್ಯ, ಮತ್ಯೈಕ್ಯಗಳನ್ನಿಟ್ಟುಕೊಂಡು ಪ್ರಯೋಗಿಸುವುದು ಕಂಡಿದೆ. 'ಏಕೀಭೂತಾತು ಸಾ ಸೇನಾ' ಎಂಬುದನ್ನು ಮತ್ಯೈಕ್ಯಕ್ಕೆ ಉದಾಹರಣೆಯನ್ನಾಗಿ ನೀಡಲಾಗಿದೆ.

'ಯಥೋದಕಂ ಶುದ್ಧೇ ಆಸಿಕ್ತಂ' ಎಂಬುದನ್ನು ಸ್ಥಾನೈಕ್ಯಕ್ಕೆ ಉದಾಹರಣೆಯನ್ನಾಗಿ ನೀಡಲಾಗಿದೆ. ನೀರಿನಲ್ಲಿ ನೀರು ಸೇರಿಸಿದಾಗ 'ಎರಡೂ ನೀರು ಒಂದಾಯಿತು' ಎಂದು ವ್ಯವಹಾರ ಮಾಡಿದರೂ ಆ ನೀರಿನಲ್ಲಿ ಆಂತರಿಕಭೇದ ಇದ್ದೇ ಇದೆ. ಏಕೆಂದರೆ ನೀರು ಹೆಚ್ಚಾಗುತ್ತದೆ ಹೊರತು ಒಂದಾಗುವುದಿಲ್ಲ. ಆದರಂತೆ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂದು ಹೇಳಿದರೂ ಜೀವನು ಪರಮಾತ್ಮನ ಅಭೇದವನ್ನು ಹೊಂದುವುದಿಲ್ಲ. ಏಕೆಂದರೆ ಪರಮಾತ್ಮನಲ್ಲಿ ಜೀವನಿಗೆ ಇಲ್ಲದಿರುವ ಸ್ವಾತಂತ್ರ್ಯಾದಿಗುಣಗಳು ಇದ್ದೇ ಇರುತ್ತವೆ. ಹಾಗಿದ್ದರೂ ಮುಕ್ತಿ ಎಂಬ ಒಂದೇ ಸ್ಥಾನದಲ್ಲಿರುವುದರಿಂದ ಅಭೇದ ವ್ಯವಹಾರವನ್ನು ಶ್ರುತಿಯಲ್ಲಿ ಕಾಣುತ್ತೇವೆ.

**ಸೂತ್ರಾರ್ಥ**—

**ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ ಸ್ಯಾಲ್ಲೋಕವತ್ ಓಂ ||**

ಭೋಕ್ತ್ರಾಪತ್ತೇಃ=ಭೋಕ್ತೃವಾದ ಜೀವನಿಗೆ 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂದು ಬ್ರಹ್ಮನೊಂದಿಗೆ ಐಕ್ಯವನ್ನು ಹೇಳಿದ್ದರಿಂದ ಅವಿಭಾಗಶ್ಚೇತ್=ಜೀವಬ್ರಹ್ಮರಿಗೆ ಭೇದವಿಲ್ಲವಾದ್ದರಿಂದ ಜೀವಾಭಿನ್ನನಾದ ಬ್ರಹ್ಮನು ಜಗತ್ಕಾರಣ ಎನ್ನುವುದು ಯುಕ್ತವಲ್ಲ. ಏಕೆಂದರೆ ಲೋಕವತ್=ನೀರಿನೊಂದಿಗೆ ನೀರು ಸೇರಿದಾಗ ಹೇಗೆ ಔಪಚಾರಿಕವಾದ ಏಕೀಭಾವವ್ಯವಹಾರವಿದೆಯೋ ಅದರಂತೆ ಸ್ಯಾತ್=ಜೀವ ಪರಮಾತ್ಮರಲ್ಲಿಯೂ ಏಕೀಭಾವವ್ಯವಹಾರವು ಔಪಚಾರಿಕವಾಗುತ್ತದೆ.

## ಆರಂಭಣಾಧಿಕರಣ (2-1-6)

'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರದಿಂದ ಪ್ರಾರಂಭ

ಗೊಂಡಿರುವ ಈ ಅಧಿಕರಣಕ್ಕೆ ಜಗತ್ತಿನ ಸೃಷ್ಟ್ಯಾದಿಗಳು ವಿಷಯ. ಲೋಕದಲ್ಲಿ ಸೃಷ್ಟಿಯು ಸ್ವತಂತ್ರ ಸಾಧನಗಳ ಅಪೇಕ್ಷೆಯಿಂದ ಆದದ್ದು ಕಂಡದ್ದರಿಂದ ಜಗತ್ತಿನ ಸೃಷ್ಟಿಯೂ ಸ್ವತಂತ್ರ ಸಲಕರಣೆಗಳನ್ನು ಅಪೇಕ್ಷಿಸುತ್ತದೆಯೋ? ಪರಮಾತ್ಮನ ಸೃಷ್ಟಿಯು ಅಲೌಕಿಕವಾದ್ದರಿಂದ ಸ್ವತಂತ್ರ ಸಲಕರಣೆಗಳನ್ನು ಅಪೇಕ್ಷಿಸುವುದಿಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಲೋಕದಲ್ಲಿ ಘಟಾದಿಗಳ ಸೃಷ್ಟಿಯಾಗಬೇಕಾದರೆ ಮಣ್ಣು ನೀರು ಮುಂತಾದ ಸಾಧನಗಳ ಅಪೇಕ್ಷೆಯಿದೆ. ಅವೆಲ್ಲವೂ ಸ್ವತಂತ್ರ ಸಾಧನಗಳು. ಅಷ್ಟೇ ಏಕೆ? ಬಟ್ಟೆ ತಯಾರಿಸುವ ನೇಕಾರನೂ ಹತ್ತಿ ಬೆಳೆಯುವ ರೈತನನ್ನು ಅವಲಂಬಿಸಬೇಕು. ಅವನು ಹತ್ತಿ ಬೆಳೆದರೆ ತಾನೆ ನೇಕಾರನು ಬಟ್ಟೆ ತಯಾರಿಸಲು ಸಾಧ್ಯ! ಇದರಂತೆ ಪರಮಾತ್ಮನೂ ಈ ಜಗತ್ತನ್ನು ಸೃಷ್ಟಿಮಾಡಬೇಕಾದರೆ ಇತರ ಸಲಕರಣೆಗಳನ್ನು ಅಪೇಕ್ಷಿಸಬೇಕಾಗುತ್ತದೆ. ಹಾಗಾದರೆ ಅವನ ಸ್ವಾತಂತ್ರ್ಯಕ್ಕೆ ಧಕ್ಕೆ ಬರುತ್ತದೆ. ಸ್ವತಂತ್ರನಲ್ಲದವನು ಗುಣಪೂರ್ಣನಾಗಲಾರ. ಕುಂಬಾರ, ನೇಕಾರ ಮೊದಲಾದವರಂತೆ ಪರಮಾತ್ಮನಿಗೂ ಗುಣಪೂರ್ಣತ್ವವು ಸಿದ್ಧಿಸುವುದಿಲ್ಲ.

ಇದಕ್ಕೆ ಸಾಧಕವಾದ ಯುಕ್ತಿಯು 'ಸರ್ವಾನುಸಾರ' (ಲೋಕದಲ್ಲಿ ಎಲ್ಲ ಸೃಷ್ಟಿಯು ಸ್ವತಂತ್ರಸಾಧನಗಳ ಅಪೇಕ್ಷೆಯಿಂದ ಆದದ್ದು ಕಂಡದ್ದರಿಂದ ಅದರ ಅನುಸಾರ ಪರಮಾತ್ಮನ ಸೃಷ್ಟಿಯೂ ಹಾಗೆ ಇರಬೇಕು) ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ಸಿದ್ಧಾಂತ ಯುಕ್ತಿಯೂ 'ಸರ್ವಾನುಸಾರ' ವೆನಿಸಿದೆ, ಸರ್ವ ಶ್ರುತಿಯುಕ್ತಿ ಅನುಸಾರಿಯಾದ ಸಂಪೂರ್ಣ ಶಕ್ತಿ ಎಂದದರರ್ಥ. ಅದನ್ನು ವಿವರಿಸಿ ವ್ಯಾಖ್ಯಾನಿಸುತ್ತಿದ್ದಾರೆ–

**ನ ಚ ಲೌಕಿಕಸರ್ವಕಾರ್ಯಾನುಸಾರೇಣಾಕರ್ತೃತಂತ್ರತ್ವಂ ಸರ್ವಾನುಸಾರಃ । ಕಿಂ ತರ್ಹಿ, ತದ್ವೈಲಕ್ಷಣ್ಯೇನ ಸರ್ವಕರ್ತೃವಿಲಕ್ಷಣಸರ್ವಶಕ್ತಿತ್ವಮೇವಾಶೇಷಯುಕ್ತಿಶ್ರುತ್ಯನುಸಾರಿ । 'ಏಷ ಸರ್ವೇಶ್ವರಃ' ಇತಿ ಶ್ರುತೇಃ । ಯುಕ್ತಿಮಾತ್ರಾಚ್ಛ್ರುತಿಯುಕ್ತಾ ಹಿ ಯುಕ್ತಿರ್ಬಲವತೀ ॥ ೬ ॥**

**ಭಾವಾರ್ಥ—**ಲೋಕದ ಸರ್ವಕಾರ್ಯಗಳನ್ನು ಕಂಡು ಅದನ್ನನುಸರಿಸಿ ಸಾಧನಗಳು ಕರ್ತೃವಾದ ಪರಮಾತ್ಮನ ಅಧೀನವಾಗದೇ ಇರುವುದೇ

ಸರ್ವಾನುಸಾರವಲ್ಲ. ಹೊರತಾಗಿ ಲೌಕಿಕಕಾರ್ಯಗಳಿಗಿಂತ ವಿಲಕ್ಷಣವಾಗಿ ಕುಂಬಾರ ಮೊದಲಾದ ಎಲ್ಲ ಕರ್ತೃಗಳಿಗಿಂತ ವಿಲಕ್ಷಣವಾದ ಸಮಸ್ತ ಯುಕ್ತಿ ಶ್ರುತಿಗಳ ಅನುಸಾರಿಯಾದ ಸಂಪೂರ್ಣಶಕ್ತಿಯೇ ಸರ್ವಾನುಸಾರವೆನಿಸಿದೆ. ಈ ವಿಷಯದಲ್ಲಿ 'ಏಷ ಸರ್ವೇಶ್ವರಃ' ಮುಂತಾದ ಶ್ರುತಿಯೇ ಪ್ರಮಾಣ. ಪೂರ್ವಪಕ್ಷಿಯು ಹೇಳಿದ ಕೇವಲ ಯುಕ್ತಿಗಿಂತ ಸಿದ್ಧಾಂತಿಯು ಹೇಳಿದ ಶ್ರುತಿಸಹಿತವಾದ ಯುಕ್ತಿಯೇ ಪ್ರಬಲವಾಗಿದೆ.

**ವಿವರಣೆ—** ಲೋಕದಲ್ಲಿ ಸೃಷ್ಟಿಯು ಸ್ವತಂತ್ರ ಸಲಕರಣೆಗಳ ಅಧೀನ ವಾದರೂ ಪರಮಾತ್ಮನ ಸೃಷ್ಟಿ ಹಾಗಲ್ಲ. 'ಏಷ ಸರ್ವೇಶ್ವರಃ' (ಇವನೇ ಸರ್ವೇಶ್ವರನು) ಮುಂತಾದ ಶ್ರುತಿಗಳಿಂದ ಎಲ್ಲವೂ ಪರಮಾತ್ಮನ ಅಧೀನವೆಂದೇ ತಿಳಿಯುವುದರಿಂದ ಉಳಿದ ಪ್ರಧಾನಾದಿಗಳೂ ಪರಮಾತ್ಮನ ಅಧೀನವೇ ಆಗಿವೆ. ಪರಮಾತ್ಮನಿಂದಲೇ ಪ್ರಧಾನಾದಿಗಳಿಗೆ ಸತ್ತಾಪ್ರವೃತ್ತಿ ಮೊದಲಾದ್ದು ಉಂಟಾಗುವು ದರಿಂದ ಅಂತಹ ಪ್ರಧಾನಾದಿಗಳೂ ಸ್ವತಂತ್ರವಾಗಲು ಹೇಗೆ ಸಾಧ್ಯ? ಆದ್ದರಿಂದ ಪರಮಾತ್ಮನ ಜಗತ್ಕಾರಣತ್ವಕ್ಕೆ ಗುಣಪೂರ್ಣತ್ವಕ್ಕೆ ಯಾವುದೇ ಬಾಧಕವಿಲ್ಲ.

ಪರಮಾತ್ಮನು ಸ್ವತಂತ್ರವಾದ ಸಾಧನಗಳನ್ನು ಅಪೇಕ್ಷಿಸುವುದಿಲ್ಲ ಎಂಬುದಕ್ಕೆ 'ಸರ್ವೇಶ್ವರಃ' ಎಂದಿವೇ ಮೊದಲಾದ ಶ್ರುತಿಯ ಪ್ರಮಾಣ. ಅದರಂತೆ—

ಪರತಂತ್ರೋ ಹ್ಯಪೇಕ್ಷೇತ ಸ್ವಂತಂತ್ರಃ ಕಿಮಪೇಕ್ಷತೇ ।
ಸಾಧನಾನಾಂ ಸಾಧನತ್ವಂ ಯತಃ ಕಿಂ ತಸ್ಯ ಸಾಧನೈಃ ॥

ಎಂಬ ಸ್ಮೃತಿಯಲ್ಲಿ ಹೇಳಿದ ಅಪರತಂತ್ರತ್ವ ಸ್ವತಂತ್ರತ್ವ ಸಾಧನಸತ್ತಾ ಪ್ರದತ್ವವೆಂಬ ಯುಕ್ತಿಗಳನ್ನೂ ಪ್ರಮಾಣವನ್ನಾಗಿ ಇಟ್ಟುಕೊಳ್ಳಬೇಕು. 'ಜಗತ್‌ಸೃಷ್ಟಿಃ ಸ್ವತಂತ್ರಸಾಧನಸಾಪೇಕ್ಷಾ ಸೃಷ್ಟಿತ್ವಾತ್ ಪಟಸೃಷ್ಟಿವತ್' ಎಂಬ ಪೂರ್ವಪಕ್ಷಿಯು ಹೇಳಿದ ಯುಕ್ತಿಯೂ ಪ್ರಮಾಣವಾಗಬಹುದಲ್ಲವೇ? ಎಂದರೆ ಆಗುವುದಿಲ್ಲ. ಏಕೆಂದರೆ ಸಿದ್ಧಾಂತಿಯು ಹೇಳಿದ ಯುಕ್ತಿಯು ಶ್ರುತಿ ಸಹಿತವಾಗಿದೆ. ಆದ್ದರಿಂದ ಪೂರ್ವಪಕ್ಷಿಯ ಯುಕ್ತಿಯು ದುರ್ಬಲವಾಗುತ್ತದೆ.

ಲೋಕದಲ್ಲಿ ಕಾಣುವ ಕಾರ್ಯಗಳಿಗೂ ಪರಮಾತ್ಮನಿಂದಾಗುವ ಕಾರ್ಯ ಗಳಿಗೂ ವೈಲಕ್ಷಣ್ಯವಿದೆ. ಉಳುವವನು ಬಿತ್ತುತ್ತಾನೆ. ಆದರೆ ಧಾನ್ಯವು ಗದ್ದೆಯ

ಯಜಮಾನನ ಅಧೀನವಾಗಿದೆ. ಹಸು ಹಾಲು ಕೊಡುತ್ತದೆ. ಹಾಲು ಗೋಪಾಲಕನ ಅಧೀನ. ಕೋಶ ರಕ್ಷಕನು ಕೋಶವನ್ನು ಕಾಯುತ್ತಾನೆ. ಆದರೆ ಕೋಶವು ರಾಜನ ಅಧೀನ. ಹೀಗೆ ಕಾರ್ಯವು ಕರ್ತೃವಿಗಿಂತ ಭಿನ್ನರಾದವರ ಅಧೀನವಾಗಿರುತ್ತದೆ. ಆದರೆ ಸಮಸ್ತ ಪ್ರಪಂಚದ ಕರ್ತೃವಾದ ಪರಮಾತ್ಮನೇ 'ಏಷ ಸರ್ವೇಶ್ವರಃ' ಎಂಬ ಶ್ರುತಿಯಿಂದ ಸ್ವಾಮಿಯೂ ಆಗಿದ್ದಾನೆ. ಈರೀತಿ ವಿಲಕ್ಷಣಕಾರ್ಯಕರ್ತೃತ್ವ ವಿರುವುದರಿಂದ, ಪರಮಾತ್ಮನಿಗೆ ಸ್ವತಂತ್ರಸಾಧನಗಳ ಅಪೇಕ್ಷೆಯಿಲ್ಲದಿರುವುದರಿಂದ ಗುಣಪೂರ್ಣತ್ವಕ್ಕೆ ಭಂಗವಿಲ್ಲ.

**ಸೂತ್ರಾರ್ಥ—**

### ಓಂ ತದನನ್ಯತ್ವಮಾರಂಭಣಶಬ್ದಾದಿಭ್ಯಃ ಓಂ ॥

ಆರಂಭಣಶಬ್ದಾದಿಭ್ಯಃ='ಕಿಂ ಸ್ವಿದಾಸೀದಧಿಷ್ಠಾನಮಾರಂಭಣಮ್' ಎಂಬ ಶ್ರುತಿಯಲ್ಲಿ ಸೃಷ್ಟಿಯ ಪೂರ್ವದಲ್ಲಿ ಸ್ವತಂತ್ರವಾದ ಅಧಿಷ್ಠಾನ ಮುಂತಾದವು ಯಾವುದಿತ್ತು? ಇತ್ಯಾದಿಯಾಗಿ ಆಕ್ಷೇಪಿಸುವ ವಾಕ್ಯಗಳಿಂದ ಸ್ವಾತಂತ್ರ್ಯಾದಿ ಯುಕ್ತಿಗಳಿಂದಲೂ ತದನನ್ಯತ್ವಂ=ಜಗತ್ತಿನ ಸೃಷ್ಟಿಗೆ ಸ್ವತಂತ್ರ ಕಾರಣವಾದ ಸಾಧನವು ಬ್ರಹ್ಮಾಭಿನ್ನವೆಂದು ಸಿದ್ಧವಾಗುತ್ತದೆ. ಅಂದರೆ ಬ್ರಹ್ಮನನ್ನು ಬಿಟ್ಟು ಬೇರೆ ಸ್ವತಂತ್ರ ಸಾಧನವಿಲ್ಲ ಎಂದರ್ಥ.

## ಇತರವ್ಯಪದೇಶಾಧಿಕರಣ (2-1-7)

ಓಂ ಇತರವ್ಯಪದೇಶಾದ್ಧಿತಾಕರಣಾದೋಷಪ್ರಸಕ್ತಿಃ ಎಂಬ ಸೂತ್ರದಿಂದ ಆರಂಭವಾದ ಈ ಅಧಿಕರಣದಲ್ಲಿಯೂ ಜಗತ್ಕರ್ತೃತ್ವವೇ ವಿಷಯ. 'ಯತೋ ವಾ ಇಮಾನಿ ಭೂತಾನಿ' ಎಂಬ ಶ್ರುತಿಯು, 'ಜೀವಾದ್ ಭವಂತಿ ಭೂತಾನಿ' ಎಂಬ ಶ್ರುತಿಯು ಹೀಗೆ ವಿರುದ್ಧವಾದ ಶ್ರುತಿಗಳಿರುವುದರಿಂದ ಜಗತ್ಕರ್ತೃತ್ವವು ವಿಷ್ಣುವಿಗೆ ಯುಕ್ತವೋ? ಅಯುಕ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಲೋಕದಲ್ಲಿ ಘಟಾದಿವಸ್ತುಗಳನ್ನು ಜೀವನೇ ಸ್ವತಂತ್ರವಾಗಿ ನಿರ್ಮಿಸುವುದನ್ನು ಕಾಣುತ್ತೇವೆ. ಆ ಜೀವನು ಈಶ್ವರಪ್ರೇರಿತನಾಗಿಯೇ ಘಟಾದಿಗಳನ್ನು ನಿರ್ಮಿಸುವುದು ಎಂದು ಹೇಳಿದರೆ ಕಲ್ಪನಾಗೌರವವು ಬರುತ್ತದೆ.

ಕಣ್ಣಿಗೆ ಕಾಣುವ ಕಾರ್ಯಗಳಿಗೆ ಜೀವನು ಸ್ವತಂತ್ರಕರ್ತೃವಾದ್ದರಿಂದ ಸಮಸ್ತ ಜಗತ್ತಿಗೂ ಅವನೇ ಸ್ವತಂತ್ರಕರ್ತೃ ಎಂದು ಹೇಳುವುದರಲ್ಲಿ ಲಾಘವವಿದೆ. ಆದ್ದರಿಂದ ಈಶ್ವರನಿಗೆ ಜಗತ್‌ಕರ್ತೃತ್ವವು ಕೂಡುವುದಿಲ್ಲ ಎಂಬುದು ಪೂರ್ವಪಕ್ಷ.

ಅನುವ್ಯಾಖ್ಯಾನದಲ್ಲಿ ಈ ಪೂರ್ವಪಕ್ಷ ಸಾಧಕವಾಗಿ **'ಲಘುತಾ'** (ಜೀವನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಲಾಘವವಿದೆ) ಎಂಬ ಯುಕ್ತಿಯನ್ನು ಹೇಳಿದ್ದಾರೆ. ಅದನ್ನೇ **'ಲಘುತಾ'** (ಶ್ರುತಿಸಿದ್ಧವಲ್ಲದ ಜೀವಕರ್ತೃತ್ವವನ್ನು ಅಂಗೀಕರಿಸ ದಿರುವುದರಿಂದ ಲಾಘವ) ಎಂಬ ಸಿದ್ಧಾಂತಯುಕ್ತಿಯನ್ನಾಗಿ ವಿವರಿಸುತ್ತಿದ್ದಾರೆ—

**ನ ಚೇಶ್ವರತ್ಯಾಗೇನ ಜೀವಸ್ಯೈವ ಕರ್ತೃತ್ವಾಂಗೀಕಾರೇ ಕಲ್ಪನಾಲಾಘವಮ್ । ಶ್ರುತಿಸಿದ್ಧತ್ವೇನಾಕಲ್ಪನಾತ್ । ಅಶ್ರುತಜೀವಕರ್ತೃತ್ವಾಂಗೀಕಾರೇ ಗೌರವಮೇವ । ತದಭಾವಾತ್ ಸಿದ್ಧಾಂತೇ ಲಘುತಾ। 'ನಾನ್ಯಃ ಕರ್ತಾ, ಸ ಹಿ ಸ್ವತಂತ್ರಃ, ಪರಮಾತ್ ಪರಮೋ ಹರಿಃ' ಇತ್ಯಾದೇಶ್ಚ । ಅಭೇದಪಕ್ಷಸ್ತು ನಿರಾಕೃತಃ । ಶ್ರುತ್ಯನುಭವವಿರೋಧಾಚ್ಚ ॥ ೭ ॥**

**ಭಾವಾರ್ಥ**—ಈಶ್ವರನನ್ನು ಒಪ್ಪಿಕೊಳ್ಳದೆ ಜೀವನನ್ನೇ ಸರ್ವಕರ್ತನೆಂದು ಅಂಗೀಕರಿಸಿದರೆ, ಕಲ್ಪನಾಲಾಘವವಿದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಈಶ್ವರನು ಸರ್ವಕರ್ತನೆಂಬುದು ಶ್ರುತಿಯಿಂದ ಸಿದ್ಧವಾದ್ದರಿಂದ ಕಲ್ಪನೆಗೆ ಅವಕಾಶವಿಲ್ಲ. ಜೀವನಿಗೆ ಕರ್ತೃತ್ವವು ಶ್ರುತಿಯಿಂದ ಸಿದ್ಧವಾಗಿಲ್ಲದಿರುವುದರಿಂದ ಜೀವನನ್ನು ಕರ್ತನೆಂದು ಒಪ್ಪಿದರೆ (ಶ್ರುತಪರಿತ್ಯಾಗ, ಅಶ್ರುತಕಲ್ಪನಾ ಎಂಬ ದೋಷಗಳಿರುವುದರಿಂದ) ಪೂರ್ವಪಕ್ಷಕ್ಕೇ ಗೌರವ ದೋಷಬರುತ್ತದೆ. ಹಿಂದಿನ ದೋಷಗಳಿಲ್ಲದಿರುವುದರಿಂದ ಸಿದ್ಧಾಂತದಲ್ಲಿ ಲಾಘವವಿದೆ. ಈಶ್ವರನು ಸ್ವತಂತ್ರಕರ್ತೃ ಎಂಬುದಕ್ಕೆ 'ನಾನ್ಯಃ ಕರ್ತಾ ಸ ಹಿ ಸ್ವತಂತ್ರಃ' (ಶ್ರೀಹರಿಯನ್ನು ಬಿಟ್ಟು ಬೇರೆ.ಯಾರೂ ಕರ್ತೃವಿಲ್ಲ ಅವನೇ ಸ್ವತಂತ್ರಕರ್ತೃ) ಮತ್ತು 'ಪರಮಾತ್ ಪರೋ ಹರಿಃ' (ಶ್ರೀಹರಿಯು ಉತ್ತಮೋತ್ತಮನು) ಎಂಬಿವೇ ಮೊದಲಾದ ಶ್ರುತಿಗಳೇ ಆಧಾರ. ಜೀವ–ಈಶ್ವರರಿಗೆ ಅಭೇದವನ್ನು ಹೇಳುವ ಮತವನ್ನು ಹಿಂದೆಯೇ ನಿರಾಕರಣೆ ಮಾಡಿಯಾಗಿದೆ. ಮತ್ತು ಆ ಮತಕ್ಕೆ ಶ್ರುತಿ ಅನುಭವಗಳ ವಿರೋಧವೂ ಇದೆ.

**ವಿವರಣೆ—** ಜೀವನಿಗೆ ಘಟಾದಿಕರ್ತೃತ್ವವು ಪ್ರತ್ಯಕ್ಷಸಿದ್ಧವಾಗಿದ್ದರೂ ಮಹದಾದಿ ಕರ್ತೃತ್ವವು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ. ಹೀಗೆ ಜೀವನಿಗೆ ಅಶ್ರುವಾದ ಕರ್ತೃತ್ವವನ್ನು ಅಂಗೀಕರಿಸಿದರೆ ಗೌರವ. ಬ್ರಹ್ಮನಿಗೆ ಶ್ರುತವಾದ ಕರ್ತೃತ್ವವನ್ನು ಅಂಗೀಕರಿಸಿದರೆ ಲಾಘವ ಎಂಬುದು ತಾತ್ಪರ್ಯ.

'ನಾನ್ಯಃ ಕರ್ತಾ ಸ ಹಿ ಸ್ವತಂತ್ರಃ' ಎಂಬ ಶ್ರುತಿಯು ಈಶ್ವರನೇ ಸ್ವತಂತ್ರಕರ್ತೃ ಎಂದು ತಿಳಿಸುತ್ತಿದೆ. ಆದರೆ 'ಅಹಂ ಕರೋಮಿ' ಎಂಬ ಪ್ರತ್ಯಕ್ಷವು ಜೀವನು ಸ್ವತಂತ್ರಕರ್ತನೆಂದು ತಿಳಿಸುತ್ತದೆ. ಇಬ್ಬರು ಸ್ವತಂತ್ರಕರ್ತೃಗಳನ್ನು ಅಂಗೀಕರಿಸಲು ಸಾಧ್ಯವಿಲ್ಲವಾದ್ದರಿಂದ, ಶ್ರುತಿ, ಪ್ರತ್ಯಕ್ಷಗಳೆರಡನ್ನು ಕೂಡಿಸಬೇಕೆಂದರೆ ಜೀವ–ಈಶ್ವರರಿಗೆ ಅಭೇದವನ್ನು ಅಂಗೀಕರಿಸಲೇಬೇಕು ಎಂದರೆ ಅದು ಸರಿಯಲ್ಲ. 'ಭೋಕ್ತ್ರಾಪತ್ತೇರವಿಭಾಗಶ್ಚ ಸ್ಯಾಲ್ಲೋಕವತ್' ಎಂಬ ಹಿಂದಿನ ಸೂತ್ರದಲ್ಲಿಯೇ ಅಭೇದವನ್ನು ನಿರಾಕರಿಸಲಾಗಿದೆ. ಮತ್ತು 'ದ್ವಾ ಸುಪರ್ಣಾ', 'ನಾಹಂ ಕರೋಮಿ' ಎಂಬ ಶ್ರುತಿ ಪ್ರತ್ಯಕ್ಷಗಳ ವಿರೋಧವೂ ಬರುತ್ತದೆ.

**ಸೂತ್ರಾರ್ಥ—**

**ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ ॥**

ಇತರವ್ಯಪದೇಶಾತ್=ಬ್ರಹ್ಮನಿಗಿಂತ ಭಿನ್ನನಾದ ಜೀವನಿಗೆ ಕರ್ತೃತ್ವವನ್ನು 'ಜೀವಾದ್ ಭವಂತಿ ಭೂತಾನಿ' ಎಂಬ ಶ್ರುತಿಯಲ್ಲಿ ಹೇಳಿರುವುದರಿಂದ ಚೇತ್= ಜೀವನೇ ಸ್ವತಂತ್ರಕರ್ತೃ ಎಂದು ಹೇಳುವುದಾದರೆ, ಹಿತಾಕರಣಾದಿದೋಷಪ್ರಸಕ್ತಿಃ= ತನಗೆ ಹಿತವನ್ನು ಮಾಡಿಕೊಳ್ಳದಿರುವುದು ಅಹಿತವನ್ನು ಮಾಡಿಕೊಳ್ಳುವುದು ಎಂಬ ದೋಷವು ಸಂಭವಿಸುತ್ತದೆ. ಜೀವನು ಸ್ವತಂತ್ರನಾದ್ದರಿಂದ ಯಾವಾಗಲೂ ತನಗೆ ಹಿತವನ್ನೇ ಮಾಡಿಕೊಳ್ಳಲಿ. ಅಹಿತವನ್ನು ಮಾಡಿಕೊಳ್ಳದಿರಲಿ ಎಂಬ ದೋಷವು ಬರುತ್ತದೆ. ಆದ್ದರಿಂದ ಜೀವನು ಸ್ವತಂತ್ರನಲ್ಲ.

## ಶಬ್ದಮೂಲತ್ವಾಧಿಕರಣ (2-1-8)

'ಓಂ ಶ್ರುತೇಸ್ತು ಶಬ್ದಮೂಲತ್ವಾತ್' ಎಂಬ ಸೂತ್ರದಿಂದ ಆರಂಭವಾಗುವ ಈ

ಅಧಿಕರಣಕ್ಕೆ ಜಗತ್‌ಸ್ರಷ್ಟೃತ್ವವು ವಿಷಯ. ಅದು ವಿಷ್ಣುವಿಗೆ ಯುಕ್ತವೋ? ಅಯುಕ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಹಿಂದಿನ ಅಧಿಕರಣದಲ್ಲಿ ಜೀವವನ್ನು ಸ್ವತಂತ್ರಕರ್ತೃ ಎಂದು ಅಂಗೀಕರಿಸಿದರೆ 'ಅವನು ತನಗೆ ಯಾವಾಗಲೂ ಹಿತವನ್ನೇ ಮಾಡಿಕೊಳ್ಳಬೇಕು. ಯಾವುದೇ ರೀತಿಯ ತೊಂದರೆಯನ್ನು ಅನುಭವಿಸಬಾರದು' ಎಂಬ ದೋಷಗಳು ಬರುತ್ತವೆ ಎಂದು ಹೇಳಿ ಜೀವನಿಗೆ ಸ್ವತಂತ್ರಕರ್ತೃತ್ವವನ್ನು ಅಂಗೀಕರಿಸಬಾರದು ಎಂದು ಸಿದ್ಧಾಂತವನ್ನು ಮಾಡಲಾಗಿದೆ. ಜೀವನಲ್ಲಿ ಬರಬಹುದಾದ ದೋಷಗಳು ಪರಮಾತ್ಮನಲ್ಲಿಯೂ ಬರಬಹುದಾದ್ದರಿಂದ ಪರಮಾತ್ಮನೂ ಸ್ವತಂತ್ರವಾಗಿ ಜಗತ್‌ಕಾರಣನಾಗುವುದಾದರೂ ಹೇಗೆ?

ಈ ಪೂರ್ವಪಕ್ಷಕ್ಕೆ ಆಧಾರವಾಗಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಯುಕ್ತಿಯು 'ವಿಶೇಷಾದರ್ಶನ' (ಜೀವನಿಗೂ ಪರಮಾತ್ಮನಿಗೂ ಯಾವ ವಿಶೇಷವೂ ಕಾಣದಿರುವುದು) ಎಂಬುದು. ಸಿದ್ಧಾಂತಕ್ಕೆ ಆಧಾರವಾದ ಯುಕ್ತಿಯೂ 'ವಿಶೇಷಾದರ್ಶನ'ವೇ (ಪರಮಾತ್ಮನಲ್ಲಿವೆಯೆಂದು ಶ್ರುತವಾದ ಶಬ್ದೈಕಸಮಧಿಗಮ್ಯತ್ವ ಸರ್ವಶಕ್ತಿತ್ವಾದಿ ಧರ್ಮಗಳು ಜೀವನಲ್ಲಿಲ್ಲದಿರುವುದು) ಅದನ್ನು ವಿವರಿಸುತ್ತಿದ್ದಾರೆ.

**ಶಬ್ದೈಕಸಮಧಿಗಮ್ಯತ್ವಸರ್ವಶಕ್ತಿತ್ವಾದೀನಾಂ ವಿಶೇಷಾಣಾಮದರ್ಶನಂ ಜೀವೇ । ನ ಜೀವಾದ್ವಿಶೇಷಾದರ್ಶನಂ ಪರಮೇಶ್ವರೇ । ವಿಶೇಷಶ್ರುತೇರೇವ ॥ ೮ ॥**

**ಭಾವಾರ್ಥ—**ಜೀವನಿಂದ ಈಶ್ವರನಲ್ಲಿ ಯಾವುದೇ ವಿಶೇಷವು ಕಾಣದಿರುವುದರಿಂದ ಈಶ್ವರನಿಗೆ ಜಗತ್ಕರ್ತೃತ್ವ ಕೂಡುವುದಿಲ್ಲ ಎಂಬುದು ಸರಿಯಲ್ಲ. 'ವಿಚಿತ್ರಶಕ್ತಿಃ ಪುರುಷಃ' ಮುಂತಾದ ಶ್ರುತಿಯಿಂದ ಈಶ್ವರನಲ್ಲಿ ವಿಶೇಷವು ಶ್ರುತವಾಗಿದೆ. ಆದರೆ ಈಶ್ವರನಲ್ಲಿರುವ ಶಬ್ದೈಕಸಮಧಿಗಮ್ಯತ್ವ ಸರ್ವಶಕ್ತಿತ್ವ ಮುಂತಾದ ವಿಶೇಷಗಳು ಜೀವನಲ್ಲಿಯೇ ಕಾಣುವುದಿಲ್ಲ.

**ವಿವರಣೆ—** ಪರಮಾತ್ಮನಿಗೆ ಜೀವನಲ್ಲಿಲ್ಲದಿರುವ ಶಬ್ದೈಕಸಮಧಿಗಮ್ಯತ್ವವೆಂಬ ವಿಶೇಷವಿದೆ. ಅಂದರೆ, ಪರಮಾತ್ಮನನ್ನು ತಿಳಿಯಲು ಇರುವ ಏಕೈಕ ಆಧಾರ ವೇದ. ಆ ವೇದ ಅವನನ್ನು ಏನೆಂದು ಹೇಳುತ್ತದೋ ಹಾಗೆ

ಒಪ್ಪಿಕೊಳ್ಳಬೇಕು. ಅದಕ್ಕೆ ನಮ್ಮ ಬುದ್ಧಿಕಲ್ಪಿತವಾದ ಯುಕ್ತಿವಿರೋಧವನ್ನು ಹೇಳಬಾರದು. ಆದ್ದರಿಂದ ಜೀವನು ಸ್ವತಂತ್ರಕರ್ತೃ ಎಂದು ಹೇಳಿದಾಗ ಬರುವ ದೋಷವು ಈಶ್ವರನು ಕರ್ತೃ ಎಂದು ಹೇಳಿದಾಗ ಬರುವುದಿಲ್ಲ.

'ವಿಚಿತ್ರಶಕ್ತಿಃ ಪುರುಷಃ' (ಈ ಬ್ರಹ್ಮನು ನಾನಾರೀತಿಯ ವಿಚಿತ್ರವಾದ ಶಕ್ತಿಯುಳ್ಳವನು) ಮುಂತಾದ ಶ್ರುತಿಗಳಿಂದ ಪರಮಾತ್ಮನು ಸರ್ವಶಕ್ತನೆಂದು ಸಿದ್ಧವಾಗಿರುವುದಿರಂದ ಅವನಲ್ಲಿ ಹಿತಾಕರಣಾದಿ ದೋಷಗಳು ಬರುವುದಿಲ್ಲ. ಆದರೆ ಈಶ್ವರನು ಸರ್ವಶಕ್ತನೆಂದು ಹೇಳುವ ಯಾವುದೇ ಶ್ರುತಿಯಿಲ್ಲದಿರುವುದ ರಿಂದ ಅವನಲ್ಲಿ ಈ ಎಲ್ಲ ದೋಷಗಳು ಬರುತ್ತವೆ. ಆದ್ದರಿಂದ ಪರಮಾತ್ಮನೇ ಜಗತ್ಕಾರಣ ಎಂದು ಸಿದ್ಧವಾಗುತ್ತದೆ

**ಸೂತ್ರಾರ್ಥ—**

### ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ ॥

ಈಶ್ವರನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಯುಕ್ತಿವಿರೋಧ ದೋಷವಿಲ್ಲ. ಏಕೆಂದರೆ, ಶ್ರುತೇಃ='ಯೋಽಸೌ ವಿರುದ್ಧಃ' ಎಂಬ ಶ್ರುತಿಯಿರುವುದರಿಂದ. ಶ್ರುತಿಯಿದ್ದರೂ ಯುಕ್ತಿವಿರೋಧ ಪರಿಹಾರ ಹೇಗೆ? ಎಂದರೆ ಶಬ್ದಮೂಲತ್ವಾತ್= ಈಶ್ವರ ಹಾಗೂ ಅವನ ಧರ್ಮಗಳೆಲ್ಲವೂ ಆಗಮ ಪ್ರಮಾಣಮಾತ್ರ ಗೋಚರವಾದ್ದರಿಂದ ದೋಷವಿಲ್ಲ.

## ನಪ್ರಯೋಜನಾಧಿಕರಣ (2-1-9)

ಓಂ ನಪ್ರಯೋಜನವತ್ವಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣದಲ್ಲಿ ಜಗತ್‌ಕರ್ತೃತ್ವವೇ ವಿಷಯ. ಅದು ವಿಷ್ಣುವಿಗೆ ಯುಕ್ತವೋ? ಅಯುಕ್ತವೋ ಎಂದು ಸಂದೇಹ.

ಪೂರ್ವಪಕ್ಷ— ವಿಷ್ಣುವು ಪ್ರಪಂಚವನ್ನು ಸೃಷ್ಟಿಮಾಡುವುದರಿಂದ ಅವನಿಗೆ ಏನಾದರೂ ಪ್ರಯೋಜನವಿದೆಯೋ? ಇಲ್ಲವೋ? ಪ್ರಯೋಜನವಿಲ್ಲದಿದ್ದರೆ ಸೃಷ್ಟಿಯನ್ನೇ ಮಾಡುತ್ತಿರಲಿಲ್ಲ. ಪ್ರಯೋಜನವಿದೆ ಎಂದಾದರೆ ಆ ಪ್ರಯೋಜನ

ಪಡೆಯುವುದಕ್ಕೂ ಮೊದಲು ಅವನು ಅಪೂರ್ಣನೆಂದಾಗುತ್ತಾನೆ. ಹೀಗೆ ಎರಡೂ ಪಕ್ಷಗಳಲ್ಲಿಯೂ ದೋಷಗಳಿವೆ. ಆದ್ದರಿಂದ ವಿಷ್ಣು ಜಗತ್ಕಾರಣನಲ್ಲ ಎಂದು ಪೂರ್ವಪಕ್ಷ.

ಪೂರ್ವಪಕ್ಷ ಸಾಧಕಯುಕ್ತಿ **'ಅಫಲ'** (ಸೃಷ್ಟಿಯಿಂದ ಯಾವುದೇ ಪ್ರಯೋಜನವಿಲ್ಲದಿರುವುದು) ಎಂಬುದು. ಅದರಂತೆ ಸಿದ್ಧಾಂತ ಸಾಧಕ ಯುಕ್ತಿಯೂ **'ಅಫಲ'** (ಪ್ರಯೋಜನವಿಲ್ಲದಿರುವುದರಿಂದ ಕರ್ತೃತ್ವವು ಪರಮಾತ್ಮನಿಗೆ ಕೂಡುತ್ತದೆ) ಎಂಬುದೇ ಇದನ್ನು ವಿವರಿಸುತ್ತಿದ್ದಾರೆ—

**ನ ಚ ಪ್ರಯೋಜನಾಭಾವೋऽಕರ್ತೃತ್ವೇ ಕಾರಣಮ್ । ಅಶೇಷ-ಕರ್ತೃತ್ವಾಪಾದಕಶ್ಚ । ಫಲಾಪೇಕ್ಷಿಣಸ್ತ್ವಪೂರ್ಣತ್ವಾದೇವ ನ ಸರ್ವ-ಕರ್ತೃತ್ವಾದಿಶಕ್ತಿಃ, ಇತರಸ್ಯ ಪೂರ್ಣತ್ವಾದೇವಾನಂತಶಕ್ತಿತ್ವಾಚ್ಚ ಲೀಲಯೈವ ಕರ್ತೃತ್ವಮ್ ॥ ೯ ॥**

**ಭಾವಾರ್ಥ**—ಪ್ರಯೋಜನವಿಲ್ಲದಿರುವುದು ಶ್ರೀಹರಿಗೆ ಕರ್ತೃತ್ವವಿಲ್ಲ ಎಂಬ ವಿಷಯದಲ್ಲಿ ಜ್ಞಾಪಕವೆಂಬ ಪೂರ್ವಪಕ್ಷವು ಸರಿಯಲ್ಲ. ಪ್ರಯೋಜನವಿಲ್ಲ ದಿರುವುದು ಶ್ರೀಹರಿಗೆ ಸರ್ವಕರ್ತೃತ್ವವನ್ನು ತಿಳಿಸಿಕೊಡುವುದು. ಯಾವನಿಗೆ ಫಲಾಪೇಕ್ಷೆ ಇದೆಯೋ ಅವನು ಅಪೂರ್ಣ. ಅಪೂರ್ಣನಾದ್ದರಿಂದಲೇ ಸರ್ವ ಕರ್ತೃತ್ವವು ಅವನಿಗೆ ಕೂಡುವುದಿಲ್ಲ. ಫಲಾಪೇಕ್ಷೆ ಇಲ್ಲದವನು ಪೂರ್ಣನಾಗಿರು ತ್ತಾನೆ. ಆದ್ದರಿಂದಲೇ ಅನಂತಶಕ್ತಿವುಳ್ಳವನಾದ ಅವನಿಗೆ ಲೀಲೆಯಿಂದಲೇ ಸರ್ವಕರ್ತೃತ್ವವು ಕೂಡುತ್ತದೆ.

**ವಿವರಣೆ**— ಯಾವನಿಗೆ ಫಲದ ಅಪೇಕ್ಷೆಯಿದೆಯೋ ಎಷ್ಟು ಕಾರ್ಯವನ್ನು ಮಾಡಿದರೆ ತನಗೆ ಅಪೇಕ್ಷಿತವಾದ ಫಲ ಸಿಕ್ಕುವುದೋ ಅಷ್ಟನ್ನೇ ಮಾಡುತ್ತಾನೆಯೇ ಹೊರತು ಎಲ್ಲ ಕಾರ್ಯಗಳನ್ನು ಮಾಡಲಾರ. ಫಲಾಪೇಕ್ಷೆ ಇಲ್ಲದವನು ಆಪ್ತಕಾಮನಾದ್ದರಿಂದ ಪೂರ್ಣಾನಂದ ಉಳ್ಳವನಾದ್ದರಿಂದ ಪೂರ್ಣಶಕ್ತಿವುಳ್ಳವ ನಾದ್ದರಿಂದಲೂ ಸಕಲ ಕಾರ್ಯಗಳನ್ನು ಲೀಲೆಯಿಂದಲೇ ಮಾಡುತ್ತಾನೆ, ಎಂದು 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್' ಎಂಬ ಶ್ರುತಿಯು ಪ್ರತಿಪಾದಿಸುತ್ತದೆ.. ಹೇಗೆ ಲೋಕದಲ್ಲಿ ಪಾನಮತ್ತನು

ಸುಖೋದ್ರೇಕದಿಂದಾಗಿ ನೃತ್ಯಮಾಡುತ್ತಾನೋ ಹಾಡುಗಳನ್ನು ಹಾಡುತ್ತಾನೋ ಅದರಂತೆ ಪರಮಾತ್ಮನು ಲೀಲೆಯಿಂದ ಸುಖಾತಿಶಯದಿಂದ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ ಎಂಬುದಕ್ಕೆ ಯಾವುದೇ ಅನುಪಪತ್ತಿ ಇಲ್ಲ. ಆದ್ದರಿಂದ ಪರಮಾತ್ಮನಿಗೆ ಜಗತ್ಕರ್ತೃತ್ವವು ಕೂಡುತ್ತದೆ.

**ಸೂತ್ರಾರ್ಥ—**

**ಓಂ ನ ಪ್ರಯೋಜನವತ್ತ್ವಾತ್ ಓಂ ॥**

ಜಗತ್ತಿನ ಸೃಷ್ಟಿಯಲ್ಲಿ ಈಶ್ವರನ ಪ್ರವೃತ್ತಿಯು ನ ಪ್ರಯೋಜನವತ್ತ್ವಾತ್= ಯಾವುದೇ ಪ್ರಯೋಜನವನ್ನೂ ಅಪೇಕ್ಷಿಸುವುದಿಲ್ಲ. ಏಕೆಂದರೆ ಪ್ರಯೋಜನ ವತ್ತ್ವಾತ್=ಪಡೆಯಬಹುದಾದ ಎಲ್ಲ ಪ್ರಯೋಜನಗಳನ್ನೂ ಪಡೆದಾಗಿರುವುದರಿಂದ.

## ವೈಷಣ್ಯನೈರ್ಘೃಣ್ಯಾಧಿಕರಣ (2-1-10)

ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ ಓಂ ಎಂಬ ಸೂತ್ರದಿಂದ ಆರಂಭವಾದ ಈ ಅಧಿಕರಣದಲ್ಲಿ ಜಗತ್‌ಕರ್ತೃತ್ವವೇ ವಿಷಯ. ಪರಸ್ಪರ ಶ್ರುತಿಗಳಲ್ಲಿ ವಿರೋಧ ಕಂಡದ್ದರಿಂದ ಈಶ್ವರನಿಗೆ ಜಗತ್ಕರ್ತೃತ್ವವು ಯುಕ್ತವೋ? ಅಯುಕ್ತವೋ? ಎಂದು ಸಂದೇಹ.

**ಪೂರ್ವಪಕ್ಷ—** ಈಶ್ವರನು ಜೀವರಿಗೆ ಜನ್ಮವನ್ನು ನೀಡಿ ಅವರಿಗೆ ಸುಖದುಃಖಗಳನ್ನು ಅವರವರ ಕರ್ಮವನ್ನು ಅನುಸರಿಸಿ ನೀಡುತ್ತಾನೋ? ಅಥವಾ ತನ್ನ ಇಚ್ಛೆಯಂತೆ ನೀಡುತ್ತಾನೋ? ಎಂದು ಪ್ರಶ್ನೆ ಮೂಡುತ್ತದೆ. ಕರ್ಮವನ್ನು ಅನುಸರಿಸಿ ನೀಡುತ್ತಾನೆ ಎಂದರೆ ಅವನಿಗೆ ಸ್ವಾತಂತ್ರ್ಯವಿಲ್ಲವೆಂದಾಯಿತು. ಅಸ್ವತಂತ್ರನು ಜಗತ್ಕರ್ತನಾಗಲಾರ. ಕರ್ಮಗಳನ್ನು ಅಪೇಕ್ಷಿಸದೆ ಫಲವನ್ನು ನೀಡುತ್ತಾನೆ ಎಂದರೆ ಅವನಿಗೆ ಪಕ್ಷಪಾತಾದಿ ದೋಷಗಳು ಸಂಭವಿಸುತ್ತವೆ. ದೋಷವುಳ್ಳವನೂ ಜಗತ್ಕರ್ತನಾಗಲಾರ. ಕರ್ಮಾನುಸಾರ ಫಲನೀಡುವುದಿಲ್ಲ ವೆಂದಾದರೆ ಜೀವರು ಕರ್ಮವನ್ನು ಮಾಡುವ ಆವಶ್ಯಕತೆಯೇ ಇಲ್ಲವೆಂದಾಗುತ್ತದೆ. ಆವಾಗ ಕರ್ಮವನ್ನು ವಿಧಾನ ಮಾಡುವ ಶ್ರುತಿಗಳ ವಿರೋಧವು ಬರುತ್ತದೆ. ಆದ್ದರಿಂದ ವಿಷ್ಣು ಜಗತ್ಕಾರಣನಲ್ಲ ಎಂದು ಪೂರ್ವಪಕ್ಷ.

ಇದಕ್ಕೆ ಆಧಾರವಾದ ಯುಕ್ತಿ 'ಇಷ್ಟಾಸಿದ್ಧಿ' (ಇಷ್ಟವಾದ ''ಸ್ವಾತಂತ್ರ್ಯೇಣ ಕರ್ತೃತ್ವ''ವು ಸಿದ್ಧವಾಗದೇ ಇರುವುದು) ಅದರಂತೆ ಸಿದ್ಧಾಂತಸಾಧಕಯುಕ್ತಿಯೂ 'ಇಷ್ಟಾಸಿದ್ಧಿ' (ಇಷ್ಟವಾದ 'ಸ್ವರ್ಗಕಾಮೋ ಯಜೇತ' ಎಂಬಿವೇ ಮೊದಲಾದ ವೇದವಾಕ್ಯಗಳಿಗೆ ಪ್ರಾಮಾಣ್ಯವು ಸಿದ್ಧಿಯಾಗದಿರುವುದು) ಎಂಬುದು. ಇದನ್ನು ವಿವರಿಸುತ್ತಿದ್ದಾರೆ—

**ನೇಶಸ್ಯ ಪೂರ್ಣತ್ವಾಸಿದ್ಧಿಃ । ಕರ್ಮಸಾಪೇಕ್ಷತ್ವೇಽನೀಶತ್ವಮನಪೇಕ್ಷತ್ವೇ ಶ್ರುತೇರಪ್ರಾಮಾಣ್ಯಮಿತಿ । ಕರ್ಮಣೋಽಪಿ ತದಧೀನತ್ವಮ್ । ತಥಾಽಪಿ ತದನುಸಾರೇಣ ಫಲದಾನಮಿತ್ಯನಂಗೀಕಾರ ಏವೇಷ್ಟಶ್ರುತಿಪ್ರಾಮಾಣ್ಯಾ-ಸಿದ್ಧಿಃ ॥ ೧೦ ॥**

**ಭಾವಾರ್ಥ**—ಕರ್ಮವನ್ನು ಅಪೇಕ್ಷಿಸಿ ಫಲವನ್ನು ಕೊಡುವುದಾದರೆ ಸ್ವಾತಂತ್ರ್ಯವು ಸಿದ್ಧಿಸುವುದಿಲ್ಲ. ಕರ್ಮವನ್ನು ಅಪೇಕ್ಷಿಸದೇ ಫಲ ನೀಡುವುದಾದರೆ ಕರ್ಮವನ್ನು ವಿಧಾನಮಾಡುವ ಶ್ರುತಿಗೆ ಅಪ್ರಾಮಾಣ್ಯ ಬರಬೇಕಾಗುತ್ತದೆ. ಒಟ್ಟಾರೆ ಈಶ್ವರನಿಗೆ ಗುಣಪೂರ್ಣತ್ವ ಸಿದ್ಧಿಯಾಗುವುದಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಶ್ರೀಹರಿಯು ಕರ್ಮವನ್ನು ಅಪೇಕ್ಷಿಸಿಯೇ ಫಲವನ್ನು ನೀಡುತ್ತಾನೆ. ಆದರೆ ಅಪೇಕ್ಷ್ಯವಾದ ಆ ಕರ್ಮವು ಅವನ ಅಧೀನವಾಗಿದೆ. ಹೀಗೆ ಅಂಗೀಕರಿಸದೆ ಇದ್ದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಮುಂತಾದ ಶ್ರುತಿಗಳಿಗೆ ಪ್ರಾಮಾಣ್ಯಸಿದ್ಧಿಯಾಗದೇ ಇರಬೇಕಾಗುವುದು.

**ವಿವರಣೆ**— 'ಏಷ ಹ್ಯೇವೈನಂ ಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತಿ ಏಷ ಉ ಏವ ಅಸಾಧುಕರ್ಮ ಕಾರಯತಿ ತಂ ಯಮಧೋ ನಿನೀಷತೇ' (ಯಾರನ್ನು ಈ ಲೋಕದಿಂದ ಊರ್ಧ್ವಲೋಕಗಳಿಗೆ ಕರೆದೊಯ್ಯಬೇಕೆಂದು ಪರಮಾತ್ಮನು ಬಯಸುತ್ತಾನೋ ಅವರಿಂದ ಒಳ್ಳೆಯ ಕೆಲಸವನ್ನು ಮಾಡಿಸುತ್ತಾನೆ. ಯಾರನ್ನು ಕೆಳಗೆ ಒಯ್ಯಬೇಕೆಂದು ಬಯಸುತ್ತಾನೋ ಅವರಿಂದ ಕೆಟ್ಟ ಕೆಲಸಗಳನ್ನು ಮಾಡಿಸುತ್ತಾನೆ) ಎಂಬ ಶ್ರುತಿಯಿಂದ ಕರ್ಮಗಳು ಅವನ ಅಧೀನವಾಗಿವೆ. ಆ ಕರ್ಮಗಳ ಅನುಸಾರ ಫಲವನ್ನು ನೀಡುತ್ತಾನೆ. ಆದ್ದರಿಂದ ಪಕ್ಷಪಾತ ಮೊದಲಾದ (ವೈಷಮ್ಯ ನೈರ್ಘೃಣ್ಯ) ದೋಷವಿಲ್ಲ.

ಸ್ವಾಧೀನವಾದ ಕರ್ಮಗಳನ್ನು ಅನುಸರಿಸಿ ಫಲವನ್ನು ನೀಡಿದರೂ ತನ್ನ ಅಧೀನನಾಗಿ ಅನುಕೂಲ ಕೆಲಸವನ್ನು ಮಾಡುವ ಮಂತ್ರಿಯಿಂದ ಕೆಲಸ ಮಾಡಿಸಿದರೂ ರಾಜನ ಸ್ವಾತಂತ್ರ್ಯಕ್ಕೆ ಹೇಗೆ ಭಂಗವಿಲ್ಲವೋ ಅಗರಂತೆ ಪರಮಾತ್ಮನ ಸ್ವಾತಂತ್ರ್ಯಕ್ಕೂ ಭಂಗವಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುತ್ತದೆ.

**ಸೂತ್ರಾರ್ಥ**

## ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ ತಥಾ ಹಿ ದರ್ಶಯತಿ ಓಂ

ಈಶ್ವರನಿಗೆ ಸರ್ವಕರ್ತೃತ್ವವನ್ನು ಒಪ್ಪಿದರೆ ವೈಷಮ್ಯನೈರ್ಘೃಣ್ಯೇ=ಪಕ್ಷಪಾತ ಮತ್ತು ನಿರ್ದಯತೆ ಎಂಬ ಎರಡು ದೋಷಗಳು ನ=ಇಲ್ಲ ಏಕೆಂದರೆ ಸಾಪೇಕ್ಷತ್ವಾತ್=ಫಲದಾನವು ಕರ್ಮವನ್ನು ಅನುಸರಿಸಿ ಇರುವುದರಿಂದ ಹಿ=ಯಾವ ಕಾರಣದಿಂದ, ತಥಾ=ಪ್ರಸ್ತುತವಿಷಯವನ್ನು ದರ್ಶಯತಿ='ಪುಣ್ಯೇನ ಪುಣ್ಯಂ ಲೋಕಂ ನಯತಿ' ಎಂಬ ಶ್ರುತಿಯೇ ಹೇಳುತ್ತದೆ.

# ಸರ್ವಧರ್ಮಾಧಿಕರಣ (2-1-11)

ಓಂ ಸರ್ವಧರ್ಮೋಪಪತ್ತೇಶ್ಚ ಓಂ ಎಂಬ ಅಧಿಕರಣದಲ್ಲಿ ವಿಷ್ಣುವಿನ ಗುಣಪೂರ್ಣತ್ವವೇ ವಿಷಯ. ಗುಣಪೂರ್ಣತ್ವವನ್ನು ಹಿಂದಿನ ಅಧ್ಯಾಯದಲ್ಲಿ ವಿಷ್ಣುವಿಗೆ ಸಮರ್ಥಿಸಿದ್ದರಿಂದ ಅವನು ಗುಣಪೂರ್ಣನೋ? ಲೋಕದಲ್ಲಿ ಯಾರಲ್ಲಿಯೂ ಕಾಣದಿರುವುದರಿಂದ ಅವನು ಗುಣಪೂರ್ಣನಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಹಿಂದಿನ ಅಧ್ಯಾಯದಲ್ಲಿ ವಿಷ್ಣು ಗುಣಪರಿಪೂರ್ಣನೆಂದು ಸಮರ್ಥಿಸಲಾಗಿದೆ. ಆದರೆ ಜೀವರಲ್ಲಿ ಯಾರಲ್ಲಿಯೂ ಸರ್ವಗುಣಪರಿಪೂರ್ಣತ್ವ ಕಂಡಿಲ್ಲವಾದ್ದರಿಂದ ಈಶ್ವರನಲ್ಲಾದರೂ ಅದನ್ನು ಅಂಗೀಕರಿಸುವುದು ಹೇಗೆ? ದೇವದತ್ತಾದಿಗಳು ಚೇತನರಾಗಿದ್ದಾರೆ. ಅವರು ಗುಣಪೂರ್ಣರಲ್ಲ. ಈಶ್ವರನೂ ಚೇತನನಾದ್ದರಿಂದ ಗುಣಪೂರ್ಣನಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ **'ಯುಕ್ತಿನಿಯಮ'** (ಚೇತನರೆಲ್ಲರೂ

ಅಪೂರ್ಣರೇ ಆಗಬೇಕು ಎಂಬ ನಿಯಮ) ಅದರಂತೆ ಸಿದ್ಧಾಂತಸಾಧಕವಾದ ಯುಕ್ತಿಯೂ **'ಯುಕ್ತಿನಿಯಮ'** (ಸ್ವತಂತ್ರನು ಪೂರ್ಣನಾಗಿರಲೇಬೇಕೆಂದು ನಿಯಮ) ಎಂಬುದೇ ಇದನ್ನು ಮುಂದಿನ ಮೂಲದಲ್ಲಿ ವಿವರಿಸುತ್ತಿದ್ದಾರೆ—

**ಸರ್ವಚೇತನಾ ಅಪೂರ್ಣಗುಣಾ ಇತಿ ನಿಯಮೋ ನ । ಸ್ವತಂತ್ರಸ್ಯ ಪೂರ್ಣಗುಣತ್ವನಿಯಮಾತ್ ।**

**'ಅಪೂರ್ಣೋಽಯಂ ಜೀವಸಂಘೋಽಸ್ವತಂತ್ರಃ ಪೂರ್ಣೋ ಹರಿರ್ಯಃ ಸ್ವತಂತ್ರಃ ಸದೈವ ।**

**ನ ಹಿ ಸ್ವತಂತ್ರೋಽಪೂರ್ಣತಾಂ ಕಾಮಯೀತ ಪೂರ್ಣೋ ಯದಿ ಸ್ಯಾದಸ್ವತಂತ್ರಃ ಕುತಃ ಸಃ ॥**

**ಇತಿ ಶ್ರುತೇಃ ॥ ೧೧ ॥**

**ಭಾವಾರ್ಥ—**ಎಲ್ಲ ಚೇತನರು ಅಪರಿಪೂರ್ಣಗುಣವುಳ್ಳವರು ಎಂಬ ನಿಯಮವಿಲ್ಲ. ಸ್ವತಂತ್ರಚೇತನನಲ್ಲಿ ಗುಣಪೂರ್ಣತ್ವವಿರಬೇಕು ಎಂಬ ನಿಯಮವಿದೆ. ಈ ನಿಯಮವು 'ಅಸ್ವತಂತ್ರವಾದ ಈ ಜೀವಸಮುದಾಯವು ಅಪರಿಪೂರ್ಣವೇ ಆಗಿರುತ್ತದೆ. ಸ್ವತಂತ್ರನಾದ ಹರಿಯು ಯಾವಾಗಲೂ ಪೂರ್ಣನೇ ಆಗಿರುತ್ತಾನೆ. ಸ್ವತಂತ್ರನಾದವನು ಅಪೂರ್ಣತ್ವವನ್ನು ಬಯಸಲಾರನು. ಒಂದುವೇಳೆ ಪೂರ್ಣ ನಾದರೆ ಅವನು ಅಸ್ವತಂತ್ರನು ಹೇಗಾದಾನು? ಎಂಬ ಶ್ರುತಿಯಿಂದ ಸಿದ್ಧವಾಗಿದೆ.

**ವಿವರಣೆ—** ಸ್ಿದ್ಧಾಂತದ ಯುಕ್ತಿಯೂ 'ಯುಕ್ತಿನಿಯಮ'ವೇ (ಸ್ವತಂತ್ರನು ಪೂರ್ಣನಾಗಿರಲೇಬೇಕೆಂಬ ನಿಯಮ)

'ವಿಷ್ಣುಃ ಅಪೂರ್ಣಃ ಚೇತನತ್ವಾತ್ ದೇವದತ್ತವತ್' ಎಂಬುದು ಪೂರ್ವಪಕ್ಷಿಯ ಯುಕ್ತಿ. 'ವಿಷ್ಣುಃ ಪೂರ್ಣಃ ಸ್ವತಂತ್ರತ್ವಾತ್ ವ್ಯತಿರೇಕೇಣ ದೇವದತ್ತವತ್' ಎಂಬುದು ಸಿದ್ಧಾಂತಿಯ ಯುಕ್ತಿಯಾಗಿದೆ.

ಹೀಗೆ ಯಾವುದೇ ಯುಕ್ತಿಗಳಿಂದ ಶ್ರೀಹರಿಯ ಗುಣಪೂರ್ಣತ್ವಕ್ಕೆ

ಜಗತ್ಕರ್ತೃತ್ವಕ್ಕೆ ವಿರೋಧವಿಲ್ಲವೆಂಬುದು ಈ ಪಾದದಲ್ಲಿ ನಿರ್ಣಯಿಸಲಾಗಿದೆ.

**ಸೂತ್ರಾರ್ಥ—**

**ಓಂ ಸರ್ವಧರ್ಮೋಪಪತ್ತೇಶ್ಚ ಓಂ ॥**

ಸರ್ವಧರ್ಮೋಪಪತ್ತೇಃ=ಜ್ಞಾನಾನಂದಾದಿಗುಣಗಳು ದುಃಖಾದಿ ದೋಷಾಭಾವವೂ ಈಶ್ವರನಲ್ಲಿ ಸ್ವಾತಂತ್ರ್ಯವಿರುವುದರಿಂದ ಉಪಪನ್ನವಾದ್ದರಿಂದ ಚ=ಈ ವಿಷಯದಲ್ಲಿ ಶ್ರುತಿಯ ಆಧಾರವು ಇರುವುದರಿಂದಲೂ ಯುಕ್ತಿಯ ವಿರೋಧವನ್ನು ಶಂಕಿಸಬಾರದು.

**ಇಲ್ಲಿಗೆ ದ್ವಿತೀಯಾಧ್ಯಾಯದ ಪ್ರಥಮಪಾದ ಸಮಾಪ್ತವಾಯಿತು.**

# ದ್ವಿತೀಯಾಧ್ಯಾಯದ ದ್ವಿತೀಯ ಪಾದ

ಸಮಯಪಾದದಲ್ಲಿರುವ ಅಧಿಕರಣಗಳ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿಲ್ಲ. ಅದಕ್ಕೆ ಕಾರಣವನ್ನು ನೀಡುತ್ತಿದ್ದಾರೆ.

**।। ಹರಿಃ ಓಂ ।। ಉಕ್ತವಿರೋಧಿನಸ್ತತ್ತತ್ಸಮಯಸಿದ್ಧಾಃ ಪೂರ್ವಪಕ್ಷ-ನ್ಯಾಯಾಃ, ತದ್ವಿರೋಧಿನೋಽನ್ಯೇ, ಇತಿ ಪ್ರಸಿದ್ಧಾ ಏವ ।। ೧ ।।**

ಹಿಂದೆ ನಿರೂಪಿಸಿದ ಜಗತ್ಕಾರಣತ್ವ, ಗುಣಪೂರ್ಣತ್ವ ಮೊದಲಾದ ವಿಷಯಗಳಿಗೆ ವಿರುದ್ಧವಾದ ವಿಷಯಗಳನ್ನು ಸಾಧಿಸುವ ಚಾರ್ವಾಕ ಸಾಂಖ್ಯ ಮೊದಲಾದ ಮತಗಳಲ್ಲಿ ಹೇಳಲ್ಪಟ್ಟ ನ್ಯಾಯಗಳೇ ಪೂರ್ವಪಕ್ಷನ್ಯಾಯಗಳು. ಅವುಗಳಿಗೆ ವಿರೋಧಿಯಾದ ನ್ಯಾಯಗಳೇ ಸಿದ್ಧಾಂತನ್ಯಾಯಗಳು. ಅವುಗಳು ಅನುವಾಖ್ಯಾನದಲ್ಲಿ ಸ್ಫುಟವಾಗಿ ತಿಳಿಯುವುದರಿಂದ ಅವುಗಳ ವಿವರಣೆಯನ್ನು ಈ ನ್ಯಾಯವಿವರಣ ಗ್ರಂಥದಲ್ಲಿ ಮಾಡಲಿಲ್ಲ.

**ಇಲ್ಲಿಗೆ ದ್ವಿತೀಯಾಧ್ಯಾಯದ ದ್ವಿತೀಯಪಾದ ಸಮಾಪ್ತವಾಯಿತು.**

# ದ್ವಿತೀಯಾಧ್ಯಾಯದ ತೃತೀಯಪಾದ

ಈ ಪಾದದಲ್ಲಿ ಅಧಿಭೂತ (ಪಂಚಭೂತಗಳಿಗೆ ಸಂಬಂಧಿಸಿರುವ ತತ್ತ್ವಗಳು) ಆಧಿದೈವ (ಪಂಚಭೂತಗಳ ಅಭಿಮಾನಿದೇವತೆಗಳು) ಜೀವ, ಪರಮಾತ್ಮ ಇವುಗಳ ವಿಷಯದಲ್ಲಿ ಶ್ರುತಿಯಲ್ಲಿ ಆಪಾತತಃ ತೋರುವ ವಿರೋಧವನ್ನು ಈ ಪಾದದಲ್ಲಿ ಪರಿಹಾರ ಮಾಡುತ್ತಿದ್ದಾರೆ. ಈ ಪಾದದ ಅಧಿಕರಣಗಳಲ್ಲಿರುವ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ.

ಅನುಭೂತಿಯುಕ್ತಿಬಹುವಾಗ್ವೈಲೋಮ್ಯಂ ಚ ತತೋಽಧಿಕಮ್ ।
ಏತತ್ ಸರ್ವಂ ಸತಃ ಸಾಮ್ಯಂ ದ್ವಾರವೈಯರ್ಥ್ಯಮೇವ ಚ ॥
ದೃಷ್ಟಯುಕ್ತ್ಯನುಸಾರಿತ್ವಮುಕ್ತಾನ್ಯಾರ್ಥಾವಿರೋಧತಃ ।
ಪ್ರಸಿದ್ಧನಾಮಸ್ವೀಕಾರೇ ಬಹುವಾಕ್ಯಾನುವರ್ತಿತಾ ॥
ಲೋಕದೃಷ್ಟ್ಯನುಸಾರಿತ್ವಂ ಜೀವಸಾಮ್ಯಮನಾದಿತಾ ।
ತತ್ರತತ್ರ ಪರಿಜ್ಞಾನಂ ಗುಣಸಾಮ್ಯಶ್ರುತೀ ತಥಾ ॥
ಉತ್ಪತ್ತಿಮತ್ವಂ ಸ್ವಗುಣಾನುಭೂತ್ಯಲ್ಪಕಲ್ಪನೇ ।
ನಾನಾಶ್ರುತಿಶ್ಚ ವೈಚಿತ್ರ್ಯಂ ಯುಕ್ತಯಃ ಪೂರ್ವಪಕ್ಷಗಾಃ ॥

ಅನುಭೂತಿಯುಕ್ತಿಬಹುವಾಗ್ವೈಲೋಮ್ಯ, ತತೋಧಿಕಮೇತತ್ಸರ್ವ, ಸತಃಸಾಮ್ಯ, ದ್ವಾರವೈಯರ್ಥ್ಯ, ದೃಷ್ಟಯುಕ್ತ್ಯನುಸಾರಿತ್ವ, ಉಕ್ತಾನ್ಯಾರ್ಥಾವಿರೋಧತಃ ಪ್ರಸಿದ್ಧನಾಮಸ್ವೀಕಾರೇ ಬಹುವಾಕ್ಯಾನುಸಾರಿತ್ವ, ಲೋಕದೃಷ್ಟಾನುಸಾರಿತ್ವ, ಜೀವಸಾಮ್ಯ, ಅನಾದಿತ್ವ, ತತ್ರತತ್ರ ಪರಿಜ್ಞಾನ, ಗುಣಸಾಮ್ಯ, ಶ್ರುತಿ, ಉತ್ಪತ್ತಿಮತ್ವ, ಸ್ವಗುಣಾನುಭೂತಿ, ಅಕಲ್ಪನ, ವೈಚಿತ್ರ್ಯ ಇವುಗಳು ಪೂರ್ವಪಕ್ಷಸಾಧಕವಾದ ಯುಕ್ತಿಗಳು.

ವ್ಯವಸ್ಥಾನುಪಪತ್ತಿಶ್ಚ ಸ್ವಾತಂತ್ರ್ಯಮನುಸಾರಿತಾ ।
ಮುಖ್ಯತಾ ಶಕ್ತಿಮತ್ವಂ ಚ ವೈರೂಪ್ಯಂ ಸರ್ವಸಂಗ್ರಹಃ ॥
ಗತ್ಯಾದಿರೀಶ ಶಕ್ತಿಶ್ಚ ಸರ್ವಮಾನವಿರೋಧಿತಾ ।
ಅಭೀಷ್ಟಸಿದ್ಧಿಸುವ್ಯಕ್ತೀ ಶಾಸ್ತ್ರಸಿದ್ಧಿರ್ವಿಪರ್ಯಯಃ ॥
ವಿಶೇಷಕಾರಣಂ ಚೇತಿ ಸಿದ್ಧಾಂತಸ್ಯೈವ ಸಾಧಿಕಾಃ ॥

ವ್ಯವಸ್ಥಾ, ಅನುಪಪತ್ತಿ, ಸ್ವಾತಂತ್ರ್ಯ, ಅನುಸಾರಿತ್ವ, ಮುಖ್ಯತಾ, ಶಕ್ತಿಮತ್ವ, ವೈರೂಪ್ಯ, ಸರ್ವಸಂಗ್ರಹ, ಗತ್ಯಾದಿ, ಈಶಶಕ್ತಿ, ಸರ್ವಮಾನವಿರೋಧಿತ್ವ, ಅಭೀಷ್ಟಸಿದ್ಧಿ, ಸುವ್ಯಕ್ತಿ, ಶಾಸ್ತ್ರಸಿದ್ಧಿ, ವಿಪರ್ಯಯ, ವಿಶೇಷಕಾರಣ ಎಂಬೀ ಯುಕ್ತಿಗಳು ಸಿದ್ಧಾಂತ ಸಾಧಕಗಳಾಗಿವೆ.

## ವಿಯದಧಿಕರಣ (2-3-1)

ಓಂ ನ ವಿಯದಶ್ರುತೇಃ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣಕ್ಕೆ ಆಕಾಶವೇ ವಿಷಯ. 'ಆತ್ಮನ ಆಕಾಶಸ್ಸಂಭೂತಃ' ಎಂದು ಶ್ರುತಿ ಹೇಳುವುದರಿಂದ ಆಕಾಶಕ್ಕೆ ಉತ್ಪತ್ತಿ ಇದೆಯೋ? ಅಥವಾ 'ಅನಾದಿರ್ವಾಯಮಾಕಾಶಃ' ಎಂದು ಹೇಳಿದ್ದರಿಂದ ಆಕಾಶಕ್ಕೆ ಉತ್ಪತ್ತಿ ಇಲ್ಲವೊ? ಎಂದು ಸಂಶಯ.

**ಪೂರ್ವಪಕ್ಷ—** ಆದಿಸೃಷ್ಟಿಯಲ್ಲಿ ಆಕಾಶಕ್ಕೆ ಉತ್ಪತ್ತಿಯನ್ನು ಅಂಗೀಕರಿಸಿದರೆ ಅದಕ್ಕೂ ಮುಂಚೆ ಆಕಾಶವಿಲ್ಲವೆಂದೇ ಹೇಳಬೇಕು. ನಿಬಿಡವಾದ ದ್ರವ್ಯಗಳ ಗುಂಪಿದ್ದಾಗ ಮಾತ್ರ ಆಕಾಶವಿಲ್ಲವೆಂಬುದು ಕೂಡುತ್ತದೆ. ಆದರೆ ಪ್ರಲಯದಲ್ಲಿ ನಿಬಿಡವಾದ ದ್ರವ್ಯಗಳ ಗುಂಪಿತ್ತು ಎಂದೂ ಹೇಳಲು ಸಾಧ್ಯವಿಲ್ಲದಿರುವುದರಿಂದ ಸೃಷ್ಟಿಯಾದಿಯಲ್ಲಿ ಆಕಾಶದ ಉತ್ಪತ್ತಿಯನ್ನು ಹೇಳಲು ಅನುಭವದ ವಿರೋಧವಿದೆ. ಮತ್ತು ದಾಷ್ಟಾನುಭವದ ವಿರೋಧವೂ ಬರುತ್ತದೆ. ಮತ್ತು 'ಆಕಾಶಃ ನೋತ್ಪದ್ಯತೇ ವಿಭುತ್ವಾತ್' (ಆಕಾಶವು ವ್ಯಾಪ್ತವಾದ್ದರಿಂದ ಹುಟ್ಟುವುದಿಲ್ಲ) ಎಂಬ ಅನುಮಾನದ ವಿರೋಧವೂ ಬರುತ್ತದೆ. 'ಅನಾದಿರ್ವಾಯಮಾಕಾಶಃ' (ಈ ಆಕಾಶವು ಅನಾದಿಯಾಗಿದೆ) 'ಆಕಾಶವತ್ ಸರ್ವಗತಶ್ಚ ನಿತ್ಯಃ' ಎಂಬ ಆಗಮದ ವಿರೋಧವೂ ಬರುತ್ತದೆ. ಆದ್ದರಿಂದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ 'ಆತ್ಮನ ಆಕಾಶಸ್ಸಂಭೂತಃ' ಎಂಬ ಶ್ರುತಿಯು ಅಪ್ರಮಾಣ. ಅದರ ದೃಷ್ಟಾಂತದಿಂದ ಸಕಲ ವೇದವಾಕ್ಯಗಳೂ ಅಪ್ರಮಾಣವೇ. ಆದ್ದರಿಂದ ವೇದದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿ 'ಅನುಭೂತಿ ಯುಕ್ತಿ ಬಹುವಾಗ್ ವೈಲೋಮ್ಯ' (ಅನುಭವ-ಯುಕ್ತಿ-ಬಹಳ ಶ್ರುತಿಗಳ ವಿರೋಧವು ಬರುತ್ತದೆ) ಎಂಬುದು. ಸಿದ್ಧಾಂತಕ್ಕೆ ಆಧಾರವಾದ ಯುಕ್ತಿ 'ವ್ಯವಸ್ಥಾ' (ಆಕಾಶದ

ಉತ್ಪತ್ತಿ–ಅನುತ್ಪತ್ತಿಗಳನ್ನು ಹೇಳುವ ವಾಕ್ಯಗಳಿಗೆ ಬೇರೆ ಬೇರೆ ವಿಷಯಗಳನ್ನು ವ್ಯವಸ್ಥೆ ಮಾಡುವುದು) ಎಂಬುದೇ. ಅದನ್ನು ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ.

**॥ ಹರಿಃ ಓಂ ॥ ನ ಚ ವಿಯತ ಉತ್ಪತ್ತಿಮತ್ತ್ವೇಽನುಭೂತಿಯುಕ್ತಿ-ಬಹುವಾಗ್ವಿರೋಧೋಽಸ್ತಿ, ವ್ಯವಸ್ಥಾಯೋಗಾತ್ । ಅವಕಾಶಮಾತ್ರಸ್ಯಾ-ವ್ಯಾಕೃತಾತ್ಮಕತ್ವಾದನುತ್ಪತ್ತಿವಚನಾನಾಂ ತದ್ವಿಷಯತ್ವಂ, ಉತ್ಪತ್ತಿವಚನಾ-ನಾಮಸಿತವರ್ಣಭೂತಾಕಾಶತದಭಿಮಾನಿಶರೀರವಿಷಯತ್ವಂ ಪರಾಧೀನ ವಿಶೇಷತ್ತ್ವಮಾತ್ರವಿಷಯತ್ವಂ ಚೇತಿ ವ್ಯವಸ್ಥಾ ।**

**'ಆಕಾಶೋ ನೀಲಿಮೋದೇತಿ ನ ಪ್ರದೇಶಃ ಕಥಂಚನ ।**
**ಅಭಾವೋ ಹಿ ಪ್ರದೇಶಸ್ಯ ನ ಹ್ಯತ್ರಾಭಾವ ಇತ್ಯಾಪಿ' ॥**

**ಇತಿ ಪೈಂಗಿಶ್ರುತಿಃ ॥ ೧ ॥**

**ಭಾವಾರ್ಥ**—ಆಕಾಶಕ್ಕೆ ಉತ್ಪತ್ತಿಯಿದೆ ಎಂದು ಅಂಗೀಕರಿಸಿದರೆ ಅನುಭವ, ಯುಕ್ತಿ, ಬಹುಶ್ರುತಿಗಳ ವಿರೋಧವು ಬರುತ್ತದೆ ಎಂಬುದು ಸರಿಯಲ್ಲ. ವ್ಯವಸ್ಥೆಯನ್ನು ಮಾಡಬಹುದಾಗಿದೆ. ಅದು ಹೇಗೆಂದರೆ, ಆಕಾಶಕ್ಕೆ ಅನುತ್ಪತ್ತಿಯನ್ನು ಹೇಳುವ ವಾಕ್ಯಗಳಿಗೆ ಅವಕಾಶರೂಪವಾದ ಅವ್ಯಾಕೃತಾಕಾಶವು ವಿಷಯ. ಉತ್ಪತ್ತಿಯನ್ನು ಹೇಳುವ ವಾಕ್ಯಗಳಿಗೆ ನೀಲವರ್ಣೋಪೇತವಾದ ಭೂತಾಕಾಶ, ತದಭಿಮಾನಿ ದೇವತೆಯ ಶರೀರವು ವಿಷಯವೆಂದು ವ್ಯವಸ್ಥೆ ಮಾಡಬಹುದು. ಈ ವಿಷಯವು ಪೈಂಗಿಶ್ರುತಿಯಲ್ಲಿ ಹೇಳಲ್ಪಟ್ಟಿದೆ. 'ನೀಲವರ್ಣವುಳ್ಳ ಭೂತಾಕಾಶವು ಹುಟ್ಟುತ್ತದೆ. ಅವಕಾಶರೂಪವಾದ ಅವ್ಯಾಕೃತಾಕಾಶವು ಯಾವ ರೀತಿಯಲ್ಲೂ (ಸ್ವರೂಪದಿಂದಲೂ, ವಿಕಾರರೂಪದಿಂದಲೂ) ಹುಟ್ಟುವುದಿಲ್ಲ. 'ಇಲ್ಲಿ ಆಕಾಶದ ಅಭಾವವಿದೆ' ಎಂದು ತೋರುವುದಿಲ್ಲವಷ್ಟೇ! ಎಂದು.

**ವಿವರಣೆ**— ಆಕಾಶ ಶಬ್ದಕ್ಕೆ ಭೂತಾಕಾಶ, ತದಭಿಮಾನಿ ವಿನಾಯಕ, ಅವ್ಯಾಕೃತಾಕಾಶ, ತದಭಿಮಾನಿ ರಮಾ ಎಂಬ ಅರ್ಥಗಳಿವೆ. ಅನಾದಿತ್ವವನ್ನು (ಅನುತ್ಪತ್ತಿಯನ್ನು) ಹೇಳುವ ವಾಕ್ಯಗಳು ಅವ್ಯಾಕೃತಾಕಾಶವನ್ನು ಹೇಳುತ್ತವೆ.

ಉತ್ಪತ್ತಿ ಹೇಳುವ ವಾಕ್ಯಗಳು ಹಿಂದೆ ಹೇಳಿದ ನಾಲ್ಕಕ್ಕೂ ಉತ್ಪತ್ತಿಯನ್ನು ಹೇಳುತ್ತಿವೆ ಎಂದು ವ್ಯವಸ್ಥೆಯನ್ನು ಮಾಡುತ್ತೇವೆ. ಅವುಗಳಲ್ಲಿಯೂ ಭೂತಾಕಾಶ ಮತ್ತು ತದಭಿಮಾನಿಯಾದ ವಿನಾಯಕನ ಶರೀರಗಳಿಗೆ ಸ್ವರೂಪತಃ ಉತ್ಪತ್ತಿಯಿದೆ. ಆದರೆ ವಿನಾಯಕನೆಂಬ ಜೀವ, ಅವ್ಯಾಕೃತಾಕಾಶ, ತದಭಿಮಾನಿ ಲಕ್ಷ್ಮೀದೇವಿ. ಇವುಗಳಿಗೆ ಸ್ವರೂಪತಃ ಉತ್ಪತ್ತಿಯಿಲ್ಲದಿದ್ದರೂ 'ಸ ಇದಂ ಸರ್ವಮಸೃಜತ್' (ಪರಮಾತ್ಮನು ಎಲ್ಲವನ್ನೂ ಸೃಷ್ಟಿಸಿದ) ಎಂಬ ವಾಕ್ಯಕ್ಕೆ ಪ್ರಾಮಾಣ್ಯವನ್ನು ಉಳಿಸುವುದಕ್ಕಾಗಿ ಪರಾಧೀನವಿಶೇಷಾವಾಪ್ತಿ (ಮಹದಾದಿಕಾರ್ಯಸಂಯೋಗ) ರೂಪವಾದ ಉತ್ಪತ್ತಿಯನ್ನು ಅಂಗೀಕರಿಸಲಾಗಿದೆ.

ಮೂಲದಲ್ಲಿ ಉದಾಹರಿಸಲಾದ ಪೈಂಗಿಶ್ರುತಿಯು ಭೂತಾಕಾಶಕ್ಕೆ ಉತ್ಪತ್ತಿಯನ್ನು ಹೇಳಿ ಅವ್ಯಾಕೃತಾಕಾಶಕ್ಕೆ ಉತ್ಪತ್ತಿಯಿಲ್ಲ ಎಂಬುದಕ್ಕೆ ಕಾರಣವನ್ನೂ ನೀಡಿದೆ— ಯಾವುದಕ್ಕೆ ಉತ್ಪತ್ತಿಯಿದೆಯೋ ಅದಕ್ಕೆ ಪ್ರಾಗಭಾವವು ಇರಲೇಬೇಕು. ಪ್ರಾಗಭಾವವು ತೋರುವಾಗ 'ಅತ್ರ ಆಕಾಶೋ ಭವಿಷ್ಯತಿ' ಎಂದು ಆಧಾರ ಮತ್ತು ಪ್ರತಿಯೋಗಿಗಳನ್ನು ಆಶ್ರಯಿಸಿಯೇ ತೋರುತ್ತದೆ. 'ಅತ್ರ' ಎಂದು ಆಕಾಶವನ್ನೇ ತೋರಿಸಿ ಅಲ್ಲಿ ಪುನಃ ಅದರದ್ದೇ ಪ್ರಾಗಭಾವವನ್ನು ಹೇಳುವುದು ವ್ಯಾಹತವಾಗುತ್ತದೆ. ಆದ್ದರಿಂದ ಅವ್ಯಾಕೃತಾಕಾಶಕ್ಕೆ ಉತ್ಪತ್ತಿಯಿಲ್ಲ.

ಹೀಗೆ ಎರಡು ವಿಧವಾದ ವಾಕ್ಯಗಳಿಗೂ ವ್ಯವಸ್ಥೆಯನ್ನು ಮಾಡಿದ್ದರಿಂದ ವೇದವು ಪ್ರಮಾಣವೆಂದು ಸಿದ್ಧವಾಗುತ್ತದೆ. ಆ ವೇದದಲ್ಲಿ ಹೇಳಿದ ಜಗತ್ಕಾರಣತ್ವವು ವಿಷ್ಣುವಿಗೇ ಯುಕ್ತವೇ ಆಗಿದೆ.

**ಸೂತ್ರಾರ್ಥ—**

**ಓಂ ನ ವಿಯದಶ್ರುತೇಃ ಓಂ ॥**

ವಿಯತ್=ಆಕಾಶವು ನ=ಅನುತ್ಪತ್ತಿಯನ್ನು ಹೊಂದಿಲ್ಲ, ಏಕೆಂದರೆ ಅಶ್ರುತೇಃ=ಉತ್ಪತ್ತಿಯನ್ನು ಹೇಳುವ ವಾಕ್ಯಗಳು ಅನುಪಪನ್ನವಾದ್ದರಿಂದ.

## ಮಾತರಿಶ್ವಾಧಿಕರಣ (2-3-2)

ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ ಎಂಬ ಸೂತ್ರವೊಂದನ್ನೊಳಗೊಂಡ

ಈ ಅಧಿಕರಣಕ್ಕೆ ಮುಖ್ಯವಾಯು ವಿಷಯ. ಉತ್ಪತ್ತಿಯನ್ನು ಹೇಳುವ ಶ್ರುತಿಯು ಮತ್ತು ಅನುತ್ಪತ್ತಿಯನ್ನು ಹೇಳುವ ವಾಕ್ಯಗಳೂ ಇರುವುದರಿಂದ ಮುಖ್ಯವಾಯುವಿಗೆ ಉತ್ಪತ್ತಿಯಿದೆಯೋ ಇಲ್ಲವೋ ಎಂಬುದು ಸಂದೇಹ.

**ಪೂರ್ವಪಕ್ಷ :** 'ಸಾ ವಾ ಏಷಾ ದೇವತಾಽನಾದಿರ್ಯೋಽಯಂ ಪವತೇ' (ಯಾರು ಎಲ್ಲವನ್ನೂ ಪವಿತ್ರಗೊಳಿಸುತ್ತಾನೋ ಅಥವಾ ನಿರಂತರ ಪ್ರವಹಿಸುತ್ತಾನೋ ಅಂತಹ ವಾಯುದೇವ ಅನಾದಿಯಾಗಿದ್ದಾನೆ) ಎಂಬ ಶ್ರುತಿಯು ಮುಖ್ಯವಾಯುವಿಗೆ ಅನಾದಿತ್ವವಿದೆಯೆಂದು ತಿಳಿಸುತ್ತಿದೆ. ಹಿಂದಿನ ಅಧಿಕರಣದಂತೆ ಉತ್ಪತ್ತಿ-ಅನುತ್ಪತ್ತಿಗಳನ್ನೆರಡನ್ನೂ ಕೂಡಿಸೋಣ ಎಂದರೆ ಅದು ಸಾಧ್ಯವಿಲ್ಲ. ಏಕೆಂದರೆ, 'ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ ವಾಯುರ್ವಾವ ನಿತ್ಯಃ' ಎಂಬ ಶ್ರುತಿಯಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಲ್ಪಟ್ಟ ಆಕಾಶವನ್ನೂ ಪೃಥಿವೀ, ಅಪ್, ತೇಜಸ್ಸುಗಳೊಂದಿಗೆ ಅನಿತ್ಯಕೋಟಿಯಲ್ಲಿ ಸೇರಿಸಿ ವಾಯುವಿಗೆ ನಿತ್ಯತ್ವವನ್ನು ಹೇಳಲಾಗಿದೆ. ಆದ್ದರಿಂದ ಹೀಗೆ ನಿರವಕಾಶವಾಗಿ ನಿತ್ಯತ್ವವನ್ನು ಹೇಳುವ ವಾಕ್ಯವು ಆಕಾಶಕ್ಕೆ ನಿತ್ಯತ್ವವನ್ನು ಹೇಳುವ ವಾಕ್ಯಕ್ಕಿಂತಲೂ ಅಧಿಕವಾಗಿದೆ. ಮತ್ತು ಹಿಂದಿನ ಅಧಿಕರಣದಲ್ಲಿ ಹೇಳಿದಂತೆ ವಾಯುವಿನ ಅನುತ್ಪತ್ತಿಯು ಗೌಣವೆಂದು ಹೇಳೋಣವೆಂದರೆ, ಹಾಗೆ ಹೇಳಿದರೆ ವಾಯುವಿಗೆ ಸ್ವರೂಪತಃ ಉತ್ಪತ್ತಿಯಿಲ್ಲ ಎಂದೇ ಹೇಳಿದಂತಾಯಿತು. ಸ್ವರೂಪತಃ ಉತ್ಪತ್ತಿಯಿಲ್ಲದಿರುವುದು ಎಲ್ಲ ಚೇತನರಿಗೂ ಸಮಾನ. ವಾಯುವು ಚೇತನೋತ್ತಮವೆಂದಾಗುವುದಿಲ್ಲ. ಆದಿಲ್ಲವಾದರೆ 'ಕುವಿದಂಗ ನಮಸಾ ಯೇ ವೃಧಾಸಃ' (ಎಲ್ಲ ದೇವತೆಗಳೂ ಜ್ಞಾನಕ್ಕಾಗಿ ವಾಯುದೇವರ ಉಪಾಸನೆಯನ್ನು ಮಾಡಿದರು) ಎಂದು ಹೇಳಿದ ಸರ್ವದೇವೋಪಾಸ್ಯತ್ವವು ಕೂಡದೇ ಹೋಗಬೇಕಾದೀತು. ಸರ್ವದೇವೋಪಾಸ್ಯತ್ವವಾದರೂ ಯಾವ ಚೇತನರಲ್ಲಿಯೂ ಇಲ್ಲದ ಅತಿಶಯವಾದ ಮಹಿಮೆ ಇದ್ದರೆ ಮಾತ್ರ ಕೂಡುವುದು ಎಂಬ ಯುಕ್ತಿ ಹಿಂದಿನ ಆಕಾಶದ ಅನಾದಿತ್ವಕ್ಕಿಂತ, ಅಧಿಕವಾದ ಯುಕ್ತಿಯಾಗಿದೆ.

ಇದನ್ನೇ ಅನುವ್ಯಾಖ್ಯಾನದಲ್ಲಿ 'ತತೋಽಧಿಕಂ ಏತತ್ಸರ್ವಂ' ಎಂದು ಪೂರ್ವಪಕ್ಷಯುಕ್ತಿಯನ್ನಾಗಿ ಹೇಳಿದ್ದು. ಅಂದರೆ, ಅನುಭವ, ಯುಕ್ತಿ ಬಹಳ ಶ್ರುತಿಗಳ ಜೊತೆಗೆ ಅಧಿಕವಾಗಿ 'ಅಥ ಹ ನಿತ್ಯಾಶ್ಚಾನಿತ್ಯಾಶ್ಚ' ಎಂಬ ಅಧಿಕವಾದ

ನಿರವಕಾಶಶ್ರುತಿ ಮತ್ತು ಅಧಿಕವಾದ ಸರ್ವದೇವೋಪಾಸ್ಯತ್ವ ಇವುಗಳೇ ಪೂರ್ವಪಕ್ಷಿ ಯುಕ್ತಿ. ಇದನ್ನು ಮತ್ತು 'ಅನುಪಪತ್ತಿ' (ಮುಖ್ಯವಾದ ಅನುತ್ಪತ್ತಿಯು ಅನುಪಪನ್ನವಾಗುವುದು) ಅಂದರೆ ಮುಖ್ಯವಾದ ಉತ್ಪತ್ತಿಯು ವಾಯುವಿಗೆ ಇದ್ದೇ ಇದೆ ಎಂದರ್ಥ ಎಂಬ ಸಿದ್ಧಾಂತಯುಕ್ತಿಯನ್ನೂ ವಿವರಿಸುತ್ತಿದ್ದಾರೆ.

**ತತೋಽಧಿಕಮೇತತ್ಸರ್ವಮನುಭೂತ್ಯಾದಿವಿರುದ್ಧತ್ವಂ ವಾಯೂತ್ಪತ್ತಾವಿತಿ ನ, ವಾಯೋರೇವಾನುತ್ಪತ್ತ್ಯನುಪಪತ್ತೇಃ। ಪರಾಧೀನ ವಿಶೇಷಮಾತ್ರಂ ಹ್ಯುತ್ಪತ್ತಿಃ। ತದಭಾವ ಉಭಯೋಃ ಸ್ವಾತಂತ್ರ್ಯಂ ವಿರುದ್ಧಮೇವ। ಸರ್ವೋತ್ತಮತ್ವಾನುಪಪತ್ತೇಃ। ಉಭಯೋರಪಿ ಪರಾಧೀನತ್ವಪ್ರಾಪ್ತೇಶ್ಚಾನ್ಯೋನ್ಯಾನುರೋಧೇ, ಅನನುರೋಧೇ ತು ನ ಸರ್ವೈಶ್ವರ್ಯಮ್। ಜ್ಞಾನಾವಿಸ್ಮೃತ್ಯಾ ವಾಯಾವಪಿ ವ್ಯವಸ್ಥೇತ್ಯತಿದೇಶಃ। ಅನುಪಪತ್ತಿಸ್ತು ತತ್ಪ್ರಾಪಿಕಾ। ಪರಾಧೀನವಿಶೇಷವತ್ತ್ವಮಾತ್ರಂ ತ್ವವ್ಯಾಕೃತಾಕಾಶಸ್ಯ ತದಭಿಮಾನಿಪ್ರಕೃತೇಶ್ಚ ಸಮವೇವ ॥ ೨ ॥**

**ಭಾವಾರ್ಥ**—ಮುಖ್ಯವಾಗಿ ಉತ್ಪತ್ತಿಯನ್ನಂಗೀಕರಿಸಿದರೆ ವಿಯದಧಿಕರಣ ಕ್ಕಿಂತಲೂ ಅಧಿಕವಾದ ನಿರವಕಾಶವಾಕ್ಯ, ನಿರವಕಾಶಯುಕ್ತಿ, ಅನುಭವ, ಯುಕ್ತಿ, ಬಹುಶ್ರುತಿಗಳ ವಿರೋಧವು ಬರುತ್ತದೆ ಎಂದು ಹೇಳಬಾರದು. ವಾಯುವಿಗೆ ಅನುತ್ಪತ್ತಿ ಅನುಪಪನ್ನಾಗಿದೆ. ಅಂದರೆ ಉತ್ಪತ್ತಿಯೇ ಉಪಪನ್ನ ವಾಗುತ್ತದೆ. ಉತ್ಪತ್ತಿ ಎಂದರೆ ಪರಾಧೀನವಿಶೇಷಾವಾಪ್ತಿ ಮಾತ್ರವೇ. ಒಂದುವೇಳೆ ವಾಯುವಿಗೆ ಉತ್ಪತ್ತಿ ಇಲ್ಲವೆಂದರೆ (ಉತ್ಪತ್ತಿ ಎಂದರೆ ಪರತಂತ್ರತ್ವವಾದ್ದರಿಂದ) ಸ್ವಾತಂತ್ರ್ಯವಿದೆ ಎಂದಾಯಿತು. ಆವಾಗ ವಾಯುವಿಗೂ ಈ ವಿಷ್ಣುವಿಗೂ ಇಬ್ಬರಿಗೂ ಸ್ವಾತಂತ್ರ್ಯವು ವಿರುದ್ಧವೇ ಆಗಿದೆ. ವಿಷ್ಣುವಾಯುಗಳಿಗೆ ಇಬ್ಬರಿಗೂ ಪರಸ್ಪರ ಒಬ್ಬರಮೇಲೆ ಮತ್ತೊಬ್ಬರಿಗೆ ನಿಯಂತ್ರಣವಿದೆಯೋ? ಇಲ್ಲವೋ? ನಿಯಂತ್ರಣ ವಿರುವುದಾದರೆ ಇಬ್ಬರೂ ಪರಾಧೀನರಾಗುತ್ತಾರೆ. ನಿಯಂತ್ರಣವು ಇಲ್ಲವಾದರೆ ಇಬ್ಬರಿಗೂ ಐಶ್ವರ್ಯವು ಕೂಡುವುದಿಲ್ಲ. ಆದ್ದರಿಂದ ಉತ್ಪತ್ತಿ ಇದೆ ಎಂದೇ ಒಪ್ಪಬೇಕು.

ವೃತ್ತಿಜ್ಞಾನಕ್ಕೆ ವಿಸ್ಮರಣೆ ಇಲ್ಲದಿರುವುದರಿಂದ ವಾಯುವಿಗೆ ಅನುತ್ಪತ್ತಿಯನ್ನು

ಹೇಳುವ ವಾಕ್ಯಗಳನ್ನು ಕೂಡಿಸಲು ಬರುವುದರಿಂದ ಅತಿದೇಶವು ಯುಕ್ತವಾಗಿದೆ. ಅನುತ್ಪತ್ತಿಯೇ ವ್ಯವಸ್ಥೆಯನ್ನು ಕೂಡಿಸುತ್ತದೆ. ಪರಾಧೀನ ವಿಶೇಷವೆಂಬುದು ಅವ್ಯಾಕೃತ ಆಕಾಶಕ್ಕೂ ಅದರ ಅಭಿಮಾನಿಯಾದ ಪ್ರಕೃತಿಗೂಸಮಾನವೇ ಆಗಿದೆ.

**ವಿವರಣೆ—** ವಾಯುವಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ 'ಉಳಿದ ಭೂತಗಳು ಅನಿತ್ಯ, ವಾಯು ನಿತ್ಯ' ಎಂದು ನಿತ್ಯತ್ವವನ್ನು ಪ್ರತಿಪಾದಿಸುವ 'ವಾಯುರ್ವಾವ ನಿತ್ಯಃ' ಎಂಬ ಶ್ರುತಿಗೆ ಏನರ್ಥ ಮಾಡಬೇಕು? ಎಂದರೆ, ಉಳಿದ ಆಕಾದಿಗತ ಗಳಿಗಿಂತ ವಾಯುವಿನಲ್ಲಿರುವ ವೃತ್ತಿಜ್ಞಾನ ನಿತ್ಯವಾದ್ದರಿಂದ ವಾಯುವಿಗೆ ನಿತ್ಯವನ್ನು ಶ್ರುತಿಯು ತಿಳಿಸುತ್ತದೆ. ಹೊರತಾಗಿ ದೇಹತಃ ಉತ್ಪತ್ತಿ ಇಲ್ಲದಿರುವುದ ರಿಂದ ಅಲ್ಲ.

ವಸ್ತುತಃ ಹಿಂದಿನ ಅಧಿಕರಣದಲ್ಲಿ ಹೇಳಿದ 'ವ್ಯವಸ್ಥೆ'ಯೇ ಇಲ್ಲಿಯೂ ಸಿದ್ಧಾಂತಯುಕ್ತಿ ಆಗಬಹುದು. ಆದರೆ ವ್ಯವಸ್ಥೆಯನ್ನು ಹೇಗೆ ಕೂಡಿಸಬೇಕು ಎಂಬುದಕ್ಕೆ ನಿಯಾಮಕವಾದದ್ದು 'ಅನುಪಪತ್ತಿ' ಎಂಬುದು. ಆದ್ದರಿಂದ ಅದನ್ನೇ ಯುಕ್ತಿಯನ್ನಾಗಿ ಹೇಳಿದ್ದಾರೆ.

ವಾಯುವಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಶರೀರದ ಉತ್ಪತ್ತಿಯನ್ನು ಹೇಳುತ್ತದೆ. ನಿತ್ಯತ್ವವನ್ನು ಹೇಳುವ ಶ್ರುತಿಯು ವೃತ್ತಿಜ್ಞಾನಕ್ಕೆ ನಾಶವಿಲ್ಲವೆಂದು ತಿಳಿಸುತ್ತದೆ ಎಂದು ಒಪ್ಪಿಕೊಳ್ಳುವ ಬದಲಾಗಿ ಉತ್ಪತ್ತಿಪ್ರತಿಪಾದಕ ಶ್ರುತಿಯು ಪರಾಧೀನವಿಶೇಷವ್ಯಾಪ್ತಿಯನ್ನು ಹೇಳಿತ್ತದೆ. ನಿತ್ಯತ್ವವನ್ನು (ಅನುತ್ಪತ್ತಿಯನ್ನು) ಹೇಳುವ ಶ್ರುತಿಯು ದೇಹಕ್ಕೆ ಉತ್ಪತ್ತಿಯನ್ನು ಪ್ರತಿಪಾದಿಸುತ್ತದೆ ಎಂದು ಕೂಡಿಸಬಹುದಲ್ಲ? ಎಂದರೆ, ಹೇಳಬಹುದಿತ್ತು. ಹೀಗೆ ಹೇಳುವುದರಿಂದ ಪೂವಾಧಿಕರಣಕ್ಕೂ ಈ ಅಧಿಕರಣಕ್ಕೂ ವೈಲಕ್ಷಣ್ಯವೇನೂ ಬರುತ್ತಿರಲಿಲ್ಲ. ಏಕೆಂದರೆ ಪರಾಧೀನವಿಶೇಷವಾಪ್ತಿ ಎಂಬುದು ಹಿಂದಿನ ಅವ್ಯಾಕೃತ ಆಕಾಶಕ್ಕೂ ಅಭಿಮಾನಿಯಾದ ಚಿತ್ಪ್ರಕೃತಿಗೆ ಒಪ್ಪಿಕೊಂಡಿದ್ದೇವೆ. ವೈಲಕ್ಷಣ್ಯವನ್ನು ತೋರಿಸುವುದ ಕ್ಕಾಗಿ ಈ ಅಂಗೀಕರಿಸುವ ವ್ಯವಸ್ಥೆಯು ಸರಿಯಾಗಿಯೇ ಇದೆ.

'ಏತೇನ ಮಾತರಿಶ್ವಾ ವ್ಯಾಖ್ಯಾತಃ' ಎಂಬ ಸೂತ್ರದಲ್ಲಿರುವ 'ಏತೇನ' ಎಂಬ ಶಬ್ದವು ಅತಿದೇಶವನ್ನು (ಹಿಂದಿನ ಸೂತ್ರದಂತೆ ಇಲ್ಲಿಯೂ ಒಪ್ಪಿಕೊಳ್ಳಬೇಕು

ಎಂಬುದನ್ನು) ತಿಳಿಸುತ್ತದೆ. ಅದು ಹಿಂದಿನ ಅಧಿಕರಣದಂತೆ ನಿತ್ಯತ್ವ, ಅನಿತ್ಯತ್ವವನ್ನು ಪ್ರತಿಪಾದಿಸುವ ಶ್ರುತಿಗಳಿಗೆ ವಿರೋಧಬಾರದಿರುವಂತೆ ಅರ್ಥವ್ಯವಸ್ಥೆಯನ್ನು ಮಾಡಬೇಕು ಎಂಬ ಅಂಶದಲ್ಲಿಯೇ ಅತಿದೇಶವೇ ಹೊರತು ಸರ್ವಾಂಶದಲ್ಲಿ ಅಲ್ಲ ಎಂಬುದು ಸ್ಪಷ್ಟ.

**ಸೂತ್ರಾರ್ಥ—**

**ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ**

ಏತೇನ=ಹಿಂದಿನ ಅಧಿಕರಣದಲ್ಲಿ ಹೇಳಿದ ಯುಕ್ತಿಗಳಿಂದ ಮಾತರಿಶ್ವಾ= ಮುಖ್ಯವಾಯುವಿಗೆ ಉತ್ಪತ್ತಿ ಮತ್ತು ಅನುತ್ಪತ್ತಿಯನ್ನು ಹೇಳುವ ಶ್ರುತಿಯು ವ್ಯಾಖ್ಯಾತಃ=ವ್ಯಾಖ್ಯಾನಿಸಲ್ಪಟ್ಟಿತು.

## ಅಸಂಭವಾಧಿಕರಣ (2-3-3)

ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ ಎಂಬ ಸೂತ್ರವೊಂದನ್ನೊಳಗೊಂಡ ಈ ಅಧಿಕರಣಕ್ಕೆ ಬ್ರಹ್ಮನು ವಿಷಯ. 'ಅಸತಃ ಸದಜಾಯತ' ಎಂದು ಶ್ರುತವಾಗಿರುವುದರಿಂದ ಬ್ರಹ್ಮನಿಗೆ ಉತ್ಪತ್ತಿ ಇದೆಯೋ? ಅಥವಾ 'ಸದೇವ ಸೋಮ್ಯೇದಮಗ್ರ ಆಸೀತ್' ಎಂದು ಹೇಳಿದ್ದರಿಂದ ಉತ್ಪತ್ತಿ ಇಲ್ಲವೋ ಎಂದು ಸಂದೇಹ.

**ಪೂರ್ವಪಕ್ಷ—** ಬ್ರಹ್ಮನಿಗೂ ಉತ್ಪತ್ತಿಯಿದೆ ಎಂಬುದು ಪೂರ್ವಪಕ್ಷ. ಏಕೆಂದರೆ 'ಅಸತಃ ಸದಜಾಯತ' (ಅಸತ್‌ನಿಂದ ಸತ್ ಎನಿಸಿದ ಬ್ರಹ್ಮ ಹುಟ್ಟಿದ) ಎಂದು ಶ್ರುತಿಯಿರುವುದರಿಂದ. ಹೀಗೆ ಹೇಳಿದರೆ ಬ್ರಹ್ಮನಿಗೆ ಉತ್ಪತ್ತಿಯಿಲ್ಲ ಎಂಬ ಶ್ರುತಿಗಳ ವಿರೋಧವು ಬರುತ್ತದೆ ಎಂದು ಶಂಕಿಸಬಾರದು. ಬ್ರಹ್ಮನಿಗೆ ಸ್ವರೂಪತಃ ಉತ್ಪತ್ತಿ ಇಲ್ಲದಿದ್ದರೂ ಆಕಾಶ, ವಾಯುಗಳಂತೆ ಪರಾಧೀನವಿಶೇಷಪ್ರಾಪ್ತಿ ರೂಪವಾದ ಉತ್ಪತ್ತಿಯನ್ನು ಒಪ್ಪಿಕೊಳ್ಳಬಹುದು. ಹೀಗೆ ಬ್ರಹ್ಮನಿಗೂ ಉತ್ಪತ್ತಿ ಯಿರುವುದರಿಂದ ಜಗತ್ಕಾರಣತ್ವವು ಕೂಡುವುದಿಲ್ಲ ಎಂದು ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ 'ಸತಃ ಸಾಮ್ಯಂ' (ಸತ್ ಶಬ್ದವಾಚನಾದ ಬ್ರಹ್ಮನಿಗೂ

ಆಕಾಶಾದಿಗಳಂತೆ ಪರಾಧೀನವಿಶೇಷಾವಾಪ್ತಿಯು ಸಮಾನ) ಎಂಬುದು. ಇದನ್ನು ನಿರಾಕರಿಸಿ ಸಿದ್ಧಾಂತ ಯುಕ್ತಿಯನ್ನು ವಿವರಿಸುತ್ತಿದ್ದಾರೆ.

**ನ ಚ ಸತಃ ಪರಾಧೀನವಿಶೇಷವತ್ತ್ವಂ ಸ್ವಾತಂತ್ರ್ಯಾತ್ ॥ ೩ ॥**

ಸತ್ ಆದ ಬ್ರಹ್ಮನಿಗೂ ಪರಾಧೀನವಿಶೇಷವಾಪ್ತಿರೂಪವಾದ ಉತ್ಪತ್ತಿಯನ್ನು ಹೇಳಬಾರದು. ಅವನಲ್ಲಿ ಸ್ವಾತಂತ್ರ್ಯವಿರುವುದರಿಂದ.

**ವಿವರಣೆ—** ಒಂದುವೇಳೆ ಬ್ರಹ್ಮನಿಗೂ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯನ್ನು ಅಂಗೀಕರಿಸಿದರೆ ಅವನಿಗೂ ಪಾರಂತಂತ್ರ್ಯವು ಬರಬೇಕಾದೀತು. ಹಾಗಾದಲ್ಲಿ ಪ್ರವರ್ತಕನಾದ ವ್ಯಕ್ತಿಯೇ ಇಲ್ಲದಿರುವುರಿಂದ (ಜಗದಾಂಧ್ಯಂ ಸ್ಯಾತ್) ಜಗತ್ತಿನ ಪ್ರವೃತ್ತಿಯೇ ನಿಂತು ಹೋಗಬೇಕಾದೀತು. ಆದ್ದರಿಂದ ಬ್ರಹ್ಮನಿಗೆ ಸ್ವಾತಂತ್ರ್ಯವನ್ನು ಒಪ್ಪಲೇಬೇಕು. ಹಾಗಾಗಿ ಬ್ರಹ್ಮನಿಗೆ ಎಲ್ಲಿಯಾದರೂ ಉತ್ಪತ್ತಿಯನ್ನು ಹೇಳಿದರೂ ಯಾವುದೇರೀತಿಯ ಉತ್ಪತ್ತಿಯನ್ನೂ ಒಪ್ಪಬಾರದು. ಹಾಗಾದರೆ 'ಅಸತಃ ಸದಜಯಾತ' ಎಂಬ ವಾಕ್ಯಕ್ಕೆ ಏನರ್ಥವನ್ನು ಮಾಡಬೇಕು? ಎಂದರೆ, ದುರ್ಜನರಿಗೆ ಅಭಿವ್ಯಕ್ತನಾಗದಿರುವುದರಿಂದ ಬ್ರಹ್ಮನು ಅಸತ್ ಶಬ್ದವಾಚ್ಯನಾಗಿದ್ದಾನೆ. ಅವನು ಪ್ರಲಯದಲ್ಲಿಯೂ ಇದ್ದಾನೆ. ಅವನಿಂದ ಸತ್‌ಶಬ್ದವಾಚ್ಯನಾದ ಪ್ರಾಣನು ಹುಟ್ಟಿದ ಎಂದರ್ಥವನ್ನು ಮಾಡಬೇಕು. ಬ್ರಹ್ಮನಿಗೆ ಉತ್ಪತ್ತಿಯಿಲ್ಲದಿರುವುದರಿಂದ ಅವನಿಗೆ ಜನ್ಮಾದಿಕಾರಣತ್ವವು ಕೂಡುತ್ತದೆ.

**ಸೂತ್ರಾರ್ಥ—**

**ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ ।**

ಸತಃ=ಬ್ರಹ್ಮನಿಗೆ ಅಸಂಭವಸ್ತು=ಉತ್ಪತ್ತಿಯಿಲ್ಲವೇ ಇಲ್ಲ. ಏಕೆಂದರೆ ಅನುಪಪತ್ತೇಃ=ಅಸತ್‌ನಿಂದ ಉತ್ಪತ್ತಿ ಕೂಡದಿರುವುದರಿಂದ.

## ತೇಜೋಽಧಿಕರಣ (2-3-4)

ಓಂ ತೇಜೋಽತಸ್ತಥಾ ಹ್ಯಾಹ ಓಂ ಎಂಬ ಸೂತ್ರವೊಂದನ್ನೊಳಗೊಂಡ ಈ ಅಧಿಕರಣದಲ್ಲಿ ತೇಜಸ್ಸು ವಿಷಯ. 'ವಾಯೋರಗ್ನಿಃ' ಎಂಬ ಶ್ರುತಿಯಿರುವುದರಿಂದ

ವಾಯುವಿನಿಂದ ಅಗ್ನಿ ಹುಟ್ಟಿತೋ? 'ತತ್ತೇಜೋಽಸೃಜತ' ಎಂಬ ಶ್ರುತಿಯಿರುವುದ ರಿಂದ ಬ್ರಹ್ಮನಿಂದ ಅಗ್ನಿ ಹುಟ್ಟಿತೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ವಾಯೋರಗ್ನಿಃ' ಎಂದು ಶ್ರುತಿಯಿರುವುದರಿಂದ ವಾಯುವಿನಿಂದ ಅಗ್ನಿಯ ಉತ್ಪತ್ತಿಯನ್ನು ಒಪ್ಪಬೇಕು. ವಾಯುವಿನ ಮೂಲಕ ವಿಷ್ಣುವೇ ಅಗ್ನಿಯನ್ನು ಹುಟ್ಟಿಸುತ್ತಾನೆ ಎನ್ನುವುದೂ ಸರಿಯಲ್ಲ. ಬ್ರಹ್ಮನು ವಾಯುದ್ವಾರವಲ್ಲದೆ ತೇಜಸ್ಸನ್ನು ಸೃಷ್ಟಿಸಲು ಸಮರ್ಥವಾದಲ್ಲಿ ವಾಯುವೆಂಬ ಮಾಧ್ಯಮವು ವ್ಯರ್ಥ. ವಾಯುವೆಂಬ ಮಾಧ್ಯಮವು ಬೇಕೇ ಬೇಕು ಎಂದಾದಲ್ಲಿ ಅವರಿಬ್ಬರೂ ಸಮಾನರಾದರು. ಆಗ ಕೇವಲ ಈಶ್ವರನೊಬ್ಬನೇ ಕಾರಣನಾಗಲಿಲ್ಲ. ಆದ್ದರಿಂದ ಸರ್ವಕಾರಣತ್ವ ವಿಷ್ಣುವಿಗೆ ಎಂದು ಸಿದ್ಧವಾಗುವುದಿಲ್ಲ ಎಂದು ಪೂರ್ವಪಕ್ಷ.

ಇದಕ್ಕೆ ಸಾಧಕಯುಕ್ತಿ 'ದ್ವಾರವೈಯರ್ಥ್ಯ' (ವಾಯುವನ್ನು ದ್ವಾರವಾಗಿಸು ವುದು ವ್ಯರ್ಥ) ಎಂಬುದು. ಅದರಂತೆ ಸಿದ್ಧಾಂತಸಾಧಕವಾದ ಯುಕ್ತಿಯು **'ಅನುಸಾರಿತಾ'** (ದ್ವಾರವನ್ನು ಅನುಸರಿಸುವುದು) ಎಂಬುದನ್ನೂ ವಿವರಿಸುತ್ತಿದ್ದಾರೆ.

**ನ ಚ ವಿಷ್ಣೋರೇವ ತೇಜಸ ಉತ್ಪತ್ತೌ ದ್ವಾರಕಾರಣವೈಯರ್ಥ್ಯಮ್ ।**
**ದ್ವಾರಮನುಸೃತ್ಯೈವ ವಿಷ್ಣೋಃ ಪ್ರವೃತ್ತೇಃ ॥ ೪ ॥**

**ಭಾವಾರ್ಥ—**ವಿಷ್ಣುವಿನಿಂದಲೇ ಅಗ್ನಿಯ ಉತ್ಪತ್ತಿಯಾಗುತ್ತಿರುವಾಗ ದ್ವಾರ ವಾಯುವನ್ನು ಕಾರಣವೆಂದು ಹೇಳುವುದು ವ್ಯರ್ಥವೆಂದು ಆಕ್ಷೇಪಿಸಬಾರದು. ಏಕೆಂದರೆ ದ್ವಾರವನ್ನು ಅನುಸರಿಸಿಯೇ ವಿಷ್ಣು ಪ್ರವೃತ್ತಿ ಮಾಡುತ್ತಾನೆ ಎಂಬುದು ಶ್ರುತಿಸಿದ್ಧವಾಗಿದೆ.

**ವಿವರಣೆ—** ಸಿದ್ಧಾಂತಸಾಧಕವಾದ ಯುಕ್ತಿ 'ಅನುಸಾರಿತಾ' (ದ್ವಾರವನ್ನು ಅನುಸರಿಸುವುದು) ಎಂಬುದು. 'ತತ್ ತೇಜೋಽಸೃಜತ' ಎಂಬ ಶ್ರುತಿಯಂತೆ ವಿಷ್ಣುವಿನಿಂದಲೇ ಅಗ್ನಿಯು ಹುಟ್ಟುವುದು. 'ವಾಯೋರಗ್ನಿಃ' ಎಂಬ ಶ್ರುತಿಯ ವಿರೋಧವೂ ಇಲ್ಲ. ವಿಷ್ಣು ಸಮರ್ಥನಾಗಿದ್ದರೂ ತನ್ನ ಇಚ್ಛೆಯಿಂದಲೇ ವಾಯುದ್ವಾರಾ ಅಗ್ನಿಯನ್ನು ಸೃಷ್ಟಿಸುತ್ತಾನೆ ಎಂದು ಪ್ರಮಾಣಸಿದ್ಧವಾಗಿದೆ. ಆದ್ದರಿಂದ ವಿಷ್ಣುವಿಗೇ ಜಗತ್ಕಾರಣತ್ವ ಯುಕ್ತವಾಗಿದೆ.

**ಸೂತ್ರಾರ್ಥ—**

**ಓಂ ತೇಜೋಽತಸ್ತಥಾ ಹ್ಯಾಹ ಓಂ ॥**

ಹಿ=ಯಾವ ಕಾರಣದಿಂದ ಶ್ರುತಿಯು ತಥಾ='ತತ್ ತೇಜೋಽಸೃಜತ' ಎಂದು ಆಹ=ಹೇಳಿದೆಯೋ ಆಕಾರಣದಿಂದ ತೇಜಸ್ಸು ಅತಸ್ತು=ಬ್ರಹ್ಮನಿಂದಲೇ ಹುಟ್ಟಿದ್ದು ಹೊರತು ವಾಯುವಿನಿಂದಲ್ಲ.

## ಅಬಧಿಕರಣ (2-3-5)

ಓಂ ಆಪಃ ಓಂ ಎಂಬ ಅಧಿಕರಣಕ್ಕೆ ಜಲವೇ ವಿಷಯ. 'ಅಗ್ನೇರಾಪಃ' ಎಂಬ ಶ್ರುತಿಯಿರುವುದರಿಂದ ಅಗ್ನಿಯಿಂದಲೇ ಜಲವು ಹುಟ್ಟಿತೋ? ಅಥವಾ 'ತದಪೋಽಸೃಜತ' ಎಂಬ ಶ್ರುತಿಯಿರುವುದರಿಂದ ಬ್ರಹ್ಮನಿಂದಲೇ ಜಲ ಹುಟ್ಟಿತೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ಅಗ್ನೇರಾಪಃ' (ಅಗ್ನಿಯಿಂದ ನೀರು ಹುಟ್ಟಿತು) ಶ್ರುತಿಯಿಂದ ಅಗ್ನಿಯಿಂದಲೇ ನೀರು ಹುಟ್ಟಿತು ಎಂದು ತಿಳಿಯುತ್ತದೆ ಮತ್ತು ಲೋಕದಲ್ಲಿ ಸೆಕೆಯಿಂದ ಬೆವರು ಹುಟ್ಟುವುದು ಕಂಡಿದೆ. ಆದ್ದರಿಂದ 'ಜಲಂ ಅಗ್ನಿಜನ್ಯಂ ಜಲತ್ವಾತ್ ಸ್ವೇದವತ್' (ಬೆವರಿನಂತೆ ಬೇರೆ ನೀರೂ ಅಗ್ನಿಯಿಂದಲೇ ಹುಟ್ಟುತ್ತದೆ. ನೀರಾದ್ದರಿಂದ) ಎಂಬ ಅನುಮಾನದಿಂದಲೂ ನೀರು ಅಗ್ನಿಜನ್ಯವೆಂದು ಸಿದ್ಧವಾಗುತ್ತದೆ. ಹೀಗೆ ಪ್ರತ್ಯಕ್ಷವೂ ಇರುವುದರಿಂದ ಹಿಂದಿನ ಅಧಿಕರಣದಿಂದ ಗತಾರ್ಥತ್ವವಿಲ್ಲ. ಆದ್ದರಿಂದ ಈಶ್ವರನಿಗೇ ಜಗತ್ಕಾರಣತ್ವವೆಂಬುದು ಸರಿಯಲ್ಲ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ದೃಷ್ಟಿಯುಕ್ತ್ಯನುಸಾರಿತ್ವ' (ಪ್ರತ್ಯಕ್ಷ ಮತ್ತು ಯುಕ್ತಿಗಳಿಗೆ ಅನುಸಾರವಾಗಿ ಕಲ್ಪಿಸುವುದು) ಇದನ್ನು 'ಮುಖ್ಯತಾ' (ವಿಷ್ಣುವೇ ಮುಖ್ಯಕಾರಣ) ಎಂಬ ಸಿದ್ಧಾಂತ ಯುಕ್ತಿಯನ್ನು ವಿವರಿಸುತ್ತಿದ್ದಾರೆ.

**ನ ಚ ತೇಜಸ ಏವಾಪಾಮುತ್ಪತ್ತ್ಯಂಗೀಕಾರೇ ಘರ್ಮಾತ್ ಸ್ವದೇದಾದಿ-ದೃಷ್ಟ್ಯನುಸಾರಿತ್ವಮಿತಿ ಗುಣಾಧಿಕ್ಯಮ್ । ಮುಖ್ಯಾರ್ಥಪರಿತ್ಯಾಗಪ್ರಾಪ್ತೇಃ ॥ ೫ ॥**

**ಭಾವಾರ್ಥ**—ಸೆಕೆಯಿಂದ ಬೆವರು ಹುಟ್ಟುವುದು ಪ್ರತ್ಯಕ್ಷ ಸಿದ್ಧವಾಗಿದೆ. ಈ ಪ್ರತ್ಯಕ್ಷದಿಂದ ಕೂಡಿದ 'ಅಗ್ನೇರಾಪಃ' ಎಂಬ ಶ್ರುತಿಯಿರುವುದರಿಂದ ಅಗ್ನಿಯಿಂದ ತೇಜಸ್ಸು ಹುಟ್ಟಿದೆ ಎಂದು ಅಂಗೀಕರಿಸುತ್ತೇವೆ. ಈ ಅಧಿಕರಣಕ್ಕೆ ಪ್ರತ್ಯಕ್ಷವೆಂಬ ಅಧಿಕಾಂಶವಿರುವುದರಿಂದ ಗತಾರ್ಥತಾ ಇಲ್ಲ ಎಂದು ಆಕ್ಷೇಪಿಸುವುದು ಸರಿಯಲ್ಲ. ಏಕೆಂದರೆ ಮುಖ್ಯಾರ್ಥವನ್ನು ಬಿಡಬೇಕಾಗುವುದು.

**ವಿವರಣೆ**— 'ತದಪೋಽಸೃಜತ' (ಆ ಬ್ರಹ್ಮನು ನೀರನ್ನು ಸೃಷ್ಟಿಸಿದನು ಎಂಬ ಶ್ರುತಿಯಿಂದ ಬ್ರಹ್ಮನಿಂದಲೇ ನೀರಿನ ಸೃಷ್ಟಿಯು ಸಿದ್ಧವಾಗುತ್ತದೆ. 'ಅಗ್ನೇರಾಪಃ' ಎಂಬ ಶ್ರುತಿಯು ಕೇವಲ ಅಗ್ನಿಗೆ ದ್ವಾರತ್ವವನ್ನು ಹೇಳುತ್ತಿದೆಯಷ್ಟೇ. ಸೆಕೆಯಿಂದ ಬೆವರು ಹುಟ್ಟುವಾಗಲೂ ಪರಮಾತ್ಮನೇ ಮುಖ್ಯಕಾರಣನೆಂದು ಒಪ್ಪಿಕೊಳ್ಳಬೇಕು. ಆದ್ದರಿಂದ ವಿಷ್ಣುವೇ ಜಗತ್ಕಾರಣವೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ಆಪಃ ಓಂ**

ಆಪಃ=ನೀರೂ ಕೂಡ ಅತಸ್ತು=ಈ ಬ್ರಹ್ಮನಿಂದಲೇ ಹುಟ್ಟಿದೆ. ತಥಾ ಆಹ='ತದಪೋಽಸೃಜತ' ಎಂದು ಶ್ರುತಿ ಹೇಳಿದ್ದರಿಂದ.

## ಪೃಥಿವ್ಯಧಿಕರಣ (2-3-6)

ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ಜಲವೇ ವಿಷಯ. 'ತಾ ಅನ್ನಮಸೃಜಂತ', 'ಅದ್ಭ್ಯಃ ಪೃಥಿವೀ' ಎಂಬ ವಿರುದ್ಧವಾದ ಎರಡು ಶ್ರುತಿಗಳಿರುವುದರಿಂದ ಜಲವು ಈಶ್ವರನಿಂದ ಅನ್ನ ಸೃಷ್ಟಿಯಾಗಲು ಮಾಧ್ಯಮವೋ? ಅಥವಾ ಪೃಥಿವೀ ಸೃಷ್ಟಿಯಾಗಲು ಮಾಧ್ಯಮವೋ? ಎಂಬುದು ಸಂದೇಹ.

**ಪೂರ್ವಪಕ್ಷ**— 'ತಾ ಅನ್ನಮಸೃಜಂತ' ಎಂಬ ಶ್ರುತಿಯು ಬ್ರಹ್ಮನು ಜಲದ ಮೂಲಕ ಅನ್ನವನ್ನು ಸೃಷ್ಟಿಸಿದನು ಎನ್ನುತ್ತದೆ. 'ಅದ್ಭ್ಯಃ ಪೃಥಿವೀ' ಎಂಬ ಶ್ರುತಿಯು ಜಲದ ಮೂಲಕ ಪೃಥಿವಿಯನ್ನು ಸೃಷ್ಟಿಸಿದನು ಎಂದು ಹೇಳುತ್ತಿದೆ. ಇಲ್ಲಿರುವ ಅನ್ನ ಪೃಥಿವೀ ಶಬ್ದಗಳಿಗೆ ಪ್ರಸಿದ್ಧ ಅನ್ನಪೃಥಿವೀಗಳನ್ನೇ ಸ್ವೀಕರಿಸಬೇಕೇ ಹೊರತು

ಅನ್ನಶಬ್ದದಿಂದ ಪೃಥಿವಿಯನ್ನಾಗಲೀ ಪೃಥಿವೀಶಬ್ದದಿಂದ ಅನ್ನವನ್ನಾಗಲೀ ಸ್ವೀಕರಿಸಲು ಬರುವುದಿಲ್ಲ. ಅನ್ನಶಬ್ದಕ್ಕೆ ಪ್ರಸಿದ್ಧವಾದ ಅನ್ನವನ್ನೇ ಸ್ವೀಕರಿಸುವುದರಿಂದ 'ತಸ್ಮಾದ್ ಯತ್ರ ಕ್ವಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ', 'ಅದ್ಭ್ಯ ಏವಾನ್ನಾದ್ಯಮುತ್ಪದ್ಯತೇ' ಮುಂತಾದ ಅನೇಕ ಶ್ರುತಿಗಳ ಸಂವಾದವೂ ಸಿಗುತ್ತದೆ. ಆದ್ದರಿಂದ ಪರಸ್ಪರ ಶ್ರುತಿಗಳಲ್ಲಿ ವಿರೋಧವಿರುವುದರಿಂದ ಎರಡುಶ್ರುತಿಗಳೂ ಅಪ್ರಮಾಣವೇ ಆಗುತ್ತವೆ. ಅಂತಹ ಅಪ್ರಮಾಣವಾದ ಶ್ರುತಿಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡುವುದು ಯುಕ್ತವಲ್ಲ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿಯು '**ಉಕ್ತಾಽನ್ಯಾರ್ಥಾವಿರೋಧತಃ ಪ್ರಸಿದ್ಧ ನಾಮಸ್ವೀಕಾರೇ ಬಹುವಾಕ್ಯಾನುವರ್ತಿತಾ**' (ಅನ್ನಶಬ್ದಕ್ಕೆ ಪೃಥಿವೀಶಬ್ದದ ವಿರೋಧವನ್ನು ಪರಿಗಣಿಸದೆ ಪೃಥಿವೀ ಎಂಬ ಅರ್ಥವನ್ನು ಸ್ವೀಕರಿಸದೇ, ಪ್ರಸಿದ್ಧವಾದ ಅನ್ನವನ್ನೇ ಸ್ವೀಕರಿಸಿದರೆ ಅನ್ನಪದವುಳ್ಳ ಅನೇಕ ಶ್ರುತಿಗಳ ಸಂವಾದವನ್ನು ಅನುಸರಿಸಿದಂತಾಗುವುದು) ಎಂಬುದು ಮತ್ತು '**ಶಕ್ತಿಮತ್ತ್ವಂ**' (ಅನ್ನಶಬ್ದಕ್ಕೆ ಪೃಥಿವಿಯಲ್ಲಿಯೂ ಶಕ್ತಿಯಿದೆ) ಎಂಬ ಸಿದ್ಧಾಂತಸಾಧಕನ್ಯಾಯವನ್ನೂ ಇದನ್ನು ವಿವರಿಸುತ್ತಿದ್ದಾರೆ.

**ನ ಚ ಅದ್ಭ್ಯೋ ವಾಽನ್ನಮುತ್ಪದ್ಯತೇ ಇತ್ಯಾದ್ಯುಕ್ತ-ಪ್ರಸಿದ್ಧಾನ್ನಾಖ್ಯಾನ್ಯಾರ್ಥಾವಿರೋಧೇನ ಪ್ರಸಿದ್ಧಾನ್ನನಾಮಸ್ವೀಕಾರೇ ಬಹುವಾಕ್ಯನುವರ್ತಿತೇತಿ ಗುಣಃ । ಅನ್ನಶಬ್ದಸ್ಯ ಪ್ರಯೋಗಬಾಹುಲ್ಯಾತ್ ಪೃಥಿವ್ಯಾಮಪಿ ಶಕ್ತಿಮತ್ತ್ವಾತ್ । ಅಧಿಕಾರಾದೀನಾಂ ನಿರವಕಾಶತ್ವಾಚ್ಚ । ಬಹುವಾಕ್ಯಾನುರೋಧೋಽಪ್ಯತ್ರೈವೇತಿ ॥ ೬ ॥**

**ಭಾವಾರ್ಥ**—'ಅದ್ಭ್ಯೋ ವಾಽನ್ನಮುತ್ಪದ್ಯತೇ' ಎಂಬಿವೇ ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಅನ್ನಶಬ್ದಕ್ಕೆ ಪ್ರಸಿದ್ಧವಾದ ಅನ್ನಕ್ಕಿಂತ ಭಿನ್ನವಾದ ಪೃಥಿವೀಶಬ್ದದ ವಿರೋಧವನ್ನು ಲೆಕ್ಕಿಸದೆ ಅನ್ನವೆಂಬ ಅರ್ಥವನ್ನೇ ಸ್ವೀಕರಿಸುತ್ತೇವೆ. ಆವಾಗ ಅನ್ನಲಿಂಗವನ್ನು ಪ್ರತಿಪಾದಿಸುವ ಅನೇಕ ವಾಕ್ಯಗಳನ್ನೂ ಅನುಸರಿಸಿದಂತಾಗುತ್ತದೆ ಎಂಬ ಗುಣವೂ ಲಭಿಸುತ್ತದೆ ಎಂದು ಹೇಳುವುದು ಸರಿಯಲ್ಲ. 'ಆಪಶ್ಚ ಪೃಥಿವೀ ಚಾನ್ನಂ', 'ತಾ ಆಪೋಽನ್ನಮಸೃಜಂತ', 'ಪೃಥಿವೀ

ವಾ ಅನ್ನಂ' ಮುಂತಾದ ಸ್ಥಳಗಳಲ್ಲಿ ಪೃಥಿವಿಯಲ್ಲಿಯೂ ಅನ್ನಶಬ್ದವನ್ನು ಪ್ರಯೋಗಿಸಿರುವುದರಿಂದ ಅನ್ನಶಬ್ದಕ್ಕೆ ಪೃಥಿವಿಯಲ್ಲಿ ಶಕ್ತಿಯಿದೆ. ಅನ್ನಶಬ್ದಕ್ಕೆ ಅನ್ನ ಪೃಥಿವೀ ಎಂಬ ಎರಡು ಅರ್ಥಗಳಿದ್ದರೂ ಪೃಥಿವಿಯನ್ನೇ ಸ್ವೀಕರಿಸಬೇಕು ಎಂಬುದಕ್ಕೆ ಪ್ರಕರಣಾದಿಗಳು ನಿರವಕಾಶ ಪ್ರಮಾಣವಾಗಿವೆ. ಪೂರ್ವಪಕ್ಷಿಯು ಹೇಳಿದ ಅನ್ನಲಿಂಗಕವಾದ ಶ್ರುತಿಗಳೂ ಪೃಥಿವೀ ಎಂಬ ಅರ್ಥದಲ್ಲಿಯೇ ಸಂವಾದಿಯಾಗುತ್ತವೆ.

**ವಿವರಣೆ**— ವಸ್ತುತಃ ಅನ್ನಶಬ್ದಕ್ಕೆ ಅನ್ನ ಪೃಥಿವೀ ಎಂಬ ಎರಡರ್ಥಗಳಿವೆ. ಆದರೂ ಇಲ್ಲಿ ಪೃಥಿವಿಯನ್ನು ಸ್ವೀಕರಿಸಬೇಕು ಎಂಬುದಕ್ಕೆ ಕೊಟ್ಟ ಕಾರಣ 'ಅಧಿಕಾರಾದೀನಾಂ ನಿರವಕಾಶತ್ವಾಚ್ಚ' ಎಂದು. ಅಧಿಕಾರಶಬ್ದಕ್ಕೆ ಅಧಿಕರಣ=ಪ್ರಕರಣ ಎಂದರ್ಥ. ಆದಿಶಬ್ದದಿಂದ ರೂಪವನ್ನು ಸ್ವೀಕರಿಸಬೇಕು. ಭೂತಪ್ರಕರಣವಾದ್ದರಿಂದ, 'ಯತ್ ಕೃಷ್ಣಂ ತದನ್ನಸ್ಯ' (ಯಾವ ಕೃಷ್ಣರೂಪವಿದೆಯೋ ಅದು ಪೃಥಿವಿಯದ್ದು) ಎಂದು ರೂಪವನ್ನು ಹೇಳಿದ್ದರಿಂದಲೂ ಅನ್ನಶಬ್ದದಿಂದ ಪೃಥಿವಿಯನ್ನೇ ಸ್ವೀಕರಿಸಬೇಕು.

'ಓಷಧೀಭ್ಯೋ ಅನ್ನಂ' ಎಂಬಲ್ಲಿ ಪ್ರಸಿದ್ಧವಾದ ಅನ್ನವು ಸಸ್ಯಗಳಿಂದ ಹುಟ್ಟುತ್ತದೆ ಎಂದು ಮುಂದೆ ಹೇಳುವುದರಿಂದ 'ಅದ್ಭ್ಯೋ ಽವಾಽನ್ನಮುತ್ಪದ್ಯತೇ' ಎಂಬಲ್ಲಿರುವ ಅನ್ನಶಬ್ದದಿಂದ ಪೃಥಿವಿಯನ್ನೇ ಸ್ವೀಕರಿಸಬೇಕು. ಮತ್ತು 'ಯತ್ರ ಕ್ವ ಚ ವರ್ಷತಿ ತದೇವ ಭೂಯಿಷ್ಠಮನ್ನಂ ಭವತಿ' ಎಂಬಲ್ಲಿಯೂ 'ಎಲ್ಲಿ ಮಳೆ ಬರುವುದೋ ಅಲ್ಲಿ ಅನ್ನವಾಗುತ್ತದೆ' ಎಂದಿದೆ. ಮಳೆಯಿಂದ ನೇರ ಸಸ್ಯಗಳು ಬೆಳೆಯುತ್ತವೆಯೇ ಹೊರತು ಪ್ರಸಿದ್ಧವಾದ ಅನ್ನವಲ್ಲ. ಆದ್ದರಿಂದ ಇಲ್ಲಿಯೂ ಅನ್ನಶಬ್ದದಿಂದ ಪೃಥಿವಿಯನ್ನೇ ಸ್ವೀಕರಿಸಬೇಕು. ಹೀಗೆ ಪೃಥಿವೀ ಎಂಬ ಅರ್ಥವನ್ನು ಸ್ವೀಕರಿಸಿದಾಗಲೂ ಅನೇಕ ವಾಕ್ಯಗಳ ಸಂವಾದವನ್ನೂ ಅನುಸರಿಸಿದಂತಾಗುತ್ತದೆ. ಮತ್ತು ಅನ್ನಶಬ್ದಕ್ಕೆ 'ಅದ್ಯತೇ ಇತಿ ಅನ್ನಂ' (ಪರಮಾತ್ಮನಿಂದ ತಿನ್ನಲ್ಪಡುತ್ತದೆ. ಆದ್ದರಿಂದ ಅದು ಅನ್ನವೆನಿಸಿದೆ)ಎಂದು ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಪರಮಾತ್ಮನು ಪ್ರಲಯಕಾಲದಲ್ಲಿ ಮೊದಲು ಪೃಥಿವಿಯನ್ನೇ ತಿನ್ನುವುದರಿಂದ ಅನ್ನಶಬ್ದದಿಂದ ಪೃಥಿವಿಯನ್ನೇ ಸ್ವೀಕರಿಸಬೇಕು ಎಂದು ಸಿದ್ಧವಾಗುತ್ತಿದೆ. ಈರೀತಿಯಾಗಿ ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದಿರುವುದರಿಂದ ಇಂತಹ ಶ್ರುತಿಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡುವುದು ಯುಕ್ತವೇ ಆಗಿದೆ.

**ಸೂತ್ರಾರ್ಥ—**

**ಓಂ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ ॥**

ಪೃಥಿವೀ='ತಾ ಅನ್ನಮಸೃಜಂತ' ಎಂಬಲ್ಲಿರುವ ಅನ್ನಶಬ್ದದಿಂದ ಪೃಥಿವಿಯೇ ಉಕ್ತವಾಗುತ್ತದೆ ಹೊರತು ಪ್ರಸಿದ್ಧ ಅನ್ನವಲ್ಲ. ಏಕೆಂದರೆ, ಅಧಿಕಾರರೂಪ ಶಬ್ದಾಂತರಾದಿಭ್ಯಃ=ಭೂತಪ್ರಕರಣವಾದ್ದರಿಂದ, ಕೃಷ್ಣರೂಪವು ಶ್ರುತವಾದ್ದರಿಂದ, 'ಪೃಥಿವೀ ವಾ ಅನ್ನಂ' ಮುಂತಾದ ಶ್ರುತಿವಿಶೇಷವೇ ಮೊದಲಾದ ಕಾರಣಗಳಿಂದ.

## ತದಭಿಧ್ಯಾನಾಧಿಕರಣ (2-3-7)

ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ಆಕಾಶವೇ ಮೊದಲಾದ ಅಧಿಭೂತ ಹಾಗೂ ಅಧಿದೈವಗಳು ವಿಷಯ. 'ರುದ್ರೋ ಮಾ ವಿಶಾಂತಕಃ' ಮತ್ತು 'ಯತ್ ಪ್ರಯಂತ್ಯಭಿ ಸಂವಿಶಂತಿ' ಎಂಬ ಶ್ರುತಿಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ಅಧಿದೈವ, ಅಧಿಭೂತಾದಿಗಳನ್ನು ಸಂಹರಿಸುವವನು ರುದ್ರನೋ? ಅಥವಾ ವಿಷ್ಣುವೋ? ಎಂದು ಸಂದೇಹ.

**ಪೂರ್ವಪಕ್ಷ—** ರುದ್ರನು ಸಂಹಾರಕನೆಂದು 'ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಂಕಃ ತೇನಾನ್ನೇನಾಪ್ಯಾಯಸ್ವ' (ರುದ್ರನೇ! ನೀನು ಇಂದ್ರಿಯಗಳಿಗೆ ಆಶ್ರಯನಾಗಿರುವಿ. ಸಂಹಾರಕನೂ ಆಗಿರುವಿ. ನನ್ನನ್ನು ಪ್ರವೇಶಿಸು. ಆಹುತಿರೂಪವಾದ ಅನ್ನವನ್ನು ತಿಂದು ನನ್ನನ್ನು ಸಂತೋಷಪಡಿಸು) ಎಂಬಿವೇ ಮೊದಲಾದ ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. ಲೋಕದಲ್ಲಿ ಮಗನನ್ನು ಹುಟ್ಟಿಸಿದ ತಂದೆಯೇ ಅವನನ್ನು ಕೊಲ್ಲುವುದಿಲ್ಲ. ಅದರಂತೆ ಜಗಜ್ಜನಕನಾದ ರಕ್ಷಕನಾದ ವಿಷ್ಣುವು ಜಗತ್ಸಂಹಾರಕನಾಗಲಾರ. ಆದ್ದರಿಂದ ಸೃಷ್ಟ್ಯಾದ್ಯಷ್ಟ ಕರ್ತೃತ್ವವು ವಿಷ್ಣುವಿಗೆ ಕೂಡುವುದಿಲ್ಲವೆಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಲೋಕದೃಷ್ಟ್ಯನುಸಾರಿತ್ವಂ'** (ಲೋಕಾನುಸಾರ ಕಲ್ಪಿಸುವುದು) ಇದನ್ನು ಮತ್ತು **'ವೈರೂಪ್ಯಂ'** (ಲೋಕದಲ್ಲಿರುವ ಪಿತೃಗಳಿಗಿಂತ ವೈಲಕ್ಷಣ್ಯವಿರುವುದು) ಎಂಬ ಸಿದ್ಧಾಂತಸಾಧಕಯುಕ್ತಿ ಯನ್ನು ವಿವರಿಸುತ್ತಿದ್ದಾರೆ—

ನ ಚ ರುದ್ರಾದೀನಾಂ ಲಯಕಾರಿತ್ವಾಂಗೀಕಾರೇ, ಪಿತುರನ್ಯಸ್ಯ ಮಾರಕತ್ವದೃಷ್ಟೇರ್ಲೋಕದೃಷ್ಟ್ಯನುಸಾರಿತ್ವಮಿತಿ ಗುಣಃ। ಲೋಕಪಿತೃವೈರೂಪ್ಯಾದ್ವಿಷ್ಣೋರ್ಯಥಾವಾಕ್ಯಮಂಗೀಕಾರೋಪಪತ್ತೇಃ। ಅನ್ಯಥಾ ''ನ ವಿಷ್ಣೋರನ್ಯೋ ವಿಲಯಕೃನ್ನ ವಿಷ್ಣೋರನ್ಯೋ ವಿಮುಕ್ತಿದಃ'' ಇತ್ಯಾದಿ ಶ್ರುತಿವಿರೋಧಾತ್। ರುದ್ರಸ್ಯ ತು ಕ್ವಚಿತ್ ಸಂಹಾರದ್ವಾರತ್ವೇನೈವ ತದ್ವಾಕ್ಯಾನಾಂ ಸಾವಕಾಶತ್ವಾತ್ ॥ ೭ ॥

**ಭಾವಾರ್ಥ**—ಲೋಕದಲ್ಲಿ ತಂದೆಗಿಂತ ಭಿನ್ನರಾದವರೇ ಸಂಹಾರಕರೆಂದು ಕಂಡಿದ್ದರಿಂದ ರುದ್ರನನ್ನೇ ಸಂಹಾರಕನೆಂದು ಅಂಗೀಕರಿಸಿದರೆ ಶ್ರುತಿಯೊಂದಿಗೆ ಲೋಕದೃಷ್ಟಿಯನ್ನೂ ಅನುಸರಿಸಿದಂತಾಗುವುದು ಎಂಬ ಪೂರ್ವಪಕ್ಷವು ಸರಿಯಲ್ಲ. ವಿಷ್ಣುವಿಗೆ ಲೋಕದಲ್ಲಿರುವ ಪಿತೃಗಳಿಗಿಂತ ವೈಲಕ್ಷಣ್ಯವಿರುವುದರಿಂದ ವಾಕ್ಯವನ್ನು ಅನುಸರಿಸಿ ಆವನಿಗೇ ಸಂಹಾರಕತ್ವವನ್ನು ಒಪ್ಪಬೇಕು. ಇಲ್ಲವಾದರೆ 'ವಿಷ್ಣುವಿಗಿಂತ ಭಿನ್ನನಾದ ಸಂಹಾರಕನಿಲ್ಲ. ವಿಷ್ಣುವಿಗಿಂತ ಭಿನ್ನನಾದ ಮೋಕ್ಷದಾತನಿಲ್ಲ' ಎಂಬಿವೇ ಮೊದಲಾದ ಶ್ರುತಿಗಳ ವಿರೋಧವು ಬರುತ್ತದೆ. ರುದ್ರನು ಕೆಲವು ಕಡೆಗಳಲ್ಲಿ ಸಂಹಾರಕ್ಕೆ ಮಾಧ್ಯಮನಾದ್ದರಿಂದ ರುದ್ರನಿಗೆ ಸಂಹಾರಕತ್ವವನ್ನು ಹೇಳುವ ವಾಕ್ಯಗಳನ್ನು ಸಾವಕಾಶಗಳೆಂದು ಕೂಡಿಸಬಹುದು.

**ವಿವರಣೆ**— ಲೋಕದಲ್ಲಿ ಪಿತ್ರಾದಿಗಳು ಮಮತೆ ಎಂಬ ದೋಷದಿಂದ ಯುಕ್ತರಾಗಿದ್ದಾರೆ. ವಿಷ್ಣುವಿನಲ್ಲಿ ಅಂತಹ ಯಾವ ದೋಷಗಳೂ ಇಲ್ಲದಿರುವುದರಿಂದ ಆವನು ಸಂಹಾರಕನಾಗುತ್ತಾನೆ. ಹಾಗಾದರೆ ರುದ್ರನಿಗೆ ಸಂಹಾರಕತ್ವವನ್ನು ಹೇಳುವ 'ರುದ್ರೋ ಮಾ ವಿಶಾಂತಕಃ' ಮುಂತಾದ ವಾಕ್ಯಗಳಿಗೆ ಏನು ಗತಿ? ಎಂದರೆ ರುದ್ರನು ಕೆಲವೆಡೆ ವಿಷ್ಣುವಿನಿಂದ ನಡೆಯುವ ಸಂಹಾರಗಳಿಗೆ ಮಾಧ್ಯಮನಾದ್ದರಿಂದ ಅವೆಲ್ಲವೂ ಸಾವಕಾಶವಾಗಿವೆ. ಆದ್ದರಿಂದ ವಿಷ್ಣುವಿಗೆ ಸೃಷ್ಟ್ಯಾದಿ ಅಷ್ಟಕರ್ತೃತ್ವವು ಕೂಡುತ್ತದೆ.

**ಸೂತ್ರಾರ್ಥ**—

**ಓಂ ತದಭಿಧ್ಯಾನಾದೇವ ತು ತಲ್ಲಿಂಗಾತ್ ಸಃ ಓಂ ॥**

ಸಃ=ಆ ವಿಷ್ಣುವೇ ಸಂಹಾರಕನು ರುದ್ರನಲ್ಲ. ಏಕೆಂದರೆ, ತದಭಿಧ್ಯಾನಾತ್= 'ತಸ್ಯಾಭಿಧ್ಯಾನಾತ್' ಎಂಬ ಶ್ರುತಿಯಲ್ಲಿ ಈಶ್ವರನ ಇಚ್ಛೆಯೇ ಅನಾದಿ ಸಂಸಾರಕ್ಕೆ ನಾಶಕವೆಂದು ಶ್ರುತವಾಗಿರುವುದರಿಂದ ತಲ್ಲಿಂಗಾದೇವ=ಅಭಿಧ್ಯಾನ ಶಬ್ದದಿಂದ ತಿಳಿದುಬರುವ ಸಂಹಾರೇಚ್ಛೆಯು ಸಂಹಾರಕರ್ತೃತ್ವಕ್ಕೆ ಕಾರಣವಾದ್ದರಿಂದ.

## ವಿಪರ್ಯಯಾಧಿಕರಣ (2-3-8)

ಓಂ ವಿಪರ್ಯಯೇಣ ಕ್ರಮೋऽತ ಉಪಪದ್ಯತೇ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಪಂಚಭೂತಗಳು ವಿಷಯ. ಎರಡು ವಿಧವಾದ ಶ್ರುತಿಗಳಿರುವುದರಿಂದ ಪಂಚಭೂತಗಳು ಉತ್ಪತ್ತಿಕ್ರಮವನ್ನು ಅನುಸರಿಸಿ ಲಯವನ್ನು ಹೊಂದುತ್ತವೋ? ಅಥವಾ ವಿಪರೀತಕ್ರಮದಲ್ಲಿ ಲಯವನ್ನು ಹೊಂದುತ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ಅತ ಏವಾಪಿ ಪರಾದಿದಂ ಕ್ರಮಾದುತ್ಪದ್ಯತೇ ಕ್ರಮಾದ್ ವಿಲೀಯತೇ ನಾಸಾವುದೇತಿ ನಾಸ್ತಮೇತಿ' (ಸರ್ವೋತ್ತಮನಾದ ಪರಮಾತ್ಮ ನಿಂದಲೇ ಈ ಜಗತ್ತು ಬ್ರಹ್ಮಾದಿಗಳಿಂದ ಆರಂಭಿಸಿ ಕ್ರಮವಾಗಿ ಹುಟ್ಟುತ್ತದೆ. ಕ್ರಮವಾಗಿ ಲಯವನ್ನು ಹೊಂದುತ್ತದೆ. ಆದರೆ ಆ ಪರಮಾತ್ಮನು ಹುಟ್ಟುವುದೂ ಇಲ್ಲ, ಲಯವನ್ನು ಹೊಂದುವುದೂ ಇಲ್ಲ.) ಎಂಬ ಶ್ರುತಿಯು ಕ್ರಮವಾಗಿ ಲಯವನ್ನು ಹೇಳುತ್ತದೆ. ಲೋಕದಲ್ಲಿಯೂ ಯಾವ ಕ್ರಮದಲ್ಲಿ ಉತ್ಪತ್ತಿಯೋ ಅದೇ ಕ್ರಮದಲ್ಲಿ ಲಯವನ್ನು ಕಾಣುತ್ತಿದ್ದೇವೆ. ತಂದೆಯ ಮರಣದ ನಂತರವೇ ಮಗನ ಮರಣವಾಗುತ್ತದೆ. ಆದ್ದರಿಂದ 'ಅಕ್ಷರಾತ್ ಪರಮಾದೇವ ಸರ್ವಮುತ್ಪದ್ಯತೇ ಕ್ರಮಾತ್, ವ್ಯತ್ಯಮಾದ್ ವಿಲಯಶ್ಚೈವ ತಸ್ಮಿನ್ನೇವ ಪರಾತ್ಮನಿ' (ಅಕ್ಷರನಾಮಕನಾದ ಪರಮಾತ್ಮನಿಂದಲೇ ಎಲ್ಲವೂ ಕ್ರಮವಾಗಿ ಹುಟ್ಟುತ್ತದೆ. ಅದೇ ಪರಮಾತ್ಮನಲ್ಲಿ ವ್ಯತ್ಕಮವಾಗಿ ಲಯವನ್ನು ಹೊಂದುತ್ತದೆ) ಎಂದು ವ್ಯತ್ಕಮವಾಗಿ ಲಯವನ್ನು ಹೇಳುವ ವಾಕ್ಯವು ಅಪ್ರಮಾಣವಾಗುತ್ತದೆ. ಇದರ ದೃಷ್ಟಾಂತದಿಂದ ಉಳಿದ ವಾಕ್ಯಗಳೂ ಅಪ್ರಮಾಣವಾಗುವುದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿಯು 'ಲೋಕದೃಷ್ಟ್ಯನುಸಾರಿತ್ವ'

(ಲೋಕಾನುಸಾರ ಕಲ್ಪಿಸುವುದು) ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ. ಅದನ್ನು ಮತ್ತು 'ವೈರೂಪ್ಯ' (ಕ್ರಮವು ಅನೇಕವಿಧ) ಎಂಬ ಸಿದ್ಧಾಂತ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಲೋಕಾನುಸಾರಿತ್ವಮ್ । "ಕ್ರಮಾದುತ್ಪದ್ಯತೇ, ಕ್ರಮಾದ್ವಿಲೀಯತೇ, ಕ್ರಮೇಣೈವೋತ್ಪತ್ತಿರ್ವಿಲಯಶ್ಚ, ಕ್ರಮೇಣೈವಾಸ್ಯೋತ್ಪತ್ತಿವಿಲಯೌ" ಇತ್ಯಾದಿಲೋಕಾನುಸಾರಿಬಹುಶ್ರುತ್ಯನುರೋಧಶ್ಚ ಯಥೋತ್ಪತ್ತಿಲಯೇ ।**

**'ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ ।**
**ಸೃಷ್ಟಾವನ್ಯೋ ಲಯೇ ಚಾನ್ಯ ಇತಿ ವೇದವಿದೋ ವಿದುಃ'**

**ಇತಿ ಶ್ರುತೇಃ ಕ್ರಮವಾಕ್ಯಸ್ಯ ಸಾವಕಾಶತ್ವಾದ್ವೈರೂಪ್ಯಂ ಬಹುಪ್ರಕಾರತ್ವಂ ಕ್ರಮಸ್ಯ ॥ ೮ ॥**

**ಭಾವಾರ್ಥ**—ಲೋಕದಲ್ಲಿ ಉತ್ಪತ್ತಿಕ್ರಮಕ್ಕನುಗುಣವಾಗಿ ಲಯವು ಕಂಡಿದೆ. ಈ ನಿಯಮವನ್ನು ಅನುಸರಿಸಿ ಪ್ರಪಂಚದ ಉತ್ಪತ್ತಿ-ಲಯವನ್ನು ಅಂಗೀಕರಿಸಿದರೆ 'ಕ್ರಮಾದುತ್ಪದ್ಯತೇ ಕ್ರಮಾದ್ ವಿಲೀಯತೇ', 'ಕ್ರಮೇಣೈವೋತ್ಪತ್ತಿರ್ವಿಲಯಶ್ಚ', 'ಕ್ರಮೇಣೈವ ಹ್ಯಸ್ಯೋತ್ಪತ್ತಿಲಯೌ' ಮುಂತಾದ ಅನೇಕ ಶ್ರುತಿಗಳನ್ನೂ ಅನುಸರಿಸಿದಂತಾಗುತ್ತದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ಕ್ರಮವು ಎರಡು ವಿಧವಾಗಿದೆ-ವ್ಯುತ್ಕ್ರಮ, ಅನುಕ್ರಮವೆಂಬುದಾಗಿ. ಸೃಷ್ಟಿಯಲ್ಲಿಯೇ ಬೇರೆ ಕ್ರಮ. ಲಯದಲ್ಲಿಯೇ ಬೇರೆ ಕ್ರಮ ಎಂಬುದಾಗಿ ಶ್ರುತಿಯಿರುವುದರಿಂದ ಕ್ರಮವಾಗಿ ಲಯವನ್ನು ಹೇಳುವ ವಾಕ್ಯವು ಸಾವಕಾಶವಾಗಿದೆ. ಆದ್ದರಿಂದ ವೈರೂಪ್ಯ ಎಂಬುದಕ್ಕೆ ಕ್ರಮವು ಅನೇಕವಿಧವಾಗಿದೆ ಎಂದರ್ಥ.

**ವಿವರಣೆ**— ವ್ಯುತ್ಕ್ರಮವಾಗಿ ಲಯವನ್ನು 'ದ್ವಿವಿಧಃ ಕ್ರಮ ಉದ್ದಿಷ್ಟಃ' ಎಂಬ ಶ್ರುತಿಯು ನಿರವಕಾಶವಾಗಿ ಪ್ರತಿಪಾದಿಸುತ್ತಿರುವುದರಿಂದ ಕ್ರಮವಾಗಿ ಲಯವನ್ನು ಹೇಳುವ ವಾಕ್ಯವು ಸಾವಕಾಶವಾಗಿದೆ. ಆದ್ದರಿಂದ ಅದಕ್ಕೂ ವ್ಯುತ್ಕ್ರಮವಾಗಿ ಲಯ ಎಂದೇ ಅರ್ಥವನ್ನು ಮಾಡಬೇಕು. ವ್ಯುತ್ಕ್ರಮವಾಗಿ ಲಯ ಎಂಬುದೇ ಸಿದ್ಧಾಂತ.

ಲೋಕದೃಷ್ಟ್ಯನುಸಾರಿತ್ವವೆಂಬ ಪೂರ್ವಪಕ್ಷಯುಕ್ತಿಯೂ ಸಾವಕಾಶವಾಗಿದೆ. ಏಕೆಂದರೆ, ಪರಮಾಣು–ದ್ವ್ಯಣುಕವೆಂಬ ಕ್ರಮದಿಂದ ಹುಟ್ಟಿದ ಘಟವು ವ್ಯುತ್ಕ್ರಮವಾಗಿಯೇ ನಾಶವಾಗುತ್ತದೆ. ಅಂದರೆ ಘಟ ಮೊದಲು ನಾಶವಾಗಿ ಅನಂತರ ಕಪಾಲ ಈ ಕ್ರಮದಿಂದ ನಾಶವೇ ಹೊರತು ಹುಟ್ಟಿದ ಕ್ರಮದಿಂದಲ್ಲ. ಹೀಗೆ ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದಿರುವುದರಿಂದ ಅವುಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ವಿಪರ್ಯಯೇಣ ಕ್ರಮೋಽತ ಉಪಪದ್ಯತೇ ಓಂ

ಅತಃ=ಉತ್ಪತ್ತಿಕ್ರಮಕ್ಕಿಂತಲೂ ವಿಪರ್ಯಯೇಣ=ವಿಪರೀತವಾಗಿ ಕ್ರಮಃ= ಲಯ ಕ್ರಮವು. ಏಕೆಂದರೆ ಅತಸ್ತು='ವ್ಯುತ್ಕ್ರಮಾದ್ ವಿಲಯಶ್ಚ' ಎಂದು ಶ್ರುತಿಯಿರುವುದರಿಂದ ಉಪಪದ್ಯತೇ ಚ=ವಿಪರೀತ ಕ್ರಮದಿಂದಲೇ ಲಯವೂ ಉಪಪನ್ನವಾಗಿದೆ.

## ಅಂತರಾಧಿಕರಣ (2-3-9)

ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಭೂತಾದಿಗಳೇ ವಿಷಯ. ಎರಡು ವಿಧವಾದ ಶ್ರುತಿಗಳು ಕಾಣುವುದರಿಂದ ಎಲ್ಲವೂ ವ್ಯುತ್ಕ್ರಮದಿಂದ ಲಯವನ್ನು ಹೊಂದುತ್ತವೋ? ಅಥವಾ ಕೆಲವು ಕ್ರಮದಿಂದ ಲಯವನ್ನು ಹೊಂದುತ್ತವೋ? ಎಂಬ ಸಂಶಯವು ಬರುತ್ತದೆ.

**ಪೂರ್ವಪಕ್ಷ—** ಲೋಕದಲ್ಲಿ ತಂದೆಯ ಎದುರಿಗೆ ಮಗನು, ಮಗನ ಎದುರಿಗೆ ತಂದೆ ಸಾಯುವಂತೆ ಕೆಲವು ಪದಾರ್ಥಗಳಿಗೆ ಕ್ರಮವಾಗಿ ಲಯ, ಕೆಲವಕ್ಕೆ ವ್ಯುತ್ಕ್ರಮವಾಗಿ ಲಯವನ್ನು ಅಂಗೀಕರಿಸಬೇಕು. ಎಲ್ಲ ಪದಾರ್ಥಗಳಿಗೂ ವ್ಯುತ್ಕ್ರಮವಾಗಿಯೇ ಲಯ ಎಂಬುದು ಸರಿಯಲ್ಲ. ಹಾಗೆ ಲೋಕದಲ್ಲಿ ಕಂಡಿಲ್ಲ. 'ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ' (ಪ್ರಾಣನಿಂದ ಮನಸ್ತತ್ವ, ಮನಸ್ತತ್ವದಿಂದ ವಿಜ್ಞಾನತತ್ವ ಹುಟ್ಟಿತು) ಎಂದು ಹೇಳುತ್ತಿದೆ. ಮತ್ತು 'ಯಚ್ಛೇದ್ ವಾಙ್ಮಸೀ

ಪ್ರಾಜ್ಞಸ್ತದ್ ಯಚ್ಛೇದ್ ಜ್ಞಾನ ಆತ್ಮನಿ' (ವಾಕ್‌ತತ್ವಕ್ಕೆ ಮನಸ್ತತ್ವದಲ್ಲಿ, ಮನಸ್ತತ್ವಕ್ಕೆ ವಿಜ್ಞಾನದ ತತ್ವದಲ್ಲಿ ಲಯವನ್ನು ಸಾಧಕನು ಚಿಂತಿಸಬೇಕು) ಅಥವಾ (ವಾಕ್‌ತತ್ವಕ್ಕೆ ಅಭಿಮಾನಿಯಾದ ಉಮೆಯನ್ನು ಮನಸ್ತತ್ವಾಭಿಮಾನಿಯಾದ ರುದ್ರನ ಅಧೀನಳೆಂದು ಮನಸ್ತತ್ವಾಭಿಮಾನಿಯಾದ ರುದ್ರನನ್ನು ವಿಜ್ಞಾನತತ್ವಾಭಿಮಾನಿಯಾದ ಸರಸ್ವತಿಯ ಅಧೀನನೆಂದು ಚಿಂತಿಸಬೇಕು) ಎಂದು ಶ್ರುತಿ ಹೇಳುತ್ತಿದೆ. ಅಂದರೆ ಮೊದಲು ಹುಟ್ಟಿದ ಮನಸ್ತತ್ವಕ್ಕೆ ಮೊದಲು ಲಯ. ಅನಂತರ ಹುಟ್ಟಿದ ವಿಜ್ಞಾನತತ್ವಕ್ಕೆ ಅನಂತರ ಲಯ ಹೀಗೆ ಕ್ರಮವಾಗಿಯೇ ಲಯವು ತಿಳಿಯುವುದರಿಂದ ಮನಸ್ತತ್ವ, ವಿಜ್ಞಾನ ತತ್ವಗಳನ್ನು ಬಿಟ್ಟು ಬೇರೇ ಪದಾರ್ಥಗಳಿಗೆ ವ್ಯುತ್ಕ್ರಮವಾಗಿ ಲಯವನ್ನು ಹೇಳಬೇಕು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿಯೂ **'ಲೋಕದೃಷ್ಟ್ಯನುಸಾರಿತ್ವ'** (ಲೋಕದಲ್ಲಿ ಕಂಡದ್ದನ್ನು ಅಂಗೀಕರಿಸುವುದು) ಎಂಬುದು. ಅದನ್ನು **'ಸರ್ವಸಂಗ್ರಹ'** (ಶ್ರುತಿಯು ಎಲ್ಲದಕ್ಕೂ ವ್ಯುತ್ಕ್ರಮವಾಗಿ ಲಯವನ್ನು ಹೇಳಿದೆ) ಎಂಬ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ.

**ನ ಚ ಕೇಷಾಂಚಿತ್ ಕ್ರಮಾಲ್ಲಯಃ, ಕೇಷಾಂಚಿದ್ವ್ಯುತ್ಕ್ರಮಾಲ್ಲಯ ಇತ್ಯಂಗೀಕಾರೇ ಲೋಕದೃಷ್ಟ್ಯನುಸಾರಾದಂತರಾ ವಿಜ್ಞಾನಮನಸೀ ವ್ಯುತ್ಕ್ರಮಃ। 'ಸರ್ವಂ ವಾ ಏತತ್ ಕ್ರಮಾದುತ್ಪದ್ಯತೇ, ವ್ಯುತ್ಕ್ರಮಾಲ್ಲೀಯತೇ' ಇತಿ ಶ್ರುತೌ, ಸರ್ವಸ್ಯಾಪಿ ವ್ಯುತ್ಕ್ರಮಾಲ್ಲಯಸಂಗ್ರಹಾತ್ । ತಲ್ಲಿಂಗಸ್ಯ ತು ಚರಾಚರವ್ಯಪಾಶ್ರಯವಿಜ್ಞಾನಾದಿವಿಷಯತ್ವೇನೈವ ಸಾವಕಾಶತ್ವಾತ್ ॥ ೯ ॥**

**ಭಾವಾರ್ಥ**—ಕೆಲವು ಪದಾರ್ಥಗಳಿಗೆ ಕ್ರಮವಾಗಿ ಲಯ ಇನ್ನು ಕೆಲವು ಪದಾರ್ಥಗಳಿಗೆ ವ್ಯುತ್ಕ್ರಮವಾಗಿ ಲಯ ಎಂದು ಹೀಗೆ ಅಂಗೀಕರಿಸಿದರೆ ಲೋಕದಲ್ಲಿ ಕಂಡದ್ದನ್ನು ಅನುಸರಿಸಿದಂತಾಗುತ್ತದೆ. ಆದ್ದರಿಂದ ಮನಸ್ತತ್ವ ವಿಜ್ಞಾನತತ್ವಗಳನ್ನು ಹೊರತುಪಡಿಸಿ ಎಲ್ಲದಕ್ಕೂ ವ್ಯುತ್ಕ್ರಮದಿಂದ ಲಯವೆಂದು ಹೇಳಬೇಕು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ಎಲ್ಲವೂ ಕ್ರಮದಿಂದಲೇ ಹುಟ್ಟುತ್ತದೆ. ಆದರೆ ವ್ಯುತ್ಕ್ರಮದಿಂದ ಲಯ ಹೊಂದುತ್ತದೆ' ಎಂಬ ಶ್ರುತಿಯಲ್ಲಿ ಎಲ್ಲ ಪದಾರ್ಥಗಳನ್ನು ವ್ಯುತ್ಕ್ರಮದಿಂದ ಲಯ ಹೊಂದುವುಗಳಲ್ಲಿಯೇ ಸೇರಿಸಿದ್ದಾರೆ.

(ತಲ್ಲಿಂಗಸ್ಯ ತು) ಮನಸ್ತತ್ವ ವಿಜ್ಞಾನತತ್ವಗಳ ಲಯ ಸಾಧಕವಾದ ವಾಕ್ಯವಾದರೂ ಮನೋರೂಪೇಂದ್ರಿಯ ವೃತ್ತಿಜ್ಞಾನವೆಂಬ ಚೇತನಾಚೇತನಗಳನ್ನು ಪ್ರತಿಪಾದಿಸುವುದರಿಂದ ಸಾವಕಾಶವಾಗುತ್ತದೆ.

**ವಿವರಣೆ—** 'ಎಲ್ಲ ಪದಾರ್ಥಗಳಿಗೂ ವ್ಯುತ್ಕ್ರಮವಾಗಿಯೇ ಲಯ' ಎಂಬ ನಿಯಮಕ್ಕೆ ಮನಸ್ತತ್ವ ವಿಜ್ಞಾನ ತತ್ವಗಳು ಹೊರತಾಗಿಲ್ಲ. ಅವುಗಳಿಗೂ ವ್ಯುತ್ಕ್ರಮವಾಗಿಯೇ ಲಯ ಎಂಬುದು ಸಿದ್ಧಾಂತ. ಹಾಗಾದರೆ 'ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ' ಎಂಬ ಶ್ರುತಿಗೆ ಏನರ್ಥ? ಎಂದರೆ ಮನೋರೂಪೇಂದ್ರಿಯ ದಿಂದ ವೃತ್ತಿರೂಪ ಜ್ಞಾನ ಹುಟ್ಟಿತು ಎಂದರ್ಥವಾಗುತ್ತದೆ. ಆದ್ದರಿಂದ ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದಿರುವುದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ಓಂ

ವಿಜ್ಞಾನಮನಸೀ=ವಿಜ್ಞಾನತತ್ವ ಮನಸ್ತತ್ವಗಳನ್ನು ಅಂತರಾ=ಹೊರತುಪಡಿಸಿ ಉಳಿದವುಗಳಿಗೆ ಕ್ರಮೇಣ=ವ್ಯುತ್ಕ್ರಮದಿಂದ ಲಯ ಏಕೆಂದರೆ ತಲ್ಲಿಂಗಾತ್ ಇತಿ ಚೇತ್=ವಿಜ್ಞಾನ ಮನಸ್ಸುಗಳಿಗೆ ಯಾವ ಕ್ರಮದಿಂದ ಉತ್ಪತ್ತಿಯೋ ಅದೇ ಕ್ರಮದಿಂದ ಲಯ ಎಂದು ಶ್ರುತಿಗಳಲ್ಲಿರುವುದರಿಂದ ಎಂದರೆ ನ=ಅಲ್ಲ. ಏಕೆಂದರೆ ಅವಿಶೇಷಾತ್=ವಿಶೇಷಪ್ರಮಾಣವಿಲ್ಲದಿರುವುದರಿಂದ.

## ಆತ್ಮಾಧಿಕರಣ (2-3-10)

ಓಂ ನಾಽತ್ಮಾಽಶ್ರುತೇರ್ನಿತ್ಯತ್ವಾಚ್ಚ ಓಂ ಎಂಬ ಸೂತ್ರವೊಂದನ್ನು ಒಳಗೊಂಡ ಈ ಅಧಿಕರಣದಲ್ಲಿ ಪರಮಾತ್ಮನೇ ವಿಷಯ. ಶ್ರುತಿಗಳಲ್ಲಿ ಪರಸ್ಪರ ವಿರೋಧವು ಕಾಣುವುದರಿಂದ ಪರಮಾತ್ಮನಿಗೆ ದೇಹನಾಶವಿದೆಯೋ? ಇಲ್ಲವೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ—** ಎಲ್ಲ ಚೇತನರಿಗೂ ದೇಹನಾಶರೂಪವಾದ ಲಯ ಕಂಡಿದೆ. ಜೀವರಂತೆ ಪರಮಾತ್ಮನೂ ಚೇತನನಾದ್ದರಿಂದ ಅವನಿಗೂ ಲಯವನ್ನು ಹೇಳಲೇಬೇಕು. ಹಾಗೆಯೇ 'ಸ ಇದಂ ಸರ್ವಂ ವಿಲಾಪಯತ್ಯಂತಸ್ತಮಸಿ ವಿಲೀನಃ' (ಈ ಬ್ರಹ್ಮನು ಈ ಜಗತ್ತೆಲ್ಲವನ್ನೂ ಲಯಗೊಳಿಸಿ ತಾನೂ ತಮಸ್ಸಿನಲ್ಲಿ ವಿಲೀನನಾಗುತ್ತಾನೆ) ಎಂದು ಶ್ರುತಿಯು ಪರಮಾತ್ಮನಿಗೆ ಲಯವನ್ನು ಹೇಳುತ್ತಿದೆ. ಇದಕ್ಕೆ ವಿರುದ್ಧವಾದ 'ನಿತ್ಯೋ ನಿತ್ಯಾನಾಂ' ಎಂದು ಪರಮಾತ್ಮನಿಗೆ ನಿತ್ಯತ್ವವನ್ನು ಹೇಳುವ ಶ್ರುತಿಯ ಅಪ್ರಮಾಣವಾಗುತ್ತದೆ. ಇದರ ದೃಷ್ಟಾಂತದಿಂದ ಎಲ್ಲ ಶ್ರುತಿಗಳೂ ಅಪ್ರಮಾಣವಾಗುವುದರಿಂದ ಅಂತಹ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಜೀವಸಾಮ್ಯಂ' (ಎಲ್ಲ ಜೀವರಂತೆ ಪರಮಾತ್ಮನೂ ಚೇತನನಾಗಿರುವುದು) ಎಂಬುದು. ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಈ ಯುಕ್ತಿಯನ್ನು 'ಸರ್ವಸಂಗ್ರಹ' (ಎಲ್ಲವನ್ನೂ ತನ್ನ ಉದರದಲ್ಲಿಟ್ಟುಕೊಂಡಿದ್ದಾನೆ) ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಚೇತನತ್ವಸಾಮ್ಯಾದ್ವಿಷ್ಣೋರಪಿ ದೇಹಲಯಃ । 'ಸರ್ವೇ ವಾ ಏತೇ ಚಿದಾತ್ಮಾನೋ ಬ್ರಹ್ಮಂಲ್ಲಯಮನುಪ್ರಾಪ್ಯ ವಿಷ್ಣೋರುದರೇ ಸಂವಿಶಂತಿ' ಇತಿ ತಸ್ಯೋದರೇ ಸರ್ವಸಂಗ್ರಹಾದಿಶ್ರುತಿಭ್ಯೋ ನಿತ್ಯತ್ವಾವಗಮಾತ್ ತದ್ದೇಹಸ್ಯ । ಅಶ್ರುತತ್ವಾಚ್ಚಾನ್ಯಥಾ ॥ ೧೦ ॥**

**ಭಾವಾರ್ಥ—**ಚೇತನತ್ವವು ವಿಷ್ಣುವಿನಲ್ಲಿಯೂ ಇರುವುದರಿಂದ ಜೀವರಂತೆ ಅವನಿಗೂ ದೇಹನಾಶರೂಪವಾದ ಲಯವನ್ನು ಹೇಳುತ್ತೇವೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ಎಲ್ಲ ಚೇತನರೂ ಚತುರ್ಮುಖನಲ್ಲಿ ಲಯವನ್ನು ಹೊಂದಿ ವಿಷ್ಣುವಿನ ಉದರವನ್ನು ಪ್ರವೇಶಿಸುತ್ತಾರೆ' ಎಂಬ ಶ್ರುತಿಯು ಅವನ ಉದರದಲ್ಲಿ ಎಲ್ಲವೂ ಇದೆ ಎಂದು ತಿಳಿಸಿದ್ದರಿಂದ ಅವನ ದೇಹವು ನಿತ್ಯವೆಂದು ಸಿದ್ಧವಾಗುತ್ತದೆ. ವಿಷ್ಣುವಿನ ದೇಹ ಅನಿತ್ಯವೆಂದು ಹೇಳುವ ಬೇರೆ ವಾಕ್ಯವು ಶ್ರುತವಾಗಿಲ್ಲವಾದ್ದರಿಂದ.

**ವಿವರಣೆ—** 'ಎಲ್ಲವನ್ನೂ ತನ್ನ ಉದರದಲ್ಲಿಟ್ಟುಕೊಂಡಿದ್ದಾನೆ' ಎಂದು ಶ್ರುತಿಯಲ್ಲಿ ಹೇಳಿದ್ದರಿಂದ ಅವನ ದೇಹ ನಿತ್ಯವೆಂದು ಸಿದ್ಧವಾಗುತ್ತದೆ. ಹಾಗಾದರೆ

'ಅಂತಸ್ತಮಸಿ ವಿಲೀನಃ' ಎಂದು ಲಯವನ್ನು ಹೇಳುವ ಶ್ರುತಿಗೆ ಏನರ್ಥ? ಎಂದರೆ ತಮಸ್ಸು ಎಂದರೆ ಪ್ರಕೃತಿ. ಆದರಿಂದ ಆಚ್ಛಾದನೆಗೊಂಡ ಪರಮಾತ್ಮನು ಆದರಿಂದ ಪ್ರಾದುರ್ಭೂತ ನಾಗಿ ಪುನಃ ಜಗತ್ತನ್ನು ಸೃಷ್ಟಿಸುತ್ತಾನೆ ಎಂದರ್ಥ. ಹೀಗೆ ಶ್ರುತಿಗಳಲ್ಲಿ ವಿರೋಧವಿಲ್ಲದಿರುವುದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ನಾಽತ್ಮಾಽಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ಓಂ ॥

ಶ್ರುತೇಃ='ತಮಸಿ ವಿಲೀನಃ' ಎಂಬ ಶ್ರುತಿಯಿಂದ ಆತ್ಮಾ=ಪರಮಾತ್ಮನು ಲಯವನ್ನು ಹೊಂದುತ್ತಾನೆ ಇತಿ=ಎಂದು ನ=ಹೇಳಬಾರದು. ಏಕೆಂದರೆ ಅಶ್ರುತೇಃ=ಅವನ ಲಯವನ್ನು ಹೇಳುವ ಯಾವ ಶ್ರುತಿಯೂ ಕಂಡಿಲ್ಲ. ಅಷ್ಟೇ ಅಲ್ಲ ತಾಭ್ಯಃ='ಸ ನಿತ್ಯೋ ನಿರ್ಗುಣಃ' ಮೊದಲಾದ ಶ್ರುತಿಗಳಿಂದ ನಿತ್ಯತ್ವಾಚ್ಚ=ನಿತ್ಯತ್ವವೇ ಸಿದ್ಧವಾಗುವುದರಿಂದ.

## ಜ್ಞಾಧಿಕರಣ (2-3-11)

ಓಂ ಜ್ಞೋಽತ ಏವ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ಜೀವನು ವಿಷಯ. 'ಚಿದಾತ್ಮಾನೋ ವ್ಯುಚ್ಚರಂತಿ' ಎಂದು ಶ್ರುತಿಯಿರುವುದರಿಂದ ಜೀವನಿಗೆ ಜನ್ಮವಿದೆಯೋ? ಅಥವಾ 'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯಿರುವುದರಿಂದ ಜನ್ಮವಿಲ್ಲವೋ ಎಂಬುದು ಸಂದೇಹ.

**ಪೂರ್ವಪಕ್ಷ—** 'ನಿತ್ಯೋ ನಿತ್ಯಾನಾಂ' ಎಂಬ ವೇದವು ಪರಮಾತ್ಮನನ್ನು ನಿತ್ಯದಲ್ಲಿ ನಿತ್ಯ ಎಂದು ತಿಳಿಸುತ್ತದೆ. ಹಾಗಾದರೆ ಜೀವರೂ ನಿತ್ಯರಾಗಿರಲೇಬೇಕು. ಆದ್ದರಿಂದ ಜೀವನು ನಿತ್ಯನೆಂದು ಸಿದ್ಧವಾಗುತ್ತದೆ. ಇಲ್ಲಿ ಪರಮಾತ್ಮನಿಗೆ ಯಾವ ರೀತಿಯ ನಿತ್ಯತ್ವವಿದೆಯೋ ಅಂತಹ ನಿತ್ಯತ್ವವು ಪೂರ್ವಪಕ್ಷಿಗೆ ವಿವಕ್ಷಿತವಾಗಿದೆ. ಪ್ರತಿನಿತ್ಯ ಜೀವರು ಹುಟ್ಟುವುದು ಕಾಣುತ್ತಿರುವಾಗ ನಿತ್ಯರೆಂದು ಹೇಗೆ ಹೇಳುತ್ತೀರಿ? ಎಂದು ಕೇಳಬಾರದು. ಹುಟ್ಟುವುದು ದೇಹವೇ ಹೊರತು ಜೀವನಲ್ಲ. ಆದ್ದರಿಂದ ಪರಮಾತ್ಮನಂತೆ ಪರಾಧೀನವಿಶೇಷಾವಾಪ್ತಿರೂಪವಾದ ಉತ್ಪತ್ತಿಯೂ ಜೀವನಿಗಿಲ್ಲ.

ಹಾಗಾದರೆ ಇದಕ್ಕೆ ವಿರುದ್ಧವಾಗಿ 'ಚಿದಾತ್ಮಾನೋ ವ್ಯುಚ್ಚರಂತಿ' ಎಂದು ಉತ್ಪತ್ತಿಯನ್ನು ಹೇಳುವ ಶ್ರುತಿ ಅಪ್ರಮಾಣವಾಗುತ್ತದೆ. ಅದರ ದೃಷ್ಟಾಂತದಿದಂದ ಎಲ್ಲ ಶ್ರುತಿಗಳೂ ಅಪ್ರಮಾಣವಾಗುತ್ತವೆ. ಆದ್ದರಿಂದ ಶ್ರುತಿಗಳಿಂದ ವಿಷ್ಣು ಜಗತ್ಕಾರಣನೆಂದು ಸಿದ್ಧವಾಗುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅನಾದಿತ್ವ'. (ಜೀವನು ಅನಾದಿಯಾದ್ದರಿಂದ ಪರಮಾತ್ಮನಂತೆ ಉತ್ಪತ್ತಿರಹಿತ) ಎಂಬುದು. ಇದನ್ನು ಮತ್ತು 'ಸರ್ವಸಂಗ್ರಹ' (ಪರಮಾತ್ಮನು ಸೃಷ್ಟಿಸಿದ ಪದಾರ್ಥಗಳಲ್ಲಿ ಜೀವನೂ ಸೇರಿದ್ದಾನೆ) ಎಂಬ ಸಿದ್ಧಾಂತಸಾಧಕ ನ್ಯಾಯವನ್ನೂ ವಿವರಿಸುತ್ತಿದ್ದಾರೆ.

**ನ ಚಾನಾದಿತ್ವಾಜ್ಜೀವಸ್ಯ ಪರಾಧೀನವಿಶೇಷಾಪ್ರಾಪ್ತಿಃ । ''ಇದಂ ಸರ್ವಮಸೃಜತ'' ಇತಿ ಸರ್ವಸ್ಮಿನ್ ಗೃಹೀತತ್ವಾತ್ । ಪರಾಧೀನ ವಿಶೇಷವತ್ತ್ವೇಽಪ್ಯನಾದಿತ್ವಸ್ಯಾವಿರೋಧಾತ್ ॥ ೧೧ ॥**

**ಭಾವಾರ್ಥ—**ಜೀವನು ಅನಾದಿಯಾದ್ದರಿಂದ ಪರಾಧೀನವಿಶೇಷಾವಾಪ್ತಿ ರೂಪವಾದ ಉತ್ಪತ್ತಿಯೂ ಇಲ್ಲ ಎಂದು ಆಕ್ಷೇಪಿಸಬಾರದು. ಏಕೆಂದರೆ 'ಸ ಇದಂ ಸರ್ವಮಸೃಜತ' ಎಂಬ ಶ್ರುತಿಯಲ್ಲಿ ಸರ್ವಪದದ ಅರ್ಥದಲ್ಲಿ ಜೀವನನ್ನೂ ಸೇರಿಸಲಾಗಿದೆ. ಪರಾಧೀನ ವಿಶೇಷಾವಾಪ್ತಿಯನ್ನು ಒಪ್ಪಿದರೂ ಜೀವರ ಅನಾದಿತ್ವಕ್ಕೆ ಬಾಧಕವಿಲ್ಲ.

**ವಿವರಣೆ—** ಪರಮಾತ್ಮನು ಸೃಷ್ಟಿಸುವ ಪದಾರ್ಥಗಳಲ್ಲಿ ಜೀವನೂ ಸೇರಿದ್ದಾನೆ. ಆದ್ದರಿಂದ ಜೀವನಿಗೂ ಪರಾಧೀನವಿಶೇಷಾವಾಪ್ತಿ ರೂಪವಾದ ಉತ್ಪತ್ತಿ ಇದೆ ಎಂಬುದು ಸಿದ್ಧಾಂತ. ಜೀವನು ಅನಾದಿಯಾಗಿದ್ದರೂ ಪರಮಾತ್ಮನ ಅನುಗ್ರಹದಿಂದ ಸಂಸಾರದಲ್ಲಿ ದೇಹವನ್ನು ಪಡೆದುಕೊಂಡಾಗ ಅದರಲ್ಲಿ ಅಭಿಮಾನವನ್ನು ಹೊಂದುವುದರಿಂದ ಪರಾಧೀನವಿಶೇಷಾವಾಪ್ತಿಯನ್ನು ಒಪ್ಪಲು ಯಾವುದೇ ಬಾಧಕವಿಲ್ಲ. ಶ್ರುತಿಗಳಲ್ಲಿ ವಿರೋಧವಿಲ್ಲದಿರುವುದರಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಜ್ಞೋಽತ ಏವ ಓಂ ॥**

ಜ್ಞಃ=ಜೀವನೂ ಅತಃ ಏವ=ಈ ಪರಮಾತ್ಮನಿಂದಲೇ ಹುಟ್ಟುವನು.

## ಉತ್ಕ್ರಾಂತ್ಯಧಿಕರಣ (2-3-12)

ಓಂ ಉತ್ಕ್ರಾಂತಿಗತ್ಯಾಗತೀನಾಂ ಓಂ ಎಂಬ ಸೂತ್ರದಿಂದ ಪ್ರಾರಂಭಗೊಳ್ಳುವ ಈ ಅಧಿಕರಣದಲ್ಲಿ ಜೀವನೇ ವಿಷಯ. 'ವ್ಯಾಪ್ತಾ ಹ್ಯಾತ್ಮಾನಃ' ಎಂದು ಶ್ರುತಿಯಿರುವುದರಿಂದ ಜೀವನು ವ್ಯಾಪ್ತನೋ? ಅಥವಾ 'ಅಣುರ್ಹ್ಯೇಷ ಆತ್ಮಾ' ಎಂಬ ಶ್ರುತಿಯಿರುವುದರಿಂದ ಅಣುವೋ? ಎಂಬುದು ಸಂಶಯ.

**ಪೂರ್ವಪಕ್ಷ—** 'ವ್ಯಾಪ್ತಾ ಹ್ಯಾತ್ಮಾನಃ' (ಜೀವರು ವ್ಯಾಪ್ತರು) ಎಂಬ ಶ್ರುತಿಯು ಜೀವನಿಗೆ ವ್ಯಾಪ್ತತ್ವವನ್ನು (ವಿಭುತ್ವವನ್ನು) ಹೇಳುತ್ತಿದೆ. ಒಂದುವೇಳೆ ಆತ್ಮನು ಅಣುವಾದರೆ ದೇಹದ ಎಲ್ಲ ಭಾಗದಿಂದ ಉಂಟಾಗುವ ಸ್ಪರ್ಶಾದಿಗಳ ಗ್ರಹಣವಾಗದೆ ಇರಬೇಕಾದೀತು. ಮಧ್ಯಮ ಪರಿಮಾಣವೆಂದು ಅಂಗೀಕರಿಸಿದರೆ ಘಟದಂತೆ ಅನಿತ್ಯನಾಗಬೇಕಾಗುತ್ತದೆ. ಪರಿಶೇಷದಿದಂದ ಜೀವನು ವ್ಯಾಪ್ತನೆಂದು ಸಿದ್ಧವಾಗುತ್ತದೆ. ಆವಾಗ ಇದಕ್ಕೆ ವಿರುದ್ಧವಾಗಿ ಅಣುತ್ವವನ್ನು ಹೇಳುವ 'ಅಣುರ್ಹ್ಯೇಷ ಆತ್ಮಾ' ಎಂಬ ಶ್ರುತಿಯು ಅಪ್ರಮಾಣವಾಗುತ್ತದೆ. ಇದರ ದೃಷ್ಟಾಂತದಿದಂದ ಎಲ್ಲ ವೇದವೂ ಅಪ್ರಮಾಣವಾಗುತ್ತದೆ. ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವುದು ಸರಿಯಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾಗಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಯುಕ್ತಿ 'ತತ್ರತತ್ರ ಪರಿಜ್ಞಾನಂ' (ಆಯಾ ಇಂದ್ರಿಯಗಳಿಂದಾಗುವ ಸುಖದುಃಖಗಳ ಅನುಭವ) ಎಂಬುದು. ಇದನ್ನು ಮತ್ತು 'ಗತ್ಯಾದಿಃ' (ಜೀವನು ಬೇರೆಬೇರೆ ಲೋಕಗಳಿಗೆ ಹೋಗುವುದು ಬರುವುದು ಮೊದಲಾದದ್ದು) ಎಂಬ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಸರ್ವದೇಹೇ ಸ್ಪರ್ಶಜ್ಞಾನಾದ್ರಸಾದೀನಾಂ ಚ ತತ್ರತತ್ರ ಪರಿಜ್ಞಾನಾಜ್ಜೀವಸ್ಯಾನಣುತ್ವಮ್ । ಉತ್ಕ್ರಾಂತಿಗತ್ಯಾದೇಃ । ಆದಿಶಬ್ದೇನ ಸೂಕ್ಷ್ಮತೇಜೋರೂಪೇಣ ವ್ಯಾಪ್ತ್ಯಾ ಸ್ಪರ್ಶಾದಿಜ್ಞಾನೋಪಪತ್ತಿಃ । ಅತೋಽಣುತ್ವಮನಣುತ್ವಂ ಚೇತಿ ಭಾವಃ ॥ ೧೨ ॥**

**ಭಾವಾರ್ಥ—**ದೇಹದ ಎಲ್ಲ ಭಾಗದಿಂದಲೂ ಸ್ಪರ್ಶಜ್ಞಾನವಿರುವುದರಿಂದ ಆಯಾಯಾ ಎಲ್ಲ ಇಂದ್ರಿಯಗಳಿಂದಲೂ ರಸಾದಿಗಳ ಅನುಭವ ಬರುವುದರಿಂದ (ನಾಲಿಗೆಯಲ್ಲಿ ರಸದ, ಕಣ್ಣಿನಲ್ಲಿ ರೂಪದ, ಘ್ರಾಣದಲ್ಲಿ ಗಂಧದ, ಕಾಲಿನಲ್ಲಿ ವೇದನೆಯ, ತಲೆಯಲ್ಲಿ ಸುಖದ, ಹೀಗೆ ಆಯಾ ಅಧಿಷ್ಠಾನದಗಳಲ್ಲಿದ್ದ ಜೀವನಿಗೆ ಬಗೆಬಗೆಯ ಅನುಭವ ಬರುತ್ತಿರುವುದರಿಂದ) ಅಣುತ್ವವನ್ನು ಒಪ್ಪಬಾರದು. ಅಂದರೆ ವ್ಯಾಪ್ತತ್ವವನ್ನೇ ಒಪ್ಪಬೇಕು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಶ್ರುತಿಯಲ್ಲಿ ಉತ್ಕ್ರಮಣ ಮೊದಲಾದದ್ದನ್ನು ಹೇಳಿದ್ದರಿಂದ (ಗತ್ಯಾದಿಃ ಎಂಬ ಅನುವ್ಯಾಖ್ಯಾನದ) ಆದಿಶಬ್ದದಿಂದ ಸೂಕ್ಷ್ಮತೇಜೋರೂಪದಿಂದ ವ್ಯಾಪ್ತನಾದ್ದರಿಂದ ಸ್ಪರ್ಶಜ್ಞಾನ ಮೊದಲಾದದ್ದನ್ನು ಕೂಡಿಸಬಹುದು. ಆದ್ದರಿಂದ ಜೀವನಿಗೆ ಅಣುತ್ವ ಅನಣುತ್ವ (ವ್ಯಾಪ್ತತ್ವ) ಎರಡೂ ಉಪಪನ್ನವಾಗುತ್ತವೆ.

**ವಿವರಣೆ—** 'ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮಭಿಗಚ್ಛತಿ' (ಜೀವನು ಈ ಶರೀರದಿಂದ ಹೊರಗೆ ಹೊರಟು ಮೇಲಿನ ಲೋಕಕ್ಕೆ ಬರುತ್ತಾನೆ) ಎಂದು ಶ್ರುತಿಯು ಜೀವನಿಗೆ ಗಮನ-ಆಗಮನಗಳನ್ನು ಹೇಳಿದೆ. ಒಂದುವೇಳೆ ಜೀವನು ವ್ಯಾಪ್ತನಾದರೆ ಅವನು ಎಲ್ಲಡೆಯಲ್ಲಿಯೂ ಇರುವುದರಿಂದ ಹೋಗುವುದೂ ಬರುವುದೂ ಕೂಡುವುದಿಲ್ಲ. ಆದ್ದರಿಂದ ಜೀವನು ಅಣುವೇ ಎಂಬುದು ಸಿದ್ಧಾಂತ. ಅವನು ಸ್ವರೂಪದಿಂದ ಅಣುವಾಗಿದ್ದರೂ ತೇಜೋರೂಪದಿಂದ ವ್ಯಾಪ್ತನಾಗಿದ್ದಾನೆ. ಇದರಿಂದ ಎಲ್ಲ ಇಂದ್ರಿಯಗಳಿಂದ ಆಗುವ ರಸಾದಿಗಳ ಅನುಭವವು ಅವನಿಗೆ ಕೂಡುತ್ತದೆ. ಜೀವನು ಅಣು, ವ್ಯಾಪ್ತ ಎಂದು ಪ್ರತಿಪಾದಿಸುವ ಎರಡೂ ವಾಕ್ಯಗಳ ವಿರೋಧವನ್ನೂ ಪರಿಹಾರ ಮಾಡಬಹುದಾದ್ದರಿಂದ ಎಲ್ಲ ಶ್ರುತಿಗಳೂ ಪ್ರಮಾಣವಾಗಿವೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

## ಓಂ ಉತ್ಕ್ರಾಂತಿಗತ್ಯಾಗತೀನಾಮ್ ಓಂ

ಉತ್ಕ್ರಾಂತಿಗತ್ಯಾಗತೀನಾಂ=ದೇಹದಿಂದ ಉತ್ಕ್ರಮಣ ಪರಲೋಕಗಮನ ಪುನಃ ಆಗಮನ ಈ ಹೇತುಗಳಿಂದ ಜೀವನು ಅಣು; ವಿಭುವಲ್ಲ.

# ವ್ಯತಿರೇಕಾಧಿಕರಣ (2-3-13)

ಓಂ ವ್ಯತಿರೇಕೋ ಗಂಧವತ್ ತಥಾ ಚ ದರ್ಶಯತಿ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ಜೀವನಾಗಿದ್ದಾನೆ. ಎರಡು ವಿಧವಾದ ಶ್ರುತಿಗಳಿರುವುದರಿಂದ ಅವನು ಏಕರೂಪನೋ? ಬಹುರೂಪನೇ ಎಂಬುದು ಸಂಶಯ.

**ಪೂರ್ವಪಕ್ಷ—** ಜೀವನು ಏಕರೂಪವುಳ್ಳವನೆಂದು 'ಸ ಏಕಧಾ ನ ಸಪ್ತಧಾ ನ ಶತಧಾ' (ಅವನು ಒಂದೇ ರೂಪವುಳ್ಳವನು ಏಳುರೂಪವುಳ್ಳವನಲ್ಲ ನೂರು ರೂಪವುಳ್ಳವನೂ ಅಲ್ಲ) ಎಂಬ ಶ್ರುತಿಯು ತಿಳಿಸುತ್ತಿದೆ. ಒಂದುವೇಳೆ ಜೀವನಿಗೂ ಅನೇಕರೂಪಗಳಿರುವುದಾದರೆ ಅವನಿಗೂ ಈಶ್ವರನಿಗೂ ಏನೂ ವ್ಯತ್ಯಾಸವೇ ಇಲ್ಲವಾಗುತ್ತದೆ. ಜೀವನಿಗೆ ಅನೇಕ ರೂಪಗಳನ್ನು ಹೇಳುವ ಶ್ರುತಿಯು ಅಪ್ರಮಾಣವಾಗಿದೆ. ಆದರ ದೃಷ್ಟಾಂತದಿಂದ ಎಲ್ಲ ವೇದಗಳಿಗೂ ಅಪ್ರಾಮಾಣ್ಯವು ಬರುತ್ತದೆ. ಅಂತಹ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಈಶಸಾಮ್ಯಂ'** (ಪರಮಾತ್ಮನ ಸಮಾನತೆ ಬರುವುದು) ಎಂಬುದು ಮತ್ತು **'ಈಶಶಕ್ತಿ'** (ಪರಮಾತ್ಮನು ತನ್ನ ಶಕ್ತಿಯಿಂದ ಅನೇಕರೂಪವುಳ್ಳವನಾಗುವನು) ಎಂಬ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಜೀವಸ್ಯ ಬಹುರೂಪತ್ವಶಕ್ತಾವೀಶೇನ ಗುಣಸಾಮ್ಯಮ್ । ಈಶಶಕ್ತ್ಯೈವ ಬಹುರೂಪತ್ವಾದೇಃ ॥ ೧೩ ॥**

**ಭಾವಾರ್ಥ—**ಜೀವನಿಗೆ ಬಹಳ ರೂಪವನ್ನು ಸ್ವೀಕರಿಸುವ ಶಕ್ತಿಯಿದೆ ಎಂದು ಒಪ್ಪಿದರೆ ಶ್ರೀಹರಿಯ ಗುಣಸಾಮ್ಯವು ಜೀವನಿಗೆ ಬರಬೇಕಾಗುವುದು. ಆದ್ದರಿಂದ ಜೀವನಿಗೆ ಬಹುರೂಪವನ್ನು ಒಪ್ಪಬಾರದು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಭಗವಂತನ ಶಕ್ತಿಯಿಂದಲೇ ಅನೇಕರೂಪವನ್ನು ಅಂಗೀಕರಿಸಲು ಯಾವುದೇ ಬಾಧಕವಿಲ್ಲ.

**ವಿವರಣೆ—** 'ಅಥ ಏಕ ಏವ ಸನ್ ಗಂಧವದ್ ವ್ಯತಿರಿಚ್ಯತೇಽಥೈಕೀಭವತ್ಯಥ ಬಹ್ವೀಭವತಿ ತಂ ಯಥಾ ಯಥೇಶ್ವರಃ ಪ್ರಕುರುತೇ ತಥಾ ಭವತಿ' (ಆ ಜೀವನು ಒಬ್ಬನೇ ಆಗಿದ್ದರೂ ಗಂಧದಂತೆ ಅಂಶಿಯನ್ನು ಬಿಟ್ಟು ಅಂಶಗಳಿಂದ ಬೇರೆಡೆ ಇರುತ್ತಾನೆ. ಮತ್ತೆ ಅಂಶಿಯೊಂದಿಗೆ ಐಕ್ಯವನ್ನು ಹೊಂದುತ್ತಾನೆ. ಯೋಗಸಾಮರ್ಥ್ಯದಿಂದ ಬಹುರೂಪನಾಗುತ್ತಾನೆ. ಆ ಜೀವವನ್ನು ಪರಮಾತ್ಮ ಹೇಗೆ ಹೇಗೆ ಮಾಡುವನೋ ಹಾಗೆ ಹಾಗೆ ಆಗುತ್ತಾನೆ.) ಜೀವನು ಒಬ್ಬನೇ ಆದರೂ ಈಶ್ವರನಿಂದಲೇ ಬಹುರೂಪವುಳ್ಳವನಾಗುತ್ತಾನೆ.

ಜೀವನು ಬಹುರೂಪವನ್ನು ಹೊಂದಿದರೂ ಪರಮಾತ್ಮನ ಸಾಮ್ಯವು ಬರುವುದಿಲ್ಲ. ಏಕೆಂದರೆ ಈಶ್ವರನು ತನ್ನ ಶಕ್ತಿಯಿಂದ ಬಹುರೂಪವನ್ನು ತಾಳುವನು. ಜೀವನಾದರೂ ಈಶಶಕ್ತಿಯಿಂದ ಬಹುರೂಪವನ್ನು ತಾಳುವನು. ಜೀವನಾದರೂ ಈಶಶಕ್ತಿಯಿಂದ ಬಹುರೂಪವನ್ನು ತಾಳಿದಾಗ ಸಾಮ್ಯವೆಲ್ಲಿಯದು? ಆದ್ದರಿಂದ ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದಿರುವುದರಿಂದ ಶ್ರುತಿಯಿಂದ ಶ್ರೀಹರಿಗೆ ಜಗತ್ಕಾರಣತ್ವ ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ವ್ಯತಿರೇಕೋ ಗಂಧವತ್ ತಥಾ ಚ ದರ್ಶಯತಿ ಓಂ**

ತಥಾ=ಅಣುವಾಗಿದ್ದರೂ ಜೀವನಿಗೆ ತನ್ನ ಅಂಶಗಳಿಂದ ವ್ಯತಿರೇಕಃ= ವಿಭಾಗವು ಗಂಧವತ್=ಗಂಧಕ್ಕೆ ತನ್ನ ಅಂಶಗಳಿಂದ ಹೇಗೋ ಹಾಗೆ ಇದೆ. ಜೀವನಿಗೆ ಬಹುರೂಪಗಳ ವಿಷಯದಲ್ಲಿ ಪ್ರಮಾಣವೇನು? ಎಂದರೆ ದರ್ಶಯತಿ='ಅಥ ಏಕ ಏವ ಸನ್...' ಮುಂತಾದ ಶ್ರುತಿಯಿಂದ. ಚ=ಸ್ಮೃತಿಯೂ ಇರುವುದರಿಂದ.

# ಪೃಥಗುಪದೇಶಾಧಿಕರಣ (2-3-14)

ಓಂ ಪೃಥುಗುಪದೇಶಾತ್ ಓಂ ಎಂಬ ಸೂತ್ರ ಆರಂಭಗೊಂಡ ಈ ಅಧಿಕರಣಕ್ಕೆ ಜೀವನು ವಿಷಯ. 'ತತ್ವಮಸಿ' ಎಂಬ ಶ್ರುತಿಯು ಅಭೇದವನ್ನು ಪ್ರತಿಪಾದಿಸುತ್ತಿದೆ. 'ದ್ವಾಸುಪರ್ಣಾ' ಎಂಬ ಶ್ರುತಿಯು ಭೇದವನ್ನು ತಿಳಿಸುತ್ತದೆ. ಹೀಗೆ ಪರಸ್ಪರ ವಿರುದ್ಧವಾದ ಶ್ರುತಿಗಳಿರುವುದರಿಂದ ಜೀವನು ಪರಮಾತ್ಮನಿಂದ ಭಿನ್ನನೋ? ಅಭಿನ್ನನೋ? ಎಂಬ ಸಂದೇಹ.

**ಪೂರ್ವಪಕ್ಷ—** 'ತತ್ವಮಸಿ' (ನೀನು ಬ್ರಹ್ಮನಾಗಿರುವಿ) ಎಂಬ ಶ್ರುತಿಯು ಜೀವನಿಗೂ ಈಶ್ವರನಿಗೂ ಅಭೇದವನ್ನು ಹೇಳುತ್ತಿದೆ. ಇದಕ್ಕೂ ಉಪಕ್ರಮಾದಿ ಲಿಂಗಗಳೂ ಇವೆ. ಇದಕ್ಕೆ ವಿರುದ್ಧವಾಗಿ ಭೇದವನ್ನು ತಿಳಿಸುವ 'ದ್ವಾ ಸುಪರ್ಣಾ' ಮೊದಲಾದ ವಾಕ್ಯಗಳು ಅಪ್ರಮಾಣವಾಗುತ್ತವೆ. ಅದರ ದೃಷ್ಟಾಂತದಿದಂದ ಸಕಲ ವೇದಗಳೂ ಅಪ್ರಮಾಣವಾಗುವುದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಶ್ರುತಿ' (ಅಭೇದವನ್ನು ಹೇಳುವ ವೇದಗಳು) ಎಂಬುದು. ಇದನ್ನು ಮತ್ತು 'ಸರ್ವಮಾನವಿರೋಧಿತಾ' (ಅನೇಕ ಪ್ರಮಾಣಗಳ ವಿರೋಧ) ಎಂಬ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಶ್ರುತ್ಯಾ ಜೀವೇಶ್ವರೈಕ್ಯಮ್ । ಸರ್ವಮಾನವಿರೋಧಾತ್ । ಶ್ರುತೇಃ ಸಾದೃಶ್ಯೈಕ್ಯಾದಿನಾ ಸಾವಕಾಶತ್ವಾತ್ । ಬಹುಮಾನವಿರೋಧೇ ಏಕಸ್ಯ ದೌರ್ಬಲ್ಯಾಚ್ಚ । ಧರ್ಮಿಗ್ರಾಹಕವಿರೋಧಾಚ್ಚ ॥ ೧೪ ॥**

**ಭಾವಾರ್ಥ—**'ತತ್ವಮಸಿ' ಮೊದಲಾದ ಶ್ರುತಿಗಳಿಂದ ಜೀವೇಶ್ವರ ಅಭೇದವನ್ನು ಹೇಳಬಾರದು. ಏಕೆಂದರೆ ಎಲ್ಲ ಪ್ರಮಾಣಗಳ ವಿರೋಧವು ಬರುತ್ತದೆ. ಅಭೇದವನ್ನು ಹೇಳುವ ಶ್ರುತಿಗೆ ಸಾದೃಶ್ಯ ಸ್ಥಾನೈಕ್ಯ ಮತ್ಯೈಕ್ಯಗಳಿಂದ ಸಾವಕಾಶತ್ವವನ್ನು (ಅರ್ಥಾಂತರವನ್ನು) ಹೇಳಬಹುದು. ಭೇದ ಬೋಧಕವಾದ ಅನೇಕ ಪ್ರಮಾಣಗಳ ವಿರೋಧವು ಬಂದಾಗ ಅಭೇದವನ್ನು ಹೇಳುವ ಒಂದು ಶ್ರುತಿಯೇ ದುರ್ಬಲವಾಗುತ್ತದೆ. ಮತ್ತು ಅಭೇದ ಬೋಧಕವಾದ ವಾಕ್ಯಕ್ಕೆ ಧರ್ಮಿಗ್ರಾಹಕಪ್ರಮಾಣದ ವಿರೋಧವೂ ಬರುತ್ತದೆ.

**ವಿವರಣೆ—** ಭೇದವನ್ನು ತಿಳಿಸುವ ಅನೇಕ ಪ್ರಮಾಣಗಳ ವಿರೋಧವಿರುವುದ ರಿಂದ ಜೀವ ಬ್ರಹ್ಮರಿಗೆ ಅಭೇದವನ್ನು ಹೇಳಬಾರದು ಎಂಬುದು ಸಿದ್ಧಾಂತ. ಹಾಗಾದರೆ 'ತತ್ವಮಸಿ' ಮುಂತಾದ ಶ್ರುತಿಯು ಅಭೇದವನ್ನು ಹೇಗೆ ಹೇಳುತ್ತದೆ ಎಂದರೆ ಜೀವ-ಬ್ರಹ್ಮರಲ್ಲಿ ಭೇದವಿದ್ದರೂ ಸಾಮ್ಯವಿದೆ. ಯಮನಂತೆ ಕ್ರೂರನಾದ ವ್ಯಕ್ತಿಯನ್ನು 'ಅವನು ಯಮ' ಎಂದು ಕರೆಯುವಂತೆ ಜೀವನನ್ನೇ ಬ್ರಹ್ಮಾ ಎಂದು ವ್ಯವಹರಿಸುತ್ತಾರೆ.

ಒಂದು ವಸ್ತುವನ್ನು ಯಾವ ಪ್ರಮಾಣವು ತಿಳಿಸುವದೋ ಅದನ್ನು ಧರ್ಮಿಗ್ರಾಹಕ ಪ್ರಮಾಣವೆನ್ನುವರು. ಜೀವನನ್ನು ತಿಳಿಸುವ ಪ್ರಮಾಣ 'ಅಹಂ' ಎಂಬ ಪ್ರತ್ಯಕ್ಷ. ಅದು 'ನಾನು ದುಃಖಿ, ಅಲ್ಪಜ್ಞ' ಎಂದೇ ಜೀವನನ್ನು ತಿಳಿಸುತ್ತಿದೆ. ಅದರಂತೆ ಈಶ್ವರನನ್ನು ತಿಳಿಸುವ ಪ್ರಮಾಣ ಆಗಮ. ಅದು ಈಶ್ವರನನ್ನು ತಿಳಿಸುವಾಗ 'ಈಶ್ವರನು ಸರ್ವಜ್ಞ ಸರ್ವಶಕ್ತ' ಎಂದೇ ತಿಳಿಸುತ್ತಿದೆ. ಹೀಗೆ ವಿರುದ್ಧ ಧರ್ಮಗಳಿರುವ ಇವರಿಬ್ಬರಿಗೂ ಅಭೇದವನ್ನು ಒಪ್ಪಿದರೆ ಧರ್ಮಿಗ್ರಾಹಕ ಪ್ರಮಾಣದ ವಿರೋಧವು ಬರುತ್ತದೆ ಎಂದು ಹೇಳಿದ್ದಾರೆ. ಹೀಗೆ ಎಲ್ಲ ಆಗಮಗಳು ಪ್ರಮಾಣಗಳಾದ್ದರಿಂದ ಅವುಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಪೃಥಗುಪದೇಶಾತ್ ಓಂ ||

ಪರಮಾತ್ಮನಿಂದ ಜೀವನು ಪೃಥಕ್=ಭಿನ್ನನು. ಏಕೆಂದರೆ ಉಪದೇಶಾತ್= 'ಭಿನ್ನೋಽಚಿಂತ್ಯಃ' ಮೊದಲಾದ ಶ್ರುತಿಗಳು ಹಾಗೆ ಹೇಳುವುದರಿಂದ.

## ಯಾವದಧಿಕರಣ (2-3-15)

ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಜೀವನೇ ವಿಷಯ. 'ಬ್ರಹ್ಮ ಲಯಮಭ್ಯುಪೈತಿ' ಮತ್ತು 'ಆನಂತ್ಯಾಯ ಕಲ್ಪತೇ' ಎಂಬ ವಿರುದ್ಧವಾದ ಶ್ರುತಿಗಳಿರುವುದರಿಂದ ಜೀವನು ಅನಿತ್ಯನೋ? ನಿತ್ಯನೋ? ಎಂಬುದು ಸಂಶಯ.

**ಪೂರ್ವಪಕ್ಷ—** 'ಬ್ರಹ್ಮಲಯಮಭ್ಯುಪೈತಿ' (ಜೀವನು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾನೆ) ಎಂಬ ಶ್ರುತಿಯು ಜೀವನನನ್ನು ಅನಿತ್ಯನೆಂದು ತಿಳಿಸುತ್ತದೆ. ಅಷ್ಟೇ ಅಲ್ಲದೇ 'ಜ್ಞೋಽತ ಏವ' ಎಂಬ ಸೂತ್ರದಲ್ಲಿ ಜೀವನಿಗೆ ಉತ್ಪತ್ತಿಯಿದೆ ಎಂದು ಹೇಳಲಾಗಿದೆ. ಯಾವುದು ಉತ್ಪನ್ನವಾಗುತ್ತದೋ ಅದು ನಾಶವನ್ನೂ ಹೊಂದುತ್ತದೆ. ಹೀಗೆ ಉತ್ಪತ್ತಿ–ನಾಶಗಳುಳ್ಳ ಜೀವನು ಅನಿತ್ಯನೆಂದು ಸಿದ್ಧವಾಗುತ್ತದೆ. ಅವನಿಗೆ ನಿತ್ಯತ್ವವನ್ನು ಹೇಳುವ 'ಸೋಽನಾದಿನಾ ಪುಣ್ಯೇನ ಪಾಪೇನ ವಾಽನುಬದ್ಧಃ' ಎಂಬ ಶ್ರುತಿಯು ಅಪ್ರಮಾಣವಾಗುತ್ತದೆ. ಅದರ

ದೃಷ್ಟಾಂತದಿಂದ ಸಕಲ ವೇದಗಳೂ ಅಪ್ರಮಾಣವಾಗುವುದರಿಂದ ವೇದದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗಲಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಉತ್ಪತ್ತಿಮತ್ತ್ವಂ'** (ಜೀವನಿಗೆ ಉತ್ಪತ್ತಿಯಿರುವುದು) ಎಂಬುದು. ಇದನ್ನು ಮತ್ತು **'ಅಭೀಷ್ಟಸಿದ್ಧಿ'** (ಜೀವನನ್ನು ಅನಿತ್ಯನೆಂದರೆ ಇಷ್ಟವಾದ ಮೋಕ್ಷವು ಸಿದ್ಧಿಯಾಗಲಾರದು) ಎಂಬ ಸಿದ್ಧಾಂತಸಾಧಕ ಯುಕ್ತಿಯನ್ನೂ ವಿವರಿಸುತ್ತಿದ್ದಾರೆ—

**ನ ಚೋತ್ಪತ್ತಿಮತ್ತ್ವಾದ್ವಿನಾಶಿತ್ವಂ ಜೀವಸ್ಯ । ಅನಿತ್ಯತ್ವೇ ತದಭೀಷ್ಟಮೋಕ್ಷಾದ್ಯಸಿದ್ಧೇಃ । ನ ಹಿ ಪರಾಧೀನವಿಶೇಷಮತ್ತ್ವಮಾತ್ರೇಣ ವಿನಾಶಿತ್ವಮ್, ತಾದೃಶಾನಾಮೇವ ನಿತ್ಯತ್ವಶ್ರುತಿವಿರೋಧಾತ್ ॥ ೧೫ ॥**

**ಭಾವಾರ್ಥ**—ಉತ್ಪತ್ತಿಯಿದೆ ಎಂಬ ಕಾರಣದಿಂದ ಜೀವನಿಗೆ ನಾಶವನ್ನು ಹೇಳುವುದು ಸರಿಯಲ್ಲ. ಜೀವನಿಗೆ ನಾಶವನ್ನು ಒಪ್ಪಿದರೆ ಅವನಿಗೆ ಅಭಿಲಷಿತವಾದ ಮೋಕ್ಷವೇ ಸಿದ್ಧಿಯಾಗದಿರಬೇಕಾಗುತ್ತದೆ. ಜೀವನಿಗಿರುವ ಉತ್ಪತ್ತಿಯೆಂದರೆ ಪರಾಧೀನವಿಶೇಷವಾಪ್ತಿ. ಕೇವಲ ಅಷ್ಟರಿಂದ ನಾಶವನ್ನು ಹೇಳಬಾರದು. ಹಾಗೆ ಹೇಳಿದರೆ ಪರಾಧೀನ ವಿಶೇಷಾವಾಪ್ತಿರೂಪದಿಂದ ಉತ್ಪತ್ತಿವುಳ್ಳ ಆಕಾಶಾದಿಗಳಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳ ವಿರೋಧವು ಬರುತ್ತದೆ.

**ವಿವರಣೆ**— ಜೀವನನ್ನು ಅನಿತ್ಯನೆಂದರೆ ಅವನಿಗೆ ಇಷ್ಟವಾದ ಮೋಕ್ಷವು ಸಿದ್ಧಿಯಾಗಲಾರದು. ಆದ್ದರಿಂದ ಜೀವನು ನಿತ್ಯನೇ ಆಗಿದ್ದಾನೆ. ಹಾಗಾದರೆ ಉತ್ಪತ್ತಿಯುಳ್ಳ ಘಟಾದಿಗಳೂ ನಿತ್ಯವಾಗಲಿ ಎಂದು ಕೇಳಬಾರದು. ಅವುಗಳಲ್ಲಿ ಸ್ವರೂಪತಃ ಉತ್ಪತ್ತಿಯಿದೆ. ಜೀವನಿಗಾದರೂ ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿ. ಹೀಗೆ ವ್ಯತ್ಯಾಸವಿದೆ. ಯಾವುದಾದರೂ ಒಂದುರೀತಿಯ ಉತ್ಪತ್ತಿಯಿರುವುದರಿಂದ ಅನಿತ್ಯನಾಗಲಿ ಎಂದರೆ ಹಾಗೆ ಹೇಳಬಾರದು. ಹಾಗಾದರೆ ಪರಾಧೀನವಿಶೇಷಾವಾಪ್ತಿರೂಪಉತ್ಪತ್ತಿ ಯಿದ್ದರೂ ಆಕಾಶಾದಿಗಳಿಗೆ ನಿತ್ಯತ್ವವನ್ನು ಹೇಳುವ ಶ್ರುತಿಗಳಿವೆ. ಅವುಗಳ ವಿರೋಧವು ಬರುವುದರಿದ ಜೀವನು ನಿತ್ಯನೇ ಆಗಿದ್ದಾನೆ. ಆದ್ದರಿಂದ ಎಲ್ಲ ಆಗಮಗಳು ಪ್ರಮಾಣವಾಗಿವೆ. ಅವುಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದು.

**ಸೂತ್ರಾರ್ಥ—**

**ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ಓಂ ॥**

ಜೀವನೂ ಜೀವಸ್ವರೂಪಭೂತವಾದ ಉಪಾಧಿಯೂ ಯಾವದಾತ್ಮ ಭಾವಿತ್ವಾತ್=ಪರಮಾತ್ಮ ಇರುವ ಕಾಲವೂ ಇರುವುದರಿಂದ ನ ದೋಷಃ=ಅನಾದಿ ಪುಣ್ಯಾಪಾಪ ಸಂಬಂಧಬೋಧಕವಾದ ಶ್ರುತಿಗೆ ಅಪ್ರಾಮಾಣ್ಯವಿಲ್ಲ. ಏಕೆಂದರೆ ತದ್ದರ್ಶನಾಚ್ಚ=ಶ್ರುತಿಸ್ಮೃತಿಗಳು ಜೀವನಿಗೆ ನಿತ್ಯತ್ವವನ್ನು ತಿಳಿಸುವುದರಿಂದ.

## ಪುಂಸ್ತ್ವಾಧಿಕರಣ (2-3-16)

ಓಂ ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಅಧಿಕರಣಕ್ಕೆ ಜೀವನು ವಿಷಯ. 'ಸ ಆನಂದಃ ಸ ಬಲಃ' ಮುಂತಾದ ಶ್ರುತಿಯು ಜೀವನನ್ನು ಆನಂದರೂಪವೆನ್ನುತ್ತಿದೆ. 'ಸ ದುಃಖಾದ್ ವಿಮುಕ್ತ ಆನಂದೀ ಭವತಿ' ಎಂಬ ಶ್ರುತಿಯು ಆನಂದರೂಪನಲ್ಲವೆನ್ನುತ್ತಿದೆ. ಹೀಗೆ ವಿರುದ್ಧವಾದ ಶ್ರುತಿಗಳಿರುವುದರಿಂದ ಜೀವನು ಆನಂದರೂಪನೋ? ಅಲ್ಲವೋ? ಎಂಬುದು ಸಂಶಯ.

**ಪೂರ್ವಪಕ್ಷ—**ಜೀವನು ಜ್ಞಾನಾನಂದಾದಿರೂಪನಲ್ಲ. 'ಸ ದುಃಖಾದ್ ವಿಮುಕ್ತ ಆನಂದೀ ಭವತಿ' (ಜೀವನು ದುಃಖದಿಂದ ಬಿಡುಗಡೆ ಹೊಂದಿ ಆನಂದವುಳ್ಳವನಾಗುತ್ತಾನೆ) ಎಂದು ಶ್ರುತಿಯು ಆನಂದರೂಪನಲ್ಲ ಎಂದು ತಿಳಿಸುತ್ತಿದೆ. ಜೀವನು ಆನಂದಾದಿರೂಪನಾಗಿದ್ದಲ್ಲಿ, ಉಪಲಬ್ಧಿಯೋಗ್ಯತಾ ಇರುವುದರಿಂದ ಆನಂದವು ಈಗಲೂ ಉಪಲಬ್ಧವಾಗಬೇಕಿತ್ತು. ಆದರೆ ಉಪಲಬ್ಧವಾಗುತ್ತಿಲ್ಲ. ಆದ್ದರಿಂದ ಅವನು ಆನಂದಾದಿಸ್ವರೂಪನಾಗಲು ಸಾಧ್ಯವಿಲ್ಲ. ಆದ್ದರಿಂದ ಜೀವನನ್ನು ಆನಂದಸ್ವರೂಪನೆಂದು ಹೇಳುವ ಶ್ರುತಿಗಳು ಅಪ್ರಮಾಣವಾಗುತ್ತವೆ. ಅದರ ದೃಷ್ಟಾಂತದಿಂದ ಎಲ್ಲ ಶ್ರುತಿಗಳೂ ಅಪ್ರಮಾಣವಾಗುವುದರಿಂದ ಶ್ರುತಿಗಳಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ ಎಂಬ ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸ್ವಗುಣಾನುಭೂತಿಃ' (ಸಂಸಾರದಲ್ಲಿ

ತನ್ನ ಆನಂದಾದಿ ಗುಣಗಳ ಅನುಭವ ಬಾರದಿರುವುದು) ಎಂಬುದು ಇದನ್ನು ಹಾಗೆಯೇ 'ಸುವ್ಯಕ್ತಿ' (ಮೋಕ್ಷದಲ್ಲಿ ಆನಂದಾದಿಗಳ ಅಭಿವ್ಯಕ್ತಿ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಸ್ವಗುಣಾನನುಭೂತ್ಯನುಪಪತ್ತೇಃ ಪೂರ್ವಂ ಜ್ಞಾನಾದೀನಾಂ ಸಾಮಸ್ತ್ಯೇನಾಭಾವಃ । ಪೂರ್ವಮವ್ಯಕ್ತಾನಾಂ ಪಶ್ಚಾತ್ ಸುವ್ಯಕ್ತ್ಯುಪಪತ್ತೇಃ ॥ ೧೬ ॥**

**ಭಾವಾರ್ಥ**—ಜೀವನಿಗೆ ಸ್ವರೂಪಭೂತಜ್ಞಾನಾನಂದಾದಿಗುಣಗಳು ಇದ್ದಿದ್ದರೆ ಅನುಭವಕ್ಕೆ ಬಾರದಿರುವುದು ಕೂಡುತ್ತಿರಲಿಲ್ಲ (ಅನುಭವಕ್ಕೆ ಬರಬೇಕಿತ್ತು) ಎಂಬ ಯುಕ್ತಿಯಿಂದ ಅವನಿಗೆ ಯಾವ ಗುಣಗಳೂ ಇಲ್ಲ ಎಂದು ಸಿದ್ಧವಾಗುತ್ತದೆ ಎಂಬುದು ಸರಿಯಲ್ಲ. ಮೊದಲು ಅಭಿವ್ಯಕ್ತವಾಗದ ಗುಣಗಳು (ಪ್ರತಿಬಂಧಕ ನಿವೃತ್ತಿಯಾದಮೇಲೆ) ಅಭಿವ್ಯಕ್ತವಾಗುತ್ತವೆ ಎಂದು ಕೂಡಿಸಬಹುದಾಗಿದೆ.

**ವಿವರಣೆ**—ಮೋಕ್ಷಕಾಲದಲ್ಲಿ ಆನಂದಾದಿಗಳು ಅಭಿವ್ಯಕ್ತನಾಗುವುದರಿಂದ ಜೀವನು 'ವಿಜ್ಞಾನಾತ್ಮಾ' (ಜೀವನು ಜ್ಞಾನಸ್ವರೂಪನಾದವನು) ಎಂದು ಹೇಳುವಂತೆ ಜ್ಞಾನಸ್ವರೂಪನೇ ಆಗಿದ್ದಾನೆ. ಹಾಗಾದರೆ ಸಂಸಾರದಲ್ಲಿ ಯಾಕೆ ಅಭಿವ್ಯಕ್ತವಾಗುವುದಿಲ್ಲ? ಎಂದರೆ ಸಂಸಾರದಲ್ಲಿ ಭಾವರೂಪವಾದ ಅಜ್ಞಾನ ಆವರಣ (ತಡೆ) ಇರುವುದರಿಂದ. ಮೋಕ್ಷದಲ್ಲಿ ಅಂತಹ ಆವರಣವು ಭಗವಂತನ ಅನುಗ್ರಹದಿಂದ ನಾಶವಾಗುತ್ತದೆ. ಇದನ್ನೇ 'ದುಃಖಾದ್ ವಿಮುಕ್ತ ಆನಂದೀ ಭವತಿ' ಎಂಬ ಶ್ರುತಿಯು 'ಮೋಕ್ಷದಲ್ಲಿ ಆನಂದವು ಬರುತ್ತದೆ' ಎಂದು ಹೇಳುತ್ತಿರುವುದು. ಮೊದಲು ಇಲ್ಲದ ಆನಂದವು ಬರುತ್ತದೆ ಎಂದು ಅದರರ್ಥವಲ್ಲ. ಜೀವಸ್ವರೂಪದಲ್ಲಿ ಇದ್ದ ಆನಂದವು ಅಭಿವ್ಯಕ್ತವಾಗುತ್ತದೆ. ಸಂತತಿ ಜನಕಜಶಕ್ತಿಯು ಮೊದಲೇ ಇದ್ದರೂ ಅದರ ಅಭಿವ್ಯಕ್ತಿಯು ತಾರಣ್ಯದಲ್ಲಿಯೇ ಆಗುವುದು. ಆವಾಗ 'ಇವನು ಪುರುಷನಾಗಿದ್ದಾನೆ' ಎಂದು ವ್ಯವಹರಿಸುವಂತೆ. ಕತ್ತಲಲ್ಲಿದ್ದ ಘಟ ಬೆಳಕು ಬಿದ್ದು ಕತ್ತಲು ನಾಶವಾದಾಗ ಅಭಿವ್ಯಕ್ತವಾಗುವಂತೆ ಮೋಕ್ಷದಲ್ಲಿ ಆ ಸ್ವರೂಪಭೂತವಾದ ಆನಂದವು ಅಭಿವ್ಯಕ್ತವಾಗುತ್ತದೆ. ಆದ್ದರಿಂದ 'ಜೀವನು ಆನಂದಸ್ವರೂಪ'ನೆಂದು ಹೇಳುವ ಶ್ರುತಿಗೆ ಅಪ್ರಾಮಾಣ್ಯವಿಲ್ಲದಿರುವುದರಿಂದ ಶ್ರುತಿಗಳಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಪುಂಸ್ತ್ವಾದಿವತ್ ತಸ್ಯ ಸತೋಽಭಿವ್ಯಕ್ತಿಯೋಗಾತ್ ಓಂ**

ಸತಃ ತು=ಜೀವನಿಗೆ ಮೊದಲೇ ಇರುವ ಅಸ್ಯ=ಜ್ಞಾನಾಂದಾದಿಗಳಿಗೆ ಪುಂಸ್ತ್ವಾದಿವತ್=ಪುರುಷತ್ವ ಸ್ತ್ರೀತ್ವಗಳಂತೆ ಅಭಿವ್ಯಕ್ತಿಯೋಗಾತ್=ಅಭಿವ್ಯಕ್ತಿಯಾಗುವುದರಿಂದ 'ಆನಂದೀಭವತಿ' ಮೊದಲಾದ ಶ್ರುತಿಗಳು ಉಪಪನ್ನವಾಗುತ್ತವೆ.

## ಕರ್ತೃತ್ವಾಧಿಕರಣ (2-3-17)

ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಜೀವನೇ ವಿಷಯ. 'ನಾನ್ಯಃ ಕರ್ತಾ' ಎಂಬ ಶ್ರುತಿಯು ಈಶ್ವರನಿಗೇ ಕರ್ತೃತ್ವವನ್ನು ಹೇಳುತ್ತಿದೆ. 'ಯತ್ ಕರ್ಮ ಕುರುತೇ ತದಭಿಸಂಪದ್ಯತೇ' ಎಂಬ ಶ್ರುತಿಯು ಜೀವನಿಗೆ ಕರ್ತೃತ್ವವನ್ನು ಹೇಳುತ್ತಿದೆ. ಹೀಗೆ ವಿರುದ್ಧವಾದ ಶ್ರುತಿಗಳಿರುವುದರಿಂದ ಜೀವನಿಗೆ ಕರ್ತೃತ್ವವಿದೆಯೋ? ಇಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ–** 'ನಾನ್ಯಃ ಕರ್ತಾ' ಎಂಬ ಶ್ರುತಿಯು ಈಶ್ವರನಿಗೇ ಕರ್ತೃತ್ವವನ್ನು ಹೇಳುತ್ತಿರುವುದರಿಂದ ಜೀವನಿಗೆ ಕರ್ತೃತ್ವವಿಲ್ಲ. 'ಯತ್ ಕರ್ಮ ಕುರುತೇ ತದಭಿಸಂಪದ್ಯತೇ' (ಜೀವನು ಯಾವ ರೀತಿಯ ಕರ್ಮವನ್ನು ಮಾಡುತ್ತಾನೋ ಆರೀತಿ ಫಲವನ್ನು ಪಡೆಯುತ್ತಾನೆ) ಎಂದು ಶ್ರುತಿಯು ಜೀವನಿಗೆ ಕರ್ತೃತ್ವವನ್ನು ಹೇಳುತ್ತಿದ್ದರೂ 'ಇತರವ್ಯಪದೇಶಾಧಿಕರಣ' ಹಿತಕರಣಾದಿದೋಷಪ್ರಸಕ್ತಿಯನ್ನು ಹೇಳಿದ್ದರಿಂದ ಬಾಧಿತವಾಗುತ್ತದೆ. ಮತ್ತು ಈಶ್ವರನೊಬ್ಬನನ್ನೇ ಕರ್ತೃ ಎಂದು ಅಂಗೀಕರಿಸಿದರೆ ಕಲ್ಪನಾಲಾಘವವಿದೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವಾದ್ದರಿಂದ ಉಳಿದ ಶ್ರುತಿಗಳೂ ಅಪ್ರಮಾಣವಾಗುತ್ತವೆ. ಅವುಗಳಿಂದ ಪರಮಾತ್ಮನಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅಕಲ್ಪನ'** (ಕಲ್ಪನಾ ಲಾಘವ)

ಎಂಬುದು. ಇದನ್ನು ಮತ್ತು 'ಶಾಸ್ತ್ರಸಿದ್ಧಿ' (ಶಾಸ್ತ್ರಕ್ಕೆ ಸಾರ್ಥಕ್ಯವು ಸಿದ್ಧವಾಗುವುದು) ಎಂಬ ಸಿದ್ಧಾಂತಸಾಧಕಯುಕ್ತಿಯನ್ನು ವಿವರಿಸುತ್ತಿದ್ದಾರೆ-

**ನ ಚೇಶ್ವರಸ್ಯೈವ ಕರ್ತೃತ್ವೇ ಕಲ್ಪನಾಲಾಘವಮ್ । ಜೀವಸ್ಯಾಕರ್ತೃತ್ವೇ ಶಾಸ್ತ್ರವೈಯರ್ಥ್ಯಾತ್ । ತಸ್ಯಾಪಿ ಕರ್ತೃತ್ವೇ ಶಾಸ್ತ್ರಾರ್ಥಸಿದ್ಧೇಶ್ಚ ॥ ೧೭ ॥**

**ಭಾವಾರ್ಥ**—ಈಶ್ವರನೊಬ್ಬನಿಗೆ ಕರ್ತೃತ್ವವನ್ನು ಅಂಗೀಕರಿಸಿದರೆ ಕಲ್ಪನಾ ಲಾಘವವಿದೆ. ಆದ್ದರಿಂದ ಜೀವನಿಗೆ ಕರ್ತೃತ್ವವಿಲ್ಲ ಎಂದು ಆಕ್ಷೇಪಿಸಬಾರದು. ಜೀವನಿಗೆ ಕರ್ತೃತ್ವವಿಲ್ಲವೆಂದರೆ ಕರ್ತೃವನ್ನು ವಿಧಾನಮಾಡುವ ವಾಕ್ಯವು ವ್ಯರ್ಥ ವಾಗುತ್ತದೆ. ಜೀವನಿಗೂ ಕರ್ತೃತ್ವವನ್ನಂಗೀಕರಿಸಿದರೆ ಶಾಸ್ತ್ರವು ಸಾರ್ಥಕವಾಗುತ್ತದೆ.

**ವಿವರಣೆ**— ಶಾಸ್ತ್ರವು 'ಅಹರಹಃ ಸಂಧ್ಯಾ ಮುಪಾಸೀತ' (ಹೊತ್ತು ಹೊತ್ತಿಗೆ ಸಂಧ್ಯಾವಂದನೆಯನ್ನು ಮಾಡಬೇಕು) 'ಮಾ ಹಿಂಸ್ಯಾತ್ ಸರ್ವಾ ಭೂತಾನಿ' (ಪ್ರಾಣಿಗಳನ್ನು ಹಿಂಸೆ ಮಾಡಬೇಡ) ಎಂಬುದಾಗಿ ವಿಧಿ-ನಿಷೇಧವನ್ನು ಹೇಳುತ್ತದೆ. ಈ ವಿಧಿನಿಷೇಧಗಳು ಪರಮಾತ್ಮನಿಗೂ ಮುಕ್ತಾತ್ಮನಿಗೂ ಅಲ್ಲ. ಅವರಿಬ್ಬರೂ ವಿಧಿ ನಿಷೇಧ ಬಾಹಿರರಾಗಿದ್ದಾರೆ. ಜಡವಸ್ತುವಿಗೂ ಅಲ್ಲ. ಕ್ರಿಯಾಶಕ್ತಿಯೇ ಇಲ್ಲದಿರುವುದರಿಂದ. ಒಂದುವೇಳೆ ಜೀವರೂ ಜಡಗಳಂತೆ ಶಕ್ತಿಹೀನರಾದರೆ ಶಾಸ್ತ್ರದಲ್ಲಿ ಅವುಗಳನ್ನು ಹೇಳಿದ್ದೇ ವ್ಯರ್ಥವೆಂದಾಗುವುದು. ಶಾಸ್ತ್ರಕ್ಕೆ ಸಾರ್ಥಕ್ಯವನ್ನು ಕೂಡಿಸುವುದಕ್ಕಾಗಿಯಾದರೂ ಜೀವನಿಗೆ ಕರ್ತೃತ್ವವನ್ನು ಹೇಳಲೇಬೇಕು. 'ನಾನ್ಯಃ ಕರ್ತಾ' ಎಂಬ ಶ್ರುತಿಯು ಪರಮಾತ್ಮನಿಗೆ ಸ್ವತಂತ್ರ ಕರ್ತೃತ್ವವನ್ನು ಹೇಳುತ್ತಿದೆ. ಜೀವನಿಗೆ ಕರ್ತೃತ್ವವನ್ನು ನಿಷೇಧಿಸುತ್ತಿಲ್ಲವಾದ್ದರಿಂದ ಎಲ್ಲ ವೇದಗಳೂ ಪ್ರಮಾಣ. ಅವುಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳಲು ಯಾವ ಬಾಧಕವೂ ಇಲ್ಲ.

**ಸೂತ್ರಾರ್ಥ**—

**ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ ॥**

ಕರ್ತಾ=ಜೀವನೂ ಕರ್ತೃವಾಗಿದ್ದಾನೆ. ಶಾಸ್ತ್ರಾರ್ಥವತ್ತ್ವಾತ್=ವಿಧಿ-ನಿಷೇಧ ರೂಪವಾದ ಶಾಸ್ತ್ರವು ಸಾರ್ಥಕವಾಗುವುದರಿಂದ.

# ಅಂಶಾಧಿಕರಣ (2-3-18)

ಓಂ ಅಂಶೋ ಈ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮ-ಧೀಯತೇ ಚೈಕೇ ಓಂ ಎಂಬ ಸೂತ್ರದಿಂದ ಆರಂಭವಾಗುವ ಅಧಿಕರಣದಲ್ಲಿ ಜೀವನು ವಿಷಯ. 'ಅಂಶಾ ಏವ ಹೀಮೇ ಜೀವಾಃ' ಎಂಬ ಶ್ರುತಿಯು ಜೀವನು ಈಶ್ವರನ ಅಂಶನೆಂದು ಹೇಳುತ್ತಿದೆ. 'ನೈವಾಂಶೋ ಸ ಸಂಬಂಧಃ' ಎಂಬ ಶ್ರುತಿಯು ಅಂಶನಲ್ಲವೆಂದೂ ಹೇಳುತ್ತಿದೆ. ಹೀಗೆ ವಿರುದ್ಧವಾದ ಶ್ರುತಿಗಳಿರುವುದರಿಂದ ಜೀವನು ಈಶ್ವರನ ಅಂಶನೋ? ಅಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ**—'ಅಂಶಾ ಹೀಮೇ ಜೀವಾಃ ಪರಸ್ಯ' (ಈ ಜೀವರೆಲ್ಲರೂ ಈಶ್ವರನ ಅಂಶರಾಗಿದ್ದಾರೆ) ಹೀಗೊಂದು ಶ್ರುತಿ. 'ನೈವಾಂಶೋ ನ ಸಂಬಂಧೋ ನಾಪೇಕ್ಷ್ಯಃ' (ಜೀವನು ಪರಮಾತ್ಮನ ಅಂಶನೇ ಅಲ್ಲ. ಅವನೊಂದಿಗೆ ಯಾವ ಸಂಬಂಧವೂ ಇಲ್ಲ. ಸೃಷ್ಟ್ಯಾದಿಗಳನ್ನು ಮಾಡಲು ಪರಮಾತ್ಮನಿಗೆ ಜೀವರ ಅಗತ್ಯವೇನೂ ಇಲ್ಲ) ಈರೀತಿ ಮತ್ತೊಂದು ಶ್ರುತಿ. 'ಬ್ರಹ್ಮ ದಾಶಾಃ ಬ್ರಹ್ಮ ಕಿತವಾಃ ಬ್ರಹ್ಮೈವೇಮೇ ದಾಸಾಃ' (ಅಂಬಿಗರು ಬ್ರಹ್ಮರೂಪರು, ಜೂಜುಕೋರರು ಬ್ರಹ್ಮರೂಪರು. ಈ ಪರಿಚಾರಕರೆಲ್ಲರೂ ಬ್ರಹ್ಮರೂಪರು) ಇದು ಬೇರೊಂದು ಶ್ರುತಿ. ಹೀಗೆ ಶ್ರುತಿಗಳು (ಅಂಶರು, ಅಂಶರಲ್ಲ, ಅಭಿನ್ನರು ಎಂದು ವಿಧವಿಧವಾಗಿ ಹೇಳುವುದರಿಂದ) ಅಪ್ರಮಾಣವಾಗಿವೆ. ಅವುಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧಿಸುವುದಿಲ್ಲವೆಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ನಾನಾಶ್ರುತಿಃ' (ಬಗೆ ಬಗೆಯ ಶ್ರುತಿಗಳಿರುವುದು) ಎಂಬುದು. ಇದನ್ನು ಮತ್ತು 'ವಿಪರ್ಯಯಃ' (ವೇದಗಳಿಗೆ ಅಪ್ರಾಮಾಣ್ಯ ಹೇಳುವುದು ಭ್ರಾಂತಿಯಾಗಿದೆ) ಎಂಬ ಸಿದ್ಧಾಂತ ಸಾಧಕಯುಕ್ತಿ ಯನ್ನೂ ವಿವರಿಸುತ್ತಿದ್ದಾರೆ—

**ನ ಚ ನಾನಾಶ್ರುತೇರಪ್ರಾಮಾಣ್ಯಮ್ । ದೃಷ್ಟಭೇದಾನುಸಾರೇಣ ತಾಸಾಮರ್ಥೋಽಪಪತ್ತೇಃ । ಅಪ್ರಾಮಾಣ್ಯಕಲ್ಪನಸ್ಯ ವಿಪರೀತಜ್ಞಾನ-ಮೂಲತ್ವಾತ್ ॥ ೧೮ ॥**

**ಭಾವಾರ್ಥ**—ನಾನಾವಿಧವಾದ ವೇದಗಳಿರುವುದರಿಂದ ಅವುಗಳಿಗೆ ಅಪ್ರಾಮಾಣ್ಯವು ಬರುತ್ತದೆ ಎಂದು ಶಂಕಿಸಬಾರದು. ಪ್ರತ್ಯಕ್ಷಸಿದ್ಧವಾದ ಭೇದವನ್ನು ಅನುಸರಿಸಿ ಆ ವೇದಗಳಿಗೆ ಅರ್ಥವನ್ನು ಮಾಡುತ್ತೇವೆ. ವೇದಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಪೂರ್ವಪಕ್ಷಿಯ ಭ್ರಾಂತಿ ಮೂಲಕವಾಗಿದೆ.

**ವಿವರಣೆ**— ವೇದಗಳಿಗೆ ಯಾವುದೇ ರೀತಿಯ ವಿರೋಧಬಾರದಂತೆ ಅರ್ಥವನ್ನು ಮಾಡಬಹುದಾಗಿದೆ. ಹೇಗೆಂದರೆ 'ಮಾಂ ರಕ್ಷತು ವಿಭುರ್ನಿತ್ಯಂ ಪುತ್ರೋಽಹಂ ಪರಮಾತ್ಮನಃ' (ಆ ಸಮರ್ಥನಾದ ಪರಮಾತ್ಮನು ನನ್ನ ರಕ್ಷಿಸಲಿ. ನಾನು ಅವನ ಮಗನಾಗಿದ್ದೇನೆ) ಎಂಬಿವೇ ಮೊದಲಾದ ಶ್ರುತಿಗಳು ಪುತ್ರತ್ವವೇ ಮೊದಲಾದ ಅನೇಕ ಈಶ್ವರನ ಸಂಬಂಧಗಳನ್ನು ಜೀವನಿಗೆ ಹೇಳುತ್ತಿವೆ. ಆ ಸಂಬಂಧವೇ ಅಂಶವಾದ್ದರಿಂದ ಜೀವನು ಈಶ್ವರನ ಅಂಶನು. ಅಂಶ ಶಬ್ದಕ್ಕೆ 'ತದಧೀನತ್ವೇ ಸತಿ ತಸ್ಯ ಕಿಂಚಿತ್‌ಸದೃಶತ್ವಂ' ಎಂದು (ಜೀವನು ಪರಮಾತ್ಮನ ಅಧೀನನಾಗಿದ್ದಾನೆ. ಹಾಗೂ ಅವನ ಅಲ್ಪ ಹೋಲಿಕೆಯನ್ನು ಹೊಂದಿದ್ದಾನೆ.) 'ಅಂಬಿಗರು ಜೂಜುಗೋರರು ಬ್ರಹ್ಮರೂಪರಾಗಿದ್ದಾರೆ' ಎಂದರೆ ಮತ್ಸ್ಯಕೂರ್ಮಾದಿಗಳಂತೆ ಸ್ವರೂಪತಃ ಅಭಿನ್ನರಾಗಿದ್ದಾರೆ ಎಂದರ್ಥವಲ್ಲ. ಇಲ್ಲಿ ಭೇದವು ಪ್ರತ್ಯಕ್ಷ ಸಿದ್ಧವಾಗಿದೆ. ಆದರೂ 'ಬ್ರಹ್ಮರೂಪರು' ಎಂದು ಹೇಳಿದರೆ ಅದಕ್ಕೆ 'ಬ್ರಹ್ಮಸದೃಶರು' ಎಂದು ಅರ್ಥವನ್ನು ಮಾಡಬೇಕು. ಆದ್ದರಿಂದ ವೇದಗಳಿಗೆ ಅಪ್ರಾಮಾಣ್ಯವಿಲ್ಲ. ವೇದಗಳಿಂದ ವಿಷ್ಣುವಿನ ಜಗತ್ಕರ್ತೃತ್ವದ ಸಿದ್ಧಿಗೂ ಬಾಧಕವಿಲ್ಲ.

**ಸೂತ್ರಾರ್ಥ**—

## ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತೇ ಏಕೇ ಓಂ

ನಾನಾವ್ಯಪದೇಶಾತ್=ಶ್ರುತಿಯಲ್ಲಿ ಜೀವನಿಗೆ ಭಗವಂತನ ಅನೇಕ ರೀತಿಯ ಸಂಬಂಧಗಳನ್ನು ಹೇಳಿರುವುದರಿಂದ ಅನ್ಯಥಾ ಚ ವ್ಯಪದೇಶಾತ್=ಸಂಬಂಧ ವಿಲ್ಲವೆಂದೂ ಹೇಳಿದ್ದರಿಂದ ಅಷ್ಟೇ ಅಲ್ಲದೇ ಏಕೇ=ಕೆಲವು ಶಾಖಿಗಳು ದಾಶಕಿತವಾದಿತ್ವಂ=ಬ್ರಹ್ಮನಿಂದ ಜೀವನಿಗೆ ಅಭೇದವನ್ನು ಅಧೀಯತೇ= ಹೇಳುವರು. ಆದ್ದರಿಂದ ಜ್ಞಃ=ಜೀವನು ಪರಸ್ಯ=ಪರಮಾತ್ಮನ ಅಂಶಃ=ಅಂಶನು.

# ಅದೃಷ್ಟಾಧಿಕರಣ (2-3-19)

ಓಂ ಅದೃಷ್ಟಾನಿಯಮಾತ್ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿ ಜೀವನು ವಿಷಯ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯು ಜೀವನನ್ನು ಪ್ರತಿಬಿಂಬವೆನ್ನುತ್ತಿದೆ. 'ನೈವಾಂಶೋ ನ ಸಂಬಂಧಃ' ಎಂಬ ಶ್ರುತಿಯು ಪ್ರತಿಬಿಂಬನಲ್ಲವೆನ್ನುತ್ತಿದೆ. ಆದರಿಂದ ಜೀವನು 'ಈಶ್ವರನ ಪ್ರತಿಬಿಂಬನೋ? ಅಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ನೈವಾಂಶೋ ನ ಸಂಬಂಧಃ' ಎಂಬ ಶ್ರುತಿಯು ಬಿಂಬಪ್ರತಿಬಿಂಬ ಭಾವವನ್ನು ನಿಷೇಧಿಸುತ್ತಿರುವುದರಿಂದ ಜೀವನು ಪ್ರತಿಬಿಂಬನಲ್ಲ. ಜೀವರಲ್ಲಿ ದೇವತೆಗಳು ದಾನವರು, ಮನುಷ್ಯರು ಎಂಬ ಪ್ರಭೇದಗಳಿವೆ. ಒಂದುವೇಳೆ ಇವರೆಲ್ಲರೂ ಒಬ್ಬ ಈಶ್ವರನ ಪ್ರತಿಬಿಂಬರಾಗಿದ್ದರೆ ಅವರಲ್ಲಿ ಈ ವೈಚಿತ್ರವೇ ಕೂಡುತ್ತಿರಲಿಲ್ಲವಾದ್ದರಿಂದ ಜೀವನು ಪ್ರತಿಬಿಂಬವೆಂದು ಹೇಳುವ ಶ್ರುತಿಯು ಅಪ್ರಮಾಣವಾಗುತ್ತದೆ. ಅದರ ದೃಷ್ಟಾಂತದಿಂದ ಎಲ್ಲ ಶ್ರುತಿಗಳೂ ಅಪ್ರಮಾಣವಾಗುತ್ತವೆ. ಶ್ರುತಿಗಳಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧಿಯಾಗ ದಿರಲಿ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವೈಚಿತ್ರ್ಯ' (ಜೀವರಲ್ಲಿ ವೈವಿಧ್ಯವಿರುವುದು) ಎಂಬುದು. ಇದನ್ನು ಮತ್ತು 'ವಿಶೇಷಕಾರಣ' (ಅದೃಷ್ಟವೆಂಬ ವಿಶೇಷಕಾರಣ) ಎಂಬ ಸಿದ್ಧಾಂತಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ವೈಚಿತ್ರ್ಯಮನಾಭಾಸತ್ವೇ ಕಾರಣಮ್ । ಜೀವಾನಾಂ ಸಾಮಾನ್ಯತ ಅಭಾಸತ್ವೇಽಪಿ ವಿಶೇಷಾದೃಷ್ಟಾದ್ವೈಚಿತ್ರ್ಯೋಪಪತ್ತೇಃ ॥ ೧೯ ॥**

**ಭಾವಾರ್ಥ**—ಜೀವರಲ್ಲಿ ದೇವ, ದಾನವ, ಮಾನವ ಎಂಬ ವೈವಿಧ್ಯವು ಅವರು ಈಶ್ವರನ ಪ್ರತಿಬಿಂಬರಲ್ಲ ಎಂಬುದಕ್ಕೆ ಕಾರಣವಾಗುತ್ತದೆ ಎಂದು ಆಕ್ಷೇಪಿಸಬಾರದು. (ಜೀವಾನಾಂ ಸಾಮಾನ್ಯತಃ=ಜೀವತ್ವೇನ ರೂಪೇಣ) ಜೀವರೆಲ್ಲರೂ ಪರಮಾತ್ಮನ ಪ್ರತಿಬಿಂಬರೇ ಆಗಿದ್ದರೂ ಅನಾದಿಯಾದ ಅವಿದ್ಯೆ, ಕರ್ಮಗಳೆಂಬ ವಿಶೇಷದಿಂದ ವೈವಿಧ್ಯವನ್ನು ಕೂಡಿಸಬಹುದಾಗಿದೆ.

**ವಿವರಣೆ—** ಜೀವರೆಲ್ಲರೂ ಪರಮಾತ್ಮನ ಪ್ರತಿಬಿಂಬರೇ ಆಗಿದ್ದಾರೆ. ಹಾಗಿದ್ದರೇ ಈ ವೈವಿಧ್ಯವು ಹೇಗೆ? ಎಂದರೆ ಅವರವರ ಅನಾದಿಯಾದ ಅವಿದ್ಯೆ ಕರ್ಮಗಳೇ ಈ ವೈವಿಧ್ಯಕ್ಕೆ ಕಾರಣ. ಒಂದೇ ಸೂರ್ಯನ ಪ್ರತಿಬಿಂಬ ಸೂರ್ಯಕಾಂತಮಣಿಯಲ್ಲಿ ಮೂಡಿದಾಗ ದಾಹಕವಾಗಿದೆ. ನೀರಿನಲ್ಲಿ ಮೂಡಿದಾಗ ದಾಹಕವಾಗುವುದಿಲ್ಲ ಹೇಗೋ ಅದರಂತೆ. ಆದ್ದರಿಂದ ಜೀವನನ್ನು ಪ್ರತಿಬಿಂಬರೆಂದು ಹೇಳುವ ಶ್ರುತಿಗಳು ಪ್ರಮಾಣಗಳಾಗಿವೆ. ಆ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳಬಹುದು.

**ಸೂತ್ರಾರ್ಥ—**

## ಓಂ ಅದೃಷ್ಟಾನಿಯಮಾತ್ ಓಂ ॥

ಅದೃಷ್ಟಾನಿಯಮಾತ್=ವಿದ್ಯಾ ಕರ್ಮ ಸಂಸ್ಕಾರಗಳ ವೈವಿಧ್ಯದಿಂದ ದೇವ, ದಾನ, ಮಾನವ ಎಂಬ ವೈಚಿತ್ರ್ಯವು ಯುಕ್ತವಾಗುತ್ತದೆ.

**ಇಲ್ಲಿಗೆ ದ್ವಿತೀಯಾಧ್ಯಾಯದ ತೃತೀಯಪಾದವು ಮುಗಿಯಿತು.**

# ದ್ವಿತೀಯಾಧ್ಯಾಯ ಚತುರ್ಥಪಾದ

ಹಿಂದಿನ ಪಾದದಲ್ಲಿ ಪರಸ್ಪರ ಶ್ರುತಿಗಳ ವಿರೋಧವನ್ನು ಪರಿಹರಿಸಿ ಯುಕ್ತಿಸಹಿತವಾದ ಶ್ರುತಿಗಳ ವಿರೋಧವನ್ನು ಪರಿಹರಿಸುತ್ತಿದ್ದಾರೆ. ಈ ಪಾದದ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ—

ತತ್ರ ಸ್ಪಷ್ಟಾರ್ಥವಚ್ಛ್ರುತಿಃ ।
ವಿಶೇಷಶ್ರುತಿವೈರೂಪ್ಯಂ ಮಾಹಾತ್ಮ್ಯಂ ವ್ಯಕ್ತಸದ್ಗುಣಃ ।
ದೃಷ್ಟಾನ್ಯಯುಕ್ತಿಃ ಸಮಾನತ್ವಂ ಕರ್ತೃಶಕ್ತಿರ್ವಿಮಿಶ್ರಿತಾ ।
ಯುಕ್ತಯಃ ಪೂರ್ವಪಕ್ಷಸ್ಯ ಸುನಿರ್ಣೀತಾಸ್ತು ತಾದೃಶಾಃ ॥
ಯುಕ್ತಯೋ ನಿರ್ಣಯಸ್ಯೈವ ಸ್ವಯಂ ಭಗವತೋದಿತಾಃ ॥

ಸ್ಪಷ್ಟಾರ್ಥವುಳ್ಳ ಶ್ರುತಿಯು, ವಿಶೇಷ ಶ್ರುತಿಯ ವೈರೂಪ್ಯ, ಮಹಾತ್ಮವು, ವ್ಯಕ್ತವಾದ ಸದ್ಗುಣವು, ದೃಷ್ಟಾಯುಕ್ತಿಯು, ಸಮಾನತ್ವವು, ಕರ್ತೃಶಕ್ತಿಯು, ವಿಮಿಶ್ರಿತತ್ವ, ಇವೆಲ್ಲವೂ ಪೂರ್ವಪಕ್ಷ ಯುಕ್ತಿಗಳು. ಚೆನ್ನಾಗಿ ನಿರ್ಣಯಗಳಾದ ಇವೇ ಯುಕ್ತಿಗಳೇ ಸಿದ್ಧಾಂತಯುಕ್ತಿಗಳೂ ಆಗುತ್ತವೆ ಎಂದು ವೇದವ್ಯಾಸರಿಂದಲೇ ಹೇಳಲ್ಪಟ್ಟಿವೆ.

## ಪ್ರಾಣಾಧಿಕರಣ (2-4-1)

ಓಂ ತಥಾ ಪ್ರಾಣಾಃ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣಕ್ಕೆ ಇಂದ್ರಿಗಳು ವಿಷಯ. 'ಪ್ರಾಣಾ ಏವಾನಾದಯಃ' ಎಂಬ ಶ್ರುತಿಯು ಇಂದ್ರಿಯಗಳಿಗೆ ಉತ್ಪತ್ತಿಯಿಲ್ಲ ಎಂದು ತಿಳಿಸುತ್ತಿದೆ. 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ಶ್ರುತಿಯು ಇಂದ್ರಿಯಗಳಿಗೆ ಉತ್ಪತ್ತಿಯಿದೆ ಎಂದು ಪ್ರತಿಪಾದಿಸುತ್ತಿದೆ. ಹೀಗೆ ಎರಡು ವಿರುದ್ಧವಾದ ಶ್ರುತಿಗಳಿಂದ ಇಂದ್ರಿಯಗಳಿಗೆ ಉತ್ಪತ್ತಿಯಿದೆಯೋ? ಇಲ್ಲವೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ**— 'ಪ್ರಾಣಾ ಏವಾನಾದಯಃ' (ಇಂದ್ರಿಯಗಳು ಉತ್ಪತ್ತಿ ರಹಿತವಾದವುಗಳು) 'ಪ್ರಾಣಾ ವೇದಮಗ್ರ ಆಸುಸ್ತೇಭ್ಯೋ ಭೂತಾನಿ ಜಜ್ಞಿರೇ' (ಸೃಷ್ಟಿಯಲ್ಲಿ ಆದಿಯಲ್ಲಿ ಇಂದ್ರಿಯಗಳಷ್ಟೇ ಇದ್ದವು. ಅವುಗಳಿಂದಲೇ

ಪಂಚಭೂತಗಳು ಹುಟ್ಟಿದವು) ಎಂದಿವೇ ಮುಂತಾದ ಶ್ರುತಿಗಳು ಉತ್ಪತ್ತಿಯಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿವೆ. ಇನ್ನು 'ಏತಸ್ಮಾಜ್ಜಾಯತೇ ಪ್ರಾಣಃ' ಎಂಬ ಶ್ರುತಿಯು ಉತ್ಪತ್ತಿಯನ್ನು ಹೇಳುತ್ತಿದ್ದರೂ ಅದು ಪ್ರಾದುರ್ಭಾವವನ್ನು ಹೇಳುತ್ತದೆ ಎಂದು ಅರ್ಥವನ್ನು ಮಾಡಬಹುದು. ಆದ್ದರಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗಳು ಅಪ್ರಮಾಣವಾಗುವುದರಿಂದ ಅದರ ದೃಷ್ಟಾಂತದಿಂದ ಎಲ್ಲ ಶ್ರುತಿಗಳೂ ಅಪ್ರಮಾಣವಾಗುತ್ತವೆ. ಅಂತಹ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸ್ಪಷ್ಟಾರ್ಥವತ್‌ಶ್ರುತಿ' (ಇಂದ್ರಿಯಗಳನ್ನು ಅನಾದಿ ಎಂದು ಸ್ಪಷ್ಟವಾಗಿ ಹೇಳುವ ಶ್ರುತಿ) ಎಂಬುದು. ಆ ಯುಕ್ತಿಯನ್ನೇ 'ಪರಮಾತ್ಮನಿಂದ ಉತ್ಪತ್ತಿಯನ್ನು ಹೇಳುವ ಸ್ಪಷ್ಟವಾದ ಶ್ರುತಿ' ಎಂಬರ್ಥವನ್ನಿಟ್ಟುಕೊಂಡು ಸಿದ್ಧಾಂತಪ್ರತಿಪಾದಕ ವನ್ನಾಗಿ ಸಮರ್ಥಿಸುತ್ತಿದ್ದಾರೆ—

**॥ ಹರಿಃ ಓಂ ॥ ನ ಚ ಪ್ರಾಣಾನಾಮುತ್ಪತ್ತ್ಯಂಗೀಕಾರೇ, 'ಪ್ರಾಣಾ ಏವಾನಾದಯಃ' ಇತ್ಯಾದಿ ಸ್ಪಷ್ಟಾರ್ಥವದ್ವಿಶೇಷಶ್ರುತಿವಿರೋಧಃ । 'ಆತ್ಮೈವೇದಮಗ್ರ ಆಸೀತ್ ಸ ಪ್ರಾಣಮಸೃಜತ, ಸ ಪ್ರಾಣಾನ್' ಇತ್ಯಾದಿವಚನಾದನಾದಿತ್ವ ಏವ ಸ್ಪಷ್ಟಾರ್ಥವದ್ವಿಶೇಷಶ್ರುತಿವಿರೋಧಾತ್ । 'ಇದಂ ಸರ್ವಮಸೃಜತ' ಇತಿ ಸಾಮಾನ್ಯವಚನಸ್ಯಾಧಿಕ್ಯಂ ಸಿದ್ಧಾಂತೇ । ವಿಶೇಷಮಾತ್ರಶ್ರುತೇಃ ಸಾವಕಾಶಾಯಾ ಉಭಯಶ್ರುತೇಃ ಪ್ರಾಬಲ್ಯಾತ್ ॥೧॥**

**ಭಾವಾರ್ಥ**—ಇಂದ್ರಿಯಗಳಿಗೆ ಉತ್ಪತ್ತಿಯನ್ನು ಅಂಗೀಕರಿಸಿದರೆ 'ಪ್ರಾಣಗಳು ಅನಾದಿಗಳು' ಎಂದು ಹೇಳುವ ಶ್ರುತಿಯ ವಿರೋಧವು ಬರುತ್ತದೆ. ಆದ್ದರಿಂದ ಇಂದ್ರಿಯಗಳಿಗೆ ಉತ್ಪತ್ತಿಯನ್ನು ಒಪ್ಪಬಾರದು ಎಂಬ ಪೂರ್ವಪಕ್ಷವು ಸರಿಯಲ್ಲ. 'ಸೃಷ್ಟಿಯ ಪ್ರಾರಂಭದಲ್ಲಿ ಆತ್ಮನೊಬ್ಬನೇ ಇದ್ದ. ಅವನು ಇಂದ್ರಿಯವನ್ನು ಸೃಷ್ಟಿಸಿದ' ಎಂದು ಸ್ಪಷ್ಟವಾಗಿ ಶ್ರುತಿಯು ಹೇಳುವುದರಿಂದ ಇಂದ್ರಿಯಗಳಿಗೆ ಉತ್ಪತ್ತಿಯಿಲ್ಲ ಎಂದು ಅಂಗೀಕರಿಸಿದರೇನೇ ವಿರೋಧವು

ಬರುತ್ತದೆ. 'ಪರಮಾತ್ಮನು ಎಲ್ಲ ಪ್ರಪಂಚವನ್ನು ಸೃಷ್ಟಿಸಿದ' ಎಂದು ಹೇಳುವ ಸಾಮಾನ್ಯಶ್ರುತಿಯೂ ಸಿದ್ಧಾಂತದಲ್ಲಿ ಅಧಿಕವಾದ ಪ್ರಮಾಣವಾಗುತ್ತದೆ. ಪೂರ್ವಪಕ್ಷಿಯು ಉದಾಹರಿಸಿದ ಕೇವಲ ವಿಶೇಷಶ್ರುತಿಗಿಂತ ಸಿದ್ಧಾಂತಿಯು ಈ ಉಭಯಶ್ರುತಿಗಳು ಪ್ರಬಲವಾಗುತ್ತವೆ.

**ವಿವರಣೆ**—ಅದು 'ಆತ್ಮೈವೇದಮಗ್ರ ಆಸೀತ್, ಸ ಪ್ರಾಣಮಸೃಜತ, ಸ ಪ್ರಾಣಾನ್' ಎಂಬುದು. ಪೂರ್ವಪಕ್ಷಿಯೂ ಸ್ಪಷ್ಟವಾದ ಶ್ರುತಿಯನ್ನೇ ಹೇಳಿದ್ದರಿಂದ ನಿರ್ಣಯ ಹೇಗೆ? ಎಂದರೆ 'ಸ ಇದಂ ಸರ್ವಮಸೃಜತ' ಎಂಬ ಸಾಮಾನ್ಯ ಶ್ರುತಿಯೂ ಇರುವುದರಿಂದ. ಹೀಗೆ ವಿಶೇಷಶ್ರುತಿ, ಸಾಮಾನ್ಯಶ್ರುತಿಗಳೆರಡೂ ಇರುವುದರಿಂದ ಇಂದ್ರಿಯಗಳಿಗೆ ಉತ್ಪತ್ತಿ ಇದೆ ಎಂದೇ ಸಿದ್ಧಾಂತ.

ಹಾಗಾದರೆ ಇಂದ್ರಿಯಗಳು ಅನಾದಿಗಳೆಂದು ಹೇಳುವ ಶ್ರುತಿಗಳಿಗೆ ಏನರ್ಥ? ಎಂದರೆ ಎಲ್ಲ ಇಂದ್ರಿಯ ಸೃಷ್ಟಿಯ ಆದಿಯಲ್ಲಿ ಸೂಕ್ಷ್ಮರೂಪದಿಂದಿದ್ದು ಅನಾದಿ ಎನಿಸಿವೆ. ಅಂತಹ ಇಂದ್ರಿಯಗಳಿಗೆ ಪಂಚಭೂತಗಳಿಂದ ಉಪಚಯ ಉಂಟಾಗುತ್ತದೆ ಎಂದು ಶ್ರುತಿಗೆ ಅರ್ಥವನ್ನು ಹೇಳಬಹುದಾಗಿದೆ.

**ಸೂತ್ರಾರ್ಥ**—

**ಓಂ ತಥಾ ಪ್ರಾಣಾಃ ಓಂ ||**

ತಥಾ=ಆಕಾಶಾದಿಗಳು ಹೇಗೆ ವಿಷ್ಣುವಿನಿಂದ ಉತ್ಪತ್ತಿಯನ್ನು ಹೊಂದಿವೆಯೋ ಅದರಂತೆ ಪ್ರಾಣಾಃ=ಇಂದ್ರಿಯಗಳೂ ಉತ್ಪತ್ತಿಯನ್ನು ಹೊಂದಿವೆ.

## ಮನೋಧಿಕರಣ (2-4-2)

ಓಂ ತತ್ಪ್ರಾಕ್ ಶ್ರುತೇಶ್ಚ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಮನಸ್ಸು ವಿಷಯ. 'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯು ಮನಸ್ಸಿಗೆ ಉತ್ಪತ್ತಿಯನ್ನು ತಿಳಿಸುತ್ತಿದೆ. 'ನಿತ್ಯಂ ಮನೋಽನಾದಿತ್ವಾತ್' ಎಂಬ ಶ್ರುತಿಯು ಮನಸ್ಸು ನಿತ್ಯವೆನ್ನುತ್ತದೆ. ಹೀಗೆ ಎರಡು ಪರಸ್ಪರ ವಿರುದ್ಧವಾದ ಶ್ರುತಿಗಳಿಂದ ಮನಸ್ಸಿಗೆ ಉತ್ಪತ್ತಿ ಇದೆಯೋ? ಇಲ್ಲವೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ—** ಮನಸ್ಸಿಗೆ ಉತ್ಪತ್ತಿಯಿಲ್ಲ ಎಂಬುದು ಪೂರ್ವಪಕ್ಷ. ವಸ್ತುತಃ ಹಿಂದಿನ ಅಧಿಕರಣದಲ್ಲಿ ಇಂದ್ರಿಯಗಳಿಗೆ ಉತ್ಪತ್ತಿಯಿಲ್ಲ ಎಂದು ನಿರ್ಣಯಿಸ ಲಾಗಿದೆ. ಆದರೆ ಅದು ಮನಸ್ಸಿಗೆ ಸಂಬಂಧಪಟ್ಟಿಲ್ಲ. ಏಕೆಂದರೆ 'ದ್ವಿಧಾ ಹ್ಯೇವೇಂದ್ರಿಯಾಣಿ ನಿತ್ಯಾನಿ ಚಾನಿತ್ಯಾನಿ ಚ । ತತ್ರ ನಿತ್ಯಂ ಮನೋಽನಾದಿತ್ವಾನ್ನ ಹ್ಯಮನಾಃ ಪುಮಾಂಸ್ತಿಷ್ಠತ್ಯನಿತ್ಯಾನ್ಯನ್ಯಾನಿ' (ಇಂದ್ರಿಯಗಳು ಎರಡು ವಿಧವಾಗಿವೆ. ನಿತ್ಯ ಅನಿತ್ಯವೆಂದು. ಅವುಗಳಲ್ಲಿ ಮನಸ್ಸು ಅನಾದಿಯಾದ್ದರಿಂದ ನಿತ್ಯ. ಯಾವ ಮನುಷ್ಯನೂ ಮನಸ್ಸಿಲ್ಲದೆ ಇರಲಾರ. ಉಳಿದ ಇಂದ್ರಿಯಗಳು ಅನಿತ್ಯವಾಗಿವೆ) ಎಂಬ ವಿಶೇಷಶ್ರುತಿಯು ಉಳಿದ ಇಂದ್ರಿಯಗಳನ್ನು ಅನಿತ್ಯವೆಂದೂ ಮನಸ್ಸನ್ನು ನಿತ್ಯವೆಂದು ಹೇಳುತ್ತಿದೆ. ಇದರ ವಿರೋಧ ಬರುವುದರಿಂದ ಮನಸ್ಸು ಅನಾದಿಯಾಗಿದೆ. ಆದ್ದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಸಿದ್ಧಿಯಾಗುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶೇಷಶ್ರುತಿವೈರೂಪ್ಯ' (ವೈರೂಪ್ಯ=ವಿರೋಧ) 'ಮನಸ್ಸಿಗೆ ಉತ್ಪತ್ತಿಯಿದೆ ಎಂದು ಒಪ್ಪಿದರೆ ಅನಾದಿ ಯೆಂದು ಹೇಳುವ ವಿಶೇಷ ಶ್ರುತಿಯ ವಿರೋಧವು ಬರುತ್ತದೆ' ಎಂಬುದು. ಇದನ್ನೇ 'ಮನಸ್ಸನ್ನು ಅನಾದಿಯೆಂದು ಒಪ್ಪಿದರೆ 'ಏತಸ್ಮಾತ್ ಜಾಯತೇ ಪ್ರಾಣಃ' ಎಂಬ ಶ್ರುತಿಯ ವಿರೋಧವು ಬರುತ್ತದೆ' ಎಂಬ ಅರ್ಥದಲ್ಲಿ ಸಿದ್ಧಾಂತಸಾಧಕವನ್ನಾಗಿಯೂ ವಿವರಿಸುತ್ತಿದ್ದಾರೆ—

**ನ ಚ ''ನಿತ್ಯಂ ಮನೋಽನಾದಿತ್ವಾತ್'' ಇತಿ ವಿಶೇಷಶ್ರುತಿವಿರೋಧಃ । 'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' ಇತಿ ವಿಶೇಷಶ್ರುತೇಃ ॥ ೨ ॥**

**ಭಾವಾರ್ಥ—** ಮನಸ್ಸಿಗೆ ಉತ್ಪತ್ತಿಯನ್ನು ಒಪ್ಪಿದರೆ 'ನಿತ್ಯಂ ಮನೋಽನಾದಿತ್ವಾತ್' ಎಂಬ ವಿಶೇಷಶ್ರುತಿಯ ವಿರೋಧವು ಬರುತ್ತದೆ ಎಂದು ಹೇಳಬಾರದು. ಏಕೆಂದರೆ, 'ಈ ಪರಮಾತ್ಮನಿಂದಲೆ ಪ್ರಾಣನು, ಮನಸ್ಸು ಮತ್ತು ಎಲ್ಲ ಇಂದ್ರಿಯಗಳೂ ಹುಟ್ಟುತ್ತವೆ' ಎಂದೂ ವಿಶೇಷ ಶ್ರುತಿಯಿದೆ.

ವಿವರಣೆ : ಮನಸ್ಸನ್ನು ಅನಾದಿ ಎಂದು ಅಂಗೀಕರಿಸಿದರೆ 'ಏತಸ್ಮಾಜ್ಜಾಯತೇ

ಪ್ರಾಣೋ...' ಎಂಬ ವಿಶೇಷ ಶ್ರುತಿಯ ವಿರೋಧವು ಬರುವುದರಿಂದ ಮನಸ್ಸಿಗೆ ಉತ್ಪತ್ತಿಯಿದೆ ಎಂಬುದೇ ಸಿದ್ಧಾಂತ. ಹಾಗಾದರೆ ಮನಸ್ಸನ್ನು ಅನಾದಿ ಎಂದು ಪ್ರತಿಪಾದಿಸುವ ಶ್ರುತಿಯ ವಿರೋಧವು ಬರುತ್ತದಲ್ಲವೇ? ಎಂದರೆ, ಬೇರೆ ಇಂದ್ರಿಯಗಳಿಗೆ ಅಹಂಕಾರತತ್ವದಿಂದ ಉಪಚಯವಿದ್ದಷ್ಟು ಮನಸ್ಸಿಗೆ ಉಪಚಯವಿಲ್ಲ. ಅಲ್ಪವಾದ ಉಪಚಯವಿದೆ ಎಂಬ ಕಾರಣದಿಂದ ಉತ್ಪತ್ತಿಯಿಲ್ಲ ಅನಾದಿಯೆಂದು ಹೇಳಲಾಗಿದೆ. ಆದ್ದರಿಂದ ಅದು ಸಾವಕಾಶ. ಮನಸ್ಸಿಗೂ ಉತ್ಪತ್ತಿಯಿರುವುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವು ಕೂಡುತ್ತದೆ.

**ಸೂತ್ರಾರ್ಥ—**

**ಓಂ ತತ್ಪ್ರಾಕ್ಶ್ರುತೇಶ್ಚ ಓಂ ॥**

ತತ್ಪ್ರಾಕ್=ಇಂದ್ರಿಯಗಳಿಗೂ ಮೊದಲೇ ಮನಸ್ಸು ಪರಮಾತ್ಮನಿಂದ ಹುಟ್ಟಿದೆ. ಶ್ರುತೇಃ='ಮನಃ ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿ ಇರುವುದರಿಂದ.

## ವಾಗಧಿಕರಣ (2-4-3)

ಓಂ ತತ್ಪೂರ್ವಕತ್ವಾದ್ ವಾಚಃ ಓಂ ಎಂಬ ಸೂತ್ರದಿಂದ ಪ್ರಾರಂಭವಾಗಿರುವ ಈ ಅಧಿಕರಣದಲ್ಲಿ ವಾಗಿಂದ್ರಿಯವು ವಿಷಯ. 'ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯು ಎಲ್ಲ ಇಂದ್ರಿಯಗಳಿಗೂ ಉತ್ಪತ್ತಿಯನ್ನು ಹೇಳುತ್ತಿದೆ. 'ವಾಗ್ ವಾವ ನಿತ್ಯಾ ನ ಹ್ಯೇಷೋತ್ಪದ್ಯತೇ' ಎಂಬ ಶ್ರುತಿಯು ವಾಗಿಂದ್ರಿಯವು ನಿತ್ಯವೆನ್ನುತ್ತಿದೆ. ಹೀಗ ಶ್ರುತಿಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ವಾಗಿಂದ್ರಿಯವು ನಿತ್ಯವೋ? ಅನಿತ್ಯವೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ—**'ವಾಗ್ ವಾವ ನಿತ್ಯಾ' (ವಾಗಿಂದ್ರಿಯವು ನಿತ್ಯವೇ ಆಗಿದೆ) ಎಂಬ ಶ್ರುತಿಯಿರುವುದರಿಂದ ವಾಗಿಂದ್ರಿಯವು ನಿತ್ಯ. ಈ ಶ್ರುತಿಯಲ್ಲಿನ ವಾಕ್‌ಶಬ್ದಕ್ಕೆ ವೇದವೆಂದು ಅರ್ಥವನ್ನು ಮಾಡಬಾರದು. 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ವಾಕ್‌ನಲ್ಲಿ ಶ್ರುತಿಯಿದೆ ಎಂದು ಹೇಳುತ್ತಿದೆ. ಶ್ರುತಿಯಲ್ಲಿ ಶ್ರುತಿ ಇರಲು ಸಾಧ್ಯವಿಲ್ಲ. ನಿತ್ಯವಾದ ಶ್ರುತಿಗೆ ಆಶ್ರಯವಾದ ವಾಗಿಂದ್ರಿಯವೂ

ನಿತ್ಯವಾಗಿರಲೇಬೇಕು. ವಾಗಿಂದ್ರಿಯವು ನಿತ್ಯವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶೇಷ ಶ್ರುತಿವೈರೂಪ್ಯಂ' (ವಾಗಿಂದ್ರಿಯವನ್ನು ನಿತ್ಯವೆಂದು ಹೇಳುವ ವಿಶೇಷ ಶ್ರುತಿಯ ವಿರೋಧ) ಎಂಬುದು. ಇದನ್ನೇ 'ವಿಶೇಷ ಶ್ರುತಿಯ ವಿರೋಧವಿರುವುದರಿಂದ ವಾಗಿಂದ್ರಿಯಕ್ಕೆ ಉತ್ಪತ್ತಿ ಇದೆ' ಎಂಬರ್ಥದಲ್ಲಿ ಸಿದ್ಧಾಂತಸಾಧಕ ನ್ಯಾಯವನ್ನಾಗಿ ವಿವರಿಸುತ್ತಿದ್ದಾರೆ–

**ನ ಚ 'ವಾಗ್ವಾವ ನಿತ್ಯಾ' ಇತಿ ವಿಶೇಷಶ್ರುತಿವಿರೋಧಃ, 'ಮನಸೋ ವಾವ ವಾಗುತ್ಪದ್ಯತೇ, ವಾಚೋ ವ್ಯಾಹರಣಮ್' ಇತಿ ವಿಶೇಷಶ್ರುತೇಃ ॥ ೩ ॥**

**ಭಾವಾರ್ಥ—**ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಅಂಗೀಕರಿಸಿದರೆ 'ವಾಗ್ವಾವ ನಿತ್ಯಾ' ಎಂಬ ವಿಶೇಷಶ್ರುತಿಯ ವಿರೋಧವು ಬರುತ್ತದೆ. ಆದ್ದರಿಂದ ವಾಗಿಂದ್ರಿಯ ನಿತ್ಯವೆಂದು ಒಪ್ಪಬೇಕು ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ 'ಮನಸ್ಸಿನಿಂದಲೇ ವಾಗಿಂದ್ರಿಯವು ಹುಟ್ಟುತ್ತದೆ. ವಾಗಿಂದ್ರಿಯದಿಂದ ವ್ಯವಹಾರವು ಉಂಟಾಗುತ್ತದೆ' ಎಂಬ ವಿಶೇಷ ಶ್ರುತಿಯ ವಿರೋಧವು ಬರುತ್ತದೆ.

**ವಿವರಣೆ—**'ಮನಸೋ ವಾವ ವಾಗುತ್ಪದ್ಯತೇ' ಎಂಬ ವಿಶೇಷ ಶ್ರುತಿಯ ವಿರೋಧವಿರುವುದರಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನೇ ಒಪ್ಪಬೇಕು ಎಂಬುದು ಸಿದ್ಧಾಂತ. 'ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ' ಎಂಬ ಶ್ರುತಿಯಿರುವುದರಿಂದ ಪರಮಾತ್ಮನೇ ವಾಗಿಂದ್ರಿಯಕ್ಕೆ ಮುಖ್ಯಕಾರಣ. ಮನಸ್ಸು ಅವಾಂತರಣವೆಂದು ತಿಳಿಯಬೇಕು. ಹಾಗಿದ್ದಲ್ಲಿ ವಾಗಿಂದ್ರಿಯವು ಅನಾದಿ ಎಂದು ಹೇಳುವ ಶ್ರುತಿಯ ವಿರೋಧವು ಬರುತ್ತದೆಯಲ್ಲ? ಎಂದರೆ, ನಿತ್ಯವಾದ ವೇದವನ್ನು ಉಚ್ಚರಿಸಲು ಯೋಗ್ಯತೆ ವಾಗಿಂದ್ರಿಯಕ್ಕೆ ನಿತ್ಯವಾಗಿಯೂ ಇದೆ ಎಂಬ ಅಭಿಪ್ರಾಯದಿಂದ ನಿತ್ಯತ್ವವನ್ನು ಹೇಳಿದ್ದು. ವಾಗಿಂದ್ರಿಯಕ್ಕೂ ಉತ್ಪತ್ತಿಯಿರುವುದರಿಂದ ವಿಷ್ಣುವಿಗೆ ಸರ್ವಕರ್ತೃತ್ವವಿದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ತತ್ಪೂರ್ವಕತ್ವಾದ್ ವಾಚಃ ಓಂ ॥**

ವಾಚಃ=ವಾಗಿಂದ್ರಿಯಕ್ಕೆ ತತ್ಪೂರ್ವಕತ್ವಾದ್='ಮನಸೋ ವಾವ ವಾಗುತ್ಪದ್ಯತೇ' ಮನಸ್ಸು ಕಾರಣವೆಂದು ಶ್ರುತವಾಗಿರುವುದರಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯಿದೆ.

## ಸಪ್ತಗತ್ಯಧಿಕರಣ (2-4-4)

ಓಂ ಸಪ್ತ ಗತೇರ್ವಿಶೇಷತತ್ವಾತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣಕ್ಕೆ ಇಂದ್ರಿಯಗಳು ವಿಷಯ. 'ಸಪ್ತಪ್ರಾಣಾಃ ಪ್ರಭವಂತಿ' (ಏಳು ಇಂದ್ರಿಯಗಳು ಈಶ್ವರನಿಂದ ಹುಟ್ಟುತ್ತವೆ) ಶ್ರುತಿಯು ಇಂದ್ರಿಯಗಳು ಏಳು ಎನ್ನುತ್ತಿದೆ. 'ದಶೇಮೇ ಪುರುಷಾಃ ಪ್ರಾಣಾಃ ಆತ್ಮೈಕಾದಶಃ' (ಪುರುಷನಲ್ಲಿ ಈ ಹತ್ತು ಇಂದ್ರಿಯಗಳಿವೆ. ಆತ್ಮನು ಹನ್ನೊಂದನೆಯವನು) ಎಂಬುದಾಗಿ ಮತ್ತೊಂದು ಶ್ರುತಿ ಹೇಳುತ್ತಿದೆ. ಹೀಗೆ ಪರಸ್ಪರ ವಿರುದ್ಧವಾದ ಶ್ರುತಿಗಳಿಂದ ಇಂದ್ರಿಯಗಳು ಏಳೋ? ಹತ್ತೋ? ಎಂಬುದು ಸಂದೇಹ.

**ಪೂರ್ವಪಕ್ಷ**—ಒಂದು ಶ್ರುತಿಯು ಇಂದ್ರಿಯಗಳನ್ನು ಏಳು ಎಂದು ಪ್ರತಿಪಾದಿಸಿದೆ. ಮತ್ತೊಂದು ಶ್ರುತಿಯು ಇಂದ್ರಿಯಗಳು ಹತ್ತು ಎಂದು ಹೇಳುತ್ತಿದೆ. ಎರಡೂ ಶ್ರುತಿಗಳು ಸಮಬಲವುಳ್ಳವುಗಳಾದ್ದರಿಂದ ಯಾವುದೊಂದಕ್ಕೂ ಪ್ರಾಬಲ್ಯವನ್ನು ಹೇಳಲು ಬರುವುದಿಲ್ಲ. ಎರಡೂ ಶ್ರುತಿಗಳು ಅಪ್ರಮಾಣವಾಗುತ್ತವೆ. ಇವುಗಳಂತೆ ಸಕಲ ಶ್ರುತಿಗಳೂ ಅಪ್ರಮಾಣವಾಗುವುದರಿಂದ ಶ್ರೀಹರಿಗೆ ಜಗತ್ಕರ್ತೃತ್ವವನ್ನು ಒಪ್ಪಲು ಸಾಧ್ಯವಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶೇಷಶ್ರುತಿವೈರೂಪ್ಯ' (ಸಂಖ್ಯಾ ವಿಶೇಷವನ್ನು ಹೇಳುವ ಎಂಬುದು ಶ್ರುತಿಗಳಲ್ಲಿ ಪರಸ್ಪರ ವಿರೋಧವಿರುವುದು) ಇದನ್ನೇ 'ಸಂಖ್ಯೆಯನ್ನು ಪ್ರತಿಪಾದಿಸುವ ಶ್ರುತಿಗಳಲ್ಲಿ ಭಿನ್ನವಿಷಯಕತ್ವವಿದೆ ಎಂಬರ್ಥದಲ್ಲಿ ಸಿದ್ಧಾಂತಯುಕ್ತಿಯನ್ನಾಗಿ ವಿವರಿಸುತ್ತಿದ್ದಾರೆ—

**ನ ಚ 'ದಶೇಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ' 'ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್' ಇತಿ ಸಂಖ್ಯಾವಿಶೇಷಶ್ರುತ್ಯೋರೇವ ಪರಸ್ಪರ ವಿರೋಧಃ। ''ಗುಹಾಶಯಾಂ ನಿಹಿತಾಃ ಸಪ್ತಸಪ್ತ'' ಇತಿ ಸಪ್ತಭಾವಸ್ಯ**

## ಬುದ್ಧೀಂದ್ರಿಯವಿಷಯತ್ವೇನ ವಿಶೇಷಿತತ್ವಾತ್ ಸಂಖ್ಯಾಶ್ರುತ್ಯೋರ್ವಿಷಯ- ವೈಲಕ್ಷಣ್ಯಾತ್ ॥ ೪ ॥

**ಭಾವಾರ್ಥ**—'ಪುರುಷನಲ್ಲಿ ಹತ್ತು ಇಂದ್ರಿಯಗಳಿವೆ. ಆತ್ಮನು ಹನ್ನೊಂದನೆಯವನು', 'ಪರಮಾತ್ಮನಿಂದ ಏಳು ಇಂದ್ರಿಯಗಳು ಹುಟ್ಟುತ್ತವೆ' ಎಂದು ಇಂದ್ರಿಯಗಳ ಸಂಖ್ಯಾವಿಶೇಷವನ್ನು ಹೇಳುವ ಶ್ರುತಿಗಳಲ್ಲಿ ಪರಸ್ಪರ ವಿರೋಧವಿರುವುದರಿಂದ ಶ್ರುತಿಗಳು ಅಪ್ರಮಾಣವೆಂದು ಆಕ್ಷೇಪಿಸಬಾರದು. ಏಕೆಂದರೆ 'ಗುಹಾಶಯಾಂ ನಿಹಿತಾಃ ಸಪ್ತಸಪ್ತ' (ಹೃದಯದಲ್ಲಿ ಜ್ಞಾನಕ್ಕಾಗಿ ಏಳು ಇಂದ್ರಿಯಗಳು ಇಡಲ್ಪಟ್ಟಿವೆ) ಎಂಬುದಾಗಿ ಏಳು ಎಂಬ ಸಂಖ್ಯೆಯು ಜ್ಞಾನೇಂದ್ರಿಯಗಳ ಬಗ್ಗೆ ಇರುವುದರಿಂದ ಸಂಖ್ಯೆಯನ್ನು ಹೇಳುವ ಶ್ರುತಿಗಳಿಗೆ ಪ್ರತಿಪಾದ್ಯವಿಷಯವು ಬೇರೆ ಬೇರೆ ಇರುವುದರಿಂದ ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲ.

**ವಿವರಣೆ**—ಐದು ಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳು ಒಟ್ಟಿಗೆ ಹತ್ತು ಇಂದ್ರಿಯಗಳು ಎಂಬುದೇ ಸಿದ್ಧಾಂತ. ಹಾಗಾದರೆ ಇಂದ್ರಿಯಗಳು ಏಳು ಎಂದು ಹೇಳಿದ್ದು ಯಾವ ಅಭಿಪ್ರಾಯದಿಂದ? ಎಂದರೆ ಜ್ಞಾನೇಂದ್ರಿಯಗಳ ವಿವಕ್ಷೆಯಿಂದ. ಹೇಗೆಂದರೆ (ಗುಹಾ=ಹೃದಯಂ ಆಶಯಃಸ್ಥಾನಂ ಯಸ್ಯಾಃ ಬುದ್ಧೇಃ ಸಾ ಎಂಬ ವ್ಯುತ್ಪತ್ತಿಯಿಂದ) ಗುಹಾಶಯಾ ಎಂದರೆ ಬುದ್ಧಿ. ಅದನ್ನು ಉದ್ದೇಶಿಸಿಕೊಂಡು ಪ್ರತಿಯೊಬ್ಬ ಪುರುಷನ ಹೃದಯದಲ್ಲಿಯೂ ಶ್ರೋತ್ರ, ಚಕ್ಷು, ಸ್ಪರ್ಶ, ರಸನ, ಘ್ರಾಣ, ಮನಸ್ಸು, ಬುದ್ಧಿ ಎಂಬ ಏಳು ಇಂದ್ರಿಯಗಳು ಪರಮಾತ್ಮನಿಂದ ಇಡಲ್ಪಟ್ಟಿವೆ' ಎಂಬುದಾಗಿ ಶ್ರುತ್ಯರ್ಥವಾಗುವುದರಿಂದ ಇಂದ್ರಿಯಗಳನ್ನು ಏಳು ಎಂದು ಹೇಳಿದ್ದೂ ಸರಿ.

'ಸಪ್ತ ಪ್ರಾಣಾಃ ಪ್ರಭವಂತಿ' ಎಂಬ ಶ್ರುತಿಯಲ್ಲಿ ಜ್ಞಾನೇಂದ್ರಿಯಗಳನ್ನು ಮಾತ್ರ ಪರಿಗಣಿಸಿ ಕರ್ಮೇಂದ್ರಿಯಗಳನ್ನು ಪರಿಗಣಿಸದಿರುವುದಕ್ಕೆ ಕಾರಣವಾದರೂ ಏನು? ಎಂದರೆ, ಕರ್ಮೇಂದ್ರಿಯಗಳು ಸಂಸಾರಕ್ಕೆ ಕಾರಣಗಳಾಗಿವೆ. ಜ್ಞಾನೇಂದ್ರಿಯಗಳು ಸಂಸಾರಬಂಧನದ ಬಿಡುಗಡೆಗೆ ಕಾರಣವಾದ್ದರಿಂದ ಅವುಗಳನ್ನು ಮಾತ್ರ ಪರಿಗಣಿಸಲಾಗಿದೆ.

**ಸೂತ್ರಾರ್ಥ—**

**ಓಂ ಸಪ್ತ ಗತೇರ್ವಿಶೇಷಿತತ್ವಾಚ್ಚ ಓಂ ॥**

ಗತೇಃ=ಜ್ಞಾನ ಜನಕವಾದ ಇಂದ್ರಿಯಗಳು ಸಪ್ತ=ಏಳು. ಏಕೆಂದರೆ ವಿಶೇಷಿತತ್ವಾತ್='ಗುಹಾಶಯಾಂ ನಿಹಿತಾಃ ಸಪ್ತ' ಎಂಬಲ್ಲಿ 'ಸಪ್ತ' ಎಂಬ ವಿಶೇಷಣ ವನ್ನು ಕೊಟ್ಟದ್ದರಿಂದ, ಚ='ಸಪ್ತ ಪ್ರಾಣಾಸ್ತ್ವವಗತೇಃ' ಎಂಬ ಪ್ರಮಾಣವೂ ಇರುವುದರಿಂದ.

## ಅಣ್ವಧಿಕರಣ (2-4-5)

ಓಂ ಅಣವಶ್ಚ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಇಂದ್ರಿಯಗಳು ವಿಷಯ. 'ದಿವೀವ ಚಕ್ಷುರಾತತಮ್' (ಚಕ್ಷುರಿಂದ್ರಿಯವು ವ್ಯಾಪ್ತವಾದರೂ ಅದೃಶ್ಯವಾದಂತೆ ವಿಷ್ಣುವೂ ಕೂಡ) ಎಂಬ ಶ್ರುತಿಯು ಇಂದ್ರಿಯಗಳು ವ್ಯಾಪ್ತವೆನ್ನುತ್ತಿದೆ. 'ಪ್ರಾಣಾ ವಾ ಅಣವಃ' ಎಂಬ ಶ್ರುತಿಯು ಇಂದ್ರಿಯಗಳನ್ನು ಅಣುವೆಂದು ಹೇಳುತ್ತಿದೆ. ಈ ರೀತಿಯಿಂದ ಎರಡು ಶ್ರುತಿ ಗಳಿಂದ ಇಂದ್ರಿಯಗಳು ವ್ಯಾಪ್ತವೋ? ಅಣುಗಳೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ—**'ದಿವೀವ ಚಕ್ಷುರಾತತಮ್' ಎಂಬ ಶ್ರುತಿಯು ಇಂದ್ರಿಯ ಗಳಿಗೆ ವ್ಯಾಪ್ತತ್ವವನ್ನು ತಿಳಿಸುತ್ತಿದೆ. ದೂರದಲ್ಲಿ ವಸ್ತುವನ್ನು ಕಾಣುತ್ತಿದ್ದೇವೆ. ದೂರದಲ್ಲಿರುವ ಶಬ್ದವನ್ನು ಕೇಳುತ್ತಿದ್ದೇವೆ. ಎಂದಮೇಲೆ ಇಂದ್ರಿಯಗಳು ವ್ಯಾಪ್ತವಾಗಿರಲೇಬೇಕು ಎಂಬ ಯುಕ್ತಿಯೂ ಇದಕ್ಕೆ ಪೋಷಕವಾಗಿದೆ. ಆದ್ದರಿಂದ ಇಂದ್ರಿಯಗಳನ್ನು ಅಣುವೆಂದು ಹೇಳುವ ಶ್ರುತಿಯು ಅಪ್ರಮಾಣವಾಗಿದೆ. ಅದರ ದೃಷ್ಟಾಂತದಿಂದ ಎಲ್ಲ ಶ್ರುತಿಗಳೂ ಅಪ್ರಮಾಣವಾದ್ದರಿಂದ ಶ್ರುತಿಯಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶೇಷಶ್ರುತಿವೈರೂಪ್ಯ' (ವ್ಯಾಪ್ತವೆಂದು ಹೇಳುವ ವಿಶೇಷಶ್ರುತಿಯ ವಿರೋಧ) ಎಂಬುದು. ಈ ನ್ಯಾಯವನ್ನೇ 'ಅಣುತ್ವವನ್ನು ಪ್ರತಿಪಾದಿಸುವ ಶ್ರುತಿಯ ವಿರೋಧ ಬರುವುದು' ಎಂಬ ಅರ್ಥದಲ್ಲಿ ಸಿದ್ಧಾಂತಸಾಧಕನ್ಯಾಯವನ್ನಾಗಿ ವಿವರಿಸುತ್ತಿದ್ದಾರೆ—

**ನ ಚ ''ದಿವೀವ ಚಕ್ಷುರಾತತಮ್'' ಇತಿ ವ್ಯಾಪ್ತ್ಯಾಖ್ಯವಿಶೇಷವಾಚಕ-ಶ್ರುತಿವಿರೋಧಃ ''ಅಣೂನಿ ವಾ ಇಂದ್ರಿಯಾಣಿ ತೇಷಾಂ ಪ್ರಕಾಶೋ ವ್ಯಾತತಃ'' ಇತಿ ತತೋಽಪ್ಯಣುತ್ವವಾಚಕವಿಶೇಷಶ್ರುತಿವಿರೋಧಾತ್ ॥ ೫ ॥**

**ಭಾವಾರ್ಥ–** ವ್ಯಾಪ್ತಿಯೆಂಬ ವಿಶೇಷವನ್ನು ಹೇಳುವ 'ದಿವೀವ ಚಕ್ಷುರಾತತಮ್' ಎಂಬ ಶ್ರುತಿಯ ವಿರೋಧವಿರುವುದರಿಂದ ಇಂದ್ರಿಯಗಳನ್ನು ಅಣುವೆಂದು ಹೇಳಬಾರದು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ಅಣೂನಿ ವಾ ಇಂದ್ರಿಯಾಣಿ ತೇಷಾಂ ಪ್ರಕಾಶೋ ವ್ಯಾತತಃ' (ಇಂದ್ರಿಯಗಳು ಅಣುವಾಗಿವೆ. ಅವುಗಳ ಪ್ರಕಾಶವು ವ್ಯಾಪ್ತವಾಗಿದೆ) ಎಂಬ ಅಣುತ್ವವನ್ನು ಹೇಳುವ ವಿಶೇಷಶ್ರುತಿಯು ವಿರೋಧವು ಬರುತ್ತದೆ.

**ವಿವರಣೆ**—ಇಂದ್ರಿಯಗಳು ಅಣುಗಳು ಎಂಬುದೇ ಸಿದ್ಧಾಂತ. ವಾಪ್ತತ್ವವನ್ನು ಹೇಳುವ ಶ್ರುತಿಗಿಂತ ಅಣುವೆಂದು ಹೇಳುವ ಶ್ರುತಿಯು ಪ್ರಬಲ ಹೇಗೆ? ಈ ಶ್ರುತಿಯಿಂದಲೇ ಸಿದ್ಧಾಂತ ಮಾಡುವುದು ಎಷ್ಟು ಸರಿ? ಎಂದರೆ, ಅಣುತ್ವವನ್ನು ಹೇಳುವ ಶ್ರುತಿಯು ವ್ಯಾಪ್ತತ್ವವನ್ನು ಹೇಳುವ ಶ್ರುತಿಯನ್ನು ಸಾವಕಾಶಗೊಳಿಸುತ್ತದೆ. 'ಅಣೂನಿ ವಾ ಇಂದ್ರಿಯಾಣಿ ತೇಷಾಂ ಪ್ರಕಾಶೋ ವ್ಯಾತತಃ' (ಇಂದ್ರಿಯಗಳು ಅಣುವಾದವುಗಳು. ಆದರೆ ಅವುಗಳ ಪ್ರಕಾಶವು ವ್ಯಾಪ್ತವಾಗಿದೆ) ಹಾಗಾದರೆ ವ್ಯಾಪ್ತತ್ವವನ್ನು ಹೇಳುವ ಶ್ರುತಿಯು ಇಂದ್ರಿಯಗಳಿಗೆ ಸ್ವರೂಪತಃ ವ್ಯಾಪ್ತಿಯನ್ನು ಹೇಳುತ್ತಿಲ್ಲ ಹೊರತು ಪ್ರಕಾಶದಿಂದ ವ್ಯಾಪ್ತಿಯನ್ನು ಹೇಳುತ್ತಿದೆ. ಇಂದ್ರಿಯಗಳು ಸ್ವರೂಪತಃ ಅಣುವಾಗಿದ್ದರೂ ಅವುಗಳ ಪ್ರಕಾಶ ವ್ಯಾಪ್ತವಾಗಿರುವುದರಿಂದ ಎರಡೂ ಶ್ರುತಿಗಳಲ್ಲಿ ಪರಸ್ಪರ ವಿರೋಧವಿಲ್ಲದಿರುವುದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

ಹಿಂದಿನ ಐದು ಅಧಿಕರಣಗಳ ಪೂರ್ವಪಕ್ಷ ಮತ್ತು ಸಿದ್ಧಾಂತ ಯುಕ್ತಿಗಳನ್ನು ವಿಶೇಷಶ್ರುತಿವೈರೂಪ್ಯ ಎಂಬ ಒಂದೇ ಯುಕ್ತಿಯಿಂದ ಸಂಗ್ರಹಿಸಿದ ಅನುವ್ಯಾಖ್ಯಾನಕಾರರಾದ ಶ್ರೀಮಧ್ವಾಚಾರ್ಯರ ಪ್ರತಿಭೆ ಅದ್ಭುತವಾದದ್ದು.

**ಸೂತ್ರಾರ್ಥ—**

**ಓಂ ಅಣವಶ್ಚ ಓಂ ॥**

ಇಂದ್ರಿಯಗಳು ಅಣವಃ=ಅಣುಗಳು ಚ=ತೇಜಸ್ಸಿನಿಂದ ವ್ಯಾಪ್ತವೂ ಆಗಿವೆ.

## ಮುಖ್ಯಪ್ರಾಣಾಧಿಕರಣ (2-4-6)

ಓಂ ಶ್ರೇಷ್ಠಶ್ಚ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣಕ್ಕೆ ಮುಖ್ಯಪ್ರಾಣನು ವಿಷಯ. 'ನೈಷ ಪ್ರಾಣ ಉದ್ಯೆತಿ' ಎಂಬ ಶ್ರುತಿ ಈ ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ ಎಂದು ಹೇಳುತ್ತಿದೆ. 'ಏಷ ಪ್ರಾಣೋ ಜಾಯತೇ' ಎಂಬ ಶ್ರುತಿಯು ಪ್ರಾಣನಿಗೆ ಉತ್ಪತ್ತಿಯನ್ನು ಹೇಳುತ್ತಿದೆ. ಹೀಗೆ ಪರಸ್ಪರ ವಿರುದ್ಧವಾದ ಶ್ರುತಿಗಳಿಂದ ಪ್ರಾಣನಿಗೆ ಉತ್ಪತ್ತಿ ಇದೆಯೋ? ಇಲ್ಲವೋ? ಎಂಬುದು ಸಂದೇಹ ಬರುತ್ತದೆ.

**ಪೂರ್ವಪಕ್ಷ—** 'ನೈಷ ಪ್ರಾಣ ಉದೇತಿ' (ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ) ಎಂದು ಶ್ರುತಿ ಹೇಳುತ್ತಿದೆ. ಸಮಗ್ರ ಜಗತ್ತಿನ ಉತ್ಪತ್ತಿ ಮರಣಗಳಿಗೆ ಮುಖ್ಯ ಪ್ರಾಣನು ಕಾರಣನಾದ್ದರಿಂದ ಅವನಿಗೆ ಉತ್ಪತ್ತಿಯಿಲ್ಲ ಎಂಬ ಯುಕ್ತಿಯೂ ಇದೆ. ಆದ್ದರಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಅಪ್ರಮಾಣ ವಾಗುತ್ತದೆ. ಅದರ ದೃಷ್ಟಾಂತದಿಂದ ಸಕಲ ಶ್ರುತಿಗಳು ಅಪ್ರಮಾಣವಾಗುತ್ತವೆ. ಅವುಗಳಿಂದ ಪರಮಾತ್ಮನ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಮಾಹಾತ್ಮ್ಯ' (ಶ್ರುತಿಯಲ್ಲಿ ಹೇಳಲ್ಪಟ್ಟ ಮುಖ್ಯಪ್ರಾಣನ ಮಹಿಮೆ) ಎಂಬುದು ಇದನ್ನೇ 'ಪ್ರಾಣನ ಮಹಿಮೆ ಗಿಂತಲೂ ಅಧಿಕವಾದದ್ದು ಸರ್ವೋತ್ಪಾದಕತ್ವವೆಂಬ ಪರಮಾತ್ಮನ ಮಹಿಮೆ' ಎಂಬ ಅರ್ಥದಲ್ಲಿ ಸಿದ್ಧಾಂತನ್ಯಾಯವನ್ನಾಗಿ ವಿವರಿಸುತ್ತಿದ್ದಾರೆ—

**ನ ಚ,**

''ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ ।
ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ ॥''

**ಇತ್ಯಾದಿಮಾಹಾತ್ಮ್ಯವಚನಾನ್ಮುಖ್ಯಪ್ರಾಣಸ್ಯ ನೋತ್ಪತ್ತಿರಿತಿ ವಾಚ್ಯಮ್ ।**

**'ಮಹತ್ತ್ವಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್ ।**
**ಕಿಂ ನಾಮ ನ ಸೃಜೇದೇಷ ಯೇನ ಶಕ್ಯೇದಮಾವೃತಮ್ ॥'**

**ಇತಿ ಶ್ರುತೇಸ್ತತೋಽಪಿ ಮಾಹಾತ್ಮ್ಯಾದ್ವಿಷ್ಣೋಃ ॥ ೬ ॥**

**ಭಾವಾರ್ಥ**—''ದೇಹದೊಳಗೆ ಯಾವ ಪ್ರಾಣನ ಪ್ರವೇಶವು ಜೀವರಿಗೆ ಹುಟ್ಟು ಎಂದು, ಯಾವ ಪ್ರಾಣನು ದೇಹವನ್ನು ಬಿಟ್ಟು ಹೋಗುವುದು ಮರಣವೆಂದು ಹೇಳಲಾಗುವುದೋ ಅಂತಹ ಮುಖ್ಯಪ್ರಾಣನಿಗೆ ಹುಟ್ಟು ಸಾವುಗಳು ಹೇಗೆ ತಾನೆ ಕೂಡುತ್ತವೆ?' ಎಂಬಿವೇ ಮೊದಲಾದ ಮುಖ್ಯಪ್ರಾಣನ ಮಹಿಮೆಯನ್ನು ಹೇಳುವ, ವಚನಗಳಿರುವುದರಿಂದ ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲ ಎಂದು ಹೇಳುವುದು ಯುಕ್ತವಲ್ಲ. 'ಶ್ರೇಷ್ಠರಿಗೆ ಶ್ರೈಷ್ಠ್ಯವನ್ನು ಕೊಡುವುದರಿಂದಲೇ ವಿಷ್ಣುವು ಪ್ರಾಣನಿಗೂ ಸೃಷ್ಟಿಕರ್ತ. ಯಾರ ಶಕ್ತಿಯಿಂದ ಜಗತ್ತು ಆವರಿಸಲ್ಪಟ್ಟಿದೆಯೋ ಅಂತಹ ವಿಷ್ಣು ಏನನ್ನು ತಾನೆ ಸಷ್ಟಿಸಲಾರ?'' ಎಂಬ ಶ್ರುತಿಯಿಂದ ಪ್ರಾಣನಿಗಿಂತಲೂ ಅಧಿಕವಾದ ಮಹಿಮೆ ವಿಷ್ಣುವಿಗೆ ಸಿದ್ಧವಾಗುತ್ತಿದೆ.

**ವಿವರಣೆ**—ಪ್ರಾಣನ ಮಹಿಮೆಗಿಂತಲೂ ಅಧಿಕವಾದ ಸರ್ವೋತ್ಪಾದಕತ್ವವೆಂಬ ಪರಮಾತ್ಮನ ಮಹಿಮೆಯಿರುವುದರಿಂದ ಪ್ರಾಣನಿಗೆ ಉತ್ಪತ್ತಿಯನ್ನು ಒಪ್ಪಲೇಬೇಕು. ಹಾಗಿದ್ದಲ್ಲಿ ಉತ್ಪತ್ತಿಯಿಲ್ಲ ಎಂದು ಹೇಳುವ ಶ್ರುತಿಗೆ ಏನರ್ಥವನ್ನು ಮಾಡಬೇಕು? ಎಂದರೆ ಅದನ್ನು ಶ್ರುತಿಯೇ ತಿಳಿಸುತ್ತಿದೆ— 'ಸೌಕ್ಷ್ಮ್ಯೇಣ ಹ ವಾ ಏಷೋಽವತಿಷ್ಠತೇ ಸ್ಥೂಲತ್ವೇನೋದೇತಿ...' (ಈ ಪ್ರಾಣನು ಸೂಕ್ಷ್ಮರೂಪದಿಂದ ಯಾವಾಗಲೂ ಇರುತ್ತಾನೆ. ಸ್ಥೂಲರೂಪದಿಂದ ಅಂದರೆ ಶರೀರ ಸಂಬಂಧವನ್ನು ಪಡೆಯುವ ಮೂಲಕ ಹುಟ್ಟುತ್ತಾನೆ.) ಎಂದು ಸ್ವರೂಪದಿಂದ ನಿತ್ಯತ್ವ ದೇಹದಿಂದ ಅನಿತ್ಯತ್ವ ವಿರುವುದರಿಂದ ಎರಡು ಶ್ರುತಿಗಳಿಗೂ ವಿರೋಧವು. ಇದು ಎಲ್ಲ ಜೀವರಲ್ಲಿಯೂ ಸಮಾನವಾಗಿದೆ. ಮುಖ್ಯಪ್ರಾಣನಿಗೆ ಏನು ಶ್ರೇಷ್ಠತ್ವವನ್ನು ಹೇಳಿದಂತಾಗುವು ದಿಲ್ಲವಲ್ಲ? ಎಂದರೆ, ಇತರ ಜೀವರಿಗೆ ದೇಹಾದಿಗಳಲ್ಲಿ ಅಭಿಮಾನವಿದೆ. ಆದರಿಂದ ಅವರು ದೇಹನಾಶವಾದಾಗ ದುಃಖವನ್ನು ಅನುಭವಿಸುತ್ತಾರೆ. ಮುಖ್ಯಪ್ರಾಣನಿಗೆ ದೇಹದಲ್ಲಿ ಅಭಿಮಾನವಿಲ್ಲದಿರುವುದರಿಂದ

ಅವನಿಗೆ ವಿಕಾರವಿರುವುದಿಲ್ಲ ಎಂಬ ವಿಶೇಷ ವಾಯುದೇವನಿಗಿರುವುದರಿಂದ ಸಕಲಶ್ರುತಿಗಳೂ ಪ್ರಮಾಣಗಳೇ ಆಗಿವೆ. ಅವುಗಳಿಂದ ವಿಷ್ಣುವಿನ ಜಗತ್ಕಾರಣತ್ವವನ್ನು ಸಿದ್ಧವಾಗಲು ಯಾವುದೇ ಬಾಧಕವಿಲ್ಲ.

**ಸೂತ್ರಾರ್ಥ—**

**ಓಂ ಶ್ರೇಷ್ಠಶ್ಚ ಓಂ ॥**

ಶ್ರೇಷ್ಠಶ್ಚ=ಇತರರಂತೆ ಮುಖ್ಯಪ್ರಾಣನೂ ಪರಮಾತ್ಮನಿಂದಲೇ ಹುಟ್ಟುತ್ತಾನೆ.

## ಚಕ್ಷುರಾದ್ಯಧಿಕರಣ (2-4-7)

ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಮುಖ್ಯಪ್ರಾಣನು ವಿಷಯ. 'ನ ಪ್ರಾಣಃ ಕಿಂಚಿದಾಶ್ರಿತಃ' ಪ್ರಾಣನು ಯಾರನ್ನೂ ಆಶ್ರಯಿಸಿಲ್ಲ ಎಂದು ಒಂದು ಶ್ರುತಿಯು ಹೇಳುತ್ತಿದೆ. ಮತ್ತೊಂದು ಶ್ರುತಿಯು 'ಪ್ರಾಣಃ ಪರವಶೇ ಸ್ಥಿತಃ' ಪ್ರಾಣನು ಮತ್ತೊಬ್ಬರ ಅಧೀನದಲ್ಲಿದ್ದಾನೆ ಎಂದು ತಿಳಿಸುತ್ತಿದೆ. ಹೀಗೆ ಪರಸ್ಪರ ಶ್ರುತಿಗಳಲ್ಲಿ ವಿರೋಧವಿರುವುದರಿಂದ ಪ್ರಾಣನು ಸ್ವತಂತ್ರನೋ? ಪರತಂತ್ರನೋ? ಎಂಬುದು ಸಂಶಯ.

**ಪೂರ್ವಪಕ್ಷ—**'ಪ್ರಾಣಾದಿದಮಾವಿರಾಸೀತ್ ಪ್ರಾಣೋ ಧತ್ತೇ ಪ್ರಾಣೇ ಲಯಮಭ್ಯುಪೈತಿ ನ ಪ್ರಾಣಃ ಕಿಂಚಿದಾಶ್ರಿತಃ' (ಈ ಪ್ರಪಂಚವು ಪ್ರಾಣನಿಂದ ಪ್ರಕಟಗೊಂಡಿತು. ಪ್ರಾಣನೇ ಇದನ್ನು ಧರಿಸಿದ್ದಾನೆ. ಪ್ರಾಣನಲ್ಲಿ ನಾಶವನ್ನು ಹೊಂದುತ್ತದೆ. ಪ್ರಾಣನು ಯಾರನ್ನೂ ಆಶ್ರಯಿಸುವುದಿಲ್ಲ) ಎಂಬ ಶ್ರುತಿಯು ಪ್ರಾಣನು ಸ್ವತಂತ್ರನೆಂದು ತಿಳಿಸುತ್ತಿದೆ. ಅದರಂತೆ 'ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್। ಯಥಾ ಪ್ರಾಣಸ್ತಥಾ ರಾಜಾ ಸರ್ವಸ್ಯೈಕಾಶ್ರಯೋ ಭವೇತ್' (ಈ ಜಗತ್ತಿಗೆ ಯಾರ ಆಸರೆಯಿಂದ ಕ್ರಿಯೆಯು ನಡೆಯುತ್ತಿದೆಯೋ ಅತಂಹವನು ಬೇರೆಯವರನ್ನು ಹೇಗೆ ತಾನೆ ಆಶ್ರಯಿಸಿಯಾನು? ಹೇಗೆ ಮುಖ್ಯಪ್ರಾಣನು ಎಲ್ಲದಕ್ಕೂ ಆಶ್ರಯನೋ ಅದರಂತೆ ರಾಜನೂ ಎಲ್ಲದಕ್ಕೂ ಒಡೆಯ ಎಂಬ ಯುಕ್ತಿಯನ್ನು ಪ್ರತಿಪಾದಿಸುವ ವಾಕ್ಯದ

ಬಲವೂ ಇರುವುದರಿಂದ ಪ್ರಾಣನಿಗೆ ಸ್ವಾತಂತ್ರ್ಯವನ್ನು ಹೇಳುವ ಶ್ರುತಿಯು ಪ್ರಬಲವಾಯಿತು. ಆದ್ದರಿಂದ ಪ್ರಾಣನು ಸ್ವತಂತ್ರ.

ಸಾಧಕವಾದ ಯುಕ್ತಿಯೂ 'ಮಾಹಾತ್ಮ್ಯ' (ಸರ್ವಚೇಷ್ಟಕತ್ವ) ಎಂಬುದು. ಆದ್ದರಿಂದ ಪ್ರಾಣನು ಪರತಂತ್ರನೆಂದು ಪ್ರತಿಪಾದಿಸುವ ಶ್ರುತಿಯು ಅಪ್ರಮಾಣ. ಅದರಂತೆ ಎಲ್ಲ ವೇದಗಳೂ ಅಪ್ರಮಾಣ. ಇವುಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂಬುದು ಪೂರ್ವಪಕ್ಷ.

**ಸಿದ್ಧಾಂತ**—ಸಿದ್ಧಾಂತಸಾಧಕವಾದ ಯುಕ್ತಿಯೂ 'ಮಾಹಾತ್ಮ್ಯ'ವೇ (ಸರ್ವಚೇಷ್ಟಕನಾದ ಪ್ರಾಣನಿಗೆ ಆಶ್ರಯನಾದ ವಿಷ್ಣುವಿನ ಮಹಿಮೆ) ಎಂಬುದು. 'ಸರ್ವಂ ಹ್ಯೇವೈತತ್ ಪರಮೇಽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ। ಸ ಹ್ಯೇಕ ಏವೈತಾನ್ ನಯತ್ಯುನ್ನಯತಿ ವಶೀಕರೋತಿ' (ಈ ವಿಶ್ವವೆಲ್ಲವೂ ಪರಮಾತ್ಮನಲ್ಲಿದೆ. ಮುಖ್ಯಪ್ರಾಣನು ಇಂದ್ರಿಯಗಳು ಜೀವರು ಅವನಲ್ಲಿಯೂ ಇದ್ದಾರೆ. ಅವನೊಬ್ಬನೇ ಇವರೆಲ್ಲರನ್ನೂ ಪ್ರೇರಿಸುತ್ತಾನೆ. ಮೋಕ್ಷಕ್ಕೆ ಒಯ್ಯುತ್ತಾನೆ. ತನ್ನ ಅಧೀನದಲ್ಲಿ ಇಟ್ಟುಕೊಳ್ಳುತ್ತಾನೆ) ಎಂಬ ಗೌಪವನಶ್ರುತಿಯಲ್ಲಿ ಕಣ್ಣು ಮೊದಲಾದ ಇಂದ್ರಿಯಾಭಿಮಾನಿ ದೇವತೆಗಳೊಂದಿಗೆ ಮುಖ್ಯಪ್ರಾಣನೂ ಪರಮಾತ್ಮನ ಅಧೀನನಾಗಿದ್ದಾನೆ ಎಂದು ಹೇಳಲಾಗಿದೆ. 'ಸರ್ವಕರ್ತಾಽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ। ಕಥಮೇವಾನ್ಯಥಾ ನ ಸ್ಯಾದ್ ಯತೋ ನೈವೇಶ್ವರದ್ವಯಮ್' (ಮುಖ್ಯಪ್ರಾಣನು ಸರ್ವಕ್ಕೂ ಕಾರಣನಾಗಿದ್ದರೂ ಪರಮಾತ್ಮನ ಅವಲಂಬನೆಯಿಂದಲೇ ಇದ್ದಾನೆ. ಭಗವಂತನ ಆಸರೆ ಇಲ್ಲದೆ ಆ ಮುಖ್ಯಪ್ರಾಣನು ಹೇಗೆ ತಾನೆ ಇದ್ದಾನು? ಇಬ್ಬರು ಸ್ವತಂತ್ರರು ಹೇಗೆ ಇರಲು ಸಾಧ್ಯ?) ಎಂಬ ಯುಕ್ತಿಯಿಂದಲೂ ಇಬ್ಬರು ಸ್ವತಂತ್ರರಿರಲು ಸಾಧ್ಯವಿಲ್ಲ ವಾದ್ದರಿಂದ ಪ್ರಾಣನು ಪರತಂತ್ರನೆಂದೇ ಹೇಳಬೇಕು. ಹಾಗಾದರೆ ಮುಖ್ಯಪ್ರಾಣನನ್ನು ಸ್ವತಂತ್ರನೆಂದು ಹೇಳುವ ಶ್ರುತಿಗಳಿಗೆ ಏನರ್ಥವೆಂದರೆ, ಇಂದ್ರಿಯಗಳಂತೆಯೇ ಮುಖ್ಯಪ್ರಾಣನೂ ಪರಮಾತ್ಮನ ಅಧೀನನೇ ಆದರೂ ಅವನು ಇಂದ್ರಿಯಗಳಂತೆ ಜೀವನಿಗೆ ಸಾಧನನಾಗಿರುವುದಿಲ್ಲ. ಜೀವನು ತನ್ನ ಇಚ್ಛೆಗೆ ಅನುಸಾರವಾಗಿಯೇ ತನ್ನ ಇಂದ್ರಿಯಗಳನ್ನು ಉಪಯೋಗಿಸಿಕೊಳ್ಳಬಹುದು. ಆದರೆ, ಮುಖ್ಯಪ್ರಾಣನು ಜೀವನ ನಿಯಂತ್ರಣದಲ್ಲಿಲ್ಲ. ಆದ್ದರಿಂದಲೇ ಅವಾಂತರ

ಸ್ವತಂತ್ರ. ಪರಮಾತ್ಮನು ಪೂರ್ಣಸ್ವತಂತ್ರನೆಂದು ತಿಳಿಯುವುದರಿಂದ ಎರಡೂ ಶ್ರುತಿಗಳು ಪ್ರಮಾಣವಾಗಿರುವುದರಿಂದ ವಿಷ್ಣುವು ಜಗತ್ಕರ್ತೃ ಎಂದು ಶ್ರುತಿಗಳಿಂದ ಸಿದ್ಧವಾಗುತ್ತದೆ. ಈ ಅಧಿಕರಣದ ನ್ಯಾಯವು ಭಾಷ್ಯದಿಂದಲೇ ಸ್ಪಷ್ಟವಾಗಿ ತಿಳಿಯುವುದರಿಂದ ಶ್ರೀಮದಾಚಾರ್ಯರು ಪ್ರತ್ಯೇಕವಾಗಿ ನ್ಯಾಯವಿವರಣದಲ್ಲಿ ಹೇಳಲಿಲ್ಲ. ಆದರೂ ಈ ಅಧಿಕರಣದ ರಚನೆಯನ್ನು ಗುರ್ವರ್ಥದೀಪಿಕೆಯ ಅನುಗುಣವಾಗಿ ಮಾಡಲಾಗಿದೆ.

**ಸೂತ್ರಾರ್ಥ—**

**ಓಂ ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ಓಂ ||**

ತತ್ಸಹಶಿಷ್ಟ್ಯಾದಿಭ್ಯಃ=ಚಕ್ಷುರಾದಿಗಳೊಂದಿಗೆ ಮುಖ್ಯಪ್ರಾಣನಿಗೂ ಪರಾಧೀನತ್ವವನ್ನು ಹೇಳಿದ್ದರಿಂದ ಮತ್ತು ಯುಕ್ತಿಗಳಿಂದಲೂ ಚಕ್ಷುರಾದಿವತ್ ತು=ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನು ಪರಮಾತ್ಮನ ಅಧೀನನೇ.

## ಪಂಚವೃತ್ತ್ಯಧಿಕರಣ (2-4-8)

ಓಂ ಪಂಚವೃತ್ತಿರ್ಮನೋವದ್ ವ್ಯಪದಿಶ್ಯತೇ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ಪ್ರಾಣಾದಿಗಳು ವಿಷಯ. 'ಸರ್ವೇ ವಾ ಏತೇ ಮುಖ್ಯದಾಸಾಃ ಪ್ರಾಣೋಽಪಾನೋವ್ಯಾನ ಉದಾನಃ ಸಮಾನ ಇತಿ' ಎಂಬ ಶ್ರುತಿಯಲ್ಲಿ ಪ್ರಾಣಾದಿಗಳು ಮುಖ್ಯಪ್ರಾಣನ ದಾಸರು ಎಂದು ಹೇಳಲಾಗಿದೆ. 'ಮುಖ್ಯಸ್ಯೈವ ಸ್ವರೂಪಾನ್ ಪ್ರಾಣಾದ್ಯಾಃ' ಎಂಬ ಶ್ರುತಿಯು ಪ್ರಾಣಾದಿಗಳು ಮುಖ್ಯಪ್ರಾಣನ ಸ್ವರೂಪರೇ ಎಂದು ತಿಳಿಸುತ್ತಿದೆ. ಈ ಎರಡು ಪರಸ್ಪರ ವಿರುದ್ಧವಾದ ಶ್ರುತಿಗಳಿಂದ ಪ್ರಾಣಾದಿಗಳು ಮುಖ್ಯಪ್ರಾಣನ ದಾಸರೋ? ಅಥವಾ ಅಭಿನ್ನರೋ? ಎಂದು ಸಂಶಯ ಬರುತ್ತಿದೆ.

**ಪೂರ್ವಪಕ್ಷ—**'ಸರ್ವೇ ವಾ ಏತೇ ಮುಖ್ಯದಾಸಾಃ ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನ ಇತ್ಯಥ ಪ್ರಾಣ ಏವ ಸಮ್ರಾಟ್' (ಪ್ರಾಣ, ಅಪಾನ, ವ್ಯಾನ, ಉದಾನ, ಈ ಎಲ್ಲ ಪ್ರಾಣರೂ ಮುಖ್ಯಪ್ರಾಣನ ದಾಸರೇ. ಈ ಕಾರಣದಿಂದ ಮುಖ್ಯಪ್ರಾಣನೇ ಸರ್ವಶ್ರೇಷ್ಠನು.) ಎಂಬ ಶ್ರುತಿಯು ಪ್ರಾಣಾದಿಗಳು ಮುಖ್ಯಪ್ರಾಣನದಾಸರು ಎಂದು ತಿಳಿಸುತ್ತಿದೆ. ಆದರೆ,

'ಪಾಯೂಪಸ್ಥೇ ಅಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರತಿತಿಷ್ಠತೇ ಮಧ್ಯೇ ತು ಸಮಾನ ಏಕ್ಷ ಹ್ಯೆತದ್ಧುತಮನ್ನ. ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ ನಾಡೀಸಹಸ್ರಾಣ್ಯಾಸು ವ್ಯಾನಶ್ಚರತಿ ಅಥೈಕಯಾ ಊರ್ಧ್ವ ಉದಾನಃ' (ಗುದ, ಶಿಶ್ನಗಳಲ್ಲಿ ಅಪಾನ, ಮುಖ, ಕಣ್ಣು ಮೂಗುಗಳಲ್ಲಿ ಪ್ರಾಣ, ನಾಭಿಯಲ್ಲಿ ಸಮಾನ ಎಲ್ಲ ನಾಡಿಗಳಲ್ಲಿ ಸಮಾನ, ಕಂಠದ ಮೇಲೆ ಉದಾನ ಹೀಗೆ ಬೇರೆಬೇರೆ ಪ್ರಾಣಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಕೆಲಸ ಮಾಡುತ್ತಾರೆ) ಎಂಬುದಾಗಿ ಪ್ರಾಣಾದಿಗಳಿಗೆ ಎಲ್ಲ ಜೀವರ ಶರೀರಗಳ ಒಳಗಿರುವ ಎಪ್ಪತ್ತೆರಡು ಸಾವಿರ ನಾಡಿಗಳಲ್ಲಿ ಊರ್ಧ್ವ, ಅಧಃ ಮಧ್ಯಭಾಗದಲ್ಲಿ ಸಂಚಾರವೆಂಬ ವ್ಯಕ್ತಸದ್ಗುಣತ್ವವನ್ನು ಹೇಳಿದ್ದಾರೆ. ಮುಖ್ಯಪ್ರಾಣ ಮತ್ತು ಪ್ರಾಣಾಪಾನಾದಿಗಳು ಬೇರೆ ಬೇರೆ ಆದರೆ ವ್ಯಕ್ತಸದ್ಗುಣತ್ವವೇ ಯುಕ್ತವಾಗುವುದಿಲ್ಲ. ದಾಸ ಸ್ವಾಮಿ ಇಬ್ಬರಿಗೂ ಸಮಾನಗುಣಗಳು ಕೂಡುವುದಿಲ್ಲ. ಸಾಮ್ಯವಿರುವುದಾದರೆ ಮುಖ್ಯ ಪ್ರಾಣನ ದಾಸರೆಂಬುದೂ ಕೂಡುವುದಿಲ್ಲ. ಆದ್ದರಿಂದ 'ಪ್ರಾಣಸ್ಯೈವ ಸ್ವರೂಪಾಣಿ ಪ್ರಾಣಾದ್ಯಾಃ' ಮತ್ತೊಂದು ಶ್ರುತಿ ಹೇಳುವಂತೆ ಪ್ರಾಣಾದಿಗಳೂ ಮುಖ್ಯಪ್ರಾಣನೂ ಅಭಿನ್ನರೇ ಆಗಿದ್ದಾರೆ. ಇದಕ್ಕೆ ವಿರುದ್ಧವಾಗಿ ದಾಸರೆಂದು ಪ್ರತಿಪಾದಿಸುವ ಶ್ರುತಿಗಳು ಅಪ್ರಮಾಣ. ಇವುಗಳಂತೆ ಎಲ್ಲ ಶ್ರುತಿಗಳೂ ಅಪ್ರಮಾಣವಾಗುತ್ತವೆ. ಆದ್ದರಿಂದ ವೇದಗಳಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲವೆಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವ್ಯಕ್ತಸದ್ಗುಣತ್ವ' (ಎಪ್ಪತ್ತೆರಡು ಸಾವಿರ ರೂಪಗಳಲ್ಲಿ ಸಂಚಾರ ಮೊದಲಾದ ವ್ಯಕ್ತಸದ್ಗುಣಗಳು) ಎಂಬುದು ಇದನ್ನೇ 'ದಾಸರಿಗಿಂತ ಅಧಿಕವಾದ ಸದ್ಗುಣಗಳು ಮುಖ್ಯಪ್ರಾಣನಲ್ಲಿವೆ' ಎಂಬ ಅರ್ಥದಲ್ಲಿ ಸಿದ್ಧಾಂತನ್ಯಾಯವನ್ನಾಗಿ ವಿವರಿಸುತ್ತಿದ್ದಾರೆ—

**ನ ಚ ಪ್ರಾಣಾದಿಪಂಚಕಸ್ಯ ವ್ಯಕ್ತಸದ್ಗುಣತ್ವಾನ್ಮುಖ್ಯಪ್ರಾಣವೃತ್ತಿತ್ವಮೇವ ।**

**'ಅಶೇಷಗುಣಪೂರ್ಣಾನಿ ಮುಖ್ಯರೂಪಾಣಿ ಪಂಚ ಚ ।**

**ತದ್ದಾಸಾಃ ಪಂಚ ಚಾನ್ಯೇऽಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ ॥'**

**ಇತಿ ಶ್ರುತೇರ್ಮುಖ್ಯಪ್ರಾಣಸ್ಯ ತತೋऽಪಿ ವ್ಯಕ್ತಸದ್ಗುಣತ್ವಾತ್ ॥ ೮ ॥**

**ಭಾವಾರ್ಥ**—ಪಂಚಪ್ರಾಣರಿಗೆ ವ್ಯಕ್ತಸದ್ಗುಣತ್ವವನ್ನು ಹೇಳಿದ್ದರಿಂದ (ಮುಖ್ಯ ಪ್ರಾಣವೃತ್ತಿತ್ವಂ=ಮುಖ್ಯಪ್ರಾಣಸ್ವರೂಪತ್ವಂ) ಅವರು ಮುಖ್ಯಪ್ರಾಣನ ಸ್ವರೂಪರು ಎಂದು ಆಕ್ಷೇಪಿಸಬಾರದು. ಏಕೆಂದರೆ, 'ಸಮಸ್ತಗುಣಪೂರ್ಣರಾದ ಪ್ರಾಣಾ ಪಾನಾದಿಗಳು ಮುಖ್ಯಪ್ರಾಣನ ಸ್ವರೂಪರೂ ಆಗಿದ್ದಾರೆ. ಸದ್ಗುಣ ಯುಕ್ತರಾದ ಪ್ರಾಣಾದಿಗಳು ಮುಖ್ಯಪ್ರಾಣನಿಗಿಂತ ಭಿನ್ನರಾದವರಾಗಿ ಅವನ ದಾಸರೂ ಆಗಿದ್ದಾರೆ' ಎಂಬ ಶ್ರುತಿಯು ಮುಖ್ಯಪ್ರಾಣನಿಗೂ ವ್ಯಕ್ತಸದ್ಗುಣತ್ವವನ್ನು ತಿಳಿಸುತ್ತಿದೆ.

**ಸಿದ್ಧಾಂತ :** ಮುಖ್ಯಪ್ರಾಣನಿಗೆ ತನ್ನದೇ ಆದ ಪ್ರಾಣಾದಿರೂಪಗಳೂ ಇವೆ. ಅವನಿಗೆ ದಾಸರಾಗಿರುವ ಪ್ರಾಣಾದಿ ಪಂಚವಾಯುಗಳೂ ಇವೆ. ಆದ್ದರಿಂದ ಅಭಿನ್ನರೆಂದು ಹೇಳುವ ಶ್ರುತಿಗೂ ದಾಸರೆಂದು ಹೇಳುವ ಶ್ರುತಿಗೂ ಯಾವುದೇ ವಿರೋಧವೂ ಇಲ್ಲ.

ಮುಖ್ಯಪ್ರಾಣನಿಗೂ ಅವನ ದಾಸರಿಗೂ ವ್ಯಕ್ತಸದ್ಗುಣತ್ವವೆಂಬುದು ಸಮಾನ ಹೇಗೆ? ಎಂದರೆ, ರಾಜನು ತಾನು ಧರಿಸುವ ಛತ್ರ, ಚಾಮರಾದಿಗಳಂತೆ ಇರುವ ಛತ್ರಚಾಮರಾದಿಗಳನ್ನು ತನ್ನ ಮಂತ್ರಿಗೂ ತನ್ನ ಆದೇಶದಿಂದ ಪ್ರೀತಿಯಿಂದ ಮಾಡಿಸಿಕೊಡುವಂತೆ ಕೂಡುತ್ತದೆ. ಯಾವ ವಿರೋಧವೂ ಇಲ್ಲ.

ಇದನ್ನು ಸೂತ್ರಕಾರರು ದೃಷ್ಟಾಂತಪೂರ್ವಕ ಸಮರ್ಥಿಸಿದ್ದಾರೆ. 'ಮನೋವತ್' ಎಂದು. ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಚೇತನಾ ಎಂಬ ಮನಸ್ಸಿನ ಐದು ಪ್ರಭೇದಗಳೂ ಇವೆ. ಈ ಐದು ವಿಧದ ಮನಸ್ಸಿನ ವಿಕಾರಗಳೂ ಇದೇ ಹೆಸರಿನಲ್ಲಿ ಇವೆ. ಅದರಂತೆಯೇ ಮುಖ್ಯಪ್ರಾಣನ ಐದು ರೂಪಗಳೂ, ಅವುಗಳಿಂದ ನಿಯಮಿಸಲ್ಪಡುವ ಐದು ರೂಪಗಳೂ ಇವೆ. ಆದ್ದರಿಂದ ಪ್ರಾಣಾದಿ ಗಳು ಮುಖ್ಯಪ್ರಾಣನ ಸ್ವರೂಪ ಎನ್ನುವುದೂ ಸರಿ. ಅವನ ಆದೇಶ ಪಾಲಿಸುವ ದಾಸರು ಎನ್ನುವುದೂ ಸರಿ. ಹೀಗೆ ಶ್ರುತಿಗಳಲ್ಲಿ ಪರಸ್ಪರವಿರೋಧವಿಲ್ಲ ದಿರುವುದರಿಂದ ಶ್ರುತಿಗಳಿಂದ ವಿಷ್ಣುವಿನ ಜಗತ್‌ಕರ್ತೃತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ಪಂಚವೃತ್ತಿರ್ಮನೋವದ್ ವ್ಯಪದಿಶ್ಯತೇ ಓಂ ॥**

ಮನೋವತ್=ಮನಸ್ಸು ಯಾವರೀತಿ ಐದು ಪ್ರಕಾರದಿಂದ ಯುಕ್ತವಾಗಿದೆಯೋ ಆದರಂತೆ ಮುಖ್ಯಪ್ರಾಣನೂ ಪಂಚವೃತ್ತಿಃ=ಐದು ರೂಪವುಳ್ಳವನೆಂದು ವ್ಯಪದಿಶ್ಯತೇ=ಶ್ರುತಿಯಲ್ಲಿ ಪ್ರತಿಪಾದಿಸಲ್ಪಟ್ಟಿದ್ದಾನೆ.

## ಪ್ರಾಣಾಣುತ್ವಾಧಿಕರಣ (2-4-9)

ಓಂ ಅಣುಶ್ಚ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಮುಖ್ಯಪ್ರಾಣನು ವಿಷಯ. 'ಪ್ರಾಣ ಏವಾಧಸ್ತಾತ್ ಪ್ರಾಣ ಏವೋಪರಿಷ್ಟಾತ್' ಎಂಬ ಶ್ರುತಿಯು ಮುಖ್ಯಪ್ರಾಣನು ವ್ಯಾಪ್ತನಾಗಿದ್ದಾನೆ ಎನ್ನುತ್ತಿದೆ. 'ಅಣುನ್ಯೈವೈತತ್ ಸೃಜ್ಯತೇ' ಎಂಬ ಶ್ರುತಿಯು ಮುಖ್ಯಪ್ರಾಣನನ್ನು ಅಣುವೆಂದು ಪ್ರತಿಪಾದಿಸುತ್ತಿದೆ. ಆದ್ದರಿಂದ ಮುಖ್ಯಪ್ರಾಣನು ವ್ಯಾಪ್ತನೋ? ಅಣುವೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ**—'ಸ ಏವಾಧಸ್ತಾತ್ ಸ ಏವೋಪರಿಷ್ಟಾತ್ ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೈದಂ ಸರ್ವಂ' (ಪ್ರಾಣನೇ ಕೆಳಗಿನ ಲೋಕಗಳಲ್ಲಿದ್ದಾನೆ. ಊರ್ಧ್ವಲೋಕಗಳಲ್ಲಿಯೂ ಪ್ರಾಣನೇ ಇದ್ದಾನೆ. ಮಧ್ಯದಲ್ಲಿರುವ ಲೋಕಗಳಲ್ಲಿಯೂ ಪ್ರಾಣನೇ ಇದ್ದಾನೆ. ಎಲ್ಲೆಡೆಯೂ ಪ್ರಾಣನೇ. ಇವೆಲ್ಲವೂ ಮುಖ್ಯಪ್ರಾಣನೇ) ಮುಂತಾದ ಶ್ರುತಿಗಳು ಮುಖ್ಯಪ್ರಾಣನು ವ್ಯಾಪ್ತನೆಂದು ಹೇಳುತ್ತಿವೆ. ಮುಖ್ಯಪ್ರಾಣನನ್ನು ಅಣುವೆಂದು ಒಪ್ಪಿದಲ್ಲಿ ದೃಷ್ಟವಾದ ವ್ಯಾಪ್ತತ್ವವು ಯುಕ್ತವಾಗಲಾರದು. ಆದ್ದರಿಂದ ಮುಖ್ಯಪ್ರಾಣನು ಅಣುವೆಂದು ಹೇಳುವ ಶ್ರುತಿಗಳು ಅಪ್ರಮಾಣವಾಗುತ್ತದೆ. ಆದರ ದೃಷ್ಟಾಂತದಿಂದ ಎಲ್ಲ ಶ್ರುತಿಗಳೂ ಅಪ್ರಮಾಣವಾಗುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸಲಾರದು.

ಈ ಪೂರ್ವಪಕ್ಷಕ್ಕೆ ಸಾಧಾರಣವಾದ ಯುಕ್ತಿ 'ದೃಷ್ಟಾಯುಕ್ತಿ' (ದೃಷ್ಟವಾದ ವ್ಯಾಪ್ತತ್ವವು ಅಯುಕ್ತವಾಗುವುದು) ಎಂಬುದು. ಇದನ್ನೇ 'ಶ್ರುತಿಯಿಂದ ಸಿದ್ಧವಾದ ಅಣುತ್ವವು ಕೂಡದಿರುವುದು' ಎಂಬ ಅರ್ಥದಲ್ಲಿ ಸಿದ್ಧಾಂತನ್ಯಾಯವನ್ನಾಗಿ ತಿಳಿಸುತ್ತಿದ್ದಾರೆ—

**ನ ಚಾಣುತ್ವೇ ಪ್ರಾಣಸ್ಯ ''ಮಹಾನ್ ವೈ ಮುಖ್ಯಪ್ರಾಣೋ ಯೇನ**

**ವ್ಯಾಪ್ತಂ ಚರಾಚರಮ್'' ಇತಿ ದೃಷ್ಟಾಯುಕ್ತಿಃ । 'ಅಣುರ್ವೈ ಮುಖ್ಯ-ಪ್ರಾಣೋ ಯ ಉತ್ಕ್ರಾಮತಿ ನಾಡೀಭಿಃ' ಇತಿ ದೃಷ್ಟಾಯುಕ್ತೇರನಣುತ್ವೇ ಪ್ರಾಣಸ್ಯ ॥೯॥**

**ಭಾವಾರ್ಥ**—ಪ್ರಾಣನನ್ನು ಅಣುವೆಂದು ಅಂಗೀಕರಿಸಿದರೆ 'ಯಾವ ಮುಖ್ಯಪ್ರಾಣನಿಂದ ಚರಾಚರಪ್ರಪಂಚವು ವ್ಯಾಪ್ತವಾಗಿದೆಯೋ ಅಂತಹ ಮುಖ್ಯಪ್ರಾಣನು ಶ್ರೇಷ್ಠ' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಮುಖ್ಯಪ್ರಾಣನ ವ್ಯಾಪ್ತತ್ವವು ಕೂಡುವುದಿಲ್ಲ. ಆದ್ದರಿಂದ ವ್ಯಾಪ್ತನೆಂದೇ ಅಂಗೀಕರಿಸಬೇಕು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, 'ಯಾವ ನಾಡಿಗಳಿಂದ ಉತ್ಕ್ರಮಣವನ್ನು ಹೊಂದುವನೋ ಅಂತಹ ಮುಖ್ಯಪ್ರಾಣನು ಅಣುವಾಗಿದ್ದಾನೆ' ಎಂದು ಉಕ್ತವಾದ ಅಣುತ್ವವು ಮುಖ್ಯ ಪ್ರಾಣನು ಅಣುವಲ್ಲ(ವ್ಯಾಪ್ತ) ಎಂದು ಅಂಗೀಕರಿಸಿದರೆ ಅಯುಕ್ತವಾಗುವುದು.

**ವಿವರಣೆ**— ಪ್ರಾಣನನ್ನು ಅಣುವೆಂದೇ ಅಂಗೀಕರಿಸಬೇಕು. ಹಾಗಾದರೆ ವ್ಯಾಪ್ತನೆಂದು ಹೇಳುವ ಶ್ರುತಿಗೆ ಏನರ್ಥವನ್ನು ಮಾಡಬೇಕು? ಎಂದರೆ, ಜೀವನ ಶರೀರದೊಳಗೆ ಅಣುರೂಪ ದಿಂದಿರುವ ಮುಖ್ಯಪ್ರಾಣನು ದೇಹದ ಹೊರಗೆ ಮಹತ್ತತ್ವವನ್ನೂ ವ್ಯಾಪಿಸಿದ ಬೃಹತ್ ಶರೀರವನ್ನು ಪಡೆದಿದ್ದಾನೆ. ಆದ್ದರಿಂದ ವ್ಯಾಪ್ತವನ್ನು ಹೇಳುವ ಶ್ರುತಿಯನ್ನೂ ಕೂಡಿಸಬಹುದಾದ್ದರಿಂದ ಸಕಲ ಶ್ರುತಿಗಳೂ ಪ್ರಮಾಣವೇ ಆಗಿವೆ. ಅವುಗಳಿಂದ ವಿಷ್ಣುವಿನ ಜಗತ್ಕರ್ತೃತ್ವವನ್ನು ಸಾಧಿಸಲು ಯಾವುದೇ ಬಾಧಕವಿಲ್ಲ.

**ಸೂತ್ರಾರ್ಥ**—

**ಓಂ ಅಣುಶ್ಚ ಓಂ ॥**

ಮುಖ್ಯಪ್ರಾಣನು ಅಣುಃ=ಅಣುವಾಗಿದ್ದಾನೆ. ಚ=ವ್ಯಾಪ್ತನೂ ಆಗಿದ್ದಾನೆ.

## ಜ್ಯೋತಿರಾದ್ಯಧಿಕರಣ (2-4-10)

ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ಎಂಬ ಸೂತ್ರದಿಂದ

ಪ್ರಾರಂಭವಾಗುವ ಈ ಅಧಿಕರಣದ ವಿಷಯ ಚಕ್ಷುರಾದಿ ಇಂದ್ರಿಯಗಳು. 'ಜೀವಸ್ಯ ಕರಣಾನ್ಯಾಹುಃ' ಎಂಬ ಶ್ರುತಿಯು ಅವುಗಳು ಜೀವನಿಗೆ ವಶವಾಗಿರುವ ಕರಣಗಳು ಎಂದು ತಿಳಿಸುತ್ತಿದೆ. 'ಬ್ರಹ್ಮಣೋ ವಾ ಏತಾನಿ ಕರಣಾನಿ' ಎಂಬ ಶ್ರುತಿಯು ಬ್ರಹ್ಮನ ವಶವಾಗಿರುವ ಕರಣಗಳು ಎನ್ನುತ್ತಿದೆ. ಹೀಗೆ ವಿರುದ್ಧವಾದ ಶ್ರುತಿಗಳಿಂದ ಚಕ್ಷುರಾದಿ ಇಂದ್ರಿಯಗಳು ಜೀವನಿಗೆ ಕರಣವಾದ ಇಂದ್ರಿಯ ಗಳೋ? ಬ್ರಹ್ಮನಿಗೆ ಕರಣವಾದ ಇಂದ್ರಿಯಗಳೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ**—'ಜೀವಸ್ಯ ಕರಣಾನ್ಯಾಹುಃ ಪ್ರಾಣಾನೇತಾಂಸ್ತು ಸರ್ವಶಃ । ಯಸ್ಮಾತ್ ತದ್ವಶಗಾ ಏತೇ ದೃಶ್ಯಂತೇ ಸರ್ವದೇಹಿಷು' (ಯಾವ ಕಾರಣದಿಂದ ಈ ಇಂದ್ರಿಯಗಳು ಎಲ್ಲ ಪ್ರಾಣಿಗಳಲ್ಲಿಯೂ ಅವುಗಳ ಅಧೀನವಾಗಿಯೇ ಕಂಡಿವೆಯೋ ಆ ಕಾರಣದಿಂದ ಇಂದ್ರಿಯಗಳನ್ನು ಜೀವನಕರಣವನ್ನಾಗಿಯೇ ಹೇಳುತ್ತಾರೆ) ಎಂದು ಶ್ರುತಿಯು ಹೇಳುವುದರಿಂದ ಜೀವನಿಗೆ ಕರಣಗಳೇ ಹೊರತು ಬ್ರಹ್ಮನಿಗೆ ಕರಣಗಳಲ್ಲ. ಬ್ರಹ್ಮನಿಗೆ ಕರಣಗಳೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆ ದೃಷ್ಟಾಂತದಿಂದ ಸಕಲ ಶ್ರುತಿಗಳೂ ಅಪ್ರಮಾಣ. ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ದೃಷ್ಟಾಯುಕ್ತಿ' (ಶ್ರುತಿಬೋಧ್ಯವಾದ ಜೀವಕರಣತ್ವದಿಂದ ಕೂಡದಿರುವುದು) ಎಂಬುದು. ಇದನ್ನೇ 'ಪ್ರತ್ಯಕ್ಷದಿಂದ ಕಂಡದ್ದು ಕೂಡದಿರುವುದು, ಶ್ರುತಿಬೋಧ್ಯವಾದ ಬ್ರಹ್ಮಕರಣತ್ವವು ಕೂಡದಿರು ವುದು' ಎಂಬ ಎರಡರ್ಥಗಳಲ್ಲಿ ಸಿದ್ಧಾಂತನ್ಯಾಯವನ್ನಾಗಿ ವಿವರಿಸುತ್ತಿದ್ದಾರೆ—

**ನ ಚೇಂದ್ರಿಯಾಣಾಂ ಜೀವಾಕರಣತ್ವೇ ದೃಷ್ಟಾಯುಕ್ತಿಃ । ಕ್ವಚಿದತದ್ವ-ಶತ್ವಸ್ಯಾಪಿ ದೃಷ್ಟತ್ವಾತ್ । 'ಯಚ್ಚಕ್ಷುಷಿ ತಿಷ್ಠನ್' ಇತ್ಯಾದಿದೃಷ್ಟಾತ್ಯುಕ್ತೇ-ರೀಶಾಧೀನತ್ವಾನಂಗೀಕಾರೇ । ಲೌಕಿಕದೃಷ್ಟೇಸ್ತ್ವೀಶೇನೈವ ಜೀವಾನುಸಾರಿತ್ವ-ಕ್ಲೃಪ್ತ್ಯೋಪಪತ್ತೇಃ ॥ ೧೦ ॥**

**ಭಾವಾರ್ಥ**—ಇಂದ್ರಿಯಗಳು ಜೀವನಿಗೆ ಅಧೀನವಾದ ಕರಣಗಳು ಎಂದು ಅಂಗೀಕರಿಸದಿದ್ದರೆ ಜೀವಕರಣತ್ವವನ್ನು ಶ್ರುತಿಗಳಿಂದ ಹೇಳುವುದು ಅಯುಕ್ತ ವಾಗುತ್ತದೆ. ಆದ್ದರಿಂದ ಜೀವನಿಗೆ ಕರಣಗಳೆಂದೇ ಅಂಗೀಕರಿಸಬೇಕು ಎಂಬ

ಪೂರ್ವಪಕ್ಷ ಸರಿಯಲ್ಲ. ಏಕೆಂದರೆ ಇಂದ್ರಿಯಗಳು ಜೀವನ ವಶವಲ್ಲವೆಂದೇ ಕಂಡಿವೆ. ಮತ್ತು 'ಯಶ್ಚಕ್ಷುಷಿ ತಿಷ್ಠನ್' (ಯಾವನು ಕಣ್ಣಿನಲ್ಲಿದ್ದು ನಿಯಂತ್ರಿಸುವನೋ ಅವನೇ ಬ್ರಹ್ಮ) ಎಂದು ಶ್ರುತಿಯಲ್ಲಿ ಬ್ರಹ್ಮನ ಕರಣಗಳು ಎಂದು ಹೇಳಿದ್ದು ಅಯುಕ್ತವಾಗುವುದು. ಲೋಕದಲ್ಲಿ ಕೆಲವೊಮ್ಮೆ ಇಂದ್ರಿಯಗಳು ಜೀವನ ಅಧೀನವಾಗಿ ಕಂಡರೂ ಭಗವಂತನ ಇಚ್ಛೆಯಂತೆಯೇ ಜೀವನ ಅಧೀನವಾಗಿವೆ ಎಂದು ತಿಳಿಯಬೇಕು.

**ವಿವರಣೆ**— ಲೋಕದಲ್ಲಿ ಜೀವನು ಕೆಲವೊಮ್ಮೆ ದುರ್ಗಂಧವನ್ನು ಮೂಸ ಬಾರದು. ತನ್ನ ನಾಲಿಗೆಯನ್ನು ನಾನೇ ಕಚ್ಚಬಾರದು ಎಂದು ಅಂದುಕೊಳ್ಳುತ್ತಾನೆ. ಆದರೆ ದುರ್ಗಂಧವನ್ನು ಮೂಸುತ್ತಾನೆ. ತನ್ನ ನಾಲಿಗೆಯನ್ನು ತಾನೇ ಕಚ್ಚಿಕೊಳ್ಳುವುದು ಕಂಡಿದೆ. ಒಂದುವೇಳೆ ಇಂದ್ರಿಯಗಳು ಅವನ ಅಧೀನವಾಗಿದ್ದರೆ ಇದು ಕೂಡಬಾರದಾಗಿತ್ತು. ಆದ್ದರಿಂದ ಬ್ರಹ್ಮನ ಅಧೀನವೆಂದೇ ಒಪ್ಪಬೇಕು. ಮತ್ತು ಶ್ರುತಿಯಲ್ಲಿ 'ಯಶ್ಚಕ್ಷುಷಿ ತಿಷ್ಠನ್' ಎಂದು ಹೇಳಿದ ಜಗತ್ಕರಣತ್ವವು ಕೂಡದಿರಬೇಕಿತ್ತು. ಆದ್ದರಿಂದಲೂ ಇಂದ್ರಿಯಗಳು ಬ್ರಹ್ಮನ ಅಧೀನವೆಂದು ಒಪ್ಪಬೇಕು.

ಕೆಲವೊಮ್ಮೆ ಜೀವನು ತಾನು ಅಂದುಕೊಂಡಂತೆ ಕೆಲಸ ಮಾಡುವುದನ್ನೂ ಕಾಣುತ್ತೇವೆ. ಆದ್ದರಿಂದ ಇಂದ್ರಿಯಗಳು ಜೀವನ ಅಧೀನವೆಂದು ಹೇಳಬಹುದು ಎನ್ನುವುದು ಸರಿಯಲ್ಲ. ಪಿಶಾಚವು ಒಳ ಹೊಕ್ಕಾಗ ಜೀವನು ಬಹಳ ಭಾರವನ್ನು ಹೊರುತ್ತಾನೆ. ಅದು ಅವನ ಕೆಲಸವಲ್ಲ. ಅದು ಪಿಶಾಚದ ಕೆಲಸ. ಅದರಂತೆ 'ಜೀವನಿಂದ ಈ ಕೆಲಸವು ನಡೆಯಲಿ' ಎಂದು ಪರಮಾತ್ಮನ ಇಚ್ಛೆಯಂತೆ ಅದು ನಡೆಯುವುದೇ ಹೊರತು ಜೀವನಿಂದಲ್ಲ. ಹೀಗೆ ಪರಮಾತ್ಮನ ಅಧೀನವಾಗಿ ಅವನ ಇಚ್ಛೆಯಂತೆ ಇಂದ್ರಿಯಗಳು ಜೀವನ ಕರಣಗಳಾದ್ದರಿಂದ 'ಜೀವಸ್ಯ ಕರಣಾನ್ಯಾಹುಃ' ಎಂಬ ಶ್ರುತಿಗೆ ಅಪ್ರಾಮಾಣ್ಯವೂ ಬರುವುದಿಲ್ಲ. ಆದ್ದರಿಂದ ಎಲ್ಲ ವೇದಗಳು ಪ್ರಮಾಣಗಳೇ. ಅವುಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ||**

ಜ್ಯೋತಿರಾದ್ಯಧಿಷ್ಠಾನಂ=ಚಕ್ಷುರಾದಿ ಇಂದ್ರಿಯರೂಪ ಜ್ಯೋತಿಗಳಿಗೆ ಪ್ರೇರಕನು ಬ್ರಹ್ಮನೇ ಏಕೆಂದರೆ ತದಾಮನನಾತ್='ಯಶ್ಚಕ್ಷುಷಿ ತಿಷ್ಠನ್' ಮೊದಲಾದ ಶ್ರುತಿಗಳಲ್ಲಿ ಆರೀತಿ ಪ್ರತಿಪಾದಿಸಿದ್ದರಿಂದ.

## ತ ಇಂದ್ರಿಯಾಧಿಕರಣ (2-4-11)

ಓಂ ತ ಇಂದ್ರಿಯಾಣಿ ತದ್‌ವ್ಯಪದೇಶಶಾದನ್ಯತ್ರ ಶ್ರೇಷ್ಠಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಇಂದ್ರಿಯಗಳೇ ವಿಷಯ. 'ಪ್ರಾಣಾ ವಾ ಇಂದ್ರಿಯಾಣಿ' ಎಂಬ ಶ್ರುತಿಯು ಸಾಮಾನ್ಯವಾಗಿ ಎಲ್ಲ ಹದಿಮೂರು ಪ್ರಾಣಗಳಿಗೂ ಇಂದ್ರಿಯತ್ವವನ್ನು ಹೇಳುತ್ತಿದೆ. 'ದ್ವಾದಶ್ಯೆ-ವೇಂದ್ರಿಯಾಣ್ಯಾಹುಃ' ಎಂಬ ಶ್ರುತಿಯು ಹನ್ನೆರಡು ಪ್ರಾಣಗಳಿಗೆ ಇಂದ್ರಿಯತ್ವವನ್ನು ಹೇಳುತ್ತಿದೆ. ಇಂತಹ ವಿರುದ್ಧವಾದ ಶ್ರುತಿಗಳಿಂದ ಮುಖ್ಯಪ್ರಾಣನೂ ಸೇರಿ ಎಲ್ಲ ಪ್ರಾಣಗಳೂ ಇಂದ್ರಿಯಗಳೋ? ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಪ್ರಾಣಗಳು ಇಂದ್ರಿಯಗಳೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ಪ್ರಾಣಾ ವಾ ಇಂದ್ರಿಯಾಣಿ' ಎಂಬ ಶ್ರುತಿಯು ಮುಖ್ಯಪ್ರಾಣನನ್ನು ಒಳಗೊಂಡಂತೆ ಎಲ್ಲ ಪ್ರಾಣಗಳಿಗೂ ಇಂದ್ರಿಯತ್ವವನ್ನು ಹೇಳುತ್ತಿದೆ. ಮುಖ್ಯಪ್ರಾಣನನ್ನು ಬಿಡಲು ಯಾವುದೇ ಕಾರಣವಿಲ್ಲ. 'ಇದಂ ಪ್ರತಿ ದ್ರವಣ (ವಿಷಯ ಪದಾರ್ಥಗಳನ್ನು ಕುರಿತು ಹೋಗುವುದು) ರೂಪವಾದ ಇಂದ್ರಿಯತ್ವವು, ಪರಮಾತ್ಮನ ಅಧೀನವಾಗಿರುವುದು, 'ಪ್ರಾಣಾ ವಾ ಇಂದ್ರಿಯಾಣಿ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿರುವುದು ಎಂಬ ಮೂರು ವಿಧವಾದ ಸಾಮ್ಯ ವಿರುವುದರಿಂದ ಹದಿಮೂರು ಪ್ರಾಣರಲ್ಲಿಯೂ ಇಂದ್ರಿಯತ್ವವಿದೆ. ಇದಕ್ಕೆ ವಿರುದ್ಧವಾಗಿ ಹನ್ನೆರಡು ಪ್ರಾಣರಲ್ಲಿ ಮಾತ್ರ ಇಂದ್ರಿಯತ್ವವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಇವುಗಳಂತೆ ಉಳಿದ ಶ್ರುತಿಗಳೂ ಅಪ್ರಮಾಣವಾಗುವುದರಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಈ ಪೂರ್ವಪಕ್ಷಕ್ಕೆ ಸಾಧಕವಾದ ನ್ಯಾಯ 'ಈಶಸಾಮ್ಯ' (ಭಗವಂತನ ಅಧೀನವಾಗುವುದು ಎಲ್ಲರಂತೆ ಮುಖ್ಯಪ್ರಾಣನಿಗೂ ಸಮಾನ) ಎಂಬುದು. ಈ ನ್ಯಾಯವನ್ನು 'ಪರಮಾತ್ಮನ ಸಾಮ್ಯ' ಎಂಬರ್ಥದಲ್ಲಿ ಸಿದ್ಧಾಂತ ನ್ಯಾಯವನ್ನಾಗಿ ವಿವರಿಸುತ್ತಿದ್ದಾರೆ—

**ನ ಚೇಶವಶತ್ವಸಾಮ್ಯಾತ್ ಮುಖ್ಯಪ್ರಾಣಸ್ಯಾಪ್ಯನ್ಯಸಾಮ್ಯಮ್ । 'ಯಸ್ಮಿನ್ನಿದಂ ಸರ್ವಮಧ್ಯಾರ್ಧ್ನೋತ್ । ಪ್ರಾಣಸ್ಯೈತದ್ ವಶೇ ಸರ್ವಂ ತ್ರಿದಿವೇ ಯತ್ಪ್ರತಿಷ್ಠಿತಮ್' ಇತ್ಯಾದಿ ಶ್ರುತೇರೀಶಸಾಮ್ಯಸ್ಯಾಪಿ ಭಾವಾತ್ । 'ಪ್ರಾಣಸ್ಯೈತದ್ ವಶೇ ಸರ್ವಂ ಪ್ರಾಣಃ ಪರವಶೇ ಸ್ಥಿತಃ' ಇತಿ ಮಧ್ಯಮತ್ವೋಪಪತ್ತೇಃ ॥**

**ಭಾವಾರ್ಥ**—ಪರಮಾತ್ಮನ ಅಧೀನತ್ವವು ಎಲ್ಲ ಪ್ರಾಣಗಳಂತೆ ಮುಖ್ಯ ಪ್ರಾಣನಿಗೂ ಸಮಾನವಾದ್ದರಿಂದ ಮುಖ್ಯಪ್ರಾಣನಿಗೂ ಇಂದ್ರಿಯತ್ವವನ್ನು ಒಪ್ಪ ಬೇಕು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ಈ ಪ್ರಪಂಚದಲ್ಲಿ ಯಾವುದೆಲ್ಲ ಪ್ರಸಿದ್ಧವಾಗಿದೆಯೋ, ಯಾವುದು ಸ್ವರ್ಗದಲ್ಲಿದೆಯೋ ಅದೆಲ್ಲವೂ ಪ್ರಾಣನ ಅಧೀನದಲ್ಲಿದೆ' ಎಂಬ ಶ್ರುತಿಯು ಮುಖ್ಯಪ್ರಾಣನಿಗೆ ಪರಮಾತ್ಮನ ಸಾಮ್ಯವನ್ನು ಹೇಳುತ್ತಿದೆ. ಆದ್ದರಿಂದ ಅವನಿಗೆ ಇಂದ್ರಿಯತ್ವವಿಲ್ಲ. 'ಎಲ್ಲವೂ ಪ್ರಾಣನ ಅಧೀನದಲ್ಲಿದೆ. ಪ್ರಾಣನು ಪರಮಾತ್ಮನ ಅಧೀನ'ವೆಂದು ಶ್ರುತಿ ತಿಳಿಸುವುದರಿಂದ ಉಳಿದ ಪ್ರಾಣಗಳಿಗಿಂತ ಉತ್ತಮನಾದರೂ ಈಶ್ವರ ಅಧೀನನಾದ್ದರಿಂದ ಮಧ್ಯಮನೆಂದು ಹೇಳುವುದು ಉಪಪನ್ನವಾಗುತ್ತದೆ.

**ವಿವರಣೆ**— 'ಯಸ್ಮಿನ್ನಿದಮಧ್ಯಾರ್ಧ್ನೋತ್' ಎಂಬಿತ್ಯಾದಿ ಶ್ರುತಿಯು ಮುಖ್ಯಪ್ರಾಣನಿಗೆ ಈಶ್ವರನಂತೆ ಸರ್ವನಿಯಾಮಕತ್ವವೆಂಬ ಸಾಮ್ಯವನ್ನು ತಿಳಿಸು ತ್ತಿದೆ. ಅದರಂತೆ, 'ದ್ವಾದಶೈವೇಂದ್ರಿಯಾಣ್ಯಾಹುಃ ಪ್ರಾಣೋ ಮುಖ್ಯಸ್ತ್ವ ನಿಂದ್ರಿಯಮ್ । ದ್ರವತಾಂ ಹೀಂದ್ರಿಯಾಣಾಂ ತು ನಿಯಂತಾ ಪ್ರಾಣ ಏಕರಾಟ್ ॥ (ಇಂದ್ರಿಯಗಳು ಹನ್ನೆರಡೇ ಎಂದು ಹೇಳುತ್ತಾರೆ. ಮುಖ್ಯಪ್ರಾಣನು ಇಂದ್ರಿಯನಲ್ಲ. ಏಕೆಂದರೆ ಅವನು ವಿಷಯಗಳ ಕಡೆಗೆ ಧಾವಿಸುವ ಇಂದ್ರಿಯ ಗಳಿಗೆ ನಿಯಾಮಕನು ಮತ್ತು ಸ್ವತಂತ್ರನು.) ಎಂಬ ಶ್ರುತಿಯು ಪರಮಾತ್ಮನ ಇಂದ್ರಿಯನಿಯಾಮಕತ್ವವೆಂಬ ಸಾಮ್ಯವನ್ನು ಮುಖ್ಯಪ್ರಾಣನಿಗೆ ಹೇಳುತ್ತಿದೆ. ಆದ್ದರಿಂದ ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಪ್ರಾಣಗಳಲ್ಲಿಯೇ ಇಂದ್ರಿಯತ್ವ ವಿದೆ. ಯಾವ ಶ್ರುತಿಗೂ ಅಪ್ರಾಮಾಣ್ಯಕ್ಕೆ ಅವಕಾಶವಿಲ್ಲದಿರುವುದರಿಂದ ಸಕಲ ಶ್ರುತಿಗಳೂ ಪ್ರಮಾಣಗಳೇ. ಅವುಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವ ಸಿದ್ಧವಾಗಲು ಯಾವುದೇ ಬಾಧಕವಿಲ್ಲ.

**ಸೂತ್ರಾರ್ಥ—**

**ಓಂ ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ ॥**

ಶ್ರೇಷ್ಠಾದ್ ಅನ್ಯತ್ರ=ಮುಖ್ಯಪ್ರಾಣನ ಹೊರತಾಗಿ ತೇ=ಇತರವಾದ ಪ್ರಾಣಗಳು ಇಂದ್ರಿಯಾಣಿ=ಇಂದ್ರಿಯಗಳು ಏಕೆಂದರೆ ತದ್ವ್ಯಪದೇಶಾತ್= ಶ್ರುತಿಯಲ್ಲಿ ಹಾಗೆ ಹೇಳಿದ್ದರಿಂದ.

## ಸಂಜ್ಞಾಧಿಕರಣ (2-4-12)

ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ ಕುರ್ವತ ಉಪದೇಶಾತ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಶರೀರವು ವಿಷಯ. 'ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ' ಎಂಬ ಶ್ರುತಿಯು ಚತುರ್ಮುಖನೇ ಈ ಶರೀರವನ್ನು ಸೃಷ್ಟಿಸಿದನೆನ್ನುತ್ತಿದೆ. 'ಅಥ ಕಸ್ಮಾದುಚ್ಯತೇ ಪರಮ ಇತಿ' ಎಂಬ ಶ್ರುತಿಯು ಪರಮಾತ್ಮನಿಂದ ಸೃಷ್ಟಿಯಾಗಿದೆ ಎಂದು ತಿಳಿಸುತ್ತಿದೆ. ಈ ಎರಡು ವಿಧವಾದ ಶ್ರುತಿಗಳಿಂದ ಶರೀರವು ಚತುರ್ಮುಖನಿಂದ ಸೃಷ್ಟವಾಗಿದೆಯೋ? ಅಥವಾ ಪರಮಾತ್ಮನಿಂದಲೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ—**'ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ' (ಚತುರ್ಮುಖನೇ ಈ ಎಲ್ಲ ಪ್ರಪಂಚವನ್ನು ಸೃಷ್ಟಿಸುತ್ತಾನೆ) ಎಂದು ಶ್ರುತಿ ಇರುವುದರಿಂದ ಚತುರ್ಮುಖನೇ ಈ ಶರೀರದ ಕರ್ತೃ. ಇಷ್ಟೇ ಅಲ್ಲದೆ 'ಯಸ್ಮಾದ್ ವಿರೇಚಯೇತ್ ಸರ್ವಂ ವಿರಿಂಚಸ್ತೇನ ಭಣ್ಯತೇ' ಎಲ್ಲವನ್ನು ಸೃಷ್ಟಿಸುವುದರಿಂದಲೇ ಅವನು ವಿರಿಂಚನೆನಿಸಿದ್ದಾನೆ ಎಂದು ಯುಕ್ತಿಸಹಿತವಾಗಿ ಶ್ರುತಿಯೇ ವಿರಿಂಚನಿಗೆ ಶರೀರಕರ್ತೃತ್ವವನ್ನು ಹೇಳುತ್ತಿದೆ. ಇದಕ್ಕೆ ವಿರುದ್ಧವಾಗಿ ಪರಮಾತ್ಮನು ಶರೀರಕರ್ತನೆಂದು ಪ್ರತಿಪಾದಿಸುವ ಶ್ರುತಿಯು ಅಪ್ರಮಾಣ. ಅವುಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವ ಸಿದ್ಧಿಸಲಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಕರ್ತೃಶಕ್ತಿಃ**' (ಚತುರ್ಮುಖನಿಗೆ ಶ್ರುತಿಯಿಂದ ಹೇಳಲ್ಪಡುವ ಕರ್ತೃತ್ವಶಕ್ತಿ) ಎಂಬುದು. ಇದನ್ನೇ 'ವಿಷ್ಣುವಿಗೇ ಕರ್ತೃತ್ವಶಕ್ತಿಯಿದೆ' ಎಂಬ ಅರ್ಥದಲ್ಲಿ ಸಿದ್ಧಾಂತನ್ಯಾಯವನ್ನಾಗಿ ವಿವರಿಸು ತ್ತಿದ್ದಾರೆ—

ನ ಚ ವಿರಿಂಚಸ್ಯಾಪಿ ಕರ್ತೃತ್ವಶಕ್ತೇಃ ಸ ಏವ ಶರೀರಾದಿಸ್ರಷ್ಟಾ ।
'ತ್ರಿವೃತ್ಕ್ರಿಯಾ ಯತೋ ವಿಷ್ಣೋ ರೂಪಂ ಚ ತದಪೇಕ್ಷಯಾ ।
ರೂಪಾಪೇಕ್ಷಂ ತಥಾ ನಾಮ ವ್ಯವಹಾರಸ್ತದಾತ್ಮಕಃ ॥
ಅತೋ ರೂಪಸ್ಯ ನಾಮ್ನಶ್ಚ ವ್ಯವಹಾರಸ್ಯ ಚೈಕರಾಟ್ ।
ಹರಿರೇವ ಯತಃ ಕರ್ತಾ ಪಿತಾಽತೋ ಭಗವಾನ್ ಪ್ರಭುಃ' ॥

ಇತ್ಯಾದೇಸ್ತಸ್ಯೈವ ಕರ್ತೃತ್ವಶಕ್ತೇರ್ವಿರಿಂಚಸ್ಯ ತು ದ್ವಾರತಯೋ-ಪಪತ್ತೇಃ ॥ ೧೨ ॥

**ಭಾವಾರ್ಥ**—ಚತುರ್ಮುಖನಿಗೆ ಕರ್ತೃತ್ವಶಕ್ತಿಯು ಶ್ರುತವಾಗುವುದರಿಂದ ಶರೀರಕ್ಕೆ ಚತುರ್ಮುಖನೇ ಕರ್ತೃ ಎಂದು ಅಂಗೀಕರಿಸುವುದು ಸರಿಯಲ್ಲ. ಏಕೆಂದರೆ 'ಯಾವ ಕಾರಣದಿಂದ ತ್ರಿವೃತ್ಕರಣವು ವಿಷ್ಣುವಿನಿಂದೇ ಆಗುವುದೋ ರೂಪಾತ್ಮಕಪ್ರಪಂಚವು ತ್ರಿವೃತ್ಕರಣ ಸಾಪೇಕ್ಷವಾಗಿದೆಯೋ ಹಾಗೆಯೇ ನಾಮವಾದರೂ ರೂಪಪ್ರಪಂಚವನ್ನು ಅಪೇಕ್ಷಿಸಿ ಇದೆಯೋ ಆ ಕಾರಣದಿಂದ ನಾಮಪ್ರಪಂಚಕ್ಕೂ ರೂಪಪ್ರಪಂಚಕ್ಕೂ ಭಾಷೆಗೂ ಸ್ವತಂತ್ರಕರ್ತನು ಶ್ರೀಹರಿಯೊಬ್ಬನೇ. ಆದ್ದರಿಂದ ಶ್ರೀಹರಿಯು ಕರ್ತ, ತಂದೆ, ಅಷ್ಟೇ ಅಲ್ಲದೆ ಸ್ವಾಮಿಯೂ ಆಗಿದ್ದಾನೆ) ಎಂಬಿವೇ ಮೊದಲಾದ ಶ್ರುತಿಯಿಂದ ಕರ್ತೃತ್ವಶಕ್ತಿಯು ವಿಷ್ಣುವಿಗೇ ಶ್ರುತವಾಗುತ್ತಿರುವುದರಿಂದ ಬ್ರಹ್ಮನನ್ನು ಅವಾಂತರ ಕರ್ತೃವೆಂದು ಹೇಳಬಹುದಾಗಿದೆ.

**ವಿವರಣೆ**—ವಿಷ್ಣುವಿಗೇ ಕರ್ತೃತ್ವ ಶಕ್ತಿಯು 'ತ್ರಿವೃತ್ಕ್ರಿಯಾ...' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ವಿಷ್ಣುವೇ ಶರೀರಕ್ಕೆ ಕರ್ತೃ ಎಂಬುದು ಸಿದ್ಧಾಂತ. ಶ್ರೀಹರಿ ತಾನು ಸೃಷ್ಟಿಸುವಾಗ ಚತುರ್ಮುಖನ ದ್ವಾರಾ ಸೃಷ್ಟಿಸುವುದರಿಂದ ಚತುರ್ಮುಖನಿಗೆ ಅವಾಂತರಕರ್ತೃವು ಕೂಡುತ್ತದೆ. 'ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ' ಮುಂತಾದ ಶ್ರುತಿಗಳು ಚತುರ್ಮುಖನಿಗೆ ಅವಾಂತರ ಕರ್ತೃತ್ವವನ್ನೇ ಹೇಳುತ್ತವೆ ಎಂದು ಕೂಡಿಸಲು ಬರುವುದರಿಂದ ಶ್ರುತಿಗಳಲ್ಲಿ ವಿರೋಧವಿಲ್ಲ. ಆದ್ದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ**

ಸಂಜ್ಞಾಮೂರ್ತಿಕ್ಲೃಪ್ತಿಃ=ನಾಮರೂಪಾತ್ಮಕವಾದ ದೇಹೇಂದ್ರಿಯ ಪ್ರಪಂಚದ ಸೃಷ್ಟಿಯು ತ್ರಿವೃತ್ಕುರ್ವತಸ್ತು=ಪೃಥಿವೀ, ಅಪ್, ತೇಜಸ್ಸುಗಳ ಮಿಶ್ರಣವನ್ನು ಮಾಡುವ ಪರಮಾತ್ಮನಿಂದಲೇ ಏಕೆಂದರೆ ಉಪದೇಶಾತ್= 'ಸರ್ವಾಣಿ ರೂಪಾಣಿ ವಿಚಿತ್ಯ ಧೀರಃ' ಎಂಬ ಶ್ರುತಿಯಿರುವುದರಿಂದ.

## ಮಾಂಸಾಧಿಕರಣ (2-4-13)

ಓಂ ಮಾಂಸಾದಿಭೌಮಂ ಯಥಾಶಬ್ದಮಿತರಯೋಶ್ಚ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದ ವಿಷಯ ಶರೀರ. 'ಅದ್ಭ್ಯೋ ಹೀದಮುತ್ಪದ್ಯತೇ' ಎಂಬ ಶ್ರುತಿಯು ಜಲದಿಂದ ಶರೀರ ಹುಟ್ಟುತ್ತದೆ ಎನ್ನುತ್ತಿದೆ. 'ಪೃಥಿವೀಂ ಶರೀರಮಪ್ಯೇತಿ' ಎಂಬ ಶ್ರುತಿಯು ಪೃಥಿವಿಯಿಂದ ಶರೀರ ಹುಟ್ಟಿತು ಎನ್ನುತ್ತಿದೆ. 'ಸೋಗ್ನೇರ್ದೇವಯೋನ್ಯಾ ಆಹುತೀಭ್ಯಃ ಸಂಭೂಯ ಹಿರಣ್ಮಯಶರೀರ ಊರ್ಧ್ವಂ ಸ್ವರ್ಗಲೋಕಮೇತಿ' ಎಂಬ ಶ್ರುತಿಯು ತೈಜಸವೆನ್ನುತ್ತಿದೆ. 'ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ' ಎಂಬ ಶ್ರುತಿಯು ಭೂತತ್ರಯಾತ್ಮಕವೆನ್ನುತ್ತಿದೆ. ಹೀಗೆ ಪರಸ್ಪರವಿರುದ್ಧವಾದ ಶ್ರುತಿಗಳಿಂದ ಈ ಶರೀರವು ಜಲ ಪರಿಣಾಮವೋ? ಪೃಥಿವೀ ಪರಿಣಾಮವೋ? ತೇಜಸ್ಸಿನ ಪರಿಣಾಮವೋ? ಅಥವಾ ಈ ಮೂರರ ಪರಿಣಾಮವೋ? ಎಂಬ ಸಂದೇಹ ಬರುತ್ತದೆ.

**ಪೂರ್ವಪಕ್ಷ—**'ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ' ಎಂಬ ಶ್ರುತಿಯು ಪ್ರತಿಪಾದಿಸುವಂತೆ ಈ ಶರೀರ ಪೃಥಿವೀ, ಅಪ್, ತೇಜಸ್ಸುಗಳ ಮಿಶ್ರಣವೇ ಆಗಿದೆ. ಆದ್ದರಿಂದ 'ಇದು ಪೃಥಿವಿಯ ಪರಿಣಾಮವೇ ಆಗಿದೆ' ಎಂಬಿತ್ಯಾದಿಯಾಗಿ ಹೇಳುವ ಶ್ರುತಿಗಳು ಅಪ್ರಮಾಣ. ಅವುಗಳ ದೃಷ್ಟಾಂತದಿಂದ ಸಕಲ ಶ್ರುತಿಗಳೂ ಅಪ್ರಮಾಣವಾಗುತ್ತವೆ. ಅವುಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಮಿಶ್ರಿತಾ' (ಶರೀರವು ಮೂರು

ಭೂತಗಳ ಮಿಶ್ರಣವೆಂದು ಅಂಗೀಕರಿಸಿದಾಗ 'ಈ ಶರೀರ ಪೃಥಿವೀಮಯವೇ' ಎಂಬಿವೇ ಮೊದಲಾದ ವಚನಗಳ ಅನುಪಪತ್ತಿ) ಎಂಬುದು. ಇದನ್ನೇ 'ದೇಹವು ಮೂರುಭೂತಗಳ ಮಿಶ್ರಣವಾದಾಗಲೂ ವಿಶೇಷವಿದೆ' ಎಂಬ ಅರ್ಥದಲ್ಲಿ ಸಿದ್ಧಾಂತಸಾಧಕಯುಕ್ತಿಯನ್ನಾಗಿ ವಿವರಿಸುತ್ತಿದ್ದಾರೆ—

**ನ ಚ ವಿಮಿಶ್ರಿತತ್ವಾದ್ಭೂತಾನಾಂ ಮಿಶ್ರತಾಯಾಮವಿಶೇಷಃ। ''ಅನ್ನಮಶಿತಂ ತ್ರೇಧಾ ವಿಧೀಯತೇ'' ಇತ್ಯಾದಿನಾ ಮಿಶ್ರತಾಯಾಮಪಿ ವಿಶೇಷೋಕ್ತೇಃ।**

**''ಸರ್ವಂ ಚ ಭೌತಿಕಂ ಮಿಶ್ರಂ ಮಿಶ್ರತ್ವೇಽಪಿ ವಿಶೇಷಿತಾ।**
**ಭೌಮಂ ಮಾಂಸಮಸೃಗ್ವಾರಿ ತೇಜೋ ಮಜ್ಜಾವಿಶೇಷತಃ॥''**

**ಇತ್ಯಾದೇಶ್ಚ॥ ೧೩॥**

ಈ ಶರೀರವನ್ನು ಮೂರು ಭೂತಗಳ ಮಿಶ್ರಣವೆಂದು ಅಂಗೀಕರಿಸಿದರೆ 'ಇದು ಪೃಥಿವಿ ವಿಕಾರ, ಜಲದ ವಿಕಾರ, ತೇಜಸ್ಸಿನ ವಿಕಾರ' ಎಂದು ಶ್ರುತಿಗಳಿಂದ ಹೇಳಲ್ಪಟ್ಟ ವಿಶೇಷವು ಅನುಪಪನ್ನವಾಗುತ್ತದೆ ಎಂದು ಆಕ್ಷೇಪಮಾಡಬಾರದು. ಏಕೆಂದರೆ, ಮಿಶ್ರಣವೆಂದು ಅಂಗೀಕರಿಸಿದರೂ 'ತಿಂದ ಅನ್ನವು ಮೂರು ಭಾಗವಾಗಿ ಮಾಡಲ್ಪಡುತ್ತದೆ' ಎಂದು ಶ್ರುತಿಯು ಹೇಳುತ್ತಿರುವುದರಿಂದ ವಿಶೇಷವನ್ನು ಕೂಡಿಸುವುದು ಹೇಗೆಂದರೆ, 'ಈ ಶರೀರವು ಎಲ್ಲ ಭೂತಗಳ ಮಿಶ್ರಣವಾಗಿದೆ. ಮಿಶ್ರಣವಾದಾಗಲೂ ವಿಶೇಷವೂ ಇದೆ. ಮಾಂಸವು ಪೃಥಿವೀ, ರಕ್ತವು ಜಲ, ಮಜ್ಜೆಯು ತೇಜಸ್ಸು' ಎಂದು ಶ್ರುತಿ ಇರುವುದರಿಂದ.

**ವಿವರಣೆ**—ಈ ಶರೀರವು ಭೂತಗಳ ಮಿಶ್ರಣವೆಂಬುದೂ ಸರಿ; ಪೃಥಿವೀ ವಿಕಾರವೇ, ಜಲದ ವಿಕಾರವೇ, ತೇಜಸ್ಸಿನ ವಿಕಾರವೇ ಎಂಬುದೂ ಸರಿ. ಆದ್ದರಿಂದ ಯಾವುದೂ ಶ್ರುತಿಗಳಿಗೂ ಪರಸ್ಪರ ವಿರೋಧವಿಲ್ಲದಿರುವುದರಿಂದ ಶ್ರುತಿಗಳಿಂದ ವಿಷ್ಣುವಿನ ಜಗತ್ಕರ್ತೃತ್ವವು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ಮಾಂಸಾದಿ ಭೌಮಂ ಯಥಾಶಬ್ದಮಿತರಯೋಶ್ಚ ಓಂ॥**

ಮಾಂಸಾದಿ=ಶರೀರದಲ್ಲಿರುವ ಮಾಂಸವೇ ಮೊದಲಾದದ್ದು ಭೌಮಂ= ಪಾರ್ಥಿವವಾಗಿದೆ ಹೊರತು ಪೂರ್ಣ ಶರೀರವಲ್ಲ. ಇತರಯೋಃ=ಉಳಿದದ್ದು ತೇಜಸ್ಸುಗಳ ಕಾರ್ಯವೆಂದು ಯಥಾಶಬ್ದಂ=ಶ್ರುತಿಯಲ್ಲಿ ಹೇಳಿದಂತೆ ಅಂಗೀಕರಿಸ ಬೇಕು.

**ಇಲ್ಲಿಗೆ ಎರಡನೆಯ ಅಧ್ಯಾಯವು ಸಮಾಪ್ತವಾಯಿತು.**

# ಮೂರನೆಯ ಅಧ್ಯಾಯ

## ಪ್ರಥಮ ಪಾದ

"ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ" ಎಂಬ ಮೊದಲನೆಯ ಸೂತ್ರದಲ್ಲಿ ಮೋಕ್ಷಪ್ರಾಪ್ತಿಗಾಗಿ ಬ್ರಹ್ಮನ ವಿಚಾರವನ್ನು ಮಾಡಬೇಕು ಎಂದು ಪ್ರಸ್ತುತವಾಗಿತ್ತು. ಹಾಗಾಗಿ ಸಕಲ ಶಬ್ದಗಳನ್ನು ಬ್ರಹ್ಮನಲ್ಲಿ ಹೇಗೆ ಸಮನ್ವಯ ಮಾಡಬೇಕು ಎಂಬುದನ್ನು ಪ್ರಥಮಾಧ್ಯಾಯದಲ್ಲಿ ತಿಳಿಸಲಾಗಿದೆ. ಸಮನ್ವಯ ಮಾಡುವಾಗ ಬರುವ ವಿರೋಧವನ್ನೂ ದ್ವಿತೀಯಾಧ್ಯಾಯದಲ್ಲಿ ಪರಿಹರಿಸಲಾಗಿದೆ. ಇಷ್ಟೂ ಆದಮೇಲೆ ಜಿಜ್ಞಾಸು ಬ್ರಹ್ಮಪ್ರಾಪ್ತಿಗಾಗಿ ಏನು ಮಾಡಬೇಕು? ಎಂಬ ಪ್ರಶ್ನೆ ಬಂದಾಗ, ಮೋಕ್ಷಸಾಧನಗಳನ್ನು ತಿಳಿಯಬೇಕು ಎಂದು ಉತ್ತರಿಸಲಾಗಿದೆ. ಅವುಗಳಲ್ಲಿ ಮೊದಲನೆಯದ್ದಾದ ವೈರಾಗ್ಯದ ನಿರೂಪಣೆಗಾಗಿ ಈ ಪಾದವು ಆರಂಭವಾಗಿದೆ.

ಈ ಪಾದದ ಪೂರ್ವಪಕ್ಷ ನ್ಯಾಯಗಳನ್ನು ಮತ್ತು ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ—

ಸ್ವಾಭಾವಿಕಾಽನ್ಯಥಾನಾಮ ಸಹಾಭಾವಾನ್ಯಥೋಕ್ತಯಃ ।
ಅವಿಶೇಷವಿಶೇಷೌ ಚ ಸಹಭಾವೋ ವಿಮಿಶ್ರತಾ ॥
ವಿರುದ್ಧೋಕ್ತಿಃ ಸಹಸ್ಥಾನಂ ವೈಯರ್ಥ್ಯಂ ಚಾನ್ಯಥಾ ಗತಿಃ ।
ಯುಕ್ತಯಃ ಪೂರ್ವಪಕ್ಷಸ್ಯ ಗುಣಾಧಿಕ್ಯಾರ್ಥತೋ ಭವೌ ॥
ಉಪಪತ್ತಿರ್ದ್ವಿರೂಪತ್ವಮಾಧಿಕ್ಯಮನುರೂಪತಾ ।
ಯೋಗ್ಯತಾ ಬಲವತ್ವಂ ಚ ವಿಭಾಗಃ ಕಾರಣಾಭಾವಃ ॥
ಕ್ಲೃಪ್ತಿರನ್ಯಾ ಗತಿಶ್ಚೈವ ಸಿದ್ಧಾಂತಸ್ಯೈವ ಸಾಧಕಾಃ ॥

ತದಂತರಾಧಿಕರಣದಲ್ಲಿ ಸ್ವಾಭಾವಿಕ ಮತ್ತು ಗುಣಾಧಿಕ್ಯಗಳು ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳು ತ್ರ್ಯಾತ್ಮಕತ್ವಾಧಿಕರಣದಲ್ಲಿ ಅನ್ಯಥಾನಾಮ ಮತ್ತು ಅರ್ಥತೋಭವ, ಪ್ರಾಣಗತ್ಯಧಿಕರಣದಲ್ಲಿ ಸಹಾಭಾವ ಮತ್ತು ಉಪಪತ್ತಿ, ಅಗ್ನ್ಯಾದ್ಯಧಿಕರಣದಲ್ಲಿ ಅನ್ಯಥೋಕ್ತಿ ಮತ್ತು ದ್ವಿರೂಪತ್ವ, ಪ್ರಥಮಾಧಿಕರಣದಲ್ಲಿ ಅವಿಶೇಷ ಮತ್ತು ಆಧಿಕ್ಯ, ಅಶ್ರುತತ್ವಾಧಿಕರಣದಲ್ಲಿ ಅವಿಶೇಷ ಮತ್ತು

ಅನುರೂಪತಾ, ಭಾಕ್ತಾಧಿಕರಣದಲ್ಲಿ ವಿಶೇಷ ಮತ್ತು ಯೋಗ್ಯತಾ, ಕೃತಾತ್ಯಯಾಧಿಕರಣದಲ್ಲಿ ಸಹಭಾವ ಮತ್ತು ಯೋಗ್ಯತಾ, ಯಥೇತಾಧಿಕರಣದಲ್ಲಿ ಸಹಭಾವ ಮತ್ತು ಯೋಗ್ಯತಾ, ಚರಣಾಧಿಕರಣದಲ್ಲಿ ಸಹಭಾವ ಮತ್ತು ಯೋಗ್ಯತಾ, ಅನಿಷ್ಟಾಧಿಕರಣದಲ್ಲಿ ವಿಮಿಶ್ರಿತಾ ಮತ್ತು ಪ್ರಬಲತ್ವ, ಅಪಿಸಪ್ತಾಧಿಕರಣದಲ್ಲಿ ವಿರುದ್ಧೋಕ್ತಿ ಮತ್ತು ವಿಭಾಗ, ತತ್ರಾಪ್ಯಧಿಕರಣ, ವಿದ್ಯಾಧಿಕರಣ, ನತೃತೀಯಾಧಿಕರಣ, ತತ್ಸಾಭಾವ್ಯಾಧಿಕರಣ, ನಾತಿಚಿರೇಣಾಧಿಕರಣ, ಅನ್ಯಾಧಿಷ್ಠಾಧಿಕರಣಗಳಲ್ಲಿ ಸಹಸ್ಥಾನ ಮತ್ತು ಕಾರಣಾಭಾವಗಳು, ರೇತೋಧಿಕರಣದಲ್ಲಿ ವೈಯರ್ಥ್ಯ ಮತ್ತು ಕ್ಲೃಪ್ತಿ ಯೋನ್ಯಧಿಕರಣದಲ್ಲಿ ಅನ್ಯಥಾಗತಿ ಮತ್ತು ಅನ್ಯಗತಿಗಳು ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳು.

## ತದಂತರಾಧಿಕರಣ (3-1-1)

ಓಂ ತದಂತರಪ್ರತಿಪತ್ತೌ ರಂಹತಿ ಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಭೂತಗಳ ಅವಿಯೋಗವು ವಿಷಯ. ಮುಮುಕ್ಷುವಿಗೆ ವೈರಾಗ್ಯಾದಿ ಸಾಧನವು ಅನುಷ್ಠೇಯವೋ? ಅಥವಾ ಅಲ್ಲವೋ? ಎಂಬುದು ಸಂಶಯ. 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿ ವೈರಾಗ್ಯ ಪ್ರಾಪ್ತಿಯ ಅನಂತರ ದಲ್ಲಿ ಬ್ರಹ್ಮ ವಿಚಾರ ಮಾಡಬೇಕು ಎಂದು ಹೇಳಿರುವುದರಿಂದ ವೈರಾಗ್ಯವನ್ನು ಪಡೆದರೇನೇ ವಿಚಾರಮಾಡಬೇಕೆಂಬ ವ್ಯಾಪ್ತಿ ಕಾಣದಿರುವುದರಿಂದಲೂ ವೈರಾಗ್ಯಾದಿ ಸಾಧನವನ್ನು ಅನುಷ್ಠಾನ ಮಾಡಬೇಕೋ? ಬೇಡವೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ :** ಫಲವನ್ನು ಪಡೆಯುವುದಕ್ಕೆ ಸಾಧನವನ್ನು ಅನುಷ್ಠಾನ ಮಾಡಬೇಕು. ಇಲ್ಲಿ ಫಲ ಬಂಧನಿವೃತ್ತಿ. ಪಂಚಭೂತಗಳ ಸಂಬಂಧವೇ ಬಂಧ. ಅವುಗಳಿಂದ ವಿಮೋಚನ ಎಂದರೆ ಮರಣವೇ ಮುಕ್ತಿ ಎಂದು 'ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಮ್' ಎಂಬಲ್ಲಿ ತಿಳಿಸಿದ್ದಾರೆ. ವೈರಾಗ್ಯಾದಿಗಳ ಅನುಷ್ಠಾನವಿಲ್ಲದಿದ್ದರೂ ಸ್ವಾಭಾವಿಕವಾಗಿಯೇ ಮರಣವಾಗುತ್ತದೆ. ಇದಕ್ಕಾಗಿ ಸಾಧನಗಳ ಅನುಷ್ಠಾನ ಏಕೆ? ಆದ್ದರಿಂದ ಸಾಧನಗಳನ್ನು ವಿಧಾನ ಮಾಡುವ ಶಾಸ್ತ್ರವು ವ್ಯರ್ಥ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಸ್ವಾಭಾವಿಕ'** (ಸ್ವಾಭಾವಿಕವಾದ ಮರಣವೇ ಮುಕ್ತಿ) ಎಂಬುದು. ಅದರಂತೆ **'ಗುಣಾಧಿಕ್ಯ'** (ಜ್ಞಾನವೆಂಬ ಗುಣವೇ ಮೋಕ್ಷಸಾಧನದಲ್ಲಿ ಅಧಿಕ)ಎಂಬ ಸಿದ್ಧಾಂತಸಾಧಕನ್ಯಾಯವನ್ನು ವಿವರಿಸುತ್ತಿದ್ದಾರೆ–

**॥ ಹರಿಃ ಓಂ ॥ 'ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಮ್ ।' ಇತಿ ವಚನಾತ್ ಸ್ವಾಭಾವಿಕಮರಣಮೇವ ಮುಕ್ತಿರಿತಿ ನ ಮಂತವ್ಯಮ್। ಮುಕ್ತಿಸಾಧನತ್ವೇನ ಜ್ಞಾನಾದಿಗುಣಾಧಿಕ್ಯೋಪದೇಶಾನ್ಮರಣೇ ಭೂತವಿಯೋಗಸ್ಯೈವಾಭಾವಾತ್ । 'ಭೂತಯುಕ್ತಃ ಪರಂ ಲೋಕಮಿಮಂ ಲೋಕಂ ಚ ಗಚ್ಛತಿ ।' ಇತ್ಯಾದಿವಚನಾತ್ ॥ ೧ ॥**

**ಭಾವಾರ್ಥ—** 'ಪಂಚಭೂತಗಳ ಸಂಬಂಧವೇ ಸಂಸಾರ. ಅವುಗಳಿಂದ ಬಿಡುಗಡೆಯೇ ಮೋಕ್ಷ' ಎಂದು ಹೇಳಿರುವುದರಿಂದ ಸ್ವಾಭಾವಿಕವಾದ ಮರಣವೇ ಮೋಕ್ಷ. ಅದಕ್ಕಾಗಿ ಯಾವುದೇ ಸಾಧನಾನುಷ್ಠಾನದ ಆವಶ್ಯಕತೆ ಇಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಮೋಕ್ಷಕ್ಕೆ ಸಾಧನವಾದುವುಗಳಲ್ಲಿ ಜ್ಞಾನಾದಿ ಗುಣವೇ ಶ್ರೇಷ್ಠವೆಂದು (ಆಧಿಕ್ಯವನ್ನು) ಹೇಳಿದ್ದರಿಂದ ಕೇವಲ ಮರಣವೇ ಮೋಕ್ಷ ವಾಗಲಾರದು. ಮತ್ತು 'ಭೂತಗಳೊಂದಿಗೆ ಕೂಡಿದವನಾಗಿಯೇ ಪರಲೋಕಕ್ಕೂ ಹಾಗೂ ಈ ಲೋಕಕ್ಕೂ ಹೋಗುತ್ತಾನೆ' ಎಂದು ಸ್ಮೃತಿ ಹೇಳುವುದರಿಂದ ಮರಣದಲ್ಲಿಯೂ ಭೂತಗಳ ವಿಯೋಗವು ಆಗಲೂ ಸಾಧ್ಯವಿಲ್ಲ.

**ವಿವರಣೆ—** 'ತಮೇವಂ ವಿದ್ವಾನ್ ಅಮೃತ ಇಹ ಭವತಿ' ಎಂಬ ಶ್ರುತಿಯಲ್ಲಿ ಜ್ಞಾನವೆಂಬ ಗುಣವೇ ಮೋಕ್ಷಸಾಧನದಲ್ಲಿ ಅಧಿಕವೆಂದು ಹೇಳಿದ್ದರಿಂದ ಜ್ಞಾನವಿಲ್ಲದೆ ಮೋಕ್ಷವಾಗಲಾರದು. ಮತ್ತು ಪಂಚಭೂತಗಳ ಸಂಬಂಧವನ್ನು ಕಳೆದುಕೊಳ್ಳುವುದೇ ಮರಣ ಎಂದು ತಿಳಿದಿರುವುದೇ ತಪ್ಪು ಕಲ್ಪನೆ. ಮರಣಕಾಲದಲ್ಲಿ ಸ್ಥೂಲವಾದ ಪಾಂಚಭೌತಿಕ ದೇಹನಾಶವಾದರೂ ಸೂಕ್ಷ್ಮದೇಹ ಜೀವನಿಗೆ ಇದ್ದೇ ಇರುತ್ತದೆ. ಆ ದೇಹದೊಂದಿಗೆ ಸ್ವರ್ಗ, ನರಕಾದಿಗಳಿಗೆ ಸಂಚರಿಸುತ್ತಾನೆ. ಆ ದೇಹವಿರುವವರೆಗೂ ಅವನಿಗೆ ಮೋಕ್ಷವಿಲ್ಲ. ಅದಕ್ಕಾಗಿ ಸಾಧನಗಳ ಅನುಷ್ಠಾನ ಅತ್ಯಾವಶ್ಯಕವಾಗಿದೆ. ಅಂತಹ ಸಾಧನವನ್ನು ಉಪದೇಶಿಸುವ ಶಾಸ್ತ್ರವು ವ್ಯರ್ಥವಲ್ಲ.

**ಸೂತ್ರಾರ್ಥ—**

**ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಂ ಓಂ**

ತದಂತರಪ್ರತಿಪತ್ತೌ=ಮತ್ತೊಂದು ದೇಹವನ್ನು ಪಡೆಯಲು ಸಂಪರಿಷ್ವಕ್ತಃ= ಜೀವನು ಪಂಚಭೂತಯುಕ್ತನಾಗಿಯೇ ರಂಹತಿ=ಹೋಗುತ್ತಾನೆ. ಪ್ರಶ್ನ ನಿರೂಪಣಾಭ್ಯಾಂ=ಇದು ಪ್ರಶ್ನೆ ಮತ್ತು ಉತ್ತರಗಳಿಂದ ತಿಳಿಯುತ್ತದೆ.

## ತ್ರ್ಯಾತ್ಮಕತ್ವಾಧಿಕರಣ (3-1-2)

ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ ಎಂಬ ಒಂದೇ ಸೂತ್ರವನ್ನು ಒಳಗೊಂಡು ಅಧಿಕರಣದಲ್ಲಿ ಪಂಚಭೂತಗಳೇ ವಿಷಯ. 'ಭೂತಸಂಪರಿಷ್ವಕ್ತೋ ಗಚ್ಛತಿ' (ಭೂತಗಳಿಂದ ಯುಕ್ತನಾಗಿಯೇ ಹೋಗುತ್ತಾನೆ.) ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಜೀವನು ಮರಣ ಹೊಂದಿದಾಗ ಸರ್ವಭೂತಗಳಿಂದ ಕೂಡಿಕೊಂಡು ಹೋಗುತ್ತಾನೋ? ಅಥವಾ ಕೇವಲ ಜಲದಿಂದ ಕೂಡಿಕೊಂಡು ಹೋಗುತ್ತಾನೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ—** 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಎಂಬಲ್ಲಿ ಪಂಚಭೂತಗಳನ್ನು ಹೇಳದೆ 'ಆಪಃ' ಎಂದು ನೀರನ್ನು ಮಾತ್ರ ಹೇಳಲಾಗಿದೆ. ಕೇವಲ ನೀರೊಂದರಿಂದಲೇ ಶರೀರ ಸೃಷ್ಟಿಯಾಗಲಾರದು. ಆದ್ದರಿಂದ ಸಕಲ ಭೂತಗಳ ಸಂಬಂಧ ಜೀವನಿಗಿಲ್ಲ. ಮರಣದಿಂದಲೇ ಮೋಕ್ಷಸಿದ್ಧಿ ಯಾಗುವುದರಿಂದ ವೈರಾಗ್ಯಾದಿಗಳನ್ನು ಸಂಪಾದಿಸಿಕೊಳ್ಳುವ ಆವಶ್ಯಕತೆ ಇಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅನ್ಯಥಾ ನಾಮ'** (ಸರ್ವಭೂತಗಳನ್ನು ಹೇಳದೆ ಜಲವನ್ನು ಮಾತ್ರ ಹೇಳಿರುವುದು) ಎಂಬುದು. ಆದರಂತೆ **'ಅರ್ಥತೋ ಭವ'** (ಅರ್ಥಾತ್ ಸರ್ವಭೂತಗಳನ್ನೂ ಗ್ರಹಿಸಬೇಕು) ಎಂಬ ಸಿದ್ಧಾಂತನ್ಯಾಯವನ್ನೂ ವಿವರಿಸುತ್ತಿದ್ದಾರೆ—

**'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಇತ್ಯತ್ರ 'ಭೂತಾನಿ' ಇತಿ ಸಾಮಾನ್ಯನಾಮಾನುಕ್ತ್ವಾ 'ಅಪಾಯ್' ಇತಿ ವಿಶೇಷನಾಮಕಥನಾದಪಾಮೇವ ಸಹಗತಿರಿತಿ ನ ವಾಚ್ಯಮ್। ತ್ರ್ಯಾತ್ಮಕತ್ವಾದ್ ಅಪಾಮರ್ಥತಃ ಸರ್ವಭೂತಾನಾಂ ಗತಿಪ್ರಾಪ್ತೇಃ ॥ ೨ ॥**

**ಭಾವಾರ್ಥ**— ''ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ'' (ದ್ಯುಲೋಕ, ಪರ್ಜನ್ಯ, ಭೂಮಿ, ಗಂಡು, ಹೆಣ್ಣು ಇವುಗಳಲ್ಲಿ ಐದನೆಯದ್ದಾದ ಹೆಣ್ಣಿನಲ್ಲಿ ಪುರುಷನಿಂದ ರೇತೋರೂಪದಿಂದ ಹೋಮಿಸಲ್ಪಟ್ಟ ನೀರು ಪುರುಷ ಶಬ್ದವಾಚ್ಯವಾಗುತ್ತದೆ) ಎಂಬಲ್ಲಿ 'ಭೂತಾನಿ' ಎಂದು ಸಾಮಾನ್ಯ ವಾಗಿ ಹೇಳದೆ 'ಆಪಃ' ಎಂದು ವಿಶೇಷವಾಗಿ ಹೇಳಿದ್ದರಿಂದ ನೀರಿನೊಂದಿಗೇ ಜೀವನು ಹೋಗುತ್ತಾನೆಯೇ ಹೊರತು ಭೂತಗಳೊಂದಿಗೆ ಅಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಜಲವು ಮೂರು ಭೂತಗಳ ಸ್ವರೂಪವಾದ್ದರಿಂದ ಸರ್ವಭೂತಗಳೊಂದಿಗೆ ಯುಕ್ತನಾಗಿಯೇ ಗಮನವನ್ನು ಮಾಡುತ್ತಾನೆ ಎಂದು ಸಿದ್ಧವಾಗುತ್ತದೆ.

**ವಿವರಣೆ**— ಕೇವಲ ಜಲವನ್ನು ನಿರ್ದೇಶಮಾಡಿದ್ದರೂ ಅರ್ಥಾತ್ ಸರ್ವ ಭೂತಗಳನ್ನೂ ಗ್ರಹಣ ಮಾಡಬೇಕು ಎಂದರ್ಥ. ಆದ್ದರಿಂದ ಎಲ್ಲ ಭೂತ ಗಳೊಂದಿಗೂ ಹೋಗುತ್ತಾನೆ. ಆದ್ದರಿಂದ ವೈರಾಗವನ್ನು ಸಂಪಾದಿಸಿಕೊಳ್ಳಬೇಕು ಎಂದು ಸಿದ್ಧವಾಗುತ್ತದೆ.

ಹಾಗಿದ್ದರೆ, ಶ್ರುತಿಯಲ್ಲಿ 'ಆಪಃ' ಎಂದು ಪ್ರತ್ಯೇಕ ಏಕೆ ಗ್ರಹಣ ಮಾಡಿದ್ದಾರೆ? ಎಂದರೆ ಸೃಷ್ಟಿಯಲ್ಲಿ ಯಾವ ಭೂತವೂ ಶುದ್ಧವಲ್ಲ. ಇತರ ಭೂತಗಳಿಂದ ಮಿಶ್ರಿತವಾಗಿಯೇ ಇರುತ್ತವೆ. ಯಾವ ಭೂತವು ಅಧಿಕವಾಗಿರುವುದೋ ಅದರಿಂದಲೇ ವ್ಯವಹರಿಸುತ್ತಾರೆ. ಸೂಕ್ಷ್ಮದೇಹದಲ್ಲಿ ನೀರಿನ ಭಾಗ ಅಧಿ ಕವಾದ್ದರಿಂದ 'ಆಪಃ' ಎಂದು ಕರೆಯಲಾಗಿದೆ. ಅಲ್ಲಿಯೂ ಸರ್ವಭೂತಗಳ ಸಂಬಂಧವಿದ್ದೇ ಇರುತ್ತದೆ.

**ಸೂತ್ರಾರ್ಥ :**

**ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ**

ಜೀವನು ಎಲ್ಲ ಭೂತಗಳಿಂದ ಯುಕ್ತನಾಗಿಯೇ ಹೋಗುತ್ತಾನೆ. 'ಆಪಃ' ಎಂದು ಶ್ರುತಿಯಲ್ಲಿ ವಿಶೇಷವಾಗಿ ಹೇಳಿರುವುದು 'ತ್ರ್ಯಾತ್ಮಕತ್ವಾತ್ತು=ಜಲವು ಪೃಥಿವೀ, ಅಪ್, ತೇಜಸ್ಸು, ಮೂರರಿಂದ ಯುಕ್ತವೇ ಆಗಿರುತ್ತದೆ. ಭೂಯಸ್ತ್ವಾತ್=ಅವುಗಳಲ್ಲಿಯೂ ಜಲಭಾಗವೇ ಬಹಳವಾಗಿರುವುದರಿಂದ ಶ್ರುತಿಯು ಕೂಡುತ್ತದೆ.

## ಪ್ರಾಣಗತ್ಯಧಿಕರಣ (3-1-3)

ಓಂ ಪ್ರಾಣಗತೇಶ್ಚ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ಭೂತಗಳೇ ವಿಷಯ. ಯಾವುದೇ ವಿಶೇಷ ಪ್ರಮಾಣವಿಲ್ಲದಿರುವುದರಿಂದ ಭೂತಗಳು ಜೀವನೊಂದಿಗೆ ಹೋಗುತ್ತವೋ? ಇಲ್ಲವೋ? ಎಂಬುದು ಸಂಶಯ.

**ಪೂರ್ವಪಕ್ಷ :** ಜೀವನು ಭೂತಗಳೊಂದಿಗೆ ಹೋಗುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದರೂ ಅದು ಅರ್ಥಾತ್ ಸಿದ್ಧವಾಗುವುದೇ ಹೊರತು ವಿಶೇಷಪ್ರಮಾಣ ಯಾವುದೂ ಇಲ್ಲ. ಆದ್ದರಿಂದ ಸ್ವಾಭಾವಿಕ ಮರಣವೇ ಮುಕ್ತಿ. ವೈರಾಗ್ಯಾದಿಗಳ ಸಂಪಾದನೆಯ ಆವಶ್ಯಕತೆ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ. **'ಅನ್ಯಥೋಕ್ತಿ'** ('ಭೂತಾನಿ ಗಚ್ಛಂತಿ' ಎಂದು ಹೇಳದೇ 'ಆಪಃ ಗಚ್ಛಂತಿ' ಎಂದು ಹೇಳಿರುವುದು) ಎಂಬುದು. ಅದರಂತೆ **'ಉಪಪತ್ತಿ'** (ಅನುಮಾನರೂಪ ಪ್ರಮಾಣದಿಂದ ಭೂತಗಳೊಂದಿಗೆ ಗಮನವು ಉಪಪನ್ನವಾಗುವುದು ಎಂಬ ಸಿದ್ಧಾಂತನ್ಯಾಯವನ್ನು ವಿವರಿಸುತ್ತಿದ್ದಾರೆ—

**ನ ಚ ಭೂತಾನಿ ಗಚ್ಛಂತೀತಿ ಸಹೈವಾನುಕ್ತೇಸ್ತದಭಾವಃ। ಪ್ರಾಣಗತೇರುಪಪತ್ತಿತ ಉಕ್ತತ್ವಾತ್ ॥ ೩ ॥**

**ಭಾವಾರ್ಥ :** 'ಭೂತಾನಿ ಗಚ್ಛಂತಿ' ಎಂದು ಜೀವನು ಭೂತಗಳೊಂದಿಗೆ ಹೋಗುತ್ತಾನೆ ಎಂದು ವಿಶೇಷವಾಗಿ ಹೇಳದಿರುವುದರಿಂದ ಭೂತಗಳೊಂದಿಗೆ ಗಮನವು ಸಿದ್ಧವಾಗುವುದಿಲ್ಲ ಎಂಬುದು ಸರಿಯಲ್ಲ. ಏಕೆಂದರೆ ಪ್ರಾಣಗತಿ (ಇಂದ್ರಿಯಗಳ ಗಮನ) ಎಂಬ ಉಪಪತ್ತಿಯಿಂದ ಭೂತಗಳೊಂದಿಗೆ ಗಮನವು ಸಿದ್ಧವಾಗುತ್ತದೆ.

**ವಿವರಣೆ—** 'ಯತ್ರ ವಾವ ಭೂತಾನಿ ತತ್ರ ಕರಣಾನಿ। ನಿತ್ಯಾನಿ ಹ ವಾ ಏತಾನಿ ಕರಣಾನಿ ಚ। ನೈತಾನಿ ಕಿಂಚಿದ್ ವಿಯುಜ್ಯಂತೇ ನಚ ವಿಲೀಯಂತೇ' (ಎಲ್ಲಿ ಪಂಚಭೂತಗಳು ಇರುತ್ತವೋ ಅಲ್ಲಿ ಮಾತ್ರ ಕರಣಗಳು ಇರುತ್ತವೆ. ಈ ಭೂತಗಳು ಮತ್ತು ಕರಣಗಳು ನಿತ್ಯವಾಗಿವೆ. ಅವುಗಳು ಎಂದೂ ಒಂದನ್ನು ಬಿಟ್ಟು ಮತ್ತೊಂದು ಇರುವುದಿಲ್ಲ.) ಎಂದು ಇಂದ್ರಿಯಗಳಿಗೆ ಜೀವಾತ್ಮನೊಂದಿಗೆ ಗಮನವನ್ನು ಹೇಳಿದ್ದಾರೆ. ಆದ್ದರಿಂದ ಪಂಚಭೂತಗಳೂ ಜೀವಾತ್ಮನೊಂದಿಗೆ ಇದ್ದೇ ಇರುತ್ತವೆ. ಇಂದ್ರಿಯಗಮನಕ್ಕೂ ಭೂತಗಮನಕ್ಕೂ ವ್ಯಾಪ್ತಿ ಇರುವುದರಿಂದ. ಅಂತೂ ಭೂತಗಳ ಗಮನವಿದೆ ಎಂದು ಸಿದ್ಧವಾದ್ದರಿಂದ ವೈರಾಗ್ಯದ ಸಂಪಾದನೆಯು ಯುಕ್ತವಾಗಿದೆ.

**ಸೂತ್ರಾರ್ಥ :**

### ಓಂ ಪ್ರಾಣಗತೇಶ್ಚ ಓಂ

ಪ್ರಾಣಗತೇಶ್ಚ=ಇಂದ್ರಿಯಗಳಿಗೂ ಜೀವನೊಂದಿಗೆ ಗಮನವು ಶ್ರುತವಾಗಿರುವುದರಿಂದಲೂ ಸಹ ಜೀವನು ಭೂತಯುಕ್ತನಾಗಿಯೇ ಹೋಗುತ್ತಾನೆ.

## ಅಗ್ನ್ಯಾದ್ಯಧಿಕರಣ (3-1-4)

ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಅಧಿಕರಣದಲ್ಲಿ ಇಂದ್ರಿಯಗಳು ವಿಷಯ. ಜೀವನೊಂದಿಗೆ ಇಂದ್ರಿಯಗಳಿಗೆ ಗಮನವಿದೆಯೋ? ಇಲ್ಲವೋ ಎಂಬುದು ಸಂಶಯ. ಸರಿಯಾದ ನಿರ್ಣಯವಿಲ್ಲದಿರುವುದೇ ಸಂಶಯಕ್ಕೆ ಕಾರಣವಾಗಿದೆ.

**ಪೂರ್ವಪಕ್ಷ :** 'ಅಗ್ನಿಂ ವಾಗಪ್ಯೇತಿ' ಎಂಬ ಶ್ರುತಿಯಲ್ಲಿ ವಾಗಾದಿ ಇಂದ್ರಿಯಗಳು ಅಗ್ನ್ಯಾದಿಗಳನ್ನು ಹೊಂದುತ್ತವೆ ಎಂದು ಹೇಳಿದೆ. ಹೊರತು ಇಂದ್ರಿಯಗಳಿಗೆ ಜೀವನೊಂದಿಗೆ ಗಮವನ್ನು ಹೇಳಿಲ್ಲ. ಆದ್ದರಿಂದ ಮರಣವೇ ಮೋಕ್ಷ. ವೈರಾಗ್ಯಾದಿಗಳ ಅನುಷ್ಠಾನ ವ್ಯರ್ಥ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಅನ್ಯಥೋಕ್ತಿ**' (ಇಂದ್ರಿಯಗಳಿಗೆ

ಜೀವನೊಂದಿಗೆ ಗಮನಕ್ಕಿಂತ ವಿಪರೀತವಾಗಿ ಹೇಳಿರುವುದು) ಎಂಬುದು. ಅಂತೆಯೇ 'ದ್ವಿರೂಪತ್ವ' (ಇಂದ್ರಿಯಗಳಿಗೆ ಎರಡು ರೂಪವಿರುವುದು) ಎಂಬ ಸಿದ್ಧಾಂತಸಾಧಕ ನ್ಯಾಯವನ್ನೂ ಮುಂದಿನ ಮೂಲದಿಂದ ವಿವರಿಸುತ್ತಿದ್ದಾರೆ—

**ನ ಚ 'ಅಗ್ನಿಂ ವಾಗಪ್ಯೇತಿ' ಇತ್ಯಾದ್ಯನ್ಯಥೋಕ್ತೇಃ ಪ್ರಾಣಾನಾಂ ಚ ನ ಸಹಗತಿಃ ದ್ವಿರೂಪತ್ವಾತ್ ಪ್ರಾಣಾನಾಮ್ ॥ ೪ ॥**

**ಭಾವಾರ್ಥ—**'ಅಗ್ನಿಂ ವಾಗಪ್ಯೇತಿ' ಎಂಬ ಶ್ರುತಿಯಲ್ಲಿ ಇಂದ್ರಿಯಗಳಿಗೆ ಅಗ್ನಿಯೊಂದಿಗೆ ಗಮನವನ್ನು ಹೇಳಿರುವುದರಿಂದ ಜೀವನೊಂದಿಗೆ ಗಮನವು ಕೂಡುವುದಿಲ್ಲ ಎಂದು ಹೇಳಬಾರದು. ಏಕೆಂದರೆ ಇಂದ್ರಿಯಗಳಿಗೆ ಎರಡು ರೂಪಗಳಿರುವುದರಿಂದ.

**ವಿವರಣೆ—** ಇಂದ್ರಿಯಗಳಿಗೆ ಎರಡುರೂಪಗಳಿವೆ. 'ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತುಂ ಅಧಿದೈವ ಪ್ರಾಪ್ನುವಂತಿ ಭಾಗತೋಽನು ವ್ರಜಂತಿ ತಮ್ ॥' (ಜೀವನು ಮೃತನಾದಾಗ ಇಂದ್ರಿಯಗಳೂ ಒಂದು ಭಾಗದಿಂದ ಅಗ್ನ್ಯಾದಿ ಅಧಿದೇವತೆಗಳಲ್ಲಿ ಸೇರುತ್ತವೆ. ಇನ್ನೊಂದು ಭಾಗದಿಂದ ಅವನನ್ನು ಅನುಸರಿಸುತ್ತವೆ' ಎಂದು ಹೇಳಿದ್ದರಿಂದ ಜೀವನೊಂದಿಗೆ ಗಮನವು ಯುಕ್ತವೇ ಆಗಿದೆ. ಆದ್ದರಿಂದ ವೈರಾಗ್ಯಾದಿಗಳ ಅನುಷ್ಠಾನ ವ್ಯರ್ಥವಲ್ಲ.

**ಸೂತ್ರಾರ್ಥ :**

**ಓಂ ಅಗ್ನ್ಯಾದಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ**

ಅಗ್ನ್ಯಾದಿಶ್ರುತೇಃ ಇತಿ ಚೇತ್=ಇಂದ್ರಿಯಗಳಿಗೆ ಅಗ್ನ್ಯಾದಿಗಳನ್ನು ಕುರಿತು ಗಮನವು ಶ್ರುತವಾಗಿರುವುದರಿಂದ ಜೀವನೊಂದಿಗೆ ಗಮನವಿಲ್ಲವೆಂದರೆ ನ=ಅದು ಸರಿಯಲ್ಲ. ಭಾಕ್ತತ್ವಾತ್=ಅಗ್ನ್ಯಾದಿ ಶ್ರುತಿಯು ಇಂದ್ರಿಯಗಳ ಒಂದಂಶವನ್ನು ಮಾತ್ರ ಹೇಳುತ್ತಿರುವುದರಿಂದ.

## ಪ್ರಥಮಾಧಿಕರಣ (3-1-5)

ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ ಎಂಬ

ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ಪ್ರಕೃತವಾದ ಭೂತಗಳೇ ವಿಷಯ. ಮರಣ ಕಾಲದಲ್ಲಿ ಜೀವರೊಂದಿಗೆ ಕೆಲವು ವಸ್ತುಗಳಿಗೆ ಗಮನವಿರುವುದು ಮತ್ತು ಬಹಳ ವಸ್ತುಗಳಿಗೆ ಗಮನವಿಲ್ಲದಿರುವುದೂ ಕಂಡಿದೆಯಾದ್ದರಿಂದ ಭೂತಗಳಿಗೆ ಜೀವನೊಂದಿಗೆ ಗಮನವಿದೆಯೋ? ಇಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' ಎಂಬ ಶ್ರುತಿಯಲ್ಲಿ ಜೀವನಿಗೆ ದ್ಯು ಎಂಬ ಪ್ರಥಮಾಗ್ನಿಯಲ್ಲಿ ಶ್ರದ್ಧಾ ಸಹಿತ ಹೋಮವು ಉಪಕ್ರಮ ದಲ್ಲಿ ಶ್ರುತವಾಗಿದೆ. ಅದರಂತೆ 'ಭೂತಾನಿ ಜುಹ್ವತಿ' ಎಂಬುದಾಗಿ ಭೂತಗಳಿಗೆ ಜೀವನೊಂದಿಗೆ ಗಮನವನ್ನು ಹೇಳಿಲ್ಲ. ಆದ್ದರಿಂದ ಮರಣವೇ ಮೋಕ್ಷ. ಅದಕ್ಕಾಗಿ ವೈರಾಗ್ಯಾದಿ ಸಾಧನಗಳ ಆವಶ್ಯಕತೆ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅವಿಶೇಷ'** (ವಿಶೇಷವಚನವಿಲ್ಲ ದಿರುವುದು) ಎಂಬುದು. ಅದರಂತೆ **'ಆಧಿಕ್ಯ'** (ಉಪಕ್ರಮಕ್ಕಿಂತ ಉಪಸಂಹಾರಕ್ಕೆ ಪ್ರಾಬಲ್ಯವಿರುವುದು) ಎಂಬ ಸಿದ್ಧಾಂತಸಾಧಕನ್ಯಾಯವನ್ನೂ ಮುಂದಿನ ಮೂಲ ದಿಂದ ವಿವರಿಸುತ್ತಿದ್ದಾರೆ–

**ನ ಚ ಪ್ರಥಮತೋ 'ಭೂತಾನಿ ಜುಹ್ವತಿ' ಇತಿ ವಿಶೇಷಾನುಕ್ತೇ-ರ್ಭೂತಾನಾಮಸಹಗತಿಃ 'ಭೂತಾನಿ ಜುಹ್ವತಿ' ಇತ್ಯುಪಕ್ರಮಾದಪಿ 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಇತ್ಯುಪಸಂಹಾರ ಸ್ಯಾಧಿಕ್ಯಾತ್ ತದನುಸಾರೇಣೋಪಕ್ರಮೋಕ್ತಶ್ರದ್ಧಾಶಬ್ದಸ್ಯಾಪಿ ತಾ ಏವಾರ್ಥ ಇತ್ಯಾಪತ್ತೇಃ । ಉಪಕ್ರಮವಿರೋಧೇನೋಪಸಂಹಾರಾನುಪಪತ್ತೇಃ । ಉಪಕ್ರಮಪ್ರಾಮಾಣ್ಯಾರ್ಥಮೇವೋಪಸಂಹಾರಾನುಸಾರಿತ್ವಮಂಗೀ ಕರ್ತವ್ಯಮ್ । ವ್ಯಾಖ್ಯಾನಸ್ಯ ಪಶ್ಚಾತ್ತನತ್ವನಿಯಮಾತ್ । ಉಪಕ್ರಮಾನು ಸಾರಿತ್ವನಿಯಮೇಽಪ್ಯುಪಸಂಹಾರಸ್ಯೋಪಸಂಹಾರೇಣೈವೋಪ ಕ್ರಮಾರ್ಥೋ ಜ್ಞಾಯತೇ ॥ ೫ ॥**

**ಭಾವಾರ್ಥ—**ಉಪಕ್ರಮದಲ್ಲಿ ಪ್ರಥಮಾಗ್ನಿಯಲ್ಲಿ 'ಶ್ರದ್ಧಾಂ ಜುಹ್ವತಿ'

ಎಂದು ಹೇಳದೆ 'ಭೂತಾನಿ ಜುಹ್ವತಿ' ಎಂದು ವಿಶೇಷವಾಗಿ ಹೇಳದಿರುವುದರಿಂದ ಜೀವನು ಭೂತಗಳೊಂದಿಗೆ ಹೋಗುವುದಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. 'ಭೂತಾನಿ ಜುಹ್ವತಿ' ಎಂಬ ಉಪಕ್ರಮಕ್ಕಿಂತ 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಎಂಬ ಉಪಸಂಹಾರಕ್ಕೇ ಪ್ರಾಬಲ್ಯವಿರುವುದರಿಂದ ಅದಕ್ಕನುಗುಣವಾಗಿ ಉಪಕ್ರಮದಲ್ಲಿರುವ ಶ್ರದ್ಧಾಶಬ್ದಕ್ಕೆ (ಅಜಹಲ್ಲಕ್ಷಣಾವೃತ್ತಿಯಿಂದ) ಜಲ ಎಂಬ ಅರ್ಥವನ್ನೂ ಮಾಡಬೇಕು. ದುರ್ಬಲವಾದ ಉಪಕ್ರಮದ ವಿರೋಧವು ಬಂದಾಗ ಪ್ರಬಲವಾದ ಉಪಸಂಹಾರಕ್ಕೆ ಅರ್ಥಾಂತರವನ್ನು ಮಾಡುವುದು ಸರಿಯಲ್ಲ. ಉಪಕ್ರಮದ ಪ್ರಾಮಾಣ್ಯವನ್ನು ಕೂಡಿಸುವುದಕ್ಕಾಗಿಯೇ ಉಪಸಂಹಾರವನ್ನು ಅನುಸರಿಸಿ ಉಪಕ್ರಮಕ್ಕೆ ಅರ್ಥವನ್ನು ಅಂಗೀಕರಿಸಬೇಕು. (ಏಕೆಂದರೆ ವ್ಯಾಖ್ಯಾನವನ್ನು ಅನುಸರಿಸಿ ವ್ಯಾಖ್ಯೇಯಕ್ಕೆ ಅರ್ಥಮಾಡಬೇಕು) ಉಪಕ್ರಮದ ನಂತರವೇ ಉಪಸಂಹಾರವಿರುವುದರಿಂದ ಉಪಸಂಹಾರವೇ ವ್ಯಾಖ್ಯಾನವಾಗುತ್ತದೆ. ಉಪಜೀವ್ಯವಾದ್ದರಿಂದ ಉಪಕ್ರಮವನ್ನು ಅನುಸರಿಸಿಯೇ ಉಪಸಂಹಾರವಿರಬೇಕಾದರೂ ಅರ್ಥವಿಚಾರಮಾಡುವಾಗ ಉಪಸಂಹಾರವನ್ನು ಅನುಸರಿಸಿಯೇ ಉಪಕ್ರಮಕ್ಕೆ ಅರ್ಥವನ್ನು ಮಾಡಬೇಕು.

**ವಿವರಣೆ—** ಉಪಕ್ರಮಕ್ಕಿಂತ ವ್ಯಾಖ್ಯಾನರೂಪವಾದ ಉಪಸಂಹಾರಕ್ಕೆ ಪ್ರಾಬಲ್ಯವಿರುವುದರಿಂದ 'ಆಪಃ ಪುರುಷವಚಸೋ ಭವಂತಿ' ಎಂಬ ಉಪಸಂಹಾರ ವಾಕ್ಯಕ್ಕೆ ಅನುಸಾರವಾಗಿ ಉಪ ಕ್ರಮದಲ್ಲಿರುವ ಶ್ರದ್ಧಾ ಎಂಬ ಪದದಿಂದ ಪಂಚಭೂತಗಳನ್ನೂ ಸ್ವೀಕರಿಸಬೇಕು. ಆದ್ದರಿಂದ ಜೀವನಿಗೆ ಭೂತಸಂಬಂಧವು ಸಿದ್ಧವಾಗುತ್ತದೆ ಎಂಬುದು ಸಿದ್ಧಾಂತ.

ಮೂಲದಲ್ಲಿರುವ 'ಪ್ರಥಮತಃ' ಎಂಬ ಪದವನ್ನು ತಂತ್ರದಿಂದ ಬಳಸಿದ್ದಾರೆ. ತಂತ್ರವೆಂದರೆ ಒಂದೇ ಬಾರಿ ಉಚ್ಚರಿಸಲಾದ ಪದಕ್ಕೆ ಅನೇಕ ಅರ್ಥಗಳನ್ನು ಮಾಡುವುದು. 'ಪ್ರಥಮತಃ' ಎಂಬ ಪದಕ್ಕೆ ಉಪಕ್ರಮದಲ್ಲಿ ಎಂದು ಒಂದರ್ಥ. ದ್ಯು, ಪರ್ಜನ್ಯ, ಧರಾ, ಪುಂ, ಸ್ತ್ರೀ ಎಂಬ ಐದು ಅಗ್ನಿಗಳಲ್ಲಿ ದ್ಯು ಎಂಬ ಪ್ರಥಮಾಗ್ನಿಯಲ್ಲಿ ಎಂದು ಮತ್ತೊಂದರ್ಥ.

ಉಪಸಂಹಾರವು ವ್ಯಾಖ್ಯಾನರೂಪವಾಗಿದ್ದರಿಂದ ಪ್ರಬಲವಾಗಿರಲಿ. ಅಷ್ಟು

ಮಾತ್ರಕ್ಕೆ ಉಪಸಂಹಾರಕ್ಕನುಗುಣವಾಗಿ ಉಪಕ್ರಮಕ್ಕೆ ಏಕೆ ಅರ್ಥವನ್ನು ಮಾಡ ಬೇಕು? ಎಂದರೆ, ಉಪಕ್ರಮ, ಉಪಸಂಹಾರಗಳಲ್ಲಿ ವಿರೋಧವು ಕಂಡುಬಂದಾಗ ಯಾವುದಾದರೂ ಒಂದಕ್ಕೆ ಅರ್ಥಾಂತರವನ್ನು ಮಾಡಲೇಬೇಕು. ಎರಡರಲ್ಲಿ ಯಾವುದಕ್ಕೆ ಎಂಬ ಪ್ರಶ್ನೆಯು ಉಳಿಯುತ್ತದೆ. ಎರಡರಲ್ಲಿ ಉಪಕ್ರಮವು ದುರ್ಬಲ ಉಪಸಂಹಾರವು ವ್ಯಾಖ್ಯಾನರೂಪವಾಗಿರುವುದರಿಂದ ಪ್ರಬಲವೆಂದು ನಿಶ್ಚಿತ ವಾಗಿದೆ. ಆದ್ದರಿಂದ ದುರ್ಬಲವಾದ ಉಪಕ್ರಮಕ್ಕೇನೇ ಅರ್ಥಾಂತರವನ್ನು ಮಾಡುವುದು ಯೋಗ್ಯವಾಗಿದೆ. ಒಂದುವೇಳೆ 'ಶ್ರದ್ಧಾ' ಶಬ್ದದಿಂದ ಜಲವನ್ನು ಅಜಹಲ್ಲಕ್ಷಣಾವೃತ್ತಿಯಿಂದ ಸ್ವೀಕರಿಸುವುದಿಲ್ಲವೆಂದಾದರೆ ಜಲವು ಪೂರ್ವ ಪ್ರಸಕ್ತವಲ್ಲವಾದ್ದರಿಂದ ಮುಂದೆ 'ಆಪಃ ಪುರುಷವಚಸೋ ಭವಂತಿ' ಎಂಬುದಾಗಿ ಜಲವನ್ನು ಅನುವಾದ ಮಾಡುವುದೇ ಅಸಂಗತವೆನಿಸುತ್ತದೆ. ಆದ್ದರಿಂದ ಶ್ರದ್ಧಾ ಶಬ್ದ ದಿಂದ ಜಲವನ್ನೂ ಸ್ವೀಕರಿಸಬೇಕೆಂದು ತಿಳಿಯುತ್ತದೆ. ಉಪಕ್ರಮದ ಪ್ರಾಮಾಣ್ಯ ವನ್ನು ಉಳಿಸುವುದಕ್ಕಾಗಿಯೂ ಉಪಸಂಹಾರದ ಆನುಗುಣ್ಯವನ್ನು ಅಂಗೀಕರಿಸ ಬೇಕು.

ಉಪಕ್ರಮವೇ ಉಪಸಂಹಾರದ ವ್ಯಾಖ್ಯಾನರೂಪವಾಗಿದೆ ಎಂದು ಏಕೆ ಅಂಗೀಕರಿಸಬಾರದು? ಎಂದರೆ, ವ್ಯಾಖ್ಯಾನವು ಅನಂತರವಿರುತ್ತದೆ. ವ್ಯಾಖ್ಯೇಯವು ಪೂರ್ವದಲ್ಲಿ ಇರುತ್ತದೆ (ತದ್ವ್ಯಾಖ್ಯಾನಂ ತತ್ಪಶ್ಚಾತ್ತನಂ ಇತಿ ವ್ಯಾಪ್ತೇಃ) ಉಪಕ್ರಮವು ಪೂರ್ವದಲ್ಲಿದ್ದು ಉಪಸಂಹಾರವು ಅನಂತರವಿರುತ್ತದೆ ಎಂದು ಎಲ್ಲರಿಗೂ ತಿಳಿದ ವಿಷಯ. ಆದ್ದರಿಂದ ಉಪಸಂಹಾರವೇ ವ್ಯಾಖ್ಯಾನ ರೂಪವಾಗಿ ಪ್ರಬಲವಾಗುವುದೇ ಹೊರತು ಉಪಕ್ರಮವಲ್ಲ.

ವ್ಯಾಖ್ಯಾನರೂಪವಾದ್ದರಿಂದ ಉಪಸಂಹಾರಕ್ಕೆ ಪ್ರಾಬಲ್ಯವಿದ್ದರೂ ಉಪ ಜೀವ್ಯವಾದ್ದರಿಂದ ಉಪಕ್ರಮಕ್ಕೆ ಪ್ರಾಬಲ್ಯಬರಬೇಕು. ಉಪಕ್ರಮವು ಇಲ್ಲದಿದ್ದರೆ ಉಪಸಂಹಾರವೇ ಪ್ರವೃತ್ತವಾಗುವುದಿಲ್ಲ. (ಯೇನ ವಿನಾ ಯಸ್ಯ ಅನುತ್ಥಾನಂ ತತ್ ತಸ್ಯ ಉಪಜೀವ್ಯಂ ಎಂಬ ನಿಯಮವಿರುವುದರಿಂದ) ಆದ್ದರಿಂದ ಉಪಕ್ರಮಕ್ಕೆ ಏಕೆ ಪ್ರಾಬಲ್ಯವನ್ನು ಒಪ್ಪಬಾರದು? ಎಂದರೆ, ನಿಜ. ಮೂಲಗ್ರಂಥವಿಲ್ಲದಿದ್ದರೆ ವ್ಯಾಖ್ಯಾನ ಗ್ರಂಥಕ್ಕೆ ಪ್ರವೃತ್ತಿಯೇ ಇರುವುದಿಲ್ಲ. ಆದರೆ ವ್ಯಾಖ್ಯಾನವನ್ನು ಅನುಸರಿಸಿಯೇ ಮೂಲಕ್ಕೆ ಅರ್ಥಮಾಡುವುದು ಕಂಡಿದೆ. ಅದರಂತೆ ಇದು

ಅರ್ಥವಿಚಾರವನ್ನು ಮಾಡುವ ಪ್ರಸಂಗವಾದ್ದರಿಂದ ಉಪಸಂಹಾರವನ್ನು ಅನುಸರಿಸಿಯೇ ಉಪಕ್ರಮಕ್ಕೆ ಅರ್ಥವನ್ನು ಮಾಡಬೇಕು.

ಈ ವಿಷಯದಲ್ಲಿ ವಾದಿರಾಜರು ಒಂದು ಉದಾಹರಣೆಯನ್ನು ನೀಡಿದ್ದಾರೆ. ತನ್ನ ಪ್ರಯಾಣಕ್ಕಾಗಿ ಕುದುರೆಯನ್ನು ಹಿಂಬಾಲಿಸುವ ರಾಜನು ಯಾವ ಆಹಾರವನ್ನು ಕೊಡುವನೋ ಅದನ್ನು ಕುದುರೆಯು ತಿನ್ನಬೇಕೇ ಹೊರತು ಮುಂದೆ ಓಡುವ ಕುದುರೆ ನೀಡಿದ ಆಹಾರವನ್ನು ಪುರುಷ ತಿನ್ನುವುದಿಲ್ಲ ಎಂದು.

**ಸೂತ್ರಾರ್ಥ :**

## ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ

ಪ್ರಥಮೇ=ದ್ಯು ಎಂಬ ಪ್ರಥಮಾಗ್ನಿಯಲ್ಲಿ ಶ್ರವಣಾತ್=ಶ್ರದ್ಧಾಸಹಿತ ಜೀವನ ಹೋಮವು ಶ್ರುತವಾಗಿರುವುದರಿಂದ, ಪ್ರಥಮೇ=ಉಪಕ್ರಮದಲ್ಲಿ ಅಶ್ರವಣಾತ್ ಇತಿಚೇತ್=ಜೀವನು ಭೂತಸಹಿತನಾಗಿರುವನೆಂದು ಶ್ರುತವಾಗಿಲ್ಲವಾದ್ದರಿಂದ ಜೀವನು ಭೂತಗಳೊಂದಿಗೆ ಹೋಗುವುದಿಲ್ಲ. ಎಂದರೆ, ನ=ಅದು ಸರಿಯಲ್ಲ. ಹಿ=ಏಕೆಂದರೆ ತಾ ಏವ=ಜಲವೇ ಶ್ರದ್ಧಾಶಬ್ದದಿಂದ ಹೇಳಲ್ಪಡುತ್ತದೆ. ಏಕೆಂದರೆ ಉಪಪತ್ತೇಃ='ಆಪಃ ಪುರುಷವಚಸೋ ಭವಂತಿ' ಎಂಬ ಉಪಸಂಹಾರವು ಉಪಪನ್ನವಾಗುವುದರಿಂದ.

# ಅಶ್ರುತತ್ವಾಧಿಕರಣ (3-1-6)

ಓಂ ಅಶ್ರುತತ್ವಾದಿತಿ ಚೆನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಭೂತಗಳೇ ವಿಷಯ. ಕೆಲವು ವಸ್ತುಗಳಿಗೆ ಗಮನವಿರುವುದು ಮತ್ತು ಇನ್ನು ಕೆಲವು ವಸ್ತುಗಳಿಗೆ ಗಮನವಿಲ್ಲದಿರುವುದೂ ಕಂಡಿರುವುದರಿಂದ ಭೂತಗಳಿಗೆ ಜೀವನೊಂದಿಗೆ ಗಮನವಿದೆಯೋ? ಇಲ್ಲವೋ ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ—** 'ಯತ್ರಾಸ್ಯ ಪುರುಷಸ್ಯ ಮೃತಸ್ಯ ವಾಗಗ್ನಿಮಪ್ಯೇತಿ' (ಮೃತನಾದ ಜೀವನ ವಾಗಾದಿ ಇಂದ್ರಿಯಗಳು ಅಗ್ನ್ಯಾದಿದೇವತೆಗಳನ್ನು

ಹೊಂದುತ್ತವೆ) ಎಂದು ಸ್ಪಷ್ಟವಾದ ಶ್ರುತಿಯಿರುವಂತೆ ಭೂತಗಳಿಗೆ ಜೀವನೊಂದಿಗೆ ಗಮನವನ್ನು ಹೇಳುವ ಸ್ಪಷ್ಟವಾದ ಶ್ರುತಿಯಿಲ್ಲದಿರುವುದರಿಂದ ಭೂತಗಳಿಗೆ ಜೀವನೊಂದಿಗೆ ಗಮನವಿಲ್ಲವೆಂದು ಒಪ್ಪಬೇಕಾಗುತ್ತದೆ. ಆದ್ದರಿಂದ ವೈರಾಗ್ಯಾದಿ ಗಳ ಸಂಪಾದನೆ ವ್ಯರ್ಥ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅವಿಶೇಷ.'** (ಭೂತಗಳಿಗೆ ಜೀವನೊಂದಿಗೆ ಗಮನವನ್ನು ಹೇಳುವ ವಿಶೇಷವಾದ ವಾಕ್ಯವಿಲ್ಲದಿರುವುದು) ಇದನ್ನೂ ಮತ್ತು **'ಅನುರೂಪತಾ'** (ಕೌಂಠರವ್ಯ ಶ್ರುತಿಯಲ್ಲಿ ಹೇಳಿದ ಭೂತಗಳಿಗೆ ಗಮನವು ಈ ಪ್ರಸಂಗಕ್ಕೆ ಅನುರೂಪವಾಗಿ ಸಮಾಖ್ಯಾರೂಪವಾಗಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ವಿಶೇಷಾಶ್ರವಣಾನಿಯಮ ಏವ ಬಲವಾನ್ । ಸ್ಥಾನಾನಂತರಶ್ರವಣಸ್ಯಾಪ್ಯೇತದನುರೂಪತ್ವಾತ್ । ಆರ್ಥಿಕಶ್ರವಣ-ಮಪ್ಯನುಕ್ತಿಂ ಬಾಧತ ಏವ । ಕಿಮು ಸ್ಥಾನಾಂತರಗತಂ ಸ್ಪಷ್ಟಶ್ರವಣಮಿತಿ ಕೈಮುತ್ಯಾರ್ಥಮೇವ ನೇಷ್ಟಾದಿಕಾರಿಣಾಂ ಪ್ರತೀತೇರಿತಿ ಪರಿಹಾರಾಂತರ-ಮುಕ್ತಮ್ ॥ ೬ ॥**

**ಭಾವಾರ್ಥ—** 'ಭೂತಾನಿ ಗಚ್ಛಂತಿ' ಎಂಬುದಾಗಿ ವಿಶೇಷವಾದ ಶ್ರುತಿಯಿಲ್ಲ ದಿರುವುದೇ ಭೂತಗಳಿಗೆ ಜೀವನೊಂದಿಗೆ ಗಮನವಿಲ್ಲವೆಂಬುದಕ್ಕೆ ಬಲತರುತ್ತದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಕೌಂಠರವ್ಯ ಶ್ರುತಿಯಲ್ಲಿ ಭೂತಗಳಿಗೆ ಗಮನವು ಶ್ರುತವಾಗಿರುವುದು ಈ ಪ್ರಸಂಗಕ್ಕೆ ಅನುರೂಪವೇ ಆಗಿದೆ. ಆರ್ಥಿಕ ಶ್ರವಣವೂ ಅನುಕ್ತಿಯನ್ನು ಬಾಧಿಸುತ್ತದೆ. ಎಂದಮೇಲೆ ಬೇರೆ ಕಡೆಯಲ್ಲಿರುವ ಸ್ಪಷ್ಟವಾದ ವಾಕ್ಯವು ಅನುಕ್ತಿಯನ್ನು ಬಾಧಿಸುತ್ತದೆ ಎಂದು ಪ್ರತ್ಯೇಕ ಹೇಳಬೇಕಿಲ್ಲ ಎಂದು ಕೈಮುತ್ಯದಿಂದ ಸಿದ್ಧಿಸುತ್ತದೆ, ಇದನ್ನು ತಿಳಿಸುವುದಕ್ಕಾಗಿಯೇ 'ಇಷ್ಟಾದಿ-ಕಾರಿಣಾಂ ಪ್ರತೀತೇಃ' ಎಂದು ಸೂತ್ರಕಾರರು ಮತ್ತೊಂದು ಪರಿಹಾರವನ್ನು ಸೂಚಿಸಿದ್ದಾರೆ.

**ವಿವರಣೆ—** ಈ ಪ್ರಕರಣದಲ್ಲಿ ಸ್ಪಷ್ಟವಾಗಿ 'ಭೂತಾನಿ ಗಚ್ಛಂತಿ' ಎಂದು ಹೇಳದಿದ್ದರೂ ಕೌಂಠರವ್ಯಶ್ರುತಿಯಲ್ಲಿ 'ಅಥೈನಂ ಯಜಮಾನಂ ಕಿಂ ನ ಜಹಾತಿ

ಭೂತಾನ್ಯೇವ ಭೂತ್ಯೈಸ್ಸಹ ಗಚ್ಛತಿ' (ಯಾಗಾದಿಗಳನ್ನು ಮಾಡಿದ ಈ ಅಧಿ ಕಾರಿಯನ್ನು ಯಾವುದು ಬಿಟ್ಟಿರುವುದಿಲ್ಲ? ಭೂತಗಳೇ ಅವನನ್ನು ಬಿಟ್ಟಿರುವುದಿಲ್ಲ. ಭೂತಗಳೊಂದಿಗೆ ಅವನು ಪರಲೋಕಕ್ಕೆ ಹೋಗುತ್ತಾನೆ) ಎಂದು ಸ್ಪಷ್ಟವಾಗಿ ಹೇಳಲಾಗಿದೆ.

ವಸ್ತುತಃ 'ಪ್ರಾಣ್ಯೈಃ ಸಹ ಗಚ್ಛತಿ' (ಇಂದ್ರಿಯಗಳೊಂದಿಗೆ ಜೀವನು ಹೋಗುತ್ತಾನೆ) ಎಂದು ಶ್ರುತಿಯು ಹೇಳುತ್ತದೆ. ಇಂದ್ರಿಯಗಳಿಗೂ ಭೂತಗಳಿಗೂ ವ್ಯಾಪ್ತಿಯಿರುವುದರಿಂದ ಅರ್ಥಾತ್ ಭೂತಗಳಿಗೂ ಗಮನವು ಸಿದ್ಧವಾಯಿತು. ಅದರಂತೆ ಆರ್ಥಿಕಶ್ರವಣವೂ ಅನುಕ್ತಿಯನ್ನು ಬಾಧಿಸುತ್ತದೆ. ಹಳಸಿದ ಅನ್ನವನ್ನು ತಿನ್ನುವ ವ್ಯಕ್ತಿಯು ಏನೂ ತಿನ್ನುವುದೇ ಇಲ್ಲ ಎಂಬುದು ಸರಿಯಾಗುವುದಿಲ್ಲವಷ್ಟೇ ! ಎಂದಮೇಲೆ ಸ್ಪಷ್ಟವಾದ ಕೌಂಠರವ್ಯ ಶ್ರುತಿಯಿಂದ ಬಾಧಿತವಾಗುವುದು ಕೈಮುತ್ಯದಿಂದ ಸಿದ್ಧವಾಗುತ್ತದೆ. ಇದನ್ನು ತಿಳಿಸಲೆಂದೆ ವ್ಯಾಸರು 'ಇಷ್ಟಾದಿಕಾರಿಣಾಂ ಪ್ರತೀತೇಃ' ಎಂದು ಕೌಂಠರವ್ಯ ಶ್ರುತಿಯನ್ನು ಸೂಚಿಸಿದ್ದಾರೆ. 'ಇಷ್ಟಾದಿಕಾರಿಣಾಂ' ಎಂದು ಹೇಳಿರುವುದು ಪೂರ್ವಪಕ್ಷಿಗಳು (ಮೀಮಾಂಸಕರು) ಕರ್ಮಕಾಂಡ ಕುಶಲರು ಎಂಬುದನ್ನು ತಿಳಿಸುತ್ತದೆ.

**ಸೂತ್ರಾರ್ಥ—**

### ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ

ಅಶ್ರುತತ್ವಾತ್ ಇತಿ ಚೇತ್ ನ=ಭೂತಗಳಿಗೆ ಜೀವನೊಂದಿಗೆ ಗಮನವು ಶ್ರುತಿ ಪ್ರಮಾಣದಿಂದ ಸಿದ್ಧವಾಗಿಲ್ಲವೆಂದರೆ ಇಷ್ಟಾದಿಕಾರಿಣಾಂ=ಇಷ್ಟಾಪೂರ್ತಗಳನ್ನು ಮಾಡುವವರಿಗೆ ಪ್ರತೀತೇಃ='ಅಥೈನಂ ಯಜಮಾನಂ...' ಎಂಬ ಶ್ರುತಿಯಿಂದ ಭೂತಗಳಿಗೆ ಜೀವನೊಂದಿಗೆ ಗಮನವು ಶ್ರುತವಾಗಿರುವುದರಿಂದ.

## ಭಾಕ್ತಾಧಿಕರಣ (3-1-7)

ಓಂ ಭಾಕ್ತಂ ವಾಽನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ವೈರಾಗ್ಯಾದಿಸಾಧನಗಳೇ ವಿಷಯ. ಲೋಕ ದಲ್ಲಿ ತೃಪ್ತಿಯು ಭೋಜನಾದಿಗಳ ಅನುಷ್ಠಾನದಿಂದಲೂ ಕಂಡಿದೆ. ರಸಾಯನಾದಿ

ಗಳ ಪಾನದಿಂದಲೂ ಕಂಡಿದೆ. ಆದ್ದರಿಂದ ಮೋಕ್ಷಕ್ಕಾಗಿ ವೈರಾಗ್ಯಾದಿಗಳ ಅನುಷ್ಠಾನ ಮಾಡಬೇಕೋ? ಬೇಡವೋ? ಎಂಬುದು ಸಂದೇಹ.

'ಅಪಾಮ ಸೋಮಮಮೃತಾ ಅಭೂಮ' (ಸೋಮರಸವನ್ನು ಪಾನ ಮಾಡಿದೆವು. ಆದರಿಂದಾಗಿ ಮೋಕ್ಷವನ್ನು ಪಡೆದೆವು.) ಎಂಬ ಶ್ರುತಿಯು ಕರ್ಮವು ಮೋಕ್ಷಸಾಧನವೆಂದು ತಿಳಿಸುತ್ತಿದೆ. ಕರ್ಮದಿಂದ ಸುಲಭವಾಗಿ ಮೋಕ್ಷ ಲಭಿಸುವಾಗ ವೈರಾಗ್ಯಾದಿಗಳ ಅನುಷ್ಠಾನ ವ್ಯರ್ಥ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ವಿಶೇಷ.'** ('ಅಪಾಮ ಸೋಮಮೃತಾ ಅಭೂಮ' ಎಂಬ ವಿಶೇಷ ವಚನ) ಇದನ್ನು ಮತ್ತು **'ಯೋಗ್ಯತೆ'** (ಕರ್ಮಕ್ಕೆ ಯೋಗ್ಯವಾದ ಅಮೃತತ್ವವನ್ನು ತಿಳಿಯಬೇಕು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ 'ಅಪಾಮ ಸೋಮಮಮೃತಾ ಅಭೂಮ' ಇತಿ ವಿಶೇಷತ ಏವ ಮೋಕ್ಷಫಲಸ್ಯಾಪ್ಯುಕ್ತೇಃ ಕರ್ಮೈವ ತತ್ಸಾಧನಮಿತಿ ಮಂತವ್ಯಮ್ । 'ನಾನ್ಯಃ ಪಂಥಾ ಅಯನಾಯ ವಿದ್ಯತೇ', 'ಸ ಯ ಆತ್ಮಾನಮೇವ ಲೋಕಮುಪಾಸ್ತೇ । ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ' ಇತ್ಯಾದಿಶ್ರುತಿಬಲಾದಮೃತಶಬ್ದಸ್ಯ ಯಥಾಯೋಗ್ಯಮೇವಾರ್ಥಕಲ್ಪನೋ-ಪಪತ್ತೇಃ ॥ ೭ ॥**

**ಭಾವಾರ್ಥ—** 'ಅಪಾಮ ಸೋಮಮಮೃತಾ ಅಭೂಮ' ಎಂಬುದಾಗಿ ವಿಶೇಷ ವಾಕ್ಯದಿಂದಲೇ ಮೋಕ್ಷರೂಪವಾದ ಫಲವನ್ನು ಹೇಳಿದ್ದರಿಂದ ಕರ್ಮವೇ ಮೋಕ್ಷಕ್ಕೆ ಸಾಧನವೆಂದು ತಿಳಿಯಬಾರದು. ಏಕೆಂದರೆ 'ಮೋಕ್ಷಕ್ಕೂ ಜ್ಞಾನವನ್ನು ಬಿಟ್ಟು ಬೇರೆ ದಾರಿಯಿಲ್ಲ'– 'ಯಾವನು ಪರಮಾತ್ಮನನ್ನು ಸರ್ವಾಶ್ರಯನನ್ನಾಗಿ ಉಪಾಸನೆ ಮಾಡುತ್ತಾನೋ ಅವನು ಮೋಕ್ಷವನ್ನು ಪಡೆಯುತ್ತಾನೆ', 'ಇಂದ್ರ ಮನು ಆದಿತ್ಯರು ಇರುವವರೆಗೆ ಸ್ವರ್ಗವೆಂಬ ಗೌಣ ಮೋಕ್ಷದಲ್ಲಿರುತ್ತಾನೆ' ಎಂಬಿವೇ ಮೊದಲಾದ ಶ್ರುತಿಗಳಿಂದ ಅಮೃತಶಬ್ದಕ್ಕೆ ಯಥಾಯೋಗ್ಯವಾದ ಅರ್ಥವನ್ನೇ ಮಾಡಬೇಕಾಗುತ್ತದೆ.

**ವಿವರಣೆ—** 'ನಾನ್ಯಃ ಪಂಥಾ' ಎಂಬ ಶ್ರುತಿಯು ಮೋಕ್ಷಕ್ಕೆ ಜ್ಞಾನಾತಿರಿಕ್ತವಾದ ಸಾಧನವನ್ನು ನಿರಾಕರಿಸಿದೆ. 'ಯಾವದಿಂದ್ರೋ ಯಾವನ್ಮನುಃ' ಎಂಬ ಶ್ರುತಿಯು ಕಾಲದ ಮಿತಿಯನ್ನೂ ಹೇಳಿದೆ. ಈ ಶ್ರುತಿಗಳ ಬಲದಿಂದ, 'ಅಪಾಮ ಸೋಮಮಮೃತಾ ಅಭೂಮ' ಎಂಬಲ್ಲಿ ಹೇಳಲ್ಪಟ್ಟ ಅಮೃತತ್ವವೆಂದರೆ ಕರ್ಮಕ್ಕೆ ಯೋಗ್ಯವಾದ ಬಹುಕಾಲ ಸ್ಥಾಯಿತ್ವವೆಂದೇ ಅರ್ಥೈಸಬೇಕೇ ಹೊರತು ಮುಖ್ಯವಾದ ಮೋಕ್ಷವಲ್ಲ. ಮುಖ್ಯ ವಾದ ಮೋಕ್ಷವನ್ನು ಪಡೆಯಲು ಜ್ಞಾನವೇ ಬೇಕು. ಅದಕ್ಕಾಗಿ ವೈರಾಗ್ಯಾದಿ ಅನುಷ್ಠಾನ ಅತ್ಯಾವಶ್ಯಕವಾಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಭಾಕ್ತಂ ವಾಽನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ ಓಂ**

ಭಾಕ್ತಂ=ಕಾಮ್ಯಕರ್ಮವನ್ನು ಮಾಡುವವರಿಗೆ ಹೇಳಿದ ಅಮೃತತ್ವವು ಬಹುಕಾಲ ಸುಖಾನುಭವರೂಪವಾದ್ದರಿಂದ ಅಮುಖ್ಯವಾದದ್ದು. ಏಕೆಂದರೆ, ಅನಾತ್ಮವಿತ್ವಾತ್=ಅವರು ಬ್ರಹ್ಮಜ್ಞಾನಿಗಳಲ್ಲವಾದ್ದರಿಂದ. ವಾ=ಜಿಜ್ಞಾಸುವಾದ ನಿಷ್ಕಾಮಕರ್ಮಿಗಳಿಗೆ ದೊರೆಯುವ ಅಂತಃಕರಣಶುದ್ಧಿರೂಪವಾದ ಅಮೃತತ್ವವು ಅಮುಖ್ಯವಾದದ್ದು. ಇದಕ್ಕೆ ಪ್ರಮಾಣವೇನು? ಎಂದರೆ ಹಿ=ಯಾವ ಕಾರಣದಿಂದ ದರ್ಶಯತಿ='ಅಮೃತೋ ವಾವ ಸೋಮಪೋ ಭವತಿ', 'ಸ ಏನಮವಿದಿತೋ...' ಮುಂತಾದ ಶ್ರುತಿಗಳಿರುವುದರಿಂದ.

## ಕೃತಾತ್ಯಯಾಧಿಕರಣ (3-1-8)

ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ವೈರಾಗ್ಯಾದಿಗಳೇ ವಿಷಯ. ಕೇವಲ ಮರಣದಿಂದ ಮೋಕ್ಷವಿಲ್ಲ ಎಂದು ಹಿಂದೆ ಹೇಳಿದ್ದರಿಂದ ಮತ್ತು ಕರ್ಮಕ್ಷಯದಿಂದ ಫಲವಾಗುವುದು ಕಂಡಿರುವುದರಿಂದಲೂ ಸಂಶಯ ಬರುತ್ತದೆ- ವೈರಾಗ್ಯಾದಿಗಳು ಮುಮುಕ್ಷುವಿನಿಂದ ಅವಶ್ಯ ಅನುಷ್ಠೇಯವೋ? ಅಲ್ಲವೋ? ಎಂದು.

**ಪೂರ್ವಪಕ್ಷ—** ಸಂಪಾದಿಸಿರುವ ಪುಣ್ಯ ಅಥವಾ ಪಾಪಗಳು ಸ್ವರ್ಗಾದಿಸುಖ

ಅಥವಾ ನರಕಾದಿ ದುಃಖಗಳನ್ನು ಅನುಭವಿಸುವುದರಿಂದಲೇ ನಾಶವಾಗುತ್ತವೆ. ಅಂದರೆ ಕರ್ಮಕ್ಷಯವಾಗಿದೆ ಎಂದರ್ಥ. ಹೀಗೆ ಕರ್ಮಕ್ಷಯರೂಪವಾದ ಮೋಕ್ಷವು ತಾನಾಗಿಯೇ ಸಿದ್ಧವಾಗಿರುವುದರಿಂದ ವೈರಾಗ್ಯಾದಿಗಳ ಅನುಷ್ಠಾನ ವ್ಯರ್ಥವೆಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಭಾವ' (ಸ್ವರ್ಗ, ನರಕಗಳಿಗೆ ಹೋಗುವವರೊಂದಿಗೆ ಕರ್ಮವಿರುವುದು) ಎಂಬುದು. ಇದನ್ನು ಮತ್ತು **'ಯೋಗ್ಯತಾ'** (ಯಥಾಯೋಗ್ಯವಾಗಿಯೇ ಕರ್ಮವು ಫಲವನ್ನು ಕೊಡುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾನುಶಯಸ್ಯಾಪಿ ಸಹಭಾವಾತ್ ಸ್ವರ್ಗ ಏವ ಫಲದತ್ವಮ್, 'ಭುಕ್ತಶೇಷಾನುಶಯವಾನ್' ಇತ್ಯಾದಿವಚನಾದ್ ಯಥಾಯೋಗ್ಯಮೇವ ಫಲದಾನೋಪಪತ್ತೇಃ ॥ ೮ ॥**

**ಭಾವಾರ್ಥ—** ಕರ್ಮವು ಸ್ವರ್ಗಕ್ಕೆ ಹೋಗುವ ಜೀವನೊಂದಿಗೇ ಇರುವುದರಿಂದ ಅದು ಸ್ವರ್ಗದಲ್ಲಿಯೇ ಫಲವನ್ನು ಕೊಡುತ್ತದೆ. ಆದ್ದರಿಂದ ಕರ್ಮಕ್ಷಯರೂಪವಾದ ಮೋಕ್ಷವು ಸಿದ್ಧವಾಗುತ್ತದೆ ಎಂದು ಪೂರ್ವಪಕ್ಷವನ್ನು ಮಾಡಬಾರದು. 'ಭುಕ್ತಶೇಷಾನುಶಯವಾನ್' ಮುಂತಾದ ಪ್ರಮಾಣಗಳಿಂದ ಕರ್ಮವು ಯಥಾಯೋಗ್ಯವಾಗಿಯೇ ಫಲವನ್ನು ಕೊಡುತ್ತದೆ ಎಂದು ಅಂಗೀಕರಿಸಬೇಕು.

**ವಿವರಣೆ—** ಯಥಾಯೋಗ್ಯ ವಾಗಿಯೇ ಕರ್ಮವು ಫಲವನ್ನು ಕೊಡುತ್ತದೆ. ಅಂದರೆ ಸ್ವರ್ಗ ನರಕಾದಿಗಳನ್ನು ಅನುಭವಿಸಿದಾಗ ಅದಕ್ಕೆ ಕಾರಣವಾಗಿರುವ ಪುಣ್ಯಪಾಪಗಳು ಮಾತ್ರ ನಾಶ ವಾಗುತ್ತವೆ. ಅಲ್ಲಿ ಸರ್ವಕರ್ಮಗಳ ನಾಶವಾಗುವುದಿಲ್ಲ. ಏಕೆಂದರೆ,

**ಭುಕ್ತಶೇಷಾನುಶಯವಾನಿಮಾಂ ಪ್ರಾಪ್ಯ ಭುವಂ ಪುನಃ ।**
**ಕರ್ಮ ಕೃತ್ವಾ ಪುನರ್ಗಚ್ಛೇತ್ ಪುನರಾಯಾತಿ ನಿತ್ಯಶಃ ॥**

'ಸ್ವರ್ಗಾದಿಲೋಕಗಳಲ್ಲಿ ಅನುಭವಿಸಿರುವ ಪುಣ್ಯ ಪಾಪಾದಿಗಳ ಅವಶೇಷ

ವನ್ನು ಉಳಿಸಿಕೊಂಡವನಾಗಿಯೇ ಈ ಭೂಲೋಕವನ್ನು ಹೊಂದಿ ಮತ್ತೆ ಕರ್ಮವನ್ನು ಮಾಡಿ ಮತ್ತೆ ಪರಲೋಕಕ್ಕೆ ಹೋಗುತ್ತಾನೆ. ಪುನಃ ತಿರುಗಿ ಬರುತ್ತಾನೆ. ಈ ಅಲೆದಾಟ ಯಾವಾಗಲೂ ಇದದ್ದೇ' ಎಂಬಿವೇ ಮೊದಲಾದ ಪ್ರಮಾಣಗಳಿರುವುದರಿಂದ ಹೀಗೇ ಅಂಗೀಕರಿಸಬೇಕು. ಸಮಸ್ತ ಕರ್ಮಗಳ ನಾಶ ಭೋಗದಿಂದಾಗುವುದು ಅಸಂಭಾವಿತ. ಅದು ಅಪರೋಕ್ಷಜ್ಞಾನದಿಂದಲೇ ಆಗುವುದು. ಅದಕ್ಕಾಗಿ ವೈರಾಗ್ಯಾದಿಗಳ ಅನುಷ್ಠಾನ ಆವಶ್ಯಕವೇ ಆಗಿದೆ.

**ಸೂತ್ರಾರ್ಥ —**

### ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ

ಕೃತಾತ್ಯಯೇ=ಮಾಡಿದ ಕರ್ಮವು ಸ್ವರ್ಗಾದಿಭೋಗದಿಂದ ಕ್ಷಯಿಸುತ್ತಿರಲು ಅನುಶಯವಾನ್=ಭೋಗಿಸಿ ಉಳಿದ ಕರ್ಮವುಳ್ಳವನಾಗಿಯೇ ಹಿಂದಿರುಗುತ್ತಾನೆ. ಏಕೆಂದರೆ ದೃಷ್ಟಸ್ಮೃತಿಭ್ಯಾಂ='ಭುಕ್ತಶೇಷಾನುಶಯವಾನ್' ಮುಂತಾದ ಶ್ರುತಿಸ್ಮೃತಿಗಳು ಇರುವುದರಿಂದ.

## ಯಥೇತಾಧಿಕರಣ (3-1-9)

ಓಂ ಯಥೇತಮನೇವಂ ಚ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಆಗಮನವೇ ವಿಷಯ. ಲೋಕದಲ್ಲಿ ಹೋದ ದಾರಿಯಲ್ಲಿಯೂ, ಬೇರೇ ದಾರಿಯಲ್ಲಿಯೂ ಆಗಮನವು ಕಂಡಿರುವುದರಿಂದ ಕಾಮ್ಯಕರ್ಮಿಯು ಯಾವ ಮಾರ್ಗದಿಂದ ಸ್ವರ್ಗಕ್ಕೆ ಹೋಗಿರುವನೋ ಅದೇ ದಾರಿಯಿಂದ ಹಿಂತಿರುಗುತ್ತಾನೋ ಅಥವಾ ಬೇರೆ ದಾರಿಯಿಂದಲೋ ಎಂದು ಸಂಶಯ.

ಪೂರ್ವಪಕ್ಷ: ಕಾಮ್ಯಕರ್ಮದಿಂದ ಸ್ವರ್ಗವನ್ನು ಹೊಂದಿದ ಜೀವನಿಗೆ ಸ್ವರ್ಗದಿಂದ ಹಿಂತಿರುಗುವಾಗ ಹೋಗಿರುವ ಮಾರ್ಗದ ಅನುಭವ ಸಂಸ್ಕಾರ ಇರುವ ಕಾರಣ ಅದೇ ಮಾರ್ಗದಿಂದ ಹಿಂತಿರುಗುತ್ತಾನೆ. 'ಯಥೇತಮೇವ ಗಚ್ಛತಿ ಯಥೇತಮಾಗಚ್ಛತಿ' (ಯಾವ ಮಾರ್ಗದಲ್ಲಿ ಹೋಗುವನೋ ಅದೇ ಮಾರ್ಗದಲ್ಲಿ ಹಿಂತಿರುಗುತ್ತಾನೆ) ಎಂದು ಶ್ರುತಿಯೂ ತಿಳಿಸುತ್ತದೆ. ಇದರಿಂದ ಅತಿಕ್ಲೇಶ ಇಲ್ಲ. ಆದ್ದರಿಂದ ವೈರಾಗ್ಯಾದಿಗಳ ಅನುಷ್ಠಾನ ವ್ಯರ್ಥ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಭಾವ' (ಹೋಗಿರುವ ಮಾರ್ಗದ ಅನುಭವ ಸಂಸ್ಕಾರವು ಜೊತೆಗಿರುವುದು) ಇದನ್ನು ಮತ್ತು 'ಯೋಗ್ಯತಾ' (ಶ್ರುತಿಗನುಗುಣವಾಗಿ ಯೋಗ್ಯವಾದ ಆಗಮನವನ್ನು ಒಪ್ಪುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಮಾರ್ಗಸ್ಯಾಪಿ ಸಹಭಾವಾದ್ ಯಥಾಗತಮೇವಾಗಮನಮಿತಿ ನಿಯಮಃ । ವಚನಬಲಾದ್ ಯಥಾಯೋಗ್ಯಮೇವಾಗಮನೋಪಪತ್ತೇಃ ॥ ೯ ॥**

**ಭಾವಾರ್ಥ—** ಹೋಗಿರುವ ಮಾರ್ಗದ ಅನುಭವ ಸಂಸ್ಕಾರವು ಜೊತೆಯಿರುವುದರಿಂದ ಯಾವ ಮಾರ್ಗದಿಂದ ಹೋಗಿರುವನೋ ಅದೇ ಮಾರ್ಗದಿಂದಲೇ ಹಿಂತಿರುಗುವುದು ಎಂದು ನಿಯಮವೆಂಬ ಪೂರ್ವಪಕ್ಷ ಸರಿಯಲ್ಲ. ಪ್ರಮಾಣಗಳಿಗೆ ಅನುಸಾರವಾಗಿ ಯಥಾಯೋಗ್ಯವಾಗಿಯೇ ಹಿಂತಿರುಗುವುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ.

**ವಿವರಣೆ—** ಸ್ಥೂಲದೇಹವನ್ನು ತೊರೆದು ಜೀವನು ಹೊಗೆ, ಮೋಡ, ಆಕಾಶ, ಚಂದ್ರಲೋಕದ ಮಾರ್ಗವಾಗಿ ಸ್ವರ್ಗಾದಿ ಲೋಕಗಳಿಗೆ ಹೋಗುತ್ತಾನೆ. ಬರುವಾಗ ಆಕಾಶದವರೆಗೆ ಅದೇ ದಾರಿಯಲ್ಲಿ ಬಂದು 'ಆಕಾಶಾದ್ ವಾಯುಂ' ಎಂಬ ಶ್ರುತಿ ಹೇಳುವಂತೆ ಆಕಾಶದಿಂದ ವಾಯುಲೋಕಕ್ಕೆ ಬರುತ್ತಾನೆ. ಅಲ್ಲಿಂದ ರೂಪಾಂತರದಿಂದ ಭೂಮಿಗೆ ಬರುತ್ತಾನೆ. ಹೀಗೆ ಸ್ವರ್ಗಕ್ಕೆ ಹೋಗಿ ಬರುವ ದಾರಿಯು ಕ್ಲೇಶದಾಯಕವಾದ್ದರಿಂದ ಇಂತಹ ನಶ್ವರಫಲದಲ್ಲಿ ವೈರಾಗ್ಯವನ್ನು ತಾಳಬೇಕು. ಮೋಕ್ಷಕ್ಕಾಗಿ ಪ್ರಯತ್ನಿಸಬೇಕೆಂದು ಸಿದ್ಧಾಂತ.

**ಸೂತ್ರಾರ್ಥ —**

**ಓಂ ಯಥೇತಮನೇವಂ ಚ ಓಂ**

ಯಥಾ=ಯಾವ ಮಾರ್ಗದಿಂದ ಕಾಮ್ಯಕರ್ಮಿಯು ಸ್ವರ್ಗವನ್ನು ಹೊಂದಿರುವನೋ ತಥಾ=ಆ ಮಾರ್ಗದಿಂದಲೂ ಅನೇವಂ ಚ=ಬೇರೆ ಮಾರ್ಗದಿಂದಲೂ ಹಿಂದಿರುಗುತ್ತಾನೆ.

# ಚರಣಾಧಿಕರಣ (3-1-10)

ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಗಮನಾಗಮನವೇ ವಿಷಯ. ಕರ್ಮ ಮತ್ತು ಆಚಾರ ಇವೆರಡಕ್ಕೂ ಗಮನಾಗಮನದೊಂದಿಗೆ ಸಹಭಾವವು ಕಂಡಿರುವುದರಿಂದ ಯಜ್ಞಾದಿ ಕರ್ಮಗಳು ಗಮನಾಮನ ಸಾಧನಗಳೋ? ಅಲ್ಲವೋ? ಎಂದು ಸಂದೇಹ.

**ಪೂರ್ವಪಕ್ಷ—** 'ತದ್ ಯ ಇಹ ರಮಣೀಯಚರಣಾ ರಮಣೀಯಾಂ ಯೋನಿಮಾಪದ್ಯಂತೇ ಕಪೂಯಚರಣಾಃ ಕಪೂಯಾಂ' (ಕರ್ಮಾಚರಣೆ ಮಾಡುವವರಲ್ಲಿ ಸದಾಚಾರಪೂರ್ವಕವಾಗಿ ಯಜ್ಞಾದಿಕರ್ಮಗಳನ್ನು ಮಾಡುವವರು ಈ ಭೂಮಿಯಲ್ಲಿ ಪರಿಶುದ್ಧವಾದ ಜನ್ಮವನ್ನು ಪಡೆಯುತ್ತಾರೆ. ದುರಾಚಾರಿಗಳಾಗಿ ಯಜ್ಞಾದಿಕರ್ಮಗಳನ್ನು ಆಚರಿಸುವವರು ನೀಚಜನ್ಮವನ್ನು ಪಡೆಯುತ್ತಾರೆ) ಮುಂತಾದ ಶ್ರುತಿಗಳು ಹೇಳುವಂತೆ ಗಮನಾಗಮನಗಳಿಗೆ ಆಚಾರವೇ ಸಾಧನ ಹೊರತು ಯಜ್ಞಾದಿ ಕರ್ಮಗಳಲ್ಲ. ಹಾಗಾದರೆ, 'ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ಧೂಮಮಭಿಸಂಭವಂತಿ' (ಯಾರು ತಮ್ಮ ಗ್ರಾಮದಲ್ಲಿ ಯಜ್ಞ, ಅನ್ನದಾನ ಅಥವಾ ಕೆರೆಬಾವಿ ನಿರ್ಮಾಣ, ದಾನ ಮೊದಲಾದ ಸತ್ಕರ್ಮಗಳನ್ನು ಮಾಡುತ್ತಾರೋ ಅವರು ಧೂಮಾದಿ ಮಾರ್ಗದಲ್ಲಿ ಹೋಗುತ್ತಾರೆ) ಎಂದು ಶ್ರುತಿಯು ಗಮನಾಗಮನಗಳಿಗೆ ಕರ್ಮವೇ ಸಾಧನವೆಂದು ತಿಳಿಸುತ್ತಿದೆಯಲ್ಲ? ಎಂಬುದು ಸರಿಯಲ್ಲ. 'ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ' ಎಂಬಲ್ಲಿ ಉಪಶಬ್ದವು ಸಮೀಪ ಎಂಬರ್ಥದಲ್ಲಿದೆ. ಆಚಾರವು ಯಜ್ಞಾದಿಗಳ ಸಮೀಪದಲ್ಲಿ ಜೊತೆಗಿರುವುದು. ಹೀಗೆ ಯಜ್ಞಾದಿಕರ್ಮ ಮತ್ತು ಆಚಾರಗಳೆರಡು ಸಹಪಠಿತವಾಗಿರುವುದರಿಂದ ವಸ್ತುತಃ ಆಚಾರದ ಫಲವಾದ ಗಮನಾಗಮನಗಳು ಯಜ್ಞಾದಿಕರ್ಮದ ಫಲವೆಂದು ಭ್ರಾಂತಿಯುಂಟಾಗಿದೆ. ವಾಸ್ತವವಾಗಿ ಯಜ್ಞಾದಿಗಳು ಮೋಕ್ಷಸಾಧನವಾಗಿವೆ. ಆದ್ದರಿಂದ ವೈರಾಗ್ಯಾದಿಗಳನ್ನು ಸಂಪಾದಿಸಬೇಕಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಭಾವ' (ಕರ್ಮದೊಂದಿಗೆ

ಆಚಾರವೂ ಹೇಳಲ್ಪಟ್ಟಿರುವುದು.) ಎಂಬುದು. ಇದನ್ನು ಮತ್ತು 'ಯೋಗ್ಯತಾ' (ಚರಣಶಬ್ದಕ್ಕೆ ಯೋಗ್ಯವಾದ ಅರ್ಥವನ್ನು ಸ್ವೀಕರಿಸುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ 'ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ' ಇತ್ಯುಪಶಬ್ದೇನೇಷ್ಟಾದಿಭಿರಾಚಾರಸ್ಯ ಸಹಪಾಠಾಚ್ಚರಣಫಲಂ ಪುನರಾವೃತ್ತಿಂ ಕರಣಫಲತ್ವೇನ ಭ್ರಮಾದ್ ವದಂತೀತಿ ವಾಚ್ಯಮ್ । ''ನಾನ್ಯಃ ಪಂಥಾಃ'' ಇತ್ಯಾದಿವಚನಾದೇವೋಭಯೋರಪಿ ಚರಣಶಬ್ದೇನೈವೋಕ್ತೇರಯೋಗ್ಯತ್ವಾತ್ ॥ ೧೦ ॥**

**ಭಾವಾರ್ಥ—** 'ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ' ಎಂಬ ಶ್ರುತಿಯಲ್ಲಿ ಉಪಶಬ್ದವಿರುವುದರಿಂದ (ಸಮೀಪ ಎಂದು ಅರ್ಥವಿರುವುದರಿಂದ) ಯಜ್ಞಾದಿಗಳೊಂದಿಗೆ ಸದಾಚಾರವನ್ನು ಹೇಳಿರುವುದರಿಂದ ಸದಾಚಾರದ ಫಲವಾದ ಆಗಮನವನ್ನು ಯಜ್ಞದ ಫಲವನ್ನಾಗಿ ಭ್ರಮೆಯಿಂದ ಹೇಳುತ್ತಾರೆ ಎಂದು ಹೇಳುವುದು ಸರಿಯಲ್ಲ. 'ನಾನ್ಯಃ ಪಂಥಾಃ' (ಜ್ಞಾನದ ಹೊರತಾಗಿ ಮೋಕ್ಷಕ್ಕೆ ಬೇರೆ ದಾರಿಯಿಲ್ಲ) ಎಂಬಿವೇ ಮೊದಲಾದ ವಾಕ್ಯಗಳಿರುವುದರಿಂದ 'ರಮಣೀಯ ಚರಣಾಃ' ಎಂಬ ಶ್ರುತಿಯಲ್ಲಿರುವ ಚರಣಶಬ್ದದಿಂದ ಸದಾಚಾರ ಯಜ್ಞಾದಿಕರ್ಮ ಎಂಬಿವೆರಡನ್ನು ಅರ್ಥಮಾಡುವುದೇ ಯೋಗ್ಯವಾಗಿದೆ.

**ವಿವರಣೆ—** ಚರಣ ಶಬ್ದಕ್ಕೆ ಆಚಾರ ಮತ್ತು ಯಜ್ಞಾದಿಕರ್ಮವೆಂದು ಎರಡೂ ಅರ್ಥಗಳನ್ನು ಅಜಹಲ್ಲಕ್ಷಣಾವೃತ್ತಿಯಿಂದ ಮಾಡುವುದೇ ಯೋಗ್ಯವೆಂದರ್ಥ. ಮೋಕ್ಷವು ಜ್ಞಾನ ದಿಂದಲೇ ಲಭ್ಯವೆಂದಮೇಲೆ ಅದು ಕರ್ಮದ ಫಲವಲ್ಲ. ಅಂದರೆ ಗಮನಾಗಮನ ಗಳೇ ಕರ್ಮದ ಫಲ. ಇದನ್ನು 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಮ್' ಎಂಬಿವೇ ಮೊದಲಾದ ವಾಕ್ಯಗಳು ಪ್ರತಿಪಾದಿಸುತ್ತವೆ. ಆದ್ದರಿಂದ ಕ್ಲೇಶಸಾಧನವಾದ ಕರ್ಮ ಹಾಗೂ ಸ್ವರ್ಗಾದಿಗಳಲ್ಲಿ ವೈರಾಗ್ಯವು ಯುಕ್ತವೇ ಆಗಿದೆ.

**ಸೂತ್ರಾರ್ಥ—**

**ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ**

ಚರಣಾದಿತಿ ಚೇತ್=ಯಜ್ಞಾಂಗವಾದ ಆಚಾರದಿಂದಲೇ ಗಮನಾಗಮನವು ಆಗುತ್ತದೆ ಹೊರತು ಯಜ್ಞಾದಿಗಳಿಂದ ಆಗುವುದಿಲ್ಲ ಎಂಬುದು ನ=ಯುಕ್ತವಲ್ಲ. ತದುಪಲಕ್ಷಣಾರ್ಥಾ ಇತಿ='ರಮಣೀಯಚರಣಾ ರಮಣೀಯಾಂ ಯೋನಿ ಮಾಪದ್ಯಂತೇ' ಎಂಬ ಶ್ರುತಿಯು ಅಜಹತ್‌ಸ್ವಾರ್ಥಲಕ್ಷಣಾದಿಂದ ಯಜ್ಞ ಮತ್ತು ಆಚಾರ ಎರಡನ್ನೂ ಪ್ರತಿಪಾದಿಸುತ್ತದೆ ಎಂದು ಕಾರ್ಷ್ಣಾಜಿನಿಃ=ಕಾರ್ಷ್ಣಾಜಿನಿ ಆಚಾರ್ಯರು ಹೇಳುತ್ತಾರೆ.

## ಅನಿಷ್ಟಾಧಿಕರಣ (3-1-11)

ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಗಮನಾಗಮನವೇ ವಿಷಯ. ಯಜ್ಞಾದಿ ವಿಶೇಷಗಳನ್ನು ಹೇಳಿದ್ದರಿಂದ ಮತ್ತು ಅಜ್ಞಾನಿತ್ವಗಳಿರುವುದರಿಂದ ಗಮಾನಮನ ಗಳು ಕೇವಲ ಯಾಗಾದಿಗಳನ್ನು ಆಚರಿಸುವವರಿಗೋ? ಅಥವಾ ಎಲ್ಲ ಅಜ್ಞಾನಿ ಗಳಿಗೋ? ಎಂಬುದು ಸಂಶಯ.

**ಪೂರ್ವಪಕ್ಷ—** ಯಾಗಾದಿಕರ್ಮಗಳನ್ನು ಮಾಡುವವರಿಗೆ ವಿಧಿ ನಿಷೇಧಗಳ ಭಯ ಮತ್ತು ಫಲದ ಬಯಕೆಗಳು ಹೀಗೆ ಮಿಶ್ರಿತವಾದ ಬುದ್ಧಿಯಿರುವುದರಿಂದ ಸಂಸಾರ. ಅದಕ್ಕಾಗಿ ಗಮನಾಗಮನ ದುಃಖಗಳು. ಯಾಗಾದಿಗಳನ್ನು ಮಾಡ ದಿರುವ ಅಜ್ಞಾನಿಗಳಿಗೆ ವಿಧಿ ನಿಷೇಧಗಳ ಭೀತಿ ಫಲದ ಬಯಕೆ ಮೊದಲಾದದ್ದು ಇಲ್ಲ. ಇವುಗಳಿಂದ ಮಿಶ್ರಿತವಾದ ಬುದ್ಧಿಯಿಲ್ಲದಿರುವುದರಿಂದ ಸಂಸಾರವಿಲ್ಲ. ಅಂದರೆ ಗಮನಾಗಮನಗಳ ದುಃಖವಿಲ್ಲ. ಮೋಕ್ಷವೇ ಫಲ. ಆದ್ದರಿಂದ ವೈರಾಗ್ಯಾದಿಗಳ ಆವಶ್ಯಕತೆ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಮಿಶ್ರತಾ' (ಅಜ್ಞಾನಿಗಳಿಗೆ ಭಯ, ಫಲದ ಬಯಕೆ ಮುಂತಾದವುಗಳಿಂದ ಮಿಶ್ರಿತವಾದ ಬುದ್ಧಿಯಿಲ್ಲದಿರುವುದು) ಎಂಬುದು. ಇದನ್ನು ಮತ್ತು 'ಪ್ರಬಲತ್ವ' (ಪ್ರಬಲವಾದ ದೋಷಗಳು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನು ವಿವರಿಸುತ್ತಿದ್ದಾರೆ—

**ನ ಚ ಭಯಫಲಕಾಮಾದಿಮಿಶ್ರಬುದ್ಧಿತ್ವಾದ್ ಇಷ್ಟಾದಿಕಾರಿಣಾಂ ಸಂಸಾರಃ । ಅನಿಷ್ಟಾದಿಕಾರಿಣಾಂ ತದಭಾವಾನ್ಮುಕ್ತಿರಿತಿ ವಾಚ್ಯಮ್ । ತೇಷಾಂ ಪ್ರಬಲದೋಷಶ್ರುತೇಃ ॥**

**ಭಾವಾರ್ಥ—** ಯಾಗಾದಿಕರ್ಮಗಳನ್ನು ಮಾಡುವವನಿಗೆ ಭಯ, ಫಲದ ಬಯಕೆ ಮೊದಲಾದವುಗಳಿಂದ ಮಿಶ್ರಿತವಾದ ಬುದ್ಧಿಯಿರುವುದರಿಂದ ಸಂಸಾರವು ಕೂಡುತ್ತದೆ. ಆದರೆ ಯಾಗಾದಿಗಳನ್ನು ಮಾಡದಿರುವ ಅಜ್ಞಾನಿಗಳಿಗೆ ಭಯ, ಫಲದ ಬಯಕೆ ಇವುಗಳಿಂದ ಮಿಶ್ರಿತವಾದ ಬುದ್ಧಿಯಿಲ್ಲದಿರುವುದರಿಂದ ಸಂಸಾರವಿಲ್ಲ. ಆದ್ದರಿಂದ ಮೋಕ್ಷವು ಸಿದ್ಧವಾಗುತ್ತದೆ ಎಂದು ಆಕ್ಷೇಪಿಸಬಾರದು. ಅಜ್ಞಾನಿಗಳಿಗೂ ಪ್ರಬಲವಾದ ದೋಷಗಳು ಶ್ರುತವಾಗಿವೆ.

**ವಿವರಣೆ—** 'ತದ್ ಯ ಇಹ ಶುಭಾಕೃತೋ ಯೇ ವಾಽಶುಭಕೃತಸ್ತೇಽ-ಶುಭಮನುಭೂಯಾಽವರ್ತಂತೇ ಪುನಃ ಕುರ್ವಂತಿ ಪುನರ್ಗಚ್ಛಂತಿ ಪುನರಾಗಚ್ಛಂತಿ' (ಯಾರು ಈ ಭೂಮಿಯಲ್ಲಿ ಒಳ್ಳೆಯ ಕೆಲಸವನ್ನು ಮಾಡುವುದಿಲ್ಲವೋ ಮತ್ತು ಕೆಟ್ಟ ಕೆಲಸವನ್ನು ಮಾಡುವರೋ ಅವರು ಪಾಪಫಲವನ್ನು ಅನುಭವಿಸಿ ತಿರುಗಿ ಭೂಮಿಗೆ ಬರುತ್ತಾರೆ. ಮತ್ತೆ ಇಲ್ಲಿ ಕರ್ಮವನ್ನು ಮಾಡುತ್ತಾರೆ. ಮತ್ತೆ ಪರಲೋಕಕ್ಕೆ ಹೋಗುತ್ತಾರೆ. ಮತ್ತೆ ಇಲ್ಲಿಗೆ ಬರುತ್ತಾರೆ) ಎಂದು ಯಾಗಾದಿಕರ್ಮವನ್ನು ಮಾಡದಿರುವ ಅಜ್ಞಾನಿಗಳಿಗೂ ಗಮನಾಗಮನಗಳ ದುಃಖವಿರುವುದರಿಂದ ಮೋಕ್ಷರೂಪ ಫಲವಿಲ್ಲ. ಆದ್ದರಿಂದ ಗಮನಾಗಮನಗಳು ಎಲ್ಲ ಅಜ್ಞಾನಿಗಳಿಗೂ ಇವೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ ಓಂ**

ಅನಿಷ್ಟಾದಿಕಾರಿಣಾಮಪಿ ಚ=ಗಮನಾಗಮನಗಳು ಕೇವಲ ಯಾಗಾದಿಗಳನ್ನು ಮಾಡುವವರಿಗೆ ಮಾತ್ರವಲ್ಲದೆ ಪಾಪಕರ್ಮಗಳನ್ನು ಮಾಡುವವರಿಗೂ ಶ್ರುತಂ= ಶ್ರುತಿಯಲ್ಲಿ ಹೇಳಲ್ಪಟ್ಟಿವೆ.

# ಅಪಿಸಪ್ತಾಧಿಕರಣ (3-1-12)

ಓಂ ಅಪಿ ಸಪ್ತ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣಕ್ಕೆ ನರಕವೇ ವಿಷಯ. ಹಿಂದಿನ ಅಧಿಕರಣದಲ್ಲಿ ಅವರೋಹ (ನಿತ್ಯನರಕ ಪ್ರವೇಶ)ವನ್ನು ಹೇಳಿರುವುದರಿಂದ, ಮತ್ತು ಲೋಕದಲ್ಲಿ ಕಾರಾಗೃಹದಿಂದ ಬಿಡುಗಡೆಯೂ ಕಂಡಿದ್ದರಿಂದ ನರಕದ ದುಃಖಭೋಗವು ನಿತ್ಯವೋ? ಅಥವಾ ಅನಿತ್ಯವೋ? ಎಂಬುದು ಸಂಶಯ.

**ಪೂರ್ವಪಕ್ಷ—** 'ಯಾವದಿಂದ್ರಾಶ್ಚತುರ್ದಶ' (ಹದಿನಾಲ್ಕು ಜನ ಇಂದ್ರರು ಇರುವಷ್ಟು ಕಾಲ ನರಕಯಾತನೆ) ಮತ್ತು 'ಚಕಾರ ನರಕಂ ಶೂನ್ಯಂ' (ನರಕವನ್ನು ಜನರಹಿತವನ್ನಾಗಿಸಿದನು) ಎಂದು ಹೇಳಿದ್ದರಿಂದ ನಿತ್ಯನರಕವು ಇಲ್ಲ. ಆದ್ದರಿಂದ 'ತಾಮಿಸ್ರಶ್ಚಾಂಧತಾಮಿಸ್ರೌ ದ್ವೌ ನಿತ್ಯೌ' ಎಂದು ವಿರುದ್ಧವಾಗಿ ಹೇಳಿದ್ದು ಅಯುಕ್ತವಾಗಿದೆ. ಆದ್ದರಿಂದ ಇತರ ಪಾಪಗಳಿಗಿಂತ ಅಧಿಕವಾಗಿ ಭಗವಂತನ ದ್ವೇಷದಲ್ಲಿ ವೈರಾಗ್ಯವನ್ನು ತಾಳುವ ಅವಶ್ಯಕತೆ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿರುದ್ಧೋಕ್ತಿ' (ವಿರುದ್ಧವಾಗಿ ಹೇಳಿರುವುದು) ಎಂಬುದು. ಇದನ್ನು 'ವಿಭಾಗ' (ನರಗಳಲ್ಲಿ ನಿತ್ಯ, ಅನಿತ್ಯವೆಂಬ ವಿಭಾಗವಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ನರಕಭೋಗಸ್ಯಾನಿತ್ಯತ್ವಕಥನಾನ್ನಿತ್ಯನರಕೋಕ್ತಿರ್ವಿರುದ್ಧಾ ।**
**'ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ ।**
**ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯನರಕಾಣಿ ತು ।**
**ತಾಮಿಸ್ರಶ್ಚಾಂಧತಾಮಿಸ್ರೌ ದ್ವೌ ನಿತ್ಯೌ ಸಂಪ್ರಕೀರ್ತಿತೌ ॥'**
**ಇತಿ ವಿಭಾಗಾತ್ ॥ ೧೨ ॥**

**ಭಾವಾರ್ಥ—**ನರಕದ ಭೋಗವನ್ನು ಅನಿತ್ಯವೆಂದು ಹೇಳಿದ್ದರಿಂದ ನಿತ್ಯನರಕಗಳಿವೆ ಎಂದು ಹೇಳಿದ್ದು ವಿರುದ್ಧವಾಗಿದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ರೌರವ, ಮಹಾರೌರವ, ವಹ್ನಿ, ವೈತರಣೀ, ಕುಂಭೀಪಾಕ ಎಂಬೀ

ನರಕಗಳು ಅನಿತ್ಯನರಕಗಳೆಂದು ಹೇಳಲ್ಪಟ್ಟಿವೆ. ಮತ್ತು ತಾಮಿಸ್ರ, ಅಂಧತಾಮಿಸ್ರ ಇವೆರೆಡು ನಿತ್ಯನರಕಗಳು' ಎಂದು ವಿಭಾಗಮಾಡಿ ಹೇಳಿದ್ದಾರೆ.

**ವಿವರಣೆ—** ನರಕಗಳನ್ನು ನಿತ್ಯ, ಅನಿತ್ಯವೆಂದು ವಿಭಾಗ ಮಾಡಿ ಹೇಳಿದ್ದರಿಂದ ನಿತ್ಯನರಕವನ್ನು ಒಪ್ಪಲು ವಿರೋಧವಿಲ್ಲ. ಆದ್ದರಿಂದ ಅದಕ್ಕೆ ಸಾಧನವಾದ ಹರಿದ್ವೇಷದಲ್ಲಿ ಅತಿಶಯವಾದ ವೈರಾಗ್ಯಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಅಪಿ ಸಪ್ತ ಓಂ**

ಸಪ್ತ ಅಪಿ=ನರಕವು ಏಳೂ ಪ್ರಭೇದಗಳನ್ನು ಹೊಂದಿದೆ ಎಂದು. (ಸ್ಮರಂತಿ= ಸ್ಮೃತಿಕಾರರು ಹೇಳುವರು.)

## ತತ್ರಾಪ್ಯಧಿಕರಣ (3-1-13)

ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ನರಕವೇ ವಿಷಯ. ಮೂರ್ಛಾವಸ್ಥೆಯಲ್ಲಿ ದುಃಖವು, ಸುಷುಪ್ತ್ಯವಸ್ಥೆಯಲ್ಲಿ ದುಃಖವಿಲ್ಲದಿರುವುದೂ ಕಂಡಿರುವುದರಿಂದ ನರಕವು ದುಃಖರೂಪವೋ? ಅಥವಾ ಅಲ್ಲವೋ? ಎಂಬುದು ಸಂಶಯ.

**ಪೂರ್ವಪಕ್ಷ—** 'ಸರ್ವಂ ನಿಯಮಯತಿ' (ಭಗವಂತನು ಎಲ್ಲರಿಗೂ ನಿಯಾಮಕನಾಗಿದ್ದಾನೆ) ಎಂದು ಶ್ರುತಿಯಿರುವುದರಿಂದ ನಾರಕಿಗಳ ಹೃದಯದಲ್ಲಿ ನಿಯಾಮಕನಾಗಿ ಅವರೊಂದಿಗೆ ನರಕದಲ್ಲಿದ್ದಾನೆ. ಒಂದುವೇಳೆ ನರಕವು ದುಃಖ ರೂಪವಾಗುವುದಾದರೆ ಈಶ್ವರನಿಗೂ ದುಃಖವಾಗಬೇಕಾಗುತ್ತದೆ. ಆದ್ದರಿಂದ ನರಕವು ದುಃಖರೂಪವಲ್ಲ. ಆದ್ದರಿಂದ ವೈರಾಗ್ಯದ ಆವಶ್ಯಕತೆಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಸ್ಥಾನ' (ನಾರಕಿಗಳೊಂದಿಗೆ ನರಕದಲ್ಲಿ ಈಶ್ವರನೂ ಇರುವುದು) ಎಂಬುದು. ಇದನ್ನು ಮತ್ತು 'ಕಾರಣಾಭಾವ' (ದುಃಖಕ್ಕೆ ಕಾರಣವಾದ ಪಾಪವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸ್ಥಾಪಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ.

**ನ ಚ ಸಹಸ್ಥಾನಾದೀಶಸ್ಯಾಪಿ ನರಕದುಃಖಪ್ರಾಪ್ತಿಃ । ಸ್ವಾತಂತ್ರ್ಯಾತ್, ಕಾರಣಾಭಾವಾತ್ ॥ ೧೩ ॥**

**ಭಾವಾರ್ಥ—** ನಾರಕಿಗಳೊಂದಿಗೆ ಈಶ್ವರನೂ ಇರುವುದಿರಂದ ಈಶ್ವರನಿಗೂ ನರಕದುಃಖವಾಗಬೇಕಾಗುವುದು ಎಂದು ಆಕ್ಷೇಪಿಸಬಾರದು. ಏಕೆಂದರೆ ಈಶ್ವರನು ಸ್ವತಂತ್ರನಾದ್ದರಿಂದ ಅವನಲ್ಲಿ ದುಃಖಕ್ಕೆ ಕಾರಣವಾದ ಪಾಪ ಮುಂತಾದ ಕಾರಣವಿಲ್ಲದಿರುವುದರಿಂದ.

**ವಿವರಣೆ—** ಸಿದ್ಧಾಂತಸಾಧಕವಾದ ಯುಕ್ತಿ 'ಕಾರಣಾಭಾವ' ಎಂಬುದು. ನರಕದಲ್ಲಿದ್ದ ಕೂಡಲೆ ದುಃಖವಾಗಬೇಕಾಗಿಲ್ಲ. ದುಃಖದ ಅನುಭವಕ್ಕೆ ಕಾರಣವಾದ ಪಾಪವಿರಬೇಕು. ಪಾಪವು ಜೀವನಲ್ಲಿರುವುದರಿಂದ ಅವನಿಗೆ ದುಃಖವಾಗುತ್ತದೆ. ಈಶ್ವರನಲ್ಲಿ ಪಾಪವಿಲ್ಲದಿರುವುದರಿಂದ ಅವನಿಗೆ ದುಃಖವಾಗುವುದಿಲ್ಲ. ಆದ್ದರಿಂದ ನರಕವು ದುಃಖರೂಪವೇ ಆಗಿದೆ. ವೈರಾಗ್ಯದ ಆವಶ್ಯಕತೆ ಇದ್ದೇ ಇದೆ.

**ಸೂತ್ರಾರ್ಥ :**

**ಓಂ ತತ್ರಾಪಿ ಚ ತದ್‌ವ್ಯಾಪಾರಾದವಿರೋಧಃ ಓಂ**

ತತ್ರಾಪಿ=ನರಕದಲ್ಲಿಯೂ ಚ=ದುಃಖಾನುಭವವಿಲ್ಲದೆ ತತ್‌ವ್ಯಾಪಾರಾತ್= ಈಶ್ವರನ ಪ್ರೇರಣೆ ಎಂಬ ವ್ಯಾಪಾರವಿರುವುದರಿಂದ ಅವಿರೋಧಃ=ಯಾವುದೇ ವಿರೋಧವಿಲ್ಲ.

## ವಿದ್ಯಾಧಿಕರಣ (3-1-14)

ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ಎಂಬ ಏಕಸೂತ್ರಾತ್ಮಕ ವಾದ ಈ ಅಧಿಕರಣದಲ್ಲಿ ಪಿತೃಯಾನ ದೇವಯಾನಗಳೇ ವಿಷಯ. ಲೌಕಿಕಮಾರ್ಗ ದಲ್ಲಿ ಸ್ವಾತಂತ್ರ್ಯವು ಕಂಡಿದೆ. ಆದರೆ ದೇವಯಾನ ಪಿತೃಯಾನಗಳು ಅಲೌಕಿಕ ವಾದ್ದರಿಂದ ಜೀವನಿಗೆ ಈ ಮಾರ್ಗ ಗಮನದಲ್ಲಿ ಸ್ವಾತಂತ್ರ್ಯವು ಇದೆಯೋ? ಇಲ್ಲವೋ? ಎಂಬುದು ಸಂದೇಹ.

**ಪೂರ್ವಪಕ್ಷ—** 'ತದ್ ಯ ಇತ್ಥಂ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾ ತಪ

ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ। ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ। ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣ್ಯಸಕೃದಾವರ್ತೀನಿ ಭೂತಾನಿ ಜಾಯಸ್ವ ಮ್ರಿಯಸ್ವೇತ್ಯೇತತ್ ತೃತೀಯಂ ಸ್ಥಾನಂ (ಯಾರು ಈರೀತಿಯಾಗಿ ಆತ್ಮ ತತ್ವವನ್ನು ತಿಳಿಯುವರೋ ಅವರು, ಕಾಡಿನಲ್ಲಿ ಆತ್ಮಶ್ರದ್ಧೆ, ತಪಸ್ಸು ಇತ್ಯಾದಿಯಾಗಿ ಉಪಾಸನೆ ಮಾಡುವರೋ ಅವರು ಅರ್ಚಿರಾದಿ ಮಾರ್ಗವನ್ನು ಅನುಸರಿಸುತ್ತಾರೆ. ಯಾರು ನಾಡಿನಲ್ಲಿ ಯಾಗಾದಿಗಳನ್ನು, ಭಾವಿಕೆರೆ ನಿರ್ಮಾಣವನ್ನು, ದಾನಗಳನ್ನು ಮಾಡುವರೋ ಅವರು ಧೂಮಾದಿಮಾರ್ಗವನ್ನು ಕುರಿತು ಹೋಗುತ್ತಾರೆ. ಈ ಎರಡೂ ಮಾರ್ಗದಲ್ಲಿ ಹೋಗದವರು ಅಲ್ಪವಾದ ಮತ್ತು ಸುಖದುಃಖ ಮಿಶ್ರಿತವಾದ ಮತ್ತೆ ಮತ್ತೆ ಆಗಮನವಿರುವವರಾಗುತ್ತಾರೆ. ಹುಟ್ಟು ಮರಣವೆಂಬ ಸುಳಿಯಲ್ಲಿ ಸಿಲುಕುವರು. ಇದುವೇ ಮೂರನೆಯ ಸ್ಥಾನ) ಎಂಬ ಶ್ರುತಿಯಲ್ಲಿ 'ಅಥೈತಯೋಃ ಪಥೋರ್ನ ಕತರೇಣ' ಕೆಲವರು ಈ ಎರಡರಲ್ಲಿ ಒಂದೂ ಮಾರ್ಗದಲ್ಲಿ ಹೋಗುವುದಿಲ್ಲ ಎನ್ನುವ ಮೂಲಕ ಮಾರ್ಗವನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಜೀವರಿಗೆ ಹೇಳಲಾಗಿದೆ. ಸಾಧನವಾದ ವಿದ್ಯಾ ಕರ್ಮಗಳಲ್ಲಿ ಈಶಾಧೀನವಾದ ಸ್ವಾತಂತ್ರ್ಯವಿರುವಂತೆ ಫಲವಾದ ಗಮನದಲ್ಲಿಯೂ ಜೀವನಿಗೆ ಸ್ವಾತಂತ್ರ್ಯವಿರುವುದರಿಂದ ಕಾಮ್ಯಕರ್ಮಗಳಲ್ಲಿ ವೈರಾಗ್ಯದ ಆವಶ್ಯಕತೆ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಸ್ಥಾನ' (ಒಂದೇ ಶ್ರುತಿಯಲ್ಲಿ ಸಾಧನದೊಂದಿಗೆ ಫಲವನ್ನೂ ಹೇಳಿರುವುದು) ಎಂಬುದು. ಇದನ್ನು ಮತ್ತು 'ಕಾರಣಾಭಾವ' (ವಿಧಿ ಎಂಬ ಕಾರಣವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಸಾಧನೇನ ಸಹ ಶ್ರುತೇಸ್ತದ್ವತ್ ಫಲೇಽಪಿ ಜೀವಸ್ಯ ಸ್ವಾತಂತ್ರ್ಯಮ್। ಅವಿಹಿತತ್ವೇನ ಕಾರಣಾಭಾವಾತ್। 'ಅಥೈತಯೋಃ ಪಥೋಃ' ಇತ್ಯಸ್ಯ ಚ ಸಾಧನಾರ್ಥತ್ವಾತ್ ॥ ೧೪ ॥**

**ಭಾವಾರ್ಥ—** ಸಾಧನವಾದ ವಿದ್ಯಾಕರ್ಮಗಳೊಂದಿಗೆ ಫಲವಾದ

ಗಮನವೂ ಶ್ರುತವಾದ್ದರಿಂದ ಫಲದಲ್ಲಿಯೂ (ಗಮನದಲ್ಲಿ) ಜೀವನಿಗೆ ಸ್ವಾತಂತ್ರ್ಯವು ಸಿದ್ಧವಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ ವಿಹಿತತ್ವವೆಂಬ ಕಾರಣವು ಫಲದಲ್ಲಿ ಇಲ್ಲದಿರುವುದರಿಂದ. ಮತ್ತು 'ಅಥೈತಯೋಃ ಪಥೋಃ' ಎಂಬ ಶ್ರುತಿ ಯಲ್ಲಿ ಸಾಧನವಾದ ವಿದ್ಯಾಕರ್ಮಗಳನ್ನೇ ಹೇಳಲಾಗಿದೆಯೇ ಹೊರತು ಫಲವನ್ನಲ್ಲ. (ಗಮನವನ್ನಲ್ಲ)

**ವಿವರಣೆ—** ಸ್ವಾತಂತ್ರಕ್ಕೆ ಕಾರಣವಾದದ್ದು ವಿಧಿ. 'ಸ್ವಾತ್ಮಾನಮುಪಾಸೀತ' 'ಜ್ಯೋತಿಷ್ಟೋಮೇನ ಯಜೇತ' ಎಂಬುದಾಗಿ ಸಾಧನಗಳಾದ ವಿದ್ಯೆ ಮತ್ತು ಕರ್ಮಗಳ ಬಗ್ಗೆ ವಿಧಿಯಿದೆ. ಆದ್ದರಿಂದ ಆ ವಿಷಯಗಳಲ್ಲಿ ಜೀವರಿಗೆ ಈಶ್ವರನು ಕಿಂಚಿತ್ತು ಸ್ವಾತಂತ್ರ್ಯವನ್ನು ಕೊಡುತ್ತಾನೆ ಎಂದು ಅಂಗೀಕರಿಸಬೇಕು. ಇದಕ್ಕೆ 'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂಬ ಸೂತ್ರವೇ ಪ್ರಮಾಣ. ಆದರೆ ಫಲದ ವಿಷಯದಲ್ಲಿ ವಿಧಿ ಎಂಬ ಕಾರಣವಿಲ್ಲ. ಆದ್ದರಿಂದ ಸಾಧನದೊಂದಿಗೆ ಹೇಳಿದ್ದರೂ ವಿಧಿ ಯಿಲ್ಲದಿರುವುದರಿಂದ ಫಲದಲ್ಲಿ ಸ್ವಾತಂತ್ರ್ಯವಿಲ್ಲ.

ಮತ್ತು 'ಅಥೈತಯೋಃ' ಎಂಬ ಶ್ರುತಿಯಲ್ಲಿರುವ 'ಏತಯೋಃ' ಎಂಬ ಪದ ದಿಂದ ಪ್ರಸಕ್ತವಾದ ವಿದ್ಯಾ ಕರ್ಮಗಳೆಂಬ ಎರಡು ಸಾಧನಗಳನ್ನೇ ಗ್ರಹಿಸಬೇಕೇ ಹೊರತು ಫಲವನ್ನಲ್ಲ. ಇದಕ್ಕೆ ಭಾಷ್ಯದಲ್ಲಿ ಮಹಾಭಾರತದ ವಚನವನ್ನು ಪ್ರಮಾಣವನ್ನಾಗಿ ಹೇಳಲಾಗಿದೆ. ಆದ್ದರಿಂದ ಕಾಮ್ಯಕರ್ಮಗಳಲ್ಲಿ ವೈರಾಗ್ಯವು ಅತ್ಯಾವಶ್ಯಕವಾಗಿದೆ ಎಂದು ಸಿದ್ಧಾಂತ.

**ಸೂತ್ರಾರ್ಥ —**

**ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ**

ವಿದ್ಯಾಕರ್ಮಣೋಃ ಇತಿ ತು='ಏತಯೋಃ ಪಥೋರ್ನ ಕತರೇಣ' ಎಂಬ ಶ್ರುತಿಯಲ್ಲಿ ಹೇಳಿದ ಎರಡು ಮಾರ್ಗಗಳೆಂದರೆ, ವಿದ್ಯಾ ಮತ್ತು ಕರ್ಮಗಳು ಎಂದೇ ಅರ್ಥ. ಏಕೆಂದರೆ ಪ್ರಕೃತತ್ವಾತ್=ಆ ಎರಡೇ ಪ್ರಕೃತವಾದ್ದರಿಂದ.

## ನ ತೃತೀಯಾಧಿಕರಣ (3-1-15)

ಓಂ ನ ತೃತೀಯೇ ತಥೋಪಲಬ್ಧೇಃ ಓಂ ಎಂಬ ಸೂತ್ರದಿಂದ ಆರಂಭ

ವಾಗಿರುವ ಈ ಅಧಿಕರಣಕ್ಕೆ ಅಂಧಂತಮಸ್ಸು ವಿಷಯ. ಲೋಕದಲ್ಲಿ ಸುಖದುಃಖ ಗಳು ಎರಡೂ ಒಟ್ಟಿಗೆ ಇರುವುದು ಕಂಡಿದೆ. ಆದರೆ ತಮಸ್ಸು ಅಲೌಕಿಕವಾಗಿದೆ. ಆದ್ದರಿಂದ ಸಂಶಯವು ಬರುತ್ತಿದೆ– ಅಂಧಂತಮಸ್ಸಿನಲ್ಲಿ ಸುಖವು ಇದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ—** 'ಯತ್ರ ದುಃಖಂ ತತ್ರ ಸುಖಂ ಸರ್ವತ್ರಾಪಿ ಪ್ರತೀಯತೇ' (ಎಲ್ಲಿ ದುಃಖವಿದೆಯೋ ಅಲ್ಲಿ ಸುಖವೂ ಇರುತ್ತದೆ. ಇದು ಸರ್ವತ್ರ ಕಾಣುತ್ತದೆ) ಎಂಬ ವಚನವಿರುವುದರಿಂದ ಸುಖದುಃಖಗಳಿಗೆ ಸಹಭಾವವಿದೆ ಎಂದು ಸಿದ್ಧವಾಯಿತು. ಹಾಗಾದಲ್ಲಿ ಅಂಧಂತಮಸ್ಸಿನಲ್ಲಿಯೂ ಸುಖವಿರುವುದರಿಂದ ಅದರಲ್ಲಿ ವೈರಾಗ್ಯದ ಆವಶ್ಯಕತೆ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಭಾವ' (ಸುಖದುಃಖಗಳು ಒಟ್ಟಿಗೇ ಇರುವುದು) ಇದನ್ನು ಹಾಗೂ 'ಕಾರಣಾಭಾವ' (ಕಾರಣವಾದ ಅನುಗ್ರಹವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸು ತ್ತಿದ್ದಾರೆ—

**ನ ಚ ದುಃಖಸಹಸ್ಥಾಯಿತ್ವಾದಂಧೇ ತಮಸ್ಯಪಿ ಸುಖಮ್ ।**
**ಈಶಸ್ಯಾಪ್ರಿಯತ್ವೇನೈವ ಕಾರಣಾಭಾವಾತ್ ॥ ೧೫ ॥**

**ಭಾವಾರ್ಥ—** ದುಃಖದೊಂದಿಗೆ ಸುಖವೂ ಇರುವುದು ಕಂಡಿರುವುದರಿಂದ ಅಂಧಂತಮಸ್ಸಿನಲ್ಲಿಯೂ ಸುಖವಿದೆ ಎಂದು ಆಕ್ಷೇಪಿಸಬಾರದು. ಏಕೆಂದರೆ ಅಂಧಂ ತಮಸ್ಸಿನಲ್ಲಿರುವ ಜೀವನು ಭಗವಂತನಿಗೆ ಪ್ರಿಯನಲ್ಲವಾದ್ದರಿಂದ ಸುಖಕ್ಕೆ ಕಾರಣ ವಾದ ಅನುಗ್ರಹವಿಲ್ಲ.

**ವಿವರಣೆ—** ಸುಖಕ್ಕೆ ಕಾರಣವಾದದ್ದು ಭಗವಂತನ ಅನುಗ್ರಹ. ಅಂಧಂತಮಸ್ಸಿನಲ್ಲಿರುವ ಜೀವನು ಭಗವಂತನಿಗೆ ಸರ್ವಥಾ ಅಪ್ರಿಯನಾಗಿದ್ದಾನೆ. ಆದ್ದರಿಂದ ಅವನಿಗೆ ಭಗವಂತನ ಅನುಗ್ರಹವಿಲ್ಲ. ಆದ್ದರಿಂದ ಸುಖದ ಪ್ರಸಕ್ತಿಯಿಲ್ಲ.

**ಸೂತ್ರಾರ್ಥ—**

**ಓಂ ನ ತೃತೀಯೇ ತಥೋಪಲಬ್ಧೇಃ ಓಂ**

ತೃತೀಯೇ=ಅಂಧಂತಮಸ್ಸಿನಲ್ಲಿ ನ=ಸುಖವಿಲ್ಲ. ಏಕೆಂದರೆ ತಥೋಪ-ಲಬ್ಧೇಃ=ಆರೀತಿ ಶ್ರುತಿಯಿಂದ ಪ್ರತಿಪಾದಿತವಾದ್ದರಿಂದ.

## ತತ್ಸಾಭಾವ್ಯಾಪತ್ತ್ಯಧಿಕರಣ (3-1-16)

ಓಂ ತತ್ಸಾಭಾವ್ಯಾಪತ್ತಿರುಪಪತ್ತೇಃ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಧೂಮಾದಿಭಾವವೇ ವಿಷಯ. ಶಬ್ದಕ್ಕೆ ಮುಖ್ಯವೃತ್ತಿ ಮತ್ತು ಅಮುಖ್ಯವೃತ್ತಿ ಎಂದು ಅನೇಕ ವಿಧವಾದ ವೃತ್ತಿಗಳಿವೆ. ಧೂಮಾದಿ ಭಾವವೆಂದರೆ ಮುಖ್ಯವೃತ್ತಿಯಿಂದ ಧೂಮಾದಿ ದೇವತೆಗಳೊಂದಿಗೆ ಐಕ್ಯವೆಂದು ಹೇಳುವುದೋ? ಅಥವಾ ಅಮುಖ್ಯವೃತ್ತಿಯಿಂದ ದೇವತಾಸ್ಥಾನದ ಪ್ರಾಪ್ತಿಯೆಂದು ಹೇಳುವುದೋ? ಎಂದು ಸಂದೇಹ.

**ಪೂರ್ವಪಕ್ಷ—** 'ಧೂಮೋ ಭೂತ್ವಾ ಅಭ್ರಂ ಭವತಿ' ಮುಂತಾದ ಶ್ರುತಿಗಳಲ್ಲಿ ಯಾಗಾದಿಗಳನ್ನು ಆಚರಿಸಿದವರಿಗೆ ಧೂಮಾದಿಭಾವವು ಸಿಗುತ್ತದೆ ಎಂದು ಹೇಳಲಾಗಿದೆ. ಇಲ್ಲಿ ಧೂಮಾದಿಭಾವವೆಂದರೆ ಆ ದೇವತೆಗಳ ಪದ ಪ್ರಾಪ್ತಿಯೇ ಆಗಿದೆ. ಈ ಪರಮಸುಖವು ಕಲ್ಪಸಮಾಪ್ತಿಯಾಗುವವರೆಗೂ ಒಮ್ಮೆ ಯಾಗ ಮಾಡಿದವನಿಗೆ ಸಿಗುವುದರಿಂದ ಕರ್ಮದಲ್ಲಿಯಾಗಲೀ ಅದರ ಫಲದಲ್ಲಿಯಾಗಲೀ ವೈರಾಗ್ಯವನ್ನು ಪಡೆಯುವ ಅವಶ್ಯಕತೆಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಸಹಾವಸ್ಥಾನ'** (ಧೂಮಾದಿದೇವತೆಗಳೊಂದಿಗೆ ಅವರ ಲೋಕದಲ್ಲಿರುವುದು) ಎಂಬುದು. ಇದನ್ನು ಮತ್ತು **'ಕಾರಣಾಭಾವ'** (ವಿದ್ಯೆಯೆಂಬ ಕಾರಣವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನು ಹೇಳುತ್ತಿದ್ದಾರೆ—

**ನ ಚ ಧೂಮಾದಿದೇವತಾಸಹಾವಸ್ಥಾನಾತ್ ಕರ್ಮಿಣೋಽಪಿ ತತ್ಪದಪ್ರಾಪ್ತಿಃ । ತನ್ನಿಮಿತ್ತವಿದ್ಯಾಖ್ಯಕಾರಣಾಭಾವಾತ್ ॥ ೧೬ ॥**

**ಭಾವಾರ್ಥ—** ಧೂಮಾದಿದೇವತೆಗಳೊಂದಿಗೆ ಇರುವುದರಿಂದ ಯಜ್ಞಾದಿ ಕರ್ಮಮಾಡುವವರಿಗೂ ಆ ದೇವತೆಗಳ ಸ್ಥಾನವು ಲಭಿಸುವುದು ಎಂದು ಆಕ್ಷೇಪಿಸಬಾರದು. ಆ ಪದಪ್ರಾಪ್ತಿಗೆ ಬೇಕಾದ ವಿದ್ಯೆಯೆಂಬ ಕಾರಣವು ಇಲ್ಲದಿರುವುದರಿಂದ.

**ವಿವರಣೆ—** ಧೂಮಾದಿ ದೇವತೆಗಳೊಂದಿಗೆ ವಾಸಮಾಡಿದ ಕೂಡಲೆ ಅವರ ಐಕ್ಯವನ್ನಂತೂ ಪಡೆಯುವುದಿಲ್ಲ. ಒಬ್ಬರು ಮತ್ತೊಬ್ಬರಾಗುವುದು ಸಾಧ್ಯವೇ ಇಲ್ಲ. ಆ ಧೂಮಾದಿದೇವತೆಗಳ ಪದಪ್ರಾಪ್ತಿಯೂ ಅಲ್ಲ. ಏಕೆಂದರೆ ಅದಕ್ಕೆ ಕಾರಣವಾದದ್ದು ವಿದ್ಯೆ (ಅಪರೋಕ್ಷಜ್ಞಾನ). ಅದು ಇಲ್ಲದ ಕಾರಣ ದೇವತಾಪದ ಪ್ರಾಪ್ತಿಯು ಇಲ್ಲ. ಹಾಗಾದರೆ ಧೂಮಾದಿಭಾವವನ್ನು ಪಡೆಯುತ್ತಾರೆ ಎಂದು ಶ್ರುತಿಯಲ್ಲಿ ಹೇಳಿದ್ದಕ್ಕೆ ಅರ್ಥವೇನು? ಎಂದರೆ ಧೂಮಾದಿದೇವತೆಗಳು ನಡೆದಾಗ ನಡೆಯುವುದು. ಅವರು ಭೋಜನಮಾಡುವಾಗ ಮಾಡುವುದೇ ಧೂಮಾದಿ ಭಾವವನ್ನು ಪಡೆಯುವುದು. ಒಟ್ಟಾರೆಯಾಗಿ ಅವರ ಸ್ವಭಾವಕ್ಕೆ ಸದೃಶವಾದ ಸ್ವಭಾವವನ್ನು ಪಡೆಯುವುದು ಎಂದರ್ಥ.

**ಸೂತ್ರಾರ್ಥ—**

**ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ**

ತತ್ಸ್ವಾಭಾವ್ಯಾಪತ್ತಿಃ=ಕಾಮ್ಯಕರ್ಮವನ್ನು ಆಚರಿಸಿದವನಿಗೆ ಧೂಮಾದಿ ದೇವತೆಗಳ ಸ್ವಭಾವ ಸದೃಶವಾದ ಸ್ವಭಾವವು ಉಂಟಾಗುವುದು ಹೊರತು ಐಕ್ಯವಲ್ಲ. ಏಕೆಂದರೆ ಉಪಪತ್ತೇಃ=ಇದೇ ಯುಕ್ತವಾಗಿರುವುದರಿಂದ.

## ನಾತಿಚಿರೇಣಾಧಿಕರಣ (3-1-17)

ಓಂ ನಾತಿಚಿರೇಣ ವಿಶೇಷಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಕಾಮ್ಯಕರ್ಮವನ್ನು ಮಾಡುವವರೇ ವಿಷಯ. ಕಾಮ್ಯಕರ್ಮವನ್ನು ಮಾಡುವವರು ಬಹುಕಾಲದ ಅನಂತರ ಗರ್ಭವಾಸವನ್ನು ಅನುಭವಿಸುವರೋ? ಅಥವಾ ಕೂಡಲೆ ಗರ್ಭವಾಸವನ್ನು ಅನುಭವಿಸುವರೋ? ಎಂದು ಸಂಶಯ.

**ಪೂರ್ವಪಕ್ಷ—** 'ಯಥೇತಮಾಕಾಶಂ' ಮುಂತಾದ ಶ್ರುತಿಗಳಲ್ಲಿ ಸ್ವರ್ಗದಿಂದ ಹಿಂತಿರುಗುವ ಜೀವರಿಗೆ ಮಧ್ಯದಲ್ಲಿ ಅನೇಕ ಸ್ಥಾನಗಳನ್ನು ಹೇಳಲಾಗಿದೆ. ಮತ್ತು ಅಲ್ಲಿರುವ ಕಾಲವನ್ನೂ ಹೇಳಿಲ್ಲವಾದ್ದರಿಂದ ಬಹುಕಾಲದವರೆಗೆ ಸುಖಾನುಭವ ದೊರಕುವಾಗ ಅದನ್ನು ಪರಿತ್ಯಜಿಸಲು ಕಾರಣವೂ ಇಲ್ಲ. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯದ ಆವಶ್ಯಕತೆಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಸ್ಥಾನ' (ಆಯಾ ದೇವತೆ ಗಳೊಂದಿಗೆ ವಾಸವಾಗಿರುವುದು) ಇದನ್ನು ಮತ್ತು 'ಕಾರಣಾಭಾವ' (ದೇವತೆಗಳ ಲೋಕದಲ್ಲಿ ವಾಸಮಾಡಲು ಕಾರಣವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ತೈಸ್ತೈಃ ಸಹಾವಸ್ಥಾನಾದತಿಚಿರತ್ವಮ್ । 'ವತ್ಸರಾತ್ ಪೂರ್ವಮೇವ ತು' ಇತಿ ಕ್ಲೃಪ್ತಕಾಲಾದಧಿಕಾವಸ್ಥಾನೇ ಕಾರಣಾಭಾವಾತ್ ॥ ೧೭ ॥**

**ಭಾವಾರ್ಥ—** ಆಯಾಯಾ ಧೂಮಾದಿದೇವತೆಗಳೊಂದಿಗೆ ಅವರ ಲೋಕ ಗಳಲ್ಲಿ ಇರುವುದರಿಂದ ಭೂಲೋಕಕ್ಕೆ ಬರುವುದು ಬಹಳ ವಿಳಂಬವಾಗುವುದು ಎಂದು ಪೂರ್ವಪಕ್ಷವನ್ನು ಮಾಡಬಾರದು. ಏಕೆಂದರೆ 'ವತ್ಸರಾತ್ ಪೂರ್ವಮೇವ ತು' (ಒಂದು ವರ್ಷಕ್ಕಿಂತ ಮೊದಲೇ ಜನ್ಮವನ್ನು ಪಡೆಯುತ್ತಾನೆ) ಎಂದು ಹೇಳಿದ್ದರಿಂದ ನಿಶ್ಚಿತವಾದ ಕಾಲಕ್ಕಿಂತ ಹೆಚ್ಚು ಕಾಲ ಆ ದೇವತೆಗಳೊಂದಿಗೆ ಇರುವುದಕ್ಕೆ ಕಾರಣವಿಲ್ಲವಾದ್ದರಿಂದ.

**ವಿವರಣೆ—** 'ಸ್ವರ್ಗಾಲ್ಲೋಕಾದವಾಪ್ನೋತಿ ವತ್ಸರಾತ್ ಪೂರ್ವಮೇವ ತು' ಎಂಬ ಶ್ರುತಿಯು ಒಂದು ವರ್ಷದ ಮೊದಲೇ ಜನ್ಮವನ್ನು ತಾಳುತ್ತಾನೆ ಎಂದು ಹೇಳಿದ್ದರಿಂದ ಹೆಚ್ಚು ಕಾಲ ದೇವತೆಗಳ ಲೋಕದಲ್ಲಿ ಇರಲು ಯಾವುದೇ ಕಾರಣ ವಿಲ್ಲ. ಆದ್ದರಿಂದ ಅತಿ ಶೀಘ್ರದಲ್ಲಿಯೇ ಗರ್ಭವಾಸಾದಿಕ್ಲೇಶ ಉಂಟಾಗುವುದರಿಂದ ಕಾಮ್ಯಕರ್ಮದಲ್ಲಿ ವಿರಕ್ತಿಯನ್ನು ತಾಳಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ನಾತಿಚಿರೇಣ ವಿಶೇಷಾತ್ ಓಂ**

ನಾತಿಚಿರೇಣ=ಬಹುಬೇಗನೇ ಪುನಃ ಜನ್ಮವನ್ನು ಹೊಂದುತ್ತಾನೆ. ಏಕೆಂದರೆ, ವಿಶೇಷಾತ್=ವಿಶೇಷವಾದ ಶ್ರುತಿಯಿರುವುದರಿಂದ.

## ಅನ್ಯಾಧಿಕರಣ (3-1-18)

ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಕರ್ಮಾಚರಣೆ ಮಾಡುವವರೇ ವಿಷಯ.

ಬೇರೆ ಊರುಗಳಿಗೆ ಹೋಗುವುದು ಬರುವುದು ಇವುಗಳಿಂದ ಲೋಕದಲ್ಲಿ ದುಃಖ ಕಂಡಿದೆ. ಆದ್ದರಿಂದ ಪರಲೋಕದಿಂದ ಬರುವಾಗ ದುಃಖವಿದೆಯೋ? ಅಥವಾ ಇದು ಪುರುಷಾರ್ಥವಾದ್ದರಿಂದ ದುಃಖವಿಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ—** ಕಾಮ್ಯಕರ್ಮವನ್ನು ಆಚರಿಸುವವನು ಮತ್ತೆ ಜನ್ಮವನ್ನು ಪಡೆಯುವಾಗ ಧಾನ್ಯಾದಿಗಳಲ್ಲಿ ಪ್ರವೇಶಿಸಿ, ಅವುಗಳಿಂದ ಪುರುಷನ ದೇಹವನ್ನು ಪ್ರವೇಶಿಸಿ ಅನಂತರ ಸ್ತ್ರೀದೇಹವನ್ನು ಪ್ರವೇಶಿಸಿ ಹುಟ್ಟುತ್ತಾನೆ. ಈ ಮಾರ್ಗದಲ್ಲಿ ಧಾನ್ಯಾದಿ ಜೀವರೊಂದಿಗೆ ಇರುವಾಗ ಧಾನ್ಯಾದಿಗಳನ್ನು ಕತ್ತರಿಸುವಾಗ ಉಂಟಾಗುವ ದುಃಖವು ಧಾನ್ಯಾದಿಜೀವರಿಗೆ ಹೇಗೋ ಹಾಗೆ, ಕಾಮ್ಯಕರ್ಮಿಗೂ ಆಗುವುದು. ಏಕೆಂದರೆ ಇಬ್ಬರಿಗೂ ಒಂದೇ ಧಾನ್ಯಶರೀರದಲ್ಲಿ ಸಹಭಾವವಿದೆ. ಆಗಮನಾದಿಗಳು ಯಜ್ಞದ ಫಲವಾದ್ದರಿಂದ ದುಃಖವೂ ಯಜ್ಞದ ಫಲ. ಸುಖಸಾಧನವೆಂದು ವೇದದಲ್ಲಿ ಹೇಳಲ್ಪಟ್ಟ ಕರ್ಮವು ದುಃಖ ಸಾಧನವಾಗಿದೆ. ಆದ್ದರಿಂದ ವೇದದ ಬಗ್ಗೆ ಅನಾಶ್ವಾಸ ಉಂಟಾಗುತ್ತದೆ. ಆದ್ದರಿಂದ ವೈರಾಗ್ಯದ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಹಸ್ಥಾನ' (ಕಾಮ್ಯಕರ್ಮಿಯು ಧಾನ್ಯಾದಿ ಜೀವರೊಂದಿಗೆ ಇರುವುದು) ಇದನ್ನು ಮತ್ತು 'ಕಾರಣಾಭಾವ' (ದುಃಖಕ್ಕೆ ಕಾರಣವಾದ ಪಾಪವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ವ್ರೀಹ್ಯಾದಿಜೀವೈಃ ಸಹಾವಸ್ಥಾನಾದ್ ದುಃಖಪ್ರಾಪ್ತಿಃ ।**
**ಶಬ್ದವಿಹಿತತ್ವೇನ ಪಾಪಾಖ್ಯಕಾರಣಾಭಾವಾತ್ ॥ ೧೮ ॥**

**ಭಾವಾರ್ಥ—**ಪುನರ್ಜನ್ಮವನ್ನು ಪಡೆಯುವ ಕಾಮ್ಯಕರ್ಮಿಯು ವ್ರೀಹ್ಯಾದಿ ಜೀವರೊಂದಿಗೆ ಇರುವುದರಿಂದ ಅವನಿಗೆ ದುಃಖವು ಪ್ರಾಪ್ತವಾಗುತ್ತದೆ ಎಂದು ಹೇಳಬಾರದು. ಯಾಗಾದಿಕರ್ಮವು ಶ್ರುತಿಯಲ್ಲಿ ವಿಧಿಸಲ್ಪಟ್ಟಿದ್ದರಿಂದ ಪಾಪವೆಂಬ ಕಾರಣವು ಇಲ್ಲದಿರುವುದರಿಂದ.

**ವಿವರಣೆ—** ದುಃಖಕ್ಕೆ ಕಾರಣವಾದದ್ದು ವ್ರೀಹ್ಯಾದಿಜೀವರೊಂದಿಗೆ ಇರುವುದಲ್ಲ, ಹೊರತು ಪಾಪವೇ. ಅಂತಹ ಪಾಪವು ಇಲ್ಲದಿರುವುದರಿಂದ ಕಾಮ್ಯಕರ್ಮಿಗೆ ದುಃಖವಾಗುವುದಿಲ್ಲ.

ಯಜ್ಞಾದಿಕರ್ಮವನ್ನು ಮಾಡುವವನಿಗೆ ಪಾಪವಿಲ್ಲವಾದ್ದರಿಂದ ದುಃಖವಿಲ್ಲವೆನ್ನುವುದು ಸರಿಯಲ್ಲ. ಜ್ಯೋತಿಷ್ಟೋಮಾದಿ ಯಾಗಗಳು ಹಿಂಸಾಯುಕ್ತವೇ ಆಗಿವೆ. ಹಿಂಸೆಯೇ ಪಾಪಕರ. ಆದ್ದರಿಂದ ದುಃಖವು ಅವರ್ಜನೀಯವೆನ್ನಬಾರದು. ಏಕೆಂದರೆ ಯಾಗೀಯಹಿಂಸೆಯು ಪಾಪಕಾರಕವಲ್ಲ. ಅದು 'ವಾಯವ್ಯಂ ಶ್ವೇತಮಾಲಭೇತ' ಎಂಬ ಶ್ರುತಿಯಿಂದ ವಿಹಿತವಾಗಿದೆ. ಆದ್ದರಿಂದ ಯಾಗೀಯ ಹಿಂಸೆಯು ಪಾಪಸಾಧನವಲ್ಲ ಹೊರತು ಸುಖಸಾಧನವೇ ಆಗಿದೆ. ವೇದ ಅಪ್ರಮಾಣವಲ್ಲ. ವೇದೋಕ್ತವಾದ ವೈರಾಗ್ಯದ ಅನುಷ್ಠಾನವೂ ಯುಕ್ತವೇ ಆಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ

ಕರ್ಮಾನುಷ್ಠಾನ ಮಾಡುವವರಿಗೆ ವ್ರೀಹ್ಯಾದಿಭಾವವೆಂದರೆ ಅನ್ಯಾಧಿಷ್ಠಿತೇ=ಇನ್ನೊಬ್ಬನಿಂದ ಅಧಿಷ್ಠಿತವಾದ ವ್ರೀಹ್ಯಾದಿಶರೀರದಲ್ಲಿ ಪ್ರವೇಶವೇ ಹೊರತು ಅಭಿಮಾನವಲ್ಲ. ಹಾಗಾದರೆ ವ್ರೀಹ್ಯಾದಿಭಾವವೆಂದರೆ ಏನು? ಎಂದರೆ ಪೂರ್ವವತ್=ಹಿಂದೆ ಧೂಮಾದಿಭಾವವನ್ನು ಹೇಳಿದಂತೆ. ಇದಕ್ಕೂ ಆಧಾರವೇನು? ಎಂದರೆ ಅಭಿಲಾಪಾತ್=ಶ್ರುತಿಯಲ್ಲಿ ಹೇಳಿದ್ದರಿಂದ.

## ರೇತೋಽಧಿಕರಣ (3-1-19)

ಓಂ ರೇತಸ್ಸಿಗ್ಯೋಗೋಽಥ ಓಂ ಎಂಬ ಅಧಿಕರಣಕ್ಕೂ ಕಾಮ್ಯಕರ್ಮಿಯೇ ವಿಷಯ. 'ಯೋ ವಾ ರೇತಸ್ಸಿಂಚತಿ ತಮೇವಾನುವಿಶತಿ' (ಜೀವನು ರೇತಸ್ಸೇಚನ ಮಾಡುವವನನ್ನು ಪ್ರವೇಶಿಸುತ್ತಾನೆ) ಎಂದು ಶ್ರುತಿಯು ಹೇಳುತ್ತಿದೆ. ಆದರೂ ತಂದೆಯನ್ನು ಪ್ರವೇಶಮಾಡುವುದರಿಂದ ಯಾವ ಪ್ರಯೋಜನವೂ ಕಾಣುತ್ತಿಲ್ಲ. ಆದ್ದರಿಂದ ಸಂಶಯ ಬರುತ್ತದೆ. ಕಾಮ್ಯಕರ್ಮಿಯು ತಂದೆಯನ್ನು ಪ್ರವೇಶಿಸುತ್ತಾನೋ? ಇಲ್ಲವೋ? ಎಂದು.

**ಪೂರ್ವಪಕ್ಷ—** 'ಸ್ವರ್ಗಾದವಾಗ್ಗತಶ್ಚಾಪಿ ಮಾತುರೇವೋದರಂ ವ್ರಜೇತ್' (ಸ್ವರ್ಗದಿಂದ ಹಿಂತಿರುಗುವ ಜೀವನು ತಾಯಿಯ ಉದರವನ್ನು ಪ್ರವೇಶಿಸುತ್ತಾನೆ) ಎಂದು ಹೇಳಿರುವುದರಿಂದ ತಂದೆಯ ಉದರವನ್ನು ಪ್ರವೇಶಿಸುವುದರಿಂದ ಯಾವ

ಪ್ರಯೋಜನವೂ ಇಲ್ಲ. ಹೀಗೆ ಜೀವನಿಗೆ ತಂದೆಯಲ್ಲಿ ಪ್ರವೇಶವಿಲ್ಲದಿರುವುದರಿಂದ ಸ್ವರ್ಗದಿಂದ ಹಿಂದಿರುಗುವಾಗ ಆಯಾಸವಿಲ್ಲ. ಆದ್ದರಿಂದ ಕರ್ಮದಲ್ಲಿ ವೈರಾಗ್ಯದ ಆವಶ್ಯಕತೆಯಿಲ್ಲ. ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವೈಯರ್ಥ್ಯ'ವೆಂಬುದು. ಇದನ್ನು ಮತ್ತು 'ಕ್ಲೃಪ್ತಿ' (ಭಗವಂತನ ಸಂಕಲ್ಪವನ್ನು ತಿಳಿಸುವ ವಚನ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ವೈಯರ್ಥ್ಯಾತ್ ಪಿತೃಶರೀರಗಮನಮ್ । 'ಈಶಕ್ಲಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಮ್' ಇತೀಶಕ್ಲೃಪ್ತತ್ವವಚನಾತ್ ॥ ೧೯ ॥**

**ಭಾವಾರ್ಥ—** ಯಾವುದೇ ಪ್ರಯೋಜನವಿಲ್ಲದಿರುವುದರಿಂದ ತಂದೆಯ ಶರೀರವನ್ನು ಪ್ರವೇಶಿಸುವುದಿಲ್ಲವೆಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ 'ಭಗವಂತನ ಸಂಕಲ್ಪದಂತೆ ತಂದೆಯ ಶರೀರವನ್ನು ಪ್ರವೇಶಿಸಿ ತಾಯಿಯ ಶರೀರ ವನ್ನು ಹೊಂದುತ್ತಾನೆ' ಎಂಬ ಭಗವಂತನ ಸಂಕಲ್ಪವನ್ನು ತಿಳಿಸುವ ವಾಕ್ಯ ವಿರುವುದರಿಂದ.

**ವಿವರಣೆ—** ಜೀವನ ಶರೀರದ ಪರಿಣಾಮಕ್ಕಾಗಿ ರೇತಸ್ಸಿನ ಅಪೇಕ್ಷೆಯಿದೆ. ಭಗವಂತನ ಸಂಕಲ್ಪಕ್ಕನುಗುಣವಾಗಿ ತೆದಂಯ ಉದರವನ್ನು ಪ್ರವೇಶಿಸಲೇಬೇಕು. ಆದ್ದರಿಂದ ಜೀವನಿಗೆ ಆಗಮನವು ಆಯಾಸಕರವಾದ್ದರಿಂದ ವೈರಾಗ್ಯವು ಆವಶ್ಯಕವಾಗಿದೆ ಎಂದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ರೇತಸ್ಸಿಗ್ಯೋಗೋಽಥ ಓಂ**

ಕಾಮ್ಯಕರ್ಮಿಗೆ ಮೊದಲು ರೇತಸ್ಸಿಗ್‌ಯೋಗಃ=ರೇತಸ್ಸೇಚನವನ್ನು ಮಾಡುವ ತಂದೆಯ ಸಂಬಂಧ. ಅಥ=ಅನಂತರ ತಾಯಿಯ ಶರೀರ ಪ್ರವೇಶ.

## ಯೋನ್ಯಧಿಕರಣ (3-1-20)

ಓಂ ಯೋನೇಃ ಶರೀರಂ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಜೀವನೇ ವಿಷಯ. ಎರಡೂ ಪಕ್ಷದಲ್ಲೂ ಅನುಪಪತ್ತಿ ಕಾಣುವುದರಿಂದ ಜೀವನು

ತಂದೆಯ ಮೂಲಕ ಮಾತೃಯೋನಿಯನ್ನು ಪ್ರವೇಶಿಸಿ ಶರೀರವನ್ನು ಹೊಂದು ತ್ತಾನೋ? ಇಲ್ಲವೋ ಎಂಬುದು ಸಂದೇಹ.

**ಪೂರ್ವಪಕ್ಷ—** ಯೋನಿಯ ಪ್ರವೇಶವಿಲ್ಲದೇ ಪಿತೃವಿನಿಂದಲೇ ಮಾಂಧಾತೃ ಮೊದಲಾದವರಿಗೆ ಇರುವಂತೆ ಜನ್ಮ ಸಂಭವಿಸಬಹುದು. ಅಥವಾ 'ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ ಸ್ವರ್ಗತೋ ಗತಃ' (ಸ್ವರ್ಗದಿಂದ ಬಂದ ಜೀವನು ತಾಯಿಯ ಗರ್ಭದಲ್ಲಿರುವ ದೇಹವನ್ನೇ ಪ್ರವೇಶಿಸುತ್ತಾನೆ) ಎಂದು ಹೇಳಿರುವುದ ರಿಂದ ತಂದೆಯ ಮೂಲಕ ತಾಯಿಯ ದೇಹ ಸೇರಿ ಅಲ್ಲಿಂದ ಗರ್ಭಪ್ರವೇಶ ಅಲ್ಲ. ಸಾಕ್ಷಾತ್ತಾಗಿ ಆಹಾರದ ಮೂಲಕ ಜೀವನು ಗರ್ಭದಲ್ಲಿರುವ ದೇಹವನ್ನೇ ಪ್ರವೇಶಿಸು ತ್ತಾನೆ. ಕಲಲ, (ಶೋಣಿತದೊಂದಿಗೆ ಸಂಬಂಧಪಡೆಯುವುದು) ಬುದ್ಬುದಾದಿ (ವರ್ತುಲಾಕಾರವನ್ನು ಹೊಂದುವುದು) ಕ್ರಮದಿಂದ ದೇಹವನ್ನು ಹೊಂದುವ ನಿಯಮವಿಲ್ಲದಿರುವುದರಿಂದ ಆಗಮನದಲ್ಲಿ ಆಯಾಸವಿಲ್ಲದಿರುವ ಕಾರಣ ವೈರಾಗ್ಯ ಆವಶ್ಯಕತೆ ಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅನ್ಯಥಾಗತಿ' (ವ್ರೀಹ್ಯಾದಿಗಳ ಮೂಲಕ ನೇರವಾಗಿ ತಾಯಿಯ ಉದರಕ್ಕೆ ಪ್ರವೇಶ ಅಥವಾ ತಾಯಿಯ ಯೋನಿಯ ಪ್ರವೇಶವಿಲ್ಲದೆ ನೇರವಾಗಿ ತಂದೆಯಿಂದಲೂ ಜನ್ಮ) ಎಂಬುದು. ಇದನ್ನು ಮತ್ತು 'ಅನ್ಯಥಾಽಗತಿ' (ಅನ್ಯಥಾ=ತಾಯಿಯ ಯೋನಿಪ್ರವೇಶವಿಲ್ಲದೆ ಅಗತಿ=ಜನ್ಮಪ್ರಾಪ್ತಿಯು ಇಲ್ಲ) ಎಂಬ ಸಿದ್ಧಾಂತವನ್ನು ಹೇಳುವ ನ್ಯಾಯವನ್ನೂ ನಿರೂಪಿಸುತ್ತಿದ್ದಾರೆ–

**ನ ಚ ಪಿತುಃ ಸಕಾಶಾದನ್ಯತೋ ವಾೌದರ್ಯಗರ್ಭಸ್ಥಶರೀರಮೇವ ಪ್ರವೇಷ್ಟುಮುಪಪತ್ತೇರ್ಯೋನಿಪ್ರವೇಶಾಭಾವ ಇತಿ ವಾಚ್ಯಮ್ । 'ಯೋನಿದ್ವಾರೇಣ ದೇಹಂ ಚ ಪ್ರಾಪ್ನೋತಿ ಪ್ರಾಯಶೋ ನರಃ' ಇತಿ ವಚನಾತ್ ಸಾಮಾನ್ಯತೋ ಗತ್ಯಂತರಾಭಾವಾತ್ ।**

**'ವಿಶೇಷಕಾರಣಾದೇವ ವಿಶೇಷಾಜ್ಜನಿರಿಷ್ಯತೇ ।**
**ಸಾಮಾನ್ಯಜನನಂ ಚೈವ ನೃಣಾಂ ಸಾಮಾನ್ಯಹೇತುತಃ ॥'**

**ಇತಿ ವಚನಾಚ್ಚ ॥ ೨೦ ॥**

**ಭಾವಾರ್ಥ—** ತಂದೆಯಿಂದಲೇ ಸಾಕ್ಷಾತ್ತಾಗಿ ಜನ್ಮವನ್ನು ಪಡೆಯಬಹುದು. ಅಥವಾ ಆಹಾರಾದಿಗಳ ಮೂಲಕ ಮೊದಲೆ ತಾಯಿಯ ಉದರಲ್ಲಿದ್ದ ಶರೀರವನ್ನು ಪ್ರವೇಶಿಸಬಹುದಾದ್ದರಿಂದ ಜೀವನಿಗೆ ಯೋನಿಯನ್ನು ಪ್ರವೇಶಿಸುವ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ ಮಾಡಬಾರದು. 'ಸಾಮಾನ್ಯವಾಗಿ ಮನುಷ್ಯನು ಯೋನಿಯ ಮೂಲಕವೇ ಜನ್ಮವನ್ನು ಪಡೆಯುತ್ತಾನೆ' ಎಂಬ ವಚನವಿರುವುದರಿಂದ ಯೋನಿಯ ಪ್ರವೇಶವಿಲ್ಲದೆ ಬೇರೆ ಜನ್ಮ ಪಡೆಯಲು ಅವಕಾಶವಿಲ್ಲ. ವಿಶೇಷವಾದ ದೇವರ ಅನುಗ್ರಹ ಮೊದಲಾದ ಕಾರಣದಿಂದ ವಿಶೇಷವಾದ ಜನ್ಮವು ಇರುತ್ತದೆ. 'ಮನುಷ್ಯರಿಗೆ ಸಾಮಾನ್ಯವಾದ ಜನ್ಮವು ಸಾಮಾನ್ಯಕಾರಣಗಳಿಂದಲೇ (ತಂದೆಯ ದೇಹವನ್ನು ಪ್ರವೇಶಿಸಿ ತಾಯಿಯ ಯೋನಿಯಿಂದಲೇ) ಆಗಿರುತ್ತದೆ' ಎಂಬ ಪ್ರಮಾಣವಚನವಿರುವುದರಿಂದ.

**ವಿವರಣೆ—** ಜೀವನು ತಂದೆಯ ದೇಹದಿಂದ ರೇತಸ್ಸಿನ ಮೂಲಕ ತಾಯಿಯ ಗರ್ಭವನ್ನು ಪ್ರವೇಶಿಸಿ ಆಮೇಲೆ ಶರೀರವನ್ನು ಪಡೆಯುತ್ತಾನೆ ಎಂಬುದು ಸಾಮಾನ್ಯ ನಿಯಮ. ಕೆಲವು ವಿಶೇಷ ಕಾರಣದಿಂದ ವಿಶೇಷಜನ್ಮವೂ ಕಂಡಿದೆ. ಉದಾ: ಕೆಲವರು ಸ್ಥಿರವಸ್ತುಗಳಿಂದಲೇ ಹುಟ್ಟುತ್ತಾರೆ– ಶುಕಾಚಾರ್ಯರು ಅರಣಿಯಿಂದ ಹುಟ್ಟಿದಂತೆ. ಕೆಲವರು ತಂದೆಯಿಂದಲೇ ಹುಟ್ಟುತ್ತಾರೆ— ಮಾಂಧಾತೃವಿನಂತೆ. ಕೆಲವರು ಪುರುಷಸಂಪರ್ಕವಿಲ್ಲದೆ ತಾಯಿಯಿಂದಲೇ ಹುಟ್ಟುತ್ತಾರೆ— ಜರತ್ಕಾರುವಿನ ಅನುಗ್ರಹದಿಂದ ಆಸ್ತೀಕನಂತೆ. ಕೆಲವರು ಗರ್ಭದಿಂದ ಹೊರಬಂದ ಮೇಲೆ ದೇಹವನ್ನು ಪ್ರವೇಶಿಸುತ್ತಾರೆ— ಮಧ್ವಾಚಾರ್ಯರಂತೆ. ಆದ್ದರಿಂದ ಆಗಮನವು ಎಲ್ಲರಿಗೂ ಸಾಮಾನ್ಯವಾಗಿ ದುಃಖದಾಯಕವೇ ಆಗಿದೆ. ಆದ್ದರಿಂದ ವೈರಾಗ್ಯದ ಆವಶ್ಯಕತೆ ಇದ್ದೇ ಇದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ಯೋನೇಃ ಶರೀರಂ ಓಂ

ಯೋನೇಃ=ಕಾಮ್ಯಕರ್ಮದಿಂದ ಸ್ವರ್ಗವನ್ನು ಪಡೆದು ಹಿಂದಿರುಗಿದವನು ತಂದೆಯ ಮೂಲಕ ತಾಯಿಯ ಯೋನಿಯನ್ನು ಪ್ರವೇಶಿಸಿದ ನಂತರವೇ ಶರೀರಂ=ಶರೀರವನ್ನು ಹೊಂದುತ್ತಾನೆ.

**ಇಲ್ಲಿಗೆ ತೃತೀಯಾಧ್ಯಾಯ ಪ್ರಥಮಪಾದ ಮುಗಿಯಿತು.**

# ಮೂರನೆಯ ಅಧ್ಯಾಯ

## ಎರಡನೆ ಪಾದ

ದೃಢವಾದ ಭಕ್ತಿಯು ಅಪರೋಕ್ಷಜ್ಞಾನಕ್ಕೆ ಸಾಧನವಾಗಿದೆ. ಭಕ್ತಿಯ ದೃಢತೆಗಾಗಿ ವೈರಾಗ್ಯವನ್ನು ಹಿಂದಿನ ಪಾದದಲ್ಲಿ ನಿರೂಪಣೆ ಮಾಡಿ ಈ ಪಾದದಲ್ಲಿ ಭಕ್ತಿಯ ನಿರೂಪಣೆಯನ್ನು ಮಾಡುತ್ತಿದ್ದಾರೆ. ಭಕ್ತಿಯೆಂದರೆ ಮಾಹಾತ್ಮ್ಯಜ್ಞಾನ ಪೂರ್ವಕ ವಾದ ಪ್ರೀತಿ. ಆದ್ದರಿಂದ ಭಗವಂತನ ಮಹಿಮೆಯನ್ನು ಈ ಪಾದದಲ್ಲಿ ಹೇಳುತ್ತಿದ್ದಾರೆ.

ಈ ಪಾದದ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ—

ಪಶ್ಚಾದದೃಷ್ಟ್ಯವಿಜ್ಞಾನಕಾಲದುಃಖಪೃಥಗ್‌ಭವಾಃ ।
ಸ್ಥಾನಭೇದೋ ವಿರುದ್ಧತ್ವಂ ನ್ಯಾಯಸಾಮ್ಯಂ ಸ್ವತೋಭವಃ ।
ಗುಣಸಾಮ್ಯಮಯೋಗಶ್ಚ ತರ್ಕಬಾಧೋ ವಿಲೋಮತಾ ।
ನಾನಾಭಾವಃ ಪ್ರಲೋಭಶ್ಚ ಯುಕ್ತಯಃ ಪೂರ್ವಪಕ್ಷಗಾಃ ।
ಅಶಕ್ಯಕರ್ತೃತಾಶಕ್ತಿಃ ಸ್ವತೋಽಬೋಧಸ್ತದೇವ ಚ ।
ಅಮಾನಕ್ಲೃಪ್ತಿಃ ಸನ್ಮಾನವ್ಯವಸ್ಥಾತ್ಯಲ್ಪತಾಭವಾಃ ।
ವಿಶೇಷದೃಷ್ಟಿವಾಕ್ಯೇ ಚ ಪುಂಶಕ್ತಿಃ ಸುನಿದರ್ಶನಮ್ ।
ಅಲೌಕಿಕತ್ವಮಾಧಿಕ್ಯಂ ಸ್ವಾತಂತ್ರ್ಯಂ ನಿರ್ಣಯಪ್ರಮಾಃ ॥

ಸಂಧ್ಯಾಧಿಕರಣದಲ್ಲಿ ಪಶ್ಚಾದದೃಷ್ಟಿ ಮತ್ತು ಅಶಕ್ಯಕರ್ತೃತ್ವಗಳು, ಪರಾಭಿಧ್ಯಾನಾಧಿಕರಣದಲ್ಲಿ ಅವಿಜ್ಞಾನ, ಸ್ವತೋಽಬೋಧಗಳು, ದೇಹಯೋಗಾಧಿಕರಣದಲ್ಲಿ ಕಾಲ, ಅಸ್ವಾತಂತ್ರ್ಯಗಳು, ತದಭಾವಾಧಿಕರಣದಲ್ಲಿ ದುಃಖ, ಅಮಾನಕ್ಲೃಪ್ತಿಗಳು ಪ್ರಬೋಧಾಧಿಕರಣ, ಕರ್ಮಾನುಸ್ಮೃತ್ಯಧಿಕರಣ,ಮುಗ್ಧಪ್ರಾಪ್ತ್ಯಧಿಕರಣಗಳಲ್ಲಿ ಪೃಥಗ್‌ಭವ ಮತ್ತು ಸಮ್ಮಾನಗಳು ಸ್ಥಾನತೋಽಪ್ಯಧಿಕರಣದಲ್ಲಿ ಸ್ಥಾನಭೇದ, ವ್ಯವಸ್ಥಾಗಳು ಅರೂಪಾಧಿಕರಣದಲ್ಲಿ ವಿರುದ್ಧತ್ವ, ವ್ಯವಸ್ಥಾಗಳು ಉಪಮಾಧಿಕರಣದಲ್ಲಿ ನ್ಯಾಯಸಾಮ್ಯ, ಅತ್ಯಲ್ಪತ್ವಗಳು ಅಂಬುವದಧಿಕರಣದಲ್ಲಿ ಸ್ವತೋಭವ, ಭವಗಳು ವೃದ್ಧಿಹ್ರಾಸಾಧಿಕರಣದಲ್ಲಿ ಗುಣಸಾಮ್ಯ, ವಿಶೇಷದೃಷ್ಟಿಗಳು

ಪ್ರಕೃತ್ಯೈತಾವತ್ತ್ವಾಧಿಕರಣದಲ್ಲಿ ಅಯೋಗ, ವಿಶೇಷವಾಕ್ಯಗಳು ಅವ್ಯಕ್ತಾಧಿಕರಣದಲ್ಲಿ ತರ್ಕಬಾಧ, ಪುಂಶಕ್ತಿಗಳು ಅಹಿಕುಂಡಲಾಧಿಕರಣದಲ್ಲಿ ವಿಲೋಮತಾ, ಸುನಿದರ್ಶನಗಳು ಪರಮತಾಧಿಕರಣದಲ್ಲಿ ವಿಲೋಮತಾ, ಅಲೌಕಿಕತ್ವಗಳು ಸ್ಥಾನ ವಿಶೇಷಾಧಿಕರಣ ಮತ್ತು ತಥಾನ್ಯತ್ವಾಧಿಕರಣಗಳಲ್ಲಿ ನಾನಾಭಾವ, ಆಧಿಕ್ಯಗಳು ಸರ್ವಗತತ್ವಾಧಿಕರಣದಲ್ಲಿ ನಾನಾಭಾವ, ಸ್ವಾತಂತ್ರ್ಯಗಳು ಫಲೋತ್ಪತ್ತ್ಯಧಿಕರಣದಲ್ಲಿ ಪ್ರಲೋಭ ಮತ್ತು ಸ್ವಾತಂತ್ರ್ಯಗಳು ಕ್ರಮವಾಗಿ ಪೂರ್ವಪಕ್ಷ-ಸಿದ್ಧಾಂತ ಸಾಧಕವಾದ ಯುಕ್ತಿಗಳು.

## ಸಂಧ್ಯಾಧಿಕರಣ (3-2-1)

ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಸ್ವಪ್ನವೇ ವಿಷಯ. ಅದು ಭಗವದಧೀನ ಹೌದೋ? ಅಲ್ಲವೋ ಎಂದು ಸಂಶಯ ವಾದಿ ಪ್ರತಿವಾದಿಗಳು ಹೇಳುವ ವಾಕ್ಯಗಳು ಈ ಸಂಶಯಕ್ಕೆ ಕಾರಣ.

**ಪೂರ್ವಪಕ್ಷ—** ಸ್ವಾಪ್ನಪದಾರ್ಥಗಳು ಭಗವಂತನ ಅಧೀನವಲ್ಲ. ಸ್ವಪ್ನ ಕಾಣುವುದಕ್ಕೂ ಮೊದಲು ಮತ್ತು ಅನಂತರ ಅವುಗಳು ಉಪಲಬ್ಧವಾಗುವುದಿಲ್ಲ. ಆದ್ದರಿಂದ ಅವು ಗಳು ಅಸತ್ಯ. ಅಸತ್ಯವಾದವುಗಳು ಭಗವಂತನ ಅಧೀನವಾಗಲು ಹೇಗೆ ಸಾಧ್ಯ? ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪಶ್ಚಾದದೃಷ್ಟಿ' (ಸ್ವಪ್ನದಿಂದ ಎಚ್ಚೆತ್ತ ಮೇಲೆ ಸ್ವಪ್ನಪದಾರ್ಥಗಳು ಉಪಲಬ್ಧ ವಾಗದಿರುವುದು) ಎಂಬುದು. ಇದನ್ನು ಅದರಂತೆ '**ಅಶಕ್ಯಕರ್ತೃತಾಶಕ್ತಿ**' (ಬೇರೆಯವರಿಗೆ ಶಕ್ಯವಲ್ಲದ್ದನ್ನು ಸೃಷ್ಟಿಸುವ ಶಕ್ತಿ ಪರಮಾತ್ಮನಿಗಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ.

**ಪಶ್ಚಾದದೃಷ್ಟೇಃ ಸ್ವಪ್ನವಿಷಯಸ್ಯಾಸತ್ತ್ವಂ ನ ವಾಚ್ಯಮ್ । ಅಶಕ್ಯಕರಣಶಕ್ತಿಮತ್ತ್ವಾದೀಶ್ವರಸ್ಯ ಸಂಸ್ಕಾರೇಣ ಸೃಷ್ಟ್ವಾ ಪುನಃ ಸಂಸ್ಕಾರಮಾತ್ರತಾಮಾಪಾದ್ಯ ತಸ್ಯಾಪಿ ತಿರೋಧಾನೋಪಪತ್ತೇಃ । ಜಾಗ್ರತ್ತ್ವಪ್ರತೀತಿಮಾತ್ರಸ್ಯ ಭ್ರಮತ್ವಾತ್ ॥ ೧ ॥**

**ಭಾವಾರ್ಥ—** ಸ್ವಪ್ನದಲ್ಲಿ ಕಾಣುವ ಪದಾರ್ಥಗಳು ಸ್ವಪ್ನದಿಂದ ಎಚ್ಚರಗೊಂಡ ಮೇಲೆ ಉಪಲಬ್ಧವಾಗದಿರುವುದರಿಂದ ಸ್ವಾಪ್ನಪದಾರ್ಥಗಳು ಅಸತ್ಯವಾಗಿವೆ ಎಂದು ಪೂರ್ವಪಕ್ಷವನ್ನು ಮಾಡಬಾರದು. ಬೇರೆಯವರಿಂದ ಮಾಡಲು ಅಶಕ್ಯವಾದದ್ದನ್ನೂ ಮಾಡುವ ಶಕ್ತಿ ಈಶ್ವರನಿಗಿದೆ. ಆದ್ದರಿಂದ ಅವನು ಜೀವನ ಸಂಸ್ಕಾರದಿಂದ ಸ್ವಾಪ್ನಪದಾರ್ಥಗಳನ್ನು ಸೃಷ್ಟಿಸಿ ಮತ್ತೆ ಸಂಸ್ಕಾರಸ್ವರೂಪತ್ವವನ್ನೇ ಹೊಂದಿಸಿ ಮರೆಮಾಡುತ್ತಾನೆ. ಆದರೆ ಅವುಗಳ ಜಾಗ್ರತ್ವಪ್ರತೀಯು ಮಾತ್ರ ಭ್ರಾಂತಿಯಾಗಿದೆ.

**ವಿವರಣೆ—** ಇತರರಿಗೆ ಬಾಹ್ಯ ಮೃದಾದಿ ಪದಾರ್ಥಗಳಿಂದ ವಸ್ತುಗಳನ್ನು ಸೃಷ್ಟಿಸುವ ಶಕ್ತಿಯಿದೆ. ಆದರೆ ಈಶ್ವರನಿಗೆ ಮಾತ್ರ ಜೀವರ ಮನೋಗತವಾದ ಸಂಸ್ಕಾರಗಳನ್ನು ಉಪಾದಾನಕಾರಣಗಳನ್ನಾಗಿ ಬಳಸಿಕೊಂಡು ಪದಾರ್ಥಗಳನ್ನು ಒಳಗೇ ಸೃಷ್ಟಿಸಿ ಜೀವನಿಗೆ ತೋರಿಸಿ ಅವುಗಳನ್ನು ಪುನಃ ಮರೆ ಮಾಡುತ್ತಾನೆ. ಆದ್ದರಿಂದ ಅವುಗಳು ಸ್ವಪ್ನದಿಂದ ಎಚ್ಚರವಾದಾಗ ನಮಗೆ ಕಾಣದಿದ್ದರೂ ಸತ್ಯವೇ ಆಗಿವೆ. ಆದರೆ ಸ್ವಪ್ನದಲ್ಲಿ ಕಂಡ ಪದಾರ್ಥಗಳು ಬಾಹ್ಯ ಪದಾರ್ಥಗಳಿಂದ (ಮಣ್ಣು ಮುಂತಾದವು ಗಳಿಂದ) ನಿರ್ಮಾಣವಾಗಿವೆ ಅಥವಾ 'ನಿನ್ನೆ ಉದ್ಯಾನದಲ್ಲಿ ಕಂಡ ಆನೆಯನ್ನೇ ಸ್ವಪ್ನದಲ್ಲಿ ಕಂಡೆ' ಎಂಬ ತಿಳುವಳಿಕೆಯು ಮಾತ್ರ ಭ್ರಾಂತಿಯಾಗಿದೆ. ಹೀಗೆ ಸ್ವಾಪ್ನ ಪದಾರ್ಥಗಳ ಸೃಷ್ಟಿ ಭಗವದಧೀನವಾದ್ದರಿಂದ ಅವನ ಮಹಿಮೆಯು ಯುಕ್ತ ವಾಗಿದೆ.

**ಸೂತ್ರಾರ್ಥ—**

**ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ**

ಸಂಧ್ಯೇ=ಜಾಗ್ರತ್, ಸುಷುಪ್ತಿಗಳ ಸಂಧಿಕಾಲದಲ್ಲಿ (ಸ್ವಪ್ನದಲ್ಲಿ) ಸೃಷ್ಟಿಃ= ಭಗವಂತನಿಂದ ಪದಾರ್ಥಗಳ ಸೃಷ್ಟಿಯಾಗುವುದೆಂದು ಆಹ ಹಿ='ಅಥ ರಥಾನ್' ಮುಂತಾದ ಶ್ರುತಿಯು ಹೇಳಿದೆ.

## ಪರಾಭಿಧ್ಯಾನಾಧಿಕರಣ (3-2-2)

ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ

ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಸ್ವಪ್ನದ ತಿರೋಭಾವವೇ ವಿಷಯ. ಎಲ್ಲವೂ ಈಶ್ವರಾಧೀನವೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಮತ್ತು ಸ್ವಪ್ನದ ಬಗ್ಗೆ ವಿಶೇಷವಾಗಿ ಹೇಳದಿರುವುದರಿಂದಲೂ ಸಂಶಯವು ಬರುತ್ತದೆ. ತಿರೋಭಾವವು ಭಗವಂತನ ಅಧೀನವೋ? ಅಲ್ಲವೋ? ಎಂದು.

**ಪೂರ್ವಪಕ್ಷ—** ಬಾಹ್ಯ ಪದಾರ್ಥಗಳ ಜ್ಞಾನವಿಲ್ಲದಿರುವಾಗ (ಅಜ್ಞಾನದಿಂದ) ಸ್ವಪ್ನವು ತೋರುತ್ತದೆ. ಬಾಹ್ಯಪದಾರ್ಥಗಳ ಜ್ಞಾನ ಬಂದಾಗ ಅಜ್ಞಾನ ನಾಶವಾಗಿ ಸ್ವಪ್ನವು ತಿರೋಹಿತವಾಗುತ್ತದೆ. ಭಗವಂತನ ಶಕ್ತಿಯಿಂದಲ್ಲ. ಆದ್ದರಿಂದ ಸ್ವಪ್ನವೂ ಈಶ್ವರಾಧೀನವಲ್ಲ. ಅವನಿಗೆ ಮಾಹಾತ್ಮ್ಯವೂ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅವಿಜ್ಞಾನ' (ಬಾಹ್ಯಪದಾರ್ಥಗಳ ಜ್ಞಾನವಿಲ್ಲದಿರುವುದು) ಎಂಬುದು. ಇದನ್ನು ಮತ್ತು 'ಸ್ವತೋಽಬೋಧ' (ಜೀವನಿಗೆ ಸ್ವಪ್ನದಿಂದ ಎಚ್ಚರವಾಗುವುದರಲ್ಲಿ ಸ್ವಾತಂತ್ರ್ಯವಿಲ್ಲದಿರುವುದು) ಎಂಬ ಸಿದ್ಧಾಂತ ವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚಾವಿಜ್ಞಾನಮಾತ್ರೇಣ ಸ್ವಪ್ನಪ್ರತೀತ್ಯಾ ಜ್ಞಾನಶಕ್ತ್ಯೈವ ಸ್ವಪ್ನ-ತಿರೋಧಾನಂ ನೇಶೇನೇತಿ ವಾಚ್ಯಮ್ । ಬೋಧೇ ಜೀವಸ್ಯಾ-ಸ್ವಾತಂತ್ರ್ಯಾತ್ । ಜ್ಞಾನಾಜ್ಞಾನಯೋಸ್ತದನ್ಯತ್ವೇ ಜಡತ್ವಾತ್ ಕೈಮುತ್ಯೇನಾ-ಸ್ವಾತಂತ್ರ್ಯಾತ್ । ತತ್ಸ್ವರೂಪತ್ವೇ ತೇನೈವ ವ್ಯಾಖ್ಯಾತತ್ವಾತ್ । ಉಭಯಾತ್ಮಕತ್ವೇ ದೋಷದ್ವಯಾಪಾತಾತ್ । ಅನುಭಯತ್ವಸ್ಯ ವ್ಯಾಹತೇಃ । ತಾವನ್ಮಾತ್ರನಿಮಿತ್ತತ್ವೇ ಮಾನಾಭಾವಾತ್ । ಸರ್ವಸ್ಯೇಶಹೇತುತ್ವೇ ಮಾನಾಚ್ಚ ॥ ೨ ॥**

**ಭಾವಾರ್ಥ—** ಬಾಹ್ಯ ಪದಾರ್ಥಗಳ ಜ್ಞಾನವಿಲ್ಲದಿರುವುದರಿಂದಲೇ ಸ್ವಪ್ನವು ತೋರುತ್ತಿದೆ. ಬಾಹ್ಯಪದಾರ್ಥಗಳ ಜ್ಞಾನದಿಂದ ಸ್ವಪ್ನವು ತಿರೋಹಿತವಾಗುವುದೇ ಹೊರತು ಈಶ್ವರನ ಶಕ್ತಿಯಿಂದ ಅಲ್ಲ ಎಂದು ಪೂರ್ವಪಕ್ಷ ಮಾಡುವುದು ಸರಿಯಲ್ಲ. ಏಕೆಂದರೆ ಸ್ವಪ್ನದಿಂದ ಎಚ್ಚತ್ತುಕೊಳ್ಳುವುದಕ್ಕೆ ಜೀವನಿಗೆ ಸ್ವಾತಂತ್ರ್ಯವಿಲ್ಲ

ದಿರುವುದರಿಂದ (ಸ್ವಪ್ನಕ್ಕೆ ಅಜ್ಞಾನವು ಕಾರಣ. ಜ್ಞಾನ ಬಂದು ಅಜ್ಞಾನವು ನಾಶವಾದಾಗ ಸ್ವಪ್ನದ ತಿರೋಭಾವವು ಕೂಡುತ್ತಿರುವಾಗ ಜೀವನಿಗೆ ಅಸ್ವಾತಂತ್ರ್ಯವನ್ನು ಏಕೆ ಹೇಳುತ್ತಿರುವುದು? ಎಂದರೆ ಜ್ಞಾನ ಮತ್ತು ಅಜ್ಞಾನಗಳು ಜೀವನಿಗಿಂತ ಭಿನ್ನವಾದವೋ? ಅಭಿನ್ನವಾದವೋ? ಭಿನ್ನಾಭಿನ್ನವಾದವುಗಳೋ? ಭಿನ್ನಾಭಿನ್ನಗಳು ಅಲ್ಲವೋ? ಎಂದು ಪ್ರಶ್ನೆಯು ಬರುತ್ತದೆ.) ಜ್ಞಾನ, ಅಜ್ಞಾನಗಳು ಜೀವನಿಗಿಂತ ಭಿನ್ನವೆಂದಾದಲ್ಲಿ ಜಡವೆಂದಾಗುವುದರಿಂದ ಜೀವನಿಗೇನೇ ಅಸ್ವಾತಂತ್ರ್ಯವಿರುವುದರಿಂದ ಜಡವಾದ ಜ್ಞಾನ, ಅಜ್ಞಾನಗಳಿಗೆ ಸುತರಾಂ ಅಸ್ವಾತಂತ್ರ್ಯವು ಸಿದ್ಧವಾಗುತ್ತದೆ. ಜೀವನ ಸ್ವರೂಪಗಳೆಂದಾದರೆ ಜೀವನು ಅಸ್ವತಂತ್ರನಾದ್ದರಿಂದ ತದಭಿನ್ನಗಳಾದ ಜ್ಞಾನ, ಅಜ್ಞಾನಗಳೂ ಅಸ್ವತಂತ್ರವಾಗುವುದರಿಂದ ಸ್ವಪ್ನದಿಂದ ಎಚ್ಚೆತ್ತುಕೊಳ್ಳಲು ಸಾಧ್ಯವಾಗುವುದಿಲ್ಲ. ಇನ್ನೂ ಭಿನ್ನಾಭಿನ್ನವೆಂದು ಹೇಳುವುದಾದರೆ ಹಿಂದೆ ಹೇಳಿದ ಎರಡೂ ದೋಷಗಳು ಬರುತ್ತವೆ. ಭಿನ್ನವೂ ಅಲ್ಲ, ಅಭಿನ್ನವೂ ಅಲ್ಲ ಎಂದರೆ ವ್ಯಾಹತಿಯು ಬರುತ್ತದೆ. ಏಕೆಂದರೆ ಭಿನ್ನ ಅಲ್ಲ ಎಂದಮೇಲೆ ಅಭಿನ್ನ ಎಂದಾಯಿತು. ಆದರೂ 'ಅಭಿನ್ನ ಅಲ್ಲ' ಎಂದಿರುವುದರಿಂದ ವ್ಯಾಹತಿ. ಅದರಂತೆ ಅಭಿನ್ನ ಅಲ್ಲ ಎಂದರೆ ಭಿನ್ನವೆಂದಾಯಿತು. 'ಭಿನ್ನವೂ ಅಲ್ಲ' ಎಂದರೆ ಪುನಃ ವ್ಯಾಹತಿಯು ಬರುತ್ತದೆ. ಅಜ್ಞಾನ ಜ್ಞಾನಗಳನ್ನು ಸ್ವಪ್ನ ಅದರ ತಿರೋಭಾವಗಳಿಗೆ ಮಾತ್ರ ಕಾರಣವೆಂದು ಅಂಗೀಕರಿಸಲೂ ಸಾಧ್ಯವಿಲ್ಲ. ಏಕೆಂದರೆ ಯಾವುದೇ ಪ್ರಮಾಣವಿಲ್ಲದಿರುವುದರಿಂದ. ಹೊರತಾಗಿ ಎಲ್ಲದಕ್ಕೂ ಈಶ್ವರನು ಕಾರಣವೆಂದು ಹೇಳುವುದಕ್ಕೆ 'ನ ಋತೇ ತ್ವತ್ಕ್ರಿಯತೇ' ಮುಂತಾದ ಪ್ರಮಾಣಗಳೂ ಇವೆ.

**ವಿವರಣೆ**—ಎಚ್ಚರವಾದ ಮೇಲೆ ಬಾಹ್ಯಪದಾರ್ಥಗಳ ಜ್ಞಾನಬರುವುದು. ಆದರಿಂದ ಅಜ್ಞಾನನಾಶವಾಗಿ ಸ್ವಪ್ನ ತಿರೋಧಾನವಾಗುವುದು. ಆದರೆ ಜ್ಞಾನ, ಅಜ್ಞಾನಗಳಲ್ಲಿಯೂ ಸ್ವಾತಂತ್ರ್ಯವಿಲ್ಲದಿರುವುದರಿಂದ ಅವೂ ಈಶಾಧೀನವೇ ಆಗಿವೆ. ಆದ್ದರಿಂದ ಸ್ವಪ್ನ ಮತ್ತು ತಿರೋಧಾನಗಳೂ ಈಶಾಧೀನವೇ ಆಗಿವೆ. ಸ್ವಪ್ನ ಕರ್ತೃತ್ವವೆಂಬ ಭಗವಂತನ ಮಹಿಮೆಯು ಯುಕ್ತವೇ ಆಗಿದೆ.

**ಸೂತ್ರಾರ್ಥ**—

**ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ**

ಹಿ=ಯಾವ ಕಾರಣದಿಂದ ತತಃ=ಪರಮಾತ್ಮನಿಂದಲೇ ಅಸ್ಯ=ಈ ಜೀವನಿಗೆ ಬಂಧವಿಪರ್ಯಯೌ=ಬಂಧ ಮತ್ತು ಮೋಕ್ಷಗಳು ಆಗುತ್ತಿವೆಯೋ ಆ ಕಾರಣ ದಿಂದ ಪರಾಭಿಧ್ಯಾನಾತ್=ಪರಮಾತ್ಮನ ಇಚ್ಛೆಯಿಂದಲೇ (ಸಾಂಧ್ಯಂ=ಸ್ವಪ್ನ ಪದಾರ್ಥಗಳು ತಿರೋಹಿತಂ=ಲೀನವಾಗುತ್ತವೆ.)

## ದೇಹಯೋಗಾಧಿಕರಣ (3-2-3)

ಓಂ ದೇಹಯೋಗಾದ್ ವಾಸೋಽಪಿ ಓಂ ಎಂಬ ಒಂದು ಸೂತ್ರವನ್ನೊಳ ಗೊಂಡ ಈ ಅಧಿಕರಣದಲ್ಲಿ ಜಾಗ್ರದವಸ್ಥೆಯು ವಿಷಯ. ವಿಶೇಷವನ್ನು ಹೇಳದಿರುವುದರಿಂದಾಗಿ, ಜಾಗ್ರದವಸ್ಥೆಯು ಈಶ್ವರಾಧೀನವೋ? ಅಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ—**ಬೆಳಗಾದೊಡನೆ ಎಚ್ಚರವಾಗುವುದು ಅನುಭವಸಿದ್ಧವಾದ್ದರಿಂದ ಜಾಗ್ರದವಸ್ಥೆಯು ಕಾಲಾಧೀನವಾಗಿವೆ ಹೊರತು; ಈಶ್ವರನ ಅಧೀನವಲ್ಲ. ಆದ್ದರಿಂದ ಜಾಗ್ರದವಸ್ಥಾಪ್ರೇರಕತ್ವವೆಂಬ ಮಹಿಮೆ ಈಶ್ವರನಿಗೆ ಕೂಡುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕಾಲ'. ಇದನ್ನು ಮತ್ತು 'ಅಸ್ವಾತಂತ್ರ್ಯ' (ಕಾಲ ಮತ್ತು ಜೀವರಲ್ಲಿ ಅಸ್ವಾತಂತ್ರ್ಯವಿದೆ) ಎಂಬ ಸಿದ್ಧಾಂತ ವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಕಾಲಾಪೇಕ್ಷಯೈವ ಜಾಗರಿತಮ್ । ಅಚೇತನತ್ವಾದೇವ ಕಾಲಸ್ಯ । ಚೇತನಾಂತರಸ್ಯಾಪ್ಯಸ್ವಾತಂತ್ರ್ಯಾತ್ ॥ ೩ ॥**

**ಭಾವಾರ್ಥ—** ಕಾಲದಿಂದಲೇ ಜಾಗ್ರದವಸ್ಥೆಯು ಉಂಟಾಗುವುದು ಎಂದು ಹೇಳಲು ಬರುವಾಗ ಈಶಾಧೀನವೆಂಬುದು ಸರಿಯಲ್ಲ ಎಂಬ ಪೂರ್ವಪಕ್ಷವು ಯುಕ್ತವಲ್ಲ. ಏಕೆಂದರೆ ಕಾಲವು ಜಡವಾದ್ದರಿಂದ ಅದಕ್ಕೆ ಸ್ವಾತಂತ್ರ್ಯವು ಇಲ್ಲ. ಮತ್ತು ಎಚ್ಚರದಲ್ಲಿರುವ ಜೀವನ ಅಧೀನವೆಂದು ಹೇಳೋಣವೆಂದರೆ ಅವನೂ ಅಸ್ವತಂತ್ರನೇ ಆಗಿದ್ದಾನೆ. ಆದ್ದರಿಂದ ಜಾಗ್ರದವಸ್ಥೆಯು ಈಶ್ವರನ ಅಧೀನವಾಗಿದೆ.

**ವಿವರಣೆ—**ಜಡವಾದ ಕಾಲವು ಅಸ್ವತಂತ್ರವಾದ್ದರಿಂದ ಜಾಗ್ರದವಸ್ಥೆಯು ಆ ಕಾಲದ ಅಧೀನವಾಗಲು ಸಾಧ್ಯವಿಲ್ಲ. ಸ್ವಪ್ನ ಮತ್ತು ಸುಷುಪ್ತಿಗಳಲ್ಲಿ ಜೀವನಿಗೆ ದೇಹದ ಮೇಲೆ ಪರಿವೇ ಇರುವುದಿಲ್ಲ. ಆದರೆ ಎಚ್ಚರದಲ್ಲಿ ಪರಿಜ್ಞಾನವಿರುತ್ತದೆ. ಆದ್ದರಿಂದ ಜಾಗ್ರದವಸ್ಥೆಯು ಜೀವನ ಅಧೀನವಾಗಿದೆ ಎಂದೂ ಹೇಳುವುದು ಸರಿಯಲ್ಲ. ಜೀವನೂ ಎಲ್ಲ ಅವಸ್ಥೆಗಳಲ್ಲಿಯೂ ಅಸ್ವತಂತ್ರನೇ. ಭಗವಂತನ ಅಧೀನನೇ. ಆದ್ದರಿಂದ ಜಾಗ್ರದವಸ್ಥೆಯೂ ಭಗವಂತನ ಅಧೀನವೆಂದೇ ಹೇಳಬೇಕು. ಭಗವಂತನ ಜಾಗ್ರದವಸ್ಥಾ ಪ್ರೇರಕತ್ವವೆಂಬ ಮಹಿಮೆಯು ಯುಕ್ತವಾಗಿದೆ.

**ಸೂತ್ರಾರ್ಥ—**

**ಓಂ ದೇಹಯೋಗಾದ್ ವಾಸೋऽಪಿ ಓಂ**

ದೇಹಯೋಗಾತ್=ದೇಹಾಭಿಮಾನದಿಂದ ಸಹಿತವಾದ ವಾಸಃ ಅಪಿ=ಸ್ಥಿತಿ ಯೆಂದರೆ ಜಾಗ್ರದವಸ್ಥೆಯೂ ಕೂಡ ಪರಮಾತ್ಮನ ಇಚ್ಛೆಯಿಂದಲೇ ಸಂಭವಿಸುತ್ತದೆ.

## ತದಭಾವಾಧಿಕರಣ (3-2-4)

ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ ಎಂಬ ಏಕಸೂತ್ರಾತ್ಮಕ ವಾದ ಈ ಅಧಿಕರಣದಲ್ಲಿ ಸುಷುಪ್ತಿಯು ವಿಷಯ. 'ಸತಾ ಸೌಮ್ಯ ತದಾ ಸಂಪನ್ನೋ ಭವತಿ' (ನಿದ್ರಾವಸ್ಥೆಯಲ್ಲಿ ಪರಮಾತ್ಮನೊಂದಿಗೆ ಸೇರಿದವನಾಗುತ್ತಾನೆ) ಮತ್ತು 'ಆಸು ತದಾ ನಾಡೀಷು ಸುಪ್ತೋ ಭವತಿ' (ಜೀವನು ಆಯಾ ದೇಹ ಗಳಲ್ಲಿರುವ ಸುಷುಮ್ನನಾಡಿಗಳಲ್ಲಿ ಸುಪ್ತನಾಗುತ್ತಾನೆ) ಎಂಬ ಈ ಎರಡು ವಿಧವಾದ ಶ್ರುತಿಗಳಿಂದ, ಜೀವನ ಸ್ವಾಪವು ನಾಡಿಗಳಲ್ಲಿಯೋ? ಪರಮಾತ್ಮನಲ್ಲಿಯೋ? ಎಂದು ಸಂಶಯವು ಬರುತ್ತದೆ.

**ಪೂರ್ವಪಕ್ಷ—** ಜಾಗ್ರತ್ ಸ್ವಪ್ನಗಳಲ್ಲಿ ಜೀವನು ಪರಮಾತ್ಮನಿಂದ ಬೇರೆ ಸ್ಥಳಗಳಲ್ಲಿದ್ದು ದುಃಖವನ್ನು ಅನುಭವಿಸುತ್ತಾನೆ. ಸುಷುಪ್ತಿಯಲ್ಲಿ ದುಃಖವಿಲ್ಲ ದಿರುವುದರಿಂದ ಪರಮಾತ್ಮನನ್ನು ಪ್ರವೇಶಿಸುತ್ತಾನೆ ಎಂದೇ ಹೇಳಬೇಕು. ಆವಾಗ 'ನಾಡೀಷು ಸುಪ್ತೋ ಭವತಿ' ಎಂಬ ಶ್ರುತಿಯು ಅಪ್ರಮಾಣವಾಗುತ್ತದೆ. ಹೀಗೆ ಒಂದು ಶ್ರುತಿಯು ಪ್ರಮಾಣವಾದಾಗ ಉಳಿದ ಶ್ರುತಿಗಳೂ ಅಪ್ರಮಾಣ

ವಾಗುವುದರಿಂದ ಅವುಗಳಲ್ಲಿ ಹೇಳಿದ ಭಗವಂತನ ಮಹಿಮೆ ಅಯುಕ್ತವಾಗುತ್ತದೆ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ದುಃಖ**' (ಪರಮಾತ್ಮನಲ್ಲಿ ಪ್ರವೇಶಿಸದೇ ಬೇರೆ ಕಡೆಗಳಲ್ಲಿದ್ದರೆ ದುಃಖ ಬರಬೇಕಾಗುವುದು) ಎಂಬುದು. ಇದನ್ನು ಮತ್ತು '**ಅಮಾನಕ್ಲೃಪ್ತಿ**' (ಶ್ರುತಿಗೆ ಸಂಭಾವಿತವಾದ ಅರ್ಥವನ್ನು ಕಲ್ಪಿಸದಿರುವಿಕೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪರಮಾತ್ಮನೋಽನ್ಯತ್ರಾವಸ್ಥಾನೇ ದುಃಖಿತ್ವಪ್ರಾಪ್ತೇರ್ನಾಡೀಷು ಸುಪ್ತಿರ್ನ ಭವತಿ । ಉಭಯಸ್ವೀಕಾರೋಪಪತ್ತೌ ಮಾನಸ್ಯ ಕ್ಲೃಪ್ತ್ಯಕರಣ-ಮಿತ್ಯನವಸ್ಥಿತಿದೋಷಾದತಿಪ್ರಸಂಗಾತ್ ॥ ೪ ॥**

**ಭಾವಾರ್ಥ**—ಜೀವನು ಪರಮಾತ್ಮನನ್ನು ಬಿಟ್ಟು ಬೇರೆ ಕಡೆಗಳಲ್ಲಿದ್ದಾನೆ ಎಂದು ಅಂಗೀಕರಿಸಿದರೆ ದುಃಖವು ಬರಬೇಕಾಗುತ್ತದೆ. ಹಾಗಾಗಿ ಸುಷುಮ್ನಾನಾಡಿಗಳಲ್ಲಿ ಸುಪ್ತಿಯಿಲ್ಲದಿರುವುದರಿಂದ ಅವುಗಳಲ್ಲಿ ಸುಪ್ತಿಯನ್ನು ಹೇಳುವ ವೇದವು ಅಪ್ರಮಾಣವಾಗುತ್ತದೆ ಎಂಬ ಪೂರ್ವಪಕ್ಷವು ಸರಿಯಲ್ಲ. ನಾಡಿಗಳಲ್ಲಿರುವ ಪರಮಾತ್ಮನಲ್ಲಿ ಸುಪ್ತನಾಗುತ್ತಾನೆ ಎಂದು ಅಂಗೀಕರಿಸಿ ಎರಡು ವೇದಗಳಿಗೆ ಪ್ರಾಮಾಣ್ಯವನ್ನು ಕೂಡಿಸಲು ಬರುವಾಗ ಪ್ರಮಾಣದಿಂದ ಸಿದ್ಧವಾದ (ಸಂಭಾವಿತ ವಾದ) ಅರ್ಥವನ್ನು ಮಾಡದಿರುವುದು ಎಂಬ ಅವ್ಯವಸ್ಥಿತಿ ದೋಷವು ಅತಿಪ್ರಸಂಗವು ಬರುತ್ತದೆ.

**ವಿವರಣೆ**— ನಾಡಿಗಳಲ್ಲಿರುವ ಪರಮಾತ್ಮನಲ್ಲಿ ಸುಪ್ತನಾಗುತ್ತಾನೆ ಎಂದು ಅಂಗೀಕರಿಸುವುದರಿಂದ 'ಸತಾ ಸೌಮ್ಯ ಸಂಪನ್ನೋ ಭವತಿ' 'ಆಸು ನಾಡೀಷು ಸುಪ್ತೋ ಭವತಿ' ಎಂಬ ಎರಡು ವಾಕ್ಯಗಳಿಗೂ ಪ್ರಾಮಾಣ್ಯವನ್ನು ಕೂಡಿಸಿದಂತಾಗುವುದು.

ಮೂಲದಲ್ಲಿ 'ಅತಿಪ್ರಸಂಗಾತ್' ಎಂದಿದೆ. ಒಂದು ಪ್ರಮಾಣಕ್ಕೆ ಹೀಗೆ ಸಂಭಾವಿತವಾದ ಅರ್ಥವನ್ನು ಕಲ್ಪಿಸದಿದ್ದರೆ ಮತ್ತೊಂದಕ್ಕೆ ಅಪ್ರಾಮಾಣ್ಯವು ಬರಬೇಕಾದೀತು ಎಂಬ ಅತಿಪ್ರಸಂಗ ಎಂದರ್ಥ. ಅಥವಾ ಹೀಗೆ ಎರಡು ಪ್ರಮಾಣಗಳಲ್ಲಿ ವಿರೋಧಕಂಡಾಗ ಒಂದು ವೇದವು ಹೇಳಿದ ಅರ್ಥವನ್ನು

ಬಿಡುವುದಾದರೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದದ್ದನ್ನೂ ಬಿಡಬೇಕಾದೀತು ಎಂಬ ಅತಿಪ್ರಸಂಗವು ಬರುತ್ತದೆ ಎಂದರ್ಥ.

**ಸೂತ್ರಾರ್ಥ—**

**ಓಂ ತದಭಾವೋ ನಾಡೀಷು ತಚ್ಛ್ರುತೇಃ ಆತ್ಮನಿ ಹ ಓಂ**

ನಾಡೀಷು=ಜೀವನಿಗೆ ನಾಡಿಯಲ್ಲಿರುವ ಆತ್ಮನಿ=ಪರಮಾತ್ಮನಲ್ಲಿಯೇ ತದಭಾವಃ=ಜಾಗ್ರತ್ ಸ್ವಪ್ನಗಳ ರಾಹಿತ್ಯವು ಅಂದರೆ ಸುಪ್ತಿಯು ಉಂಟಾಗುತ್ತದೆ. ಇದಕ್ಕೆ ಆಧಾರವೇನೆಂದರೆ, ತಚ್ಛ್ರುತೇಃ='ಆಸು ತದಾ ನಾಡೀಷು' ಎಂಬ ಪ್ರಮಾಣ ವಿರುವುದರಿಂದ ಹ='ತನ್ನಾಡೀಸಂಸ್ಥಿತಂ ವಿಷ್ಣುಂ ಮಧ್ಯೇ ಜೀವಃ ಪ್ರಪದ್ಯತೇ' ಎಂದು ಪ್ರಸಿದ್ಧಿಯೂ ಇರುವುದರಿಂದ.

## ಪ್ರಬೋಧಾಧಿಕರಣ (3-2-5)

ಓಂ ಅತಃ ಪ್ರಬೋಧೋಽಸ್ಮಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ನಿದ್ರೆಯಿಂದ ಎಚ್ಚೆತ್ತುಕೊಳ್ಳುವುದು (ಪ್ರಬೋಧ) ವಿಷಯ. ಎಲ್ಲವೂ ಭಗವಂತನ ಅಧೀನವೆಂದು ಹೇಳಿದ್ದರೂ ಪ್ರಬೋಧದ ಬಗ್ಗೆ ವಿಶೇಷವಾಗಿ ಹೇಳದಿರುವುದರಿಂದ ಸಂಶಯವು ಬರುತ್ತದೆ. ಪ್ರಬೋಧವು ಈಶ್ವರನ ಅಧೀನವೋ? ಅಲ್ಲವೋ? ಎಂದು.

**ಪೂರ್ವಪಕ್ಷ–** ಸುಪ್ತಿಪ್ರಬೋಧವು ಕೇವಲ ಈಶ್ವರಾಧೀನವಲ್ಲ. ಭೇರೀತಾಡನ ಮೊದಲಾದ ಬೇರೆ ಕಾರಣಗಳಿಂದ ಆಗುತ್ತದೆ. ಕೆಲವೊಮ್ಮೆ ಅಕಸ್ಮಾತ್ ಪ್ರಬೋಧವೂ ಆಗುತ್ತದೆ. ಆದ್ದರಿಂದ ಭಗವಂತನು ಕಾರಣವಲ್ಲ. ಆದ್ದರಿಂದ ಆವನ ವಿಶೇಷ ಮಹಿಮೆಯು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪೃಥಗ್ಭವ' (ಪರಮಾತ್ಮನಿಲ್ಲದೆಯೂ ಪ್ರಬೋಧವು ಕೂಡುತ್ತದೆ. ಪೃಥಕ್=ಈಶ್ವರಂ ವಿನಾ. ಭವಃ=ಬೋಧೋದಯೋ ಭವತಿ) ಎಂಬುದು. ಇದನ್ನು ಮತ್ತು 'ಸಮ್ಮಾನ' (ಸಮೀಚೀನವಾದ ಪ್ರಮಾಣ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ.

**ನ ಚ ಪ್ರಬೋಧಸ್ಯ ಪೃಥಗಪಿ ಕಾರಣದೃಷ್ಟೇಃ ಕ್ವಚಿತ್ ತದೇವ । 'ನ**

**ಋತೇ ತ್ವತ್ಕ್ರಿಯತೇ' ಇತಿ ಶ್ರುತೇಸ್ತತ್ರಾಪಿ ಈಶಕೃತತ್ವೇ ಸಮ್ಯಜ್‌ಮಾನಾತ್ ॥ ೫ ॥**

**ಭಾವಾರ್ಥ—** ಪ್ರಬೋಧವು ಈಶ್ವರನಿಗಿಂತ ಭಿನ್ನವಾದ ಭೇರೀತಾಡನ ಮುಂತಾದವುಗಳಿಂದಲೇ ಆಗುವಾಗ ಅವುಗಳನ್ನೇ ಕಾರಣವೆಂದು ಹೇಳೋಣ ಎಂಬ ಪೂರ್ವಪಕ್ಷ ಸರಿಯಲ್ಲ. 'ಎಲೈ ಭಗವಂತನೇ! ನಿನ್ನಿಂದ ಹೊರತಾಗಿ ಯಾವ ಕಾರ್ಯವೂ ಮಾಡಲ್ಪಡುವುದಿಲ್ಲ' ಎಂಬ ಶ್ರುತಿಯು ಪ್ರಬೋಧಕ್ಕೂ ಈಶ್ವರನೇ ಕಾರಣವೆಂಬ ವಿಷಯದಲ್ಲಿ ಪ್ರಮಾಣವಾಗಿದೆ.

**ವಿವರಣೆ—**'ನ ಋತೇ' ಮತ್ತು 'ಏಷ ಏವ ಸುಪ್ತಂ ಪ್ರಬೋಧಯತಿ' ಮುಂತಾದ ಸ್ಪಷ್ಟಶ್ರುತಿಗಳಿರುವುದರಿಂದ ಪ್ರಬೋಧಕ್ಕೆ ಈಶ್ವರನೇ ಕಾರಣ ಭೇರೀತಾಡನಾದಿಗಳು ಕೇವಲ ನಿಮಿತ್ತ ಎಂದು ತಿಳಿಯಬೇಕು. ಆದ್ದರಿಂದ ಭಗವಂತನ ಮಹಿಮೆಯು ಯುಕ್ತವೇ ಆಗಿದೆ.

**ಸೂತ್ರಾರ್ಥ—**

**ಓಂ ಅತಃ ಪ್ರಬೋಧೋಽಸ್ಮಾತ್ ಓಂ**

ಅತಃ=ಜೀವನು ಪರಮಾತ್ಮನಲ್ಲಿಯೇ ಸುಪ್ತನಾಗುವುದರಿಂದ ಪ್ರಬೋಧಃ= ಜೀವನಿಗೆ ಎಚ್ಚರಿಕೆಯು ಅಸ್ಮಾತ್=ಈ ಪರಮಾತ್ಮನಿಂದಲೇ ಆಗುತ್ತದೆ.

## ಕರ್ಮಾನುಸ್ಮೃತ್ಯಧಿಕರಣ (3-2-6)

ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ ಎಂಬ ಏಕಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಸ್ವಪ್ನಾದಿ ಅವಸ್ಥೆಗಳೇ ವಿಷಯ. 'ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ', 'ಸ ಏವ ಜಾಗರಿತೇ ಸ್ಥಾಪಯತಿ' ಮುಂತಾದ ಶ್ರುತಿಗಳಲ್ಲಿ 'ಎಲ್ಲ ಕಾಲಕ್ಕೂ ಸಂಬಂಧಿಸಿದ', 'ಎಲ್ಲ ಜೀವರಿಗೂ' ಮೊದಲಾದ ಶಬ್ದಗಳಿಲ್ಲದಿರುವುದರಿಂದ ಸಂದೇಹವು ಬರುತ್ತಿದೆ. ಎಲ್ಲ ಜೀವರ ಸಾರ್ವಕಾಲೀನ ಅವಸ್ಥೆಗಳು ಭಗವಂತನ ಅಧೀನವೋ? ಕೆಲವು ಜೀವರ ಕೆಲವು ಕಾಲದ ಅವಸ್ಥೆಗಳು ಮಾತ್ರ ಭಗವಂತನ ಅಧಿನವೋ? ಎಂದು.

**ಪೂರ್ವಪಕ್ಷ—** ರಾಜರು ಎಲ್ಲ ದೇಶಗಳಿಗೂ ಎಲ್ಲ ಕಾಲದಲ್ಲಿಯೂ ಅಧಿಪತಿಗಳಾಗಿರಲಾರರು. ಕೆಲವು ಪ್ರದೇಶಗಳಿಗೆ ಕೆಲವು ಕಾಲದಲ್ಲಿ ಮಾತ್ರ. ಅದರಂತೆ ಪರಮಾತ್ಮನೂ ಅಧಿಪತಿ ಯಾದ್ದರಿಂದ ಸರ್ವಜೀವರ ಸಾರ್ವದೇಶಿಕ, ಸಾರ್ವಕಾಲೀನ, ಸರ್ವ ಅವಸ್ಥೆಗಳಿಗೆ ಪ್ರೇರಕನಲ್ಲ. ಆದ್ದರಿಂದ ಪರಮಾತ್ಮನಿಗೆ ಸರ್ವಾವಸ್ಥಾ ಪ್ರೇರಕತ್ವ ಎಂಬ ಮಹಿಮೆ ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪೃಥಗ್‌ಭವ' (ಬೇರೇ ಬೇರೇ ರಾಜರುಗಳಿರುವು ದನ್ನು ಕಂಡಿರುವುದು) ಎಂಬುದು. ಇದನ್ನು ಮತ್ತು '**ಸಮ್ಮಾನ**' (ಸಮೀಚೀನ ಪ್ರಮಾಣವಿರುವುದು) ಎಂಬ ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ರಾಜಾದೀನಾಂ ಪೃಥಗ್ದರ್ಶನಾದ್ ಈಶಾಂತರಕಲ್ಪನಾ ।**

**'ದೇಶಕಾಲವಿಶೇಷೇಽಪಿ ಸ್ವಪ್ನಾದೀನಾಂ ಸ ಏವ ಹಿ ।**

**ತಿರಸ್ಕರ್ತಾ ಚ ಕರ್ತಾ ಚ ನ ಖಂಡೇಶಃ ಸ ರಾಜವತ್॥'**

**ಇತಿ ಶ್ರುತಿಮಾನಾತ್ ॥ ೬ ॥**

**ಭಾವಾರ್ಥ—** ರಾಜರುಗಳು ಬೇರೆ ಬೇರೆಯಿರುವುದು ಕಂಡಿರುವುದರಿಂದ ನಿಯಾಮಕರನ್ನಾಗಿ ಬೇರೆಬೇರೆಯವರನ್ನೇ ಒಪ್ಪಬೇಕೇ ಹೊರತು ಸರ್ವಅವಸ್ಥೆಗಳಿಗೂ ಪ್ರೇರಕನಾಗಿ ಒಬ್ಬ ಪರಮಾತ್ಮನನ್ನಲ್ಲ ಎಂದು ಪೂರ್ವಪಕ್ಷ ಮಾಡುವುದು ಸರಿಯಲ್ಲ. 'ಪ್ರತಿಯೊಂದು ದೇಶಕಾಲ ವಿಶೇಷಗಳಲ್ಲಿ ಸರ್ವರಿಗೂ ಸ್ವಪ್ನಾದಿಗಳನ್ನು ಉಂಟುಮಾಡುವವನು ತಿರೋಧಾನ ಮಾಡುವವನೂ ಆ ಪರಮಾತ್ಮನೇ. ಅವನು ರಾಜರಂತೆ ಕೆಲವು ದೇಶ ಕೆಲವು ಕಾಲಗಳಿಗೆ ನಿಯಾಮಕನಲ್ಲ' ಎಂಬ ಶ್ರುತಿಯ ಪ್ರಮಾಣವಿರುವುದರಿಂದ.

**ವಿವರಣೆ–**ಸಮೀಚೀನವಾದ ಶ್ರುತಿಪ್ರಮಾಣವಿರುವುದರಿಂದ ಪರಮಾತ್ಮನು, ಸರ್ವಜೀವರ ಸಾರ್ವದೇಶಿಕ ಸಾರ್ವಕಾಲೀನ ಸರ್ವ ಅವಸ್ಥೆಗಳಿಗೂ ಪ್ರೇರಕನೆಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ**

ಸ ಏವ ಚ=ಆ ಪರಮಾತ್ಮನೇ ಎಲ್ಲ ಅವಸ್ಥೆಗಳಿಗೂ ಪ್ರೇರಕ. ಏಕೆಂದರೆ, ಕರ್ಮಾನುಸ್ಮೃತಿಶಬ್ದವಿಧಿಭ್ಯಃ='ಏಷ ಹ್ಯೇವ ಸಾಧು ಕರ್ಮ ಕಾರಯತಿ' ಎಂಬ ಶ್ರುತಿಯು ಕರ್ಮವನ್ನು ಈಶಾಧೀನವೆಂದು ಹೇಳಿದ್ದರಿಂದ, 'ದೇಶಕಾಲ ವಿಶೇಷೇಽಪಿ...' ಎಂದು ಸ್ಮೃತಿಯಿರುವುದರಿಂದ, 'ಏಷ ಸ್ವಪ್ನಾನ್ ದರ್ಶಯತಿ' ಎಂಬ ಶ್ರುತಿಯಿರುವುದರಿಂದ, 'ಆತ್ಮಾನಮೇವ ಲೋಕಮುಪಾಸೀತ' ಎಂಬ ವಿಧಿ ಯಿರುವುದರಿಂದ.

## ಮುಗ್ಧಪ್ರಾಪ್ತ್ಯಧಿಕರಣ (3-2-7)

ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಮೋಹವು ವಿಷಯ. ಎರಡು ಕಡೆಗಳಲ್ಲಿಯೂ ಬೇರೆಬೇರೆ ಅವಸ್ಥೆಗಳು ಕಂಡಿದ್ದರಿಂದ ಜೀವನಿಗೆ ಮೋಹವು ಈಶ್ವರನಲ್ಲಿಯೋ? ಅಥವಾ ಬೇರೇ ಕಡೆಯಲ್ಲಿಯೋ? ಎಂದು ಸಂದೇಹ.

**ಪೂರ್ವಪಕ್ಷ—** ಮೋಹಾವಸ್ಥೆಯಲ್ಲಿ ಬಾಹ್ಯಜ್ಞಾನವಿಲ್ಲದಿರುವುದರಿಂದ ಅದು ಜಾಗ್ರದವಸ್ಥೆಗಿಂತ ಬೇರೆಯಾಗಿದೆ. ಮತ್ತು ದುಃಖಾನುಭವವಾಗುವುದರಿಂದ ಸ್ವಪ್ನಕ್ಕಿಂತ ಬೇರೆಯಾಗಿದೆ. ಆದ್ದರಿಂದ ಮೋಹಾವಸ್ಥೆಯು ಸುಪ್ತಿಯಲ್ಲಿ ಅಂತರ್ಗತವಾಗುತ್ತಿದೆ. ಇಂದ್ರಿಯಗಳ ಉಪರತಿ ಮೋಹ ಮತ್ತು ಸುಪ್ತಿಗಳಲ್ಲಿ ಸಮಾನವಾದ್ದರಿಂದ ಮೋಹವು ಸುಪ್ತಿಗಿಂತ ಭಿನ್ನವಾಗಿಲ್ಲ. ಆದ್ದರಿಂದ ಪರಮಾತ್ಮನಿಗೆ ಸುಪ್ತಿಪ್ರೇರಕತ್ವಕ್ಕಿಂತ ಮೋಹಪ್ರೇರಕತ್ವವೆಂಬುದು ಭಿನ್ನವಾಗಿಲ್ಲ. ಆದ್ದರಿಂದ ಮೋಹಪ್ರೇರಕತ್ವವೆಂಬ ಅಧಿಕವಾದ ಮಹಿಮೆ ಪರಮಾತ್ಮನಿಗೆ ಕೂಡುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪೃಥಗ್ ಭವ'ವೇ. (ಮೋಹವು ಜಾಗ್ರತ್, ಸ್ವಪ್ನ ಗಳಿಗಿಂತ ಬೇರೆಯಾಗಿರುವುದು) ಇದನ್ನು ಮತ್ತು 'ಸಮ್ಮಾನ' (ಪರಿಶೇಷ ಪ್ರಮಾಣವಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಮೋಹೇ ಬ್ರಹ್ಮಪ್ರಾಪ್ತಿರೇವ ಪೃಥಗವಸ್ಥಾತ್ವಾದಿತಿ ವಾಚ್ಯಮ್ ।**
**ಪರಿಶೇಷಮಾನಾದರ್ಧಪ್ರಾಪ್ತಿತ್ವಾವಗಮಾತ್ ॥ ೭ ॥**

**ಭಾವಾರ್ಥ—** ಮೋಹಾವಸ್ಥೆಯು ಸ್ವಪ್ನಾದಿಗಳಿಗಿಂತ ಭಿನ್ನವಾದ್ದರಿಂದ ಬ್ರಹ್ಮ ಪ್ರಾಪ್ತಿಯು ಆಗುವುದಿಲ್ಲ. (ಬ್ರಹ್ಮಪ್ರಾಪ್ತಿಯಾದರೆ ಕೇವಲ ಸುಖವೇ ಆಗಬೇಕು. ಮೋಹದಲ್ಲಿ ಪೂರ್ಣ ಸುಖವಾಗುವುದಿಲ್ಲವಾದ್ದರಿಂದ) ಎಂದು ಪೂರ್ವಪಕ್ಷವನ್ನು ಮಾಡಬಾರದು. ಏಕೆಂದರೆ ಪರಿಶೇಷ ಪ್ರಮಾಣದಿಂದ ಅರ್ಧ ಪ್ರವೇಶವು ಸಿದ್ಧವಾಗುತ್ತದೆ.

**ವಿವರಣೆ—**ಹೃದಯದಲ್ಲಿರುವ ಪರಮಾತ್ಮನಿಂದ ಜೀವನು ದೂರದಲ್ಲಿದ್ದಾಗ (ಕಣ್ಣಿನಲ್ಲಿ) ಜಾಗ್ರದವಸ್ಥೆ. ಕಂಠದಲ್ಲಿದ್ದು ಪರಮಾತ್ಮನ ಸಮೀಪದಲ್ಲಿದ್ದಾಗ ಸ್ವಪ್ನಾವಸ್ಥೆ. ಅವನೊಳಗೇ ಪ್ರವೇಶಿಸಿದಾಗ ನಿದ್ರಾವಸ್ಥೆ. ಮೋಹಾವಸ್ಥೆಯಾದರೂ ಈ ಮೂರು ಅವಸ್ಥೆಗಳಿಲ್ಲವಾದ್ದರಿಂದ ಪರಿಶೇಷಪ್ರಮಾಣದಿಂದ ಅರ್ಧಪ್ರಾಪ್ತಿ ಯೆಂದು ಸಿದ್ಧವಾಗುತ್ತದೆ. ಈ ಮೋಹಾವಸ್ಥೆಯು ಜಾಗ್ರದವಸ್ಥೆಯಾಗಿದ್ದರೆ ಬಾಹ್ಯವಸ್ತುಗಳ ಜ್ಞಾನವಿರಬೇಕಿತ್ತು. ಸ್ವಪ್ನವಾಗಿದ್ದರೆ ದುಃಖದ ಜ್ಞಾನವಿರ ಬಾರದಿತ್ತು. ಸುಪ್ತಿಯಾಗಿದ್ದರೆ ಕೇವಲ ಸುಖದ ಜ್ಞಾನವಿರಬೇಕಿತ್ತು. ಆದರೆ ಇದು ಕೇವಲ ದುಃಖಾನುಭವರೂಪವಾದ್ದರಿಂದ ಮೂರ್ಛಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮನಲ್ಲಿ ಅರ್ಧಪ್ರವೇಶವೆಂದೇ ಸಿದ್ಧವಾಗುವುದು. ಆದ್ದರಿಂದ ಪರಮಾತ್ಮನಿಗೆ ಮೋಹಾವಸ್ಥಾಪ್ರೇರಕತ್ವವೆಂಬ ಮಹಿಮೆಯೂ ಕೂಡುತ್ತದೆ.

**ಸೂತ್ರಾರ್ಥ—**

**ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ**

ಮುಗ್ಧೇ=ಮೂರ್ಛಾವಸ್ಥೆಯಲ್ಲಿ ಜೀವನಿಗೆ ಅರ್ಧಸಂಪತ್ತಿಃ=ಪರಮಾತ್ಮನಲ್ಲಿ ಅರ್ಧಪ್ರವೇಶವು ಎಂದು ಸಿದ್ಧವಾಗುವುದು ಏಕೆಂದರೆ, ಪರಿಶೇಷಾತ್= ಪರಿಶೇಷ ವೆಂಬ ಪ್ರಮಾಣವಿರುವುದರಿಂದ.

## ಸ್ಥಾನತೋಽಪ್ಯಧಿಕರಣ (3-2-8)

ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದ ವಿಷಯ ಸರ್ವಾವಸ್ಥಾಪ್ರೇರಕನಾದ ಪರಮಾತ್ಮನೇ. ಸ್ಥಾನಭೇದದಿಂದ ಘಟಾದಿಗಳಲ್ಲಿ ಭೇದ, ಆಕಾಶಾದಿಗಳಲ್ಲಿ

ಅಭೇದವೂ ಕಂಡಿರುವುದರಿಂದ, ಕಣ್ಣು ಮೊದಲಾದ ಬೇರೆಬೇರೆ ಸ್ಥಾನಗಳಲ್ಲಿದ್ದು ಜಾಗ್ರದಾದಿ ಅವಸ್ಥೆಗಳನ್ನು ಪ್ರೇರಿಸುವ ಪರಮಾತ್ಮನಲ್ಲಿ ಭೇದವಿದೆಯೋ? ಅಭೇದವಿದೆಯೋ? ಎಂದು ಸಂಶಯ.

**ಪೂರ್ವಪಕ್ಷ—** ಭಿನ್ನ ಭಿನ್ನ ಸ್ಥಾನಗಳಲ್ಲಿರುವ ಘಟ ಪಟಾದಿಗಳಿಗೆ ಭೇದವಿರುವಂತೆ ಜಾಗ್ರದಾದಿ ಅವಸ್ಥೆಗಳನ್ನು ಪ್ರೇರೇಪಿಸುವ ಪರಮಾತ್ಮನು ಕಣ್ಣು, ಕಂಠ ಮೊದಲಾದ ಸ್ಥಾನಗಳಲ್ಲಿರುವುದರಿಂದ ಅವನ ರೂಪಗಳಲ್ಲಿಯೂ ಭೇದವನ್ನು ಒಪ್ಪಲೇಬೇಕು. ಪರಮಾತ್ಮನಲ್ಲಿ ಭೇದವಿದೆಯೆಂದಾದರೆ ಭಿನ್ನವಸ್ತುವಿನ ಗುಣಗಳಲ್ಲಿಯೂ ತಾರತಮ್ಯವು ಅನುಗ್ರಾಹ್ಯ-ಅನುಗ್ರಾಹಕಭಾವವು ಕಂಡಿರುವುದರಿಂದ ಅವನು ಮಹಾಮಹಿಮನಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸ್ಥಾನಭೇದ'ವೆಂಬುದು. (ವಿಭಿನ್ನ ಸ್ಥಳಗಳಲ್ಲಿರುವುದು) ಇದನ್ನು ಮತ್ತು 'ವ್ಯವಸ್ಥಾ' (ಸ್ಥಾನಗಳಲ್ಲಿ ಭೇದವಿದ್ದಾಗ್ಯೂ ಪರಮಾತ್ಮನಲ್ಲಿ ಅಭೇದವಿದೆ ಎಂಬ ವ್ಯವಸ್ಥೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಸ್ಥಾನಭೇದಾದ್ ವಿಷ್ಣೋರಪಿ ಭೇದಃ। 'ಅಯಮೇವ ಸಃ', 'ನೇಹ ನಾನಾಽಸ್ತಿ ಕಿಂಚನ' ಇತ್ಯಾದಿಶ್ರುತಿಬಲಾತ್ ಸ್ಥಾನಾನಾಂ ಭೇದಸ್ತಸ್ಯಾಭೇದ ಇತಿ ವ್ಯವಸ್ಥೋಪಪತ್ತೇಃ ॥ ೮ ॥**

**ಭಾವಾರ್ಥ—** ಕಣ್ಣು ಮೊದಲಾದ ಸ್ಥಾನಗಳಲ್ಲಿ ಭೇದವಿರುವುದಿರಂದ ಅಲ್ಲಿರುವ ವಿಷ್ಣುವಿನಲ್ಲಿಯೂ ಭೇದವನ್ನೊಪ್ಪಬೇಕು ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಅಯಮೇವ ಸಃ' ಮತ್ತು 'ನೇಹ ನಾನಾಸ್ತಿ ಕಿಂಚನ' ಮೊದಲಾದ ಶ್ರುತಿಗಳಿಂದ ಸ್ಥಾನಗಳಲ್ಲಿಯೇ ಭೇದವು ಹೊರತು ವಿಷ್ಣುವಿನಲ್ಲಿ ಅಲ್ಲ ಎಂದು ವ್ಯವಸ್ಥೆಯನ್ನು ಮಾಡಬಹುದಾಗಿದೆ.

**ವಿವರಣೆ—**ಸ್ಥಾನಗಳಲ್ಲಿ ಭೇದವಿದ್ದಾಗ್ಯೂ ಪರಮಾತ್ಮನಲ್ಲಿ ಅಭೇದವಿದೆ ಎಂದು ಸಿದ್ಧವಾಗುತ್ತದೆ. ಏಕೆಂದರೆ 'ಯಃ ಪೃಥಿವ್ಯಾಂ ತೇಜೋಮಯೋಽಮೃತಮಯಃ' 'ಯೋಽಪ್ಸು ತೇಜೋಮಯೋಽಮೃತಮಯಃ' ಎಂದು ಅನೇಕಸ್ಥಾನಗಳಲ್ಲಿರುವ ಭಗವದ್ರೂಪ ವನ್ನು ಹೇಳಿ 'ಅಯಮೇವ ಸಃ, ಯೋಽಯಮಾತ್ಮಾ'

ಎಂದು ಪೂರ್ವಪ್ರಸ್ತುತ ವಾದ ಭಗವದ್ರೂಪಗಳಿಗೆ ಅಭೇದವನ್ನು ಹೇಳಿದ್ದಾರೆ. ಮತ್ತು 'ನೇಹ ನಾನಾಸ್ತಿ ಕಿಂಚನ' (ಇಹ=ಪರಮಾತ್ಮನ ರೂಪ, ಅವಯವ ಗುಣಗಳಲ್ಲಿ ನಾನಾ=ಭೇದವು ನಾಸ್ತಿ=ಇಲ್ಲ) ಎಂದು ಶ್ರುತಿಯ ಅಭೇದವನ್ನೇ ಹೇಳುತ್ತಿದೆ. ಆದ್ದರಿಂದ ಕಣ್ಣು ಮೊದಲಾದ ಸ್ಥಾನಗಳಲ್ಲಿರುವ ಪರಮಾತ್ಮನ ರೂಪಗಳಲ್ಲಿ ಅಭೇದವನ್ನು ಒಪ್ಪಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ**

ಪರಸ್ಯ=ಪರಮಾತ್ಮನಿಗೆ ಸ್ಥಾನತೋಽಪಿ=ಕಣ್ಣು ಮೊದಲಾದ ಸ್ಥಾನಗಳಲ್ಲಿ ಭೇದದಿಂದಲೂ ಉಭಯಲಿಂಗಂ ನ=ಭಿನ್ನರೂಪವಿಲ್ಲ. ಸರ್ವತ್ರ=ಎಲ್ಲ ಸ್ಥಳ ಗಳಲ್ಲಿಯೂ ಏಕರೂಪನಾಗಿದ್ದಾನೆ. ಹಿ='ಅಯಮೇವ ಸಃ' ಮುಂತಾದ ಪ್ರಮಾಣ ವಿರುವುದರಿಂದ.

## ಅರೂಪಾಧಿಕರಣ (3-2-9)

ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ ಎಂಬ ಸೂತ್ರದಿಂದ ಆರಂಭ ಗೊಳ್ಳುವ ಈ ಅಧಿಕರಣದಲ್ಲಿ ಭಕ್ತಿಯು ವಿಷಯ. ಪರಮಾತ್ಮನು ರೂಪವುಳ್ಳವ ನೆಂದು ಕೆಲವು ವಾಕ್ಯಗಳು, ರೂಪವಿಲ್ಲದವನೆಂದು ಕೆಲವು ವಾಕ್ಯಗಳು ಪ್ರತಿಪಾದಿಸು ತ್ತವೆ. ಹೀಗೆ ವಿರುದ್ಧವಾದ ವಾಕ್ಯಗಳಿಂದ ಪ್ರತಿಪಾದ್ಯನಾದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವೋ? ಅಯುಕ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಭಗವಂತನು ರೂಪರಹಿತನಾದರೆ 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ' (ಜ್ಞಾನಿಯು ಯಾವಾಗ ಬಂಗಾರಬಣ್ಣದ ಪರಮಾತ್ಮನನ್ನು ಕಾಣು ವನೋ ಆವಾಗ ಪಾಪಮುಕ್ತನಾಗಿ ಪರಮಾತ್ಮನ ಸಾಮ್ಯವನ್ನು ಹೊಂದುತ್ತಾನೆ) ಎಂಬ ಶ್ರುತಿಯು ಅಪ್ರಮಾಣವಾಗುತ್ತದೆ. ಮತ್ತು ಸೌಂದರ್ಯಗುಣಗಳಿಲ್ಲ ದಿರುವುದರಿಂದ ಭಕ್ತಿಯು ಕೂಡುವುದಿಲ್ಲ. ರೂಪವುಳ್ಳವನೆಂದು ಅಂಗೀಕರಿಸಿದರೆ 'ಅರೂಪಮವ್ಯಯಮ್' (ರೂಪರಹಿತನೂ ನಾಶರಹಿತನೂ ಆಗಿದ್ದಾನೆ.) ಎಂಬ ಶ್ರುತಿಯು ಅಪ್ರಮಾಣ ವಾಗುತ್ತದೆ. ಮತ್ತು ಯಾವುದು ರೂಪವುಳ್ಳದ್ದೋ ಅದು

ಅನಿತ್ಯವೆಂಬ ನಿಯಮವಿರುವುದರಿಂದ ಪರಮಾತ್ಮನು ಅನಿತ್ಯನಾಗಬೇಕಾಗುವುದು. ಹೀಗೆ ಯಾವರೀತಿ ಯಲ್ಲೂ ಪರಮಾತ್ಮನಲ್ಲಿ ಭಕ್ತಿಯೇ ಕೂಡುವುದಿಲ್ಲವೆಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿರುದ್ಧತ್ವ'ವೆಂಬುದು (ಶ್ರುತಿಗಳಲ್ಲಿ ವಿರೋಧವಿದೆ) ಇದನ್ನು 'ವ್ಯವಸ್ಥಾ' (ರೂಪವಿದೆ ರೂಪವಿಲ್ಲ ಎಂಬ ಶ್ರುತಿಗಳಿಗೆ ಬೇರೆ ಬೇರೆ ಅರ್ಥಗಳನ್ನು ಕಲ್ಪಿಸುವುದು) ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ರೂಪವತ್ತ್ವಾರೂಪವತ್ತ್ವವಚನಯೋರ್ವಿರೋಧಾದಪ್ರಾಮಾಣ್ಯಮ್ । ಅಪ್ರಾಕೃತರೂಪವತ್ತ್ವಮಿತಿ ವ್ಯವಸ್ಥೋಪಪತ್ತೇಃ ॥ ೯ ॥**

**ಭಾವಾರ್ಥ—**ಪರಮಾತ್ಮನಲ್ಲಿ ರೂಪವಿದೆ, ರೂಪವಿಲ್ಲ ಎಂದು ಪ್ರತಿಪಾದಿಸುವ ಶ್ರುತಿಗಳಲ್ಲಿ ವಿರೋಧವಿರುವುದರಿಂದ ಅವುಗಳು ಅಪ್ರಮಾಣ ವಾಗಬೇಕಾಗುವುದು ಎಂಬ ಪೂರ್ವಪಕ್ಷ ಸರಿಯಲ್ಲ. ಅಪ್ರಾಕೃತರೂಪವುಳ್ಳವ ನೆಂದು ಅಂಗೀಕರಿಸಿ ಶ್ರುತಿಗಳಿಗೆ ಪ್ರಾಮಾಣ್ಯವನ್ನು ಕೂಡಿಸಬಹುದಾಗಿದೆ.

**ವಿವರಣೆ—** 'ಅರೂಪಂ' ಎಂಬ ಶ್ರುತಿಯು ಪ್ರಾಕೃತರೂಪವಿಲ್ಲವೆಂದು ತಿಳಿಸುತ್ತದೆ. ಮತ್ತು ರೂಪವುಳ್ಳವನು ಎಂದು ಪ್ರತಿಪಾದಿಸುವ 'ರುಗ್ಮವರ್ಣಂ' ಎಂಬ ಶ್ರುತಿಯು ಅಪ್ರಾಕೃತರೂಪವನ್ನು ತಿಳಿಸುತ್ತದೆ. ಪ್ರಾಕೃತರೂಪವಿರುವ ವಸ್ತುವು ಮಾತ್ರ ಅನಿತ್ಯವಾದದ್ದಾಗಿ ಕಂಡದ್ದರಿಂದ ಪರಮಾತ್ಮನು ಅನಿತ್ಯನಾಗುವ ಪ್ರಸಂಗವೂ ಇಲ್ಲ. ಸೌಂದರ್ಯಾದಿ ಗುಣಗಳೂ ಉಪಪನ್ನವಾಗುವುದರಿಂದ ಅವನಲ್ಲಿ ಭಕ್ತಿಯು ಯುಕ್ತವಾಗುತ್ತದೆ.

**ಸೂತ್ರಾರ್ಥ—**

**ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ**

ಅರೂಪವದೇವ=ಬ್ರಹ್ಮನು ಪ್ರಾಕೃತವಾದ ರೂಪದಿಂದ ರಹಿತನಾಗಿದ್ದಾನೆ. ಏಕೆಂದರೆ, ತತ್‌ಪ್ರಧಾನತ್ವಾತ್=ಪ್ರಕೃತ್ಯಾದಿಗಳಿಗಿಂತ ಉತ್ತಮನಾದ್ದರಿಂದ.

# ಉಪಮಾಧಿಕರಣ (3-2-10)

ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಭಕ್ತಿಯು ವಿಷಯ. ಅದು ಪರಮಾತ್ಮನಲ್ಲಿ ಯುಕ್ತವೋ? ಅಯುಕ್ತವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಪರಮಾತ್ಮ ಜೀವಾತ್ಮರಿಬ್ಬರು ಚೇತನರಾದ್ದರಿಂದ ಅವರಲ್ಲಿ ಅಭೇದವಿದೆ. ಅಥವಾ ಜೀವರು ಪರಮಾತ್ಮನ ಅಂಶರಾಗಿದ್ದಾರೆ. ಹೇಗೆ ಪರಮಾತ್ಮನಿಗೆ ತನ್ನ ಅಂಶರಾದ ಮತ್ಸ್ಯಾದಿಗಳೊಂದಿಗೆ ಅಭೇದವಿದೆಯೋ ಅಂತೆಯೇ ಜೀವ ನೊಂದಿಗೂ ಅಭೇದವಿದೆ. ತನ್ನಲ್ಲಿ ತನಗೆ ಭಕ್ತಿಯು ಕೂಡುವುದಿಲ್ಲ. ಆದ್ದರಿಂದ ಜೀವಾಭಿನ್ನನಾದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ನ್ಯಾಯಸಾಮ್ಯ' (ಚೇತನತ್ವವೆಂಬ ಯುಕ್ತಿ, ಜೀವ ಪರಮಾತ್ಮರಲ್ಲಿ ಸಮನವಾಗಿರುವುದು) ಎಂಬುದು. ಇದನ್ನು ಮತ್ತು **'ಅಲ್ಪತ್ವ'** (ಜೀವನಲ್ಲಿ ಅಲ್ಪಗುಣವಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯ ವಿವರಣೆಯನ್ನು ನೀಡುತ್ತಿದ್ದಾರೆ—

**ನ ಚ ಪರಮಾತ್ಮನಾ ಚೇತನತ್ವನ್ಯಾಯಸಾಮ್ಯೇನ ಜೀವಸ್ಯಾಪ್ಯಭೇದಃ ।**
**ಅಲ್ಪಗುಣತ್ವಾದಿವಿರೋಧಾತ್ ॥ ೧೦ ॥**

**ಭಾವಾರ್ಥ—** ಚೇತನತ್ವವು ಸಮಾನವಾದ್ದರಿಂದ ಜೀವನಿಗೆ ಪರಮಾತ್ಮನೊಂದಿಗೆ ಅಭೇದ ಸಿದ್ಧವಾಗುತ್ತದೆ ಎಂದು ಹೇಳಬಾರದು. ಅವರಿಬ್ಬರಲ್ಲಿ ಅಲ್ಪಗುಣತ್ವ ಪೂರ್ಣಗುಣತ್ವವೇ ಮೊದಲಾದ ಧರ್ಮಗಳ ವಿರೋಧವಿರುವುದರಿಂದ.

**ವಿವರಣೆ—**ಜೀವನಲ್ಲಿ ಅಲ್ಪತ್ವ ಪರಮಾತ್ಮನಲ್ಲಿ ಪೂರ್ಣತ್ವವೆಂಬ ವಿರುದ್ಧ ಧರ್ಮಗಳಿರುವುದರಿಂದ ಅಭೇದವನ್ನು ಹೇಳಬಾರದು. ಮತ್ತು ಜೀವರು ಪರಮಾತ್ಮನ ಅಂಶರಾದರೂ ಮತ್ಸ್ಯಾದಿಗಳಂತೆ ಅಂಶರಲ್ಲ. ಹೊರತು ಸೂರ್ಯನಿಗೆ ಸೂರ್ಯನ ಪ್ರತಿಬಿಂಬದಂತೆ ಅಂಶರು. ಪ್ರತಿಬಿಂಬ ಸೂರ್ಯನಂತೆ ಕಂಡರೂ

ಸೂರ್ಯನಿಗಿಂತ ಭಿನ್ನವಾಗಿದೆ. ಆದರಂತೆ ಜೀವರು ಪರಮಾತ್ಮನಿಂದ ಭಿನ್ನ ರಾಗಿದ್ದಾರೆ. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಾಗುತ್ತದೆ.

**ಸೂತ್ರಾರ್ಥ—**

**ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ**

ಅತ ಏವ=ಚೇತನತ್ವ, ಅಂಶಾಂಶಿತ್ವಾದಿ ಹೇತುಗಳಿಂದಲೇ ಉಪಮಾ= ಜೀವನಿಗೆ ಮತ್ಸ್ಯಾದಿರೂಪಗಳಂತೆ ಪರಮಾತ್ಮನಿಂದ ಅಭೇದವು ಎಂದರೆ ನ=ಅದು ಯುಕ್ತವಲ್ಲ. ಏಕೆಂದರೆ ಸೂರ್ಯಕಾದಿವತ್=ಸೂರ್ಯ ಮುಂತಾದವರ ಪ್ರತಿಬಿಂಬದಂತೆ.

## ಅಂಬುವದಧಿಕರಣ (3-2-11)

ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ ಎಂಬ ಒಂದೇ ಸೂತ್ರವನ್ನೊಳ ಗೊಂಡ ಈ ಅಧಿಕರಣದಲ್ಲಿ ಭಕ್ತಿಯು ವಿಷಯ ಲೋಕದಲ್ಲಿ ಕರ್ತವ್ಯವಾದದ್ದು, ಅಕರ್ತವ್ಯವಾದದ್ದೂ ಕಂಡಿದ್ದರಿಂದ ಹರಿಯಲ್ಲಿಯೂ ಭಕ್ತಿಯನ್ನು ಮಾಡಬೇಕೋ? ಬೇಡವೋ? ಎಂಬುದು ಸಂದೇಹ.

**ಪೂರ್ವಪಕ್ಷ—** ಮೋಕ್ಷವೆಂದರೆ ಸ್ವರೂಪ ಸುಖದ ಅಭಿವ್ಯಕ್ತಿ. ಅದು ಜೀವನಿಗೆ ಸುಷುಪ್ತಿಯಲ್ಲಿ ಯಾವ ಸಾಧನವಿಲ್ಲದೆ ಅಭಿವ್ಯಕ್ತವಾಗುವುದು. ಅದರಂತೆ ಎಂದಿಗಾದರೂ ಯಾವ ಸಾಧನವೂ ಇಲ್ಲದೆ ಜೀವನಿಗೆ ಅಭಿವ್ಯಕ್ತವಾಗಬಹು ದಾದ್ದರಿಂದ ಭಗವಂತನಲ್ಲಿ ಭಕ್ತಿಯನ್ನು ಮಾಡುವ ಅವಶ್ಯಕತೆಯಿಲ್ಲ. ಅದಕ್ಕಾಗಿ ಅವನ ಮಹಿಮೆಯನ್ನು ಹೇಳುವ ಆವಶ್ಯಕತೆಯೂ ಇಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸತೋ ಭವ' (ಸತಃ=ಜೀವನಲ್ಲಿ ಇರುವ ಜ್ಞಾನಾನಂದಾತ್ಮಕತ್ವದ ಭವಃ= ಅಭಿವ್ಯಕ್ತಿಯಾಗುವುದು) ಎಂಬುದು. ಇದನ್ನು ಮತ್ತು 'ಭವ' (ಇನ್ನೂ ಸಂಸಾರವಿರುವುದಜು) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಸಾದೃಶ್ಯಸ್ಯ ಸತ್ತ್ವಾತ್ ಸಾಧನಂ ವಿನೈವ ಜೀವಸ್ಯ ತಾದೃಕ್ತ್ವವ್ಯಕ್ತಿಃ ।**
**ಅನಾದಿತಃ ಸಂಸಾರಸ್ಯಾನಿವೃತ್ತತ್ವೇನ ಭಾವಾತ್ ॥ ೧೧ ॥**

**ಭಾವಾರ್ಥ—** ಜೀವನಿಗೆ ಸುಷುಪ್ತಿಯಲ್ಲಿ ಜ್ಞಾನಾನಂದಾದಿ ಸಾದೃಶ್ಯ ವಿರುವುದರಿಂದ ಯಾವುದೇ ಸಾಧನವಿಲ್ಲದೆ ಅದರ ಅಭಿವ್ಯಕ್ತಿಯಾಗುತ್ತದೆ. ಭಕ್ತಿಯ ಅವಶ್ಯಕತೆ ಇಲ್ಲ ಎಂದು ಆಕ್ಷೇಪಿಸಬಾರದು. ಏಕೆಂದರೆ, ಅನಾದಿಯಿಂದಿರುವ ಸಂಸಾರವು ಇನ್ನೂ ನಿವೃತ್ತಿಯಾಗಿಲ್ಲವಾದ್ದರಿಂದ.

**ವಿವರಣೆ—** ನಿದ್ರಾಕಾಲದಲ್ಲಿ ಜ್ಞಾನಾನಂದಾದಿಗಳು ಅಲ್ಪ ಅಭಿವ್ಯಕ್ತ ವಾಗುತ್ತವೆ. ತಾತ್ಕಾಲಿಕವಾಗಿ ಮಾತ್ರ. ಅನಾದಿ ಸಂಸಾರವಿರುವುದರಿಂದ ಅದು ಪೂರ್ಣವಾಗಿ ಅಭಿವ್ಯಕ್ತವಾಗುವುದಿಲ್ಲ. ಸಂಸಾರದ ನಿವೃತ್ತಿಗೆ ಪರಮಾತ್ಮನ ಪ್ರಸಾದಬೇಕು. ಪ್ರಸಾದವಾಗಬೇಕಾದರೆ ಭಕ್ತಿ ಬೇಕು. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಅತ್ಯಾವಶ್ಯಕವಾದದ್ದು ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ

ಅಂಬುವದಗ್ರಹಣಾತ್=ಭಕ್ತಿಯಿಲ್ಲದಿರುವುದರಿಂದ ತಥಾತ್ವಂ=ಸುಖ ಸ್ವರೂಪ ತ್ವವು ನ ತು=ಚೆನ್ನಾಗಿ ಅಭಿವ್ಯಕ್ತವಾಗುವುದಿಲ್ಲ.

## ವೃದ್ಧಿಹ್ರಾಸಾಧಿಕರಣ (3-2-12)

ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಂ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಭಕ್ತಿಯು ವಿಷಯ. ದೇವರ ಭಕ್ತರಲ್ಲಿ ದ್ವೈವಿಧ್ಯವನ್ನು ಕಂಡಿದ್ದರಿಂದ ಸಂದೇಹ ಬರುತ್ತದೆ. ಭಕ್ತಿಯು ಏಕರೂಪವಾದದ್ದೋ? ಅಥವಾ ವೃದ್ಧಿಹ್ರಾಸವುಳ್ಳದ್ದೋ? ಎಂದು.

**ಪೂರ್ವಪಕ್ಷ—** ಮನುಷ್ಯೋತ್ತಮರಿಗೂ ಬ್ರಹ್ಮಾದಿದೇವತೆಗಳಿಗೂ ಮುಕ್ತತ್ವವು ಸಮಾನ ವಾಗಿದೆ. ಮೋಕ್ಷದಲ್ಲಿ ಯಾವುದೇ ತಾರತಮ್ಯವಿಲ್ಲ. ಇಬ್ಬರಿಗೂ ಸಮಾನ ಮೋಕ್ಷವೆಂದಮೇಲೆ ಅಧಿಕವಾದ ಭಕ್ತಿಯಿಂದ ಆಗುವ ಪ್ರಯೋಜನ ವಾದರೂ ಏನು? ಆದ್ದರಿಂದ ಭಕ್ತಿಯು ಏಕಪ್ರಕಾರವಾಗಿದೆ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕ ಯುಕ್ತಿ 'ಗುಣಸಾಮ್ಯ'ವೆಂಬುದು. ಇದನ್ನು ವಿವರಿಸಿ 'ವಿಶೇಷದರ್ಶನ' (ಆನಂದದಲ್ಲಿ ಮತ್ತು ಅದಕ್ಕೆ ಸಾಧನವಾದ ಭಕ್ತ್ಯಾದಿ ಗಳಲ್ಲಿ ತಾರತಮ್ಯವನ್ನು ಹೇಳುವ ಶ್ರುತಿಯಿರುವುದು) ಎಂಬ ಸಿದ್ಧಾಂತ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಮುಕ್ತತ್ವಾದಿಗುಣಸಾಮ್ಯಾದ್ಬ್ರಹ್ಮಾದೀನಾಂ**
**ಭಕ್ತ್ಯಾದಿಗುಣಸಾಮ್ಯಮ್ ।**
**'ಯಥಾ ಯಥಾಽಧಿಕಾರೋ ವಿಶಿಷ್ಯತೇ, ಏವಂ ಜ್ಞಾನಂ ಭಕ್ತಿರ್ಬಲಂ**
**ಚ ವಿಶಿಷ್ಯತೇ ।**
**ಮುಕ್ತವಾನಂದ ಏತೇ ಚ ಗುಣಾ ವಿಶಿಷ್ಯಂತೇ ।**
**ಅತ ಆಹುರ್ಬ್ರಹ್ಮಣೇ ಮುಕ್ತಾ ಬಲಿಂ ಹರಂತಿ'**
**ಇತ್ಯಾದಿ ವಿಶೇಷದೃಷ್ಟೇಃ ॥ ೧೩ ॥**

**ಭಾವಾರ್ಥ**—ಬ್ರಹ್ಮಾದಿ ದೇವತೆಗಳಲ್ಲಿ ಮುಕ್ತತ್ವವೆಂಬ ಗುಣ ಸಮಾನವಾದ್ದ ರಿಂದ ಭಕ್ತ್ಯಾದಿಗುಣಗಳೂ ಸಮಾನವೇ ಆಗಿವೆ ಎಂಬ ಪೂರ್ವಪಕ್ಷ ಸರಿಯಲ್ಲ. 'ಶಾಸ್ತ್ರಶ್ರವಣದಲ್ಲಿ ಹೇಗೆ ಹೇಗೆ ಅಧಿಕಾರವು ಹೆಚ್ಚಾಗುವುದೋ ಹಾಗೆ ಜ್ಞಾನ, ಭಕ್ತಿ, ಬಲ ಅಧಿಕವಾಗುತ್ತವೆ. ಮುಕ್ತಿಯಲ್ಲಿಯೂ ಆನಂದ, ಜ್ಞಾನ ಭಕ್ತ್ಯಾದಿಗುಣಗಳೂ ಹೆಚ್ಚಾಗುತ್ತವೆ. ಆದ್ದರಿಂದ ಮುಕ್ತರು ಬ್ರಹ್ಮನಿಗೆ ಪೂಜಾದಿಗಳನ್ನು ಸಲ್ಲಿಸುತ್ತಾರೆ' ಎಂಬುದಾಗಿ ವಿಶೇಷವು ಶ್ರುತಿಯಲ್ಲಿ ಕಂಡಿರುವುದರಿಂದ.

**ವಿವರಣೆ**—ಮೇಲೆ ಹೇಳಿದ ಶ್ರುತಿಯಲ್ಲಿ ಮತ್ತು 'ಸೈಷಾಽನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತಿಯಲ್ಲಿ ಆನಂದದಲ್ಲಿ ತಾರತಮ್ಯವನ್ನು ಹೇಳಲಾಗಿದೆ. ಒಂದುವೇಳೆ ಭಕ್ತಿಯು ಏಕಪ್ರಕಾರವಾಗುವು ದಾದರೆ ಒಬ್ಬರಿಗೆ ಅಧಿ ಕವಾದ ಆನಂದ ಕೆಲವರಿಗೆ ಕಡಿಮೆ ಆನಂದವನ್ನು ಕೊಡುವ ಪರಮಾತ್ಮನಿಗೆ ವೈಷಮ್ಯದೋಷವು ಬರುತ್ತದೆ. ಆದ್ದರಿಂದ ಅದಕ್ಕೆ ಸಾಧನವಾದ ಭಕ್ತಿಯಲ್ಲಿಯೂ ತಾರತಮ್ಯವನ್ನು ಒಪ್ಪಲೇಬೇಕಾಗುವುದು. ಆದ್ದರಿಂದ ಭಕ್ತಿಯು ಏಕಪ್ರಕಾರವಲ್ಲ ಎಂದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ವೃದ್ಧಿಹ್ರಾಸ ಭಾಕ್ತ್ವಮಂತರ್ಭಾವಾದುಭಯಸಾ ಮಂಜಸ್ಯಾದೇವಂ ಓಂ

ವೃದ್ಧಿಹ್ರಾಸಭಾಕ್ತ್ವಂ=ಭಕ್ತಿಯು ಆಧಿಕ್ಯ, ನ್ಯೂನತೆಗಳನ್ನು ಹೊಂದಿದೆ. ಏಕೆಂದರೆ, ಅಂತರ್ಭಾವಾತ್=ಮಹಾಫಲವುಳ್ಳ ಬ್ರಹ್ಮಾದಿದೇವತೆಗಳು, ಅಲ್ಪಫಲ ವುಳ್ಳ ಮಾನವರು ಭಕ್ತರ ಗುಂಪಿನಲ್ಲಿ ಸೇರಿರುವುದರಿಂದ, ಹೇಗೆಂದರೆ, ಉಭಯ ಸಾಮಂಜಸ್ಯಾತ್=ಭಕ್ತಿಯ ತಾರತಮ್ಯದಿಂದ ಎರಡು ವಿಧವಾದ ಜೀವರಿಗೆ ಎರಡು ವಿಧವಾದ ಫಲದಾನವಿರುವುದರಿಂದ.

## ಪ್ರಕೃತೈತಾವತ್ತ್ವಾಧಿಕರಣ (3-2-13)

ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಜಗತ್ತಿನ ಪಾಲನೆಯೇ ವಿಷಯ. ಜ್ಞಾನಾದಿಗುಣಗಳು ಚೈತ್ರಾದಿ ಕೆಲವು ಜೀವರಲ್ಲಿ ಇರುವುದೂ ಕಂಡಿದೆ. ಇಲ್ಲದಿರುವುದೂ ಕಂಡಿದೆ. ಆದ್ದರಿಂದ ಸಂದೇಹ ಬರುತ್ತದೆ– ಪಾಲನಕರ್ತೃತ್ವವೆಂಬ ಗುಣ ವಿಷ್ಣುವಿನಲ್ಲಿ ಯುಕ್ತವೋ? ಅಯುಕ್ತವೋ? ಎಂದು.

**ಪೂರ್ವಪಕ್ಷ—** ಪರಮಾತ್ಮನು ಜಗತ್ತಿನ ನಾಶಕ್ಕಾಗಿ ಪ್ರವೃತ್ತಿಮಾಡದಿರುವುದೇ ಜಗತ್ತಿನ ರಕ್ಷಣೆ. ಅದಕ್ಕಿಂತ ಭಿನ್ನವಾದ ಪಾಲನೆಯೆಂಬುದು ಇಲ್ಲ. ಅವಾಂತರ ಉಪದ್ರವ ಪರಿಹರಿಸುವುದಕ್ಕಾಗಿ ಈಶ್ವರನ ಆವಶ್ಯಕತೆಯಿದೆ. ಇದನ್ನೇ ರಕ್ಷಣೆಯೆಂದು ಕರೆಯುತ್ತೇವೆ ಎಂಬುದೂ ಸರಿಯಲ್ಲ. ಅವಾಂತರ ಉಪದ್ರವ ಮಾಡುವವನೂ ಅವನೇ ಅಲ್ಲವೇ! ಅದನ್ನು ಅವನು ಮಾಡದಿದ್ದರೆ ಸಾಕು. ಹೀಗೆ ಸೃಷ್ಟಿಕರ್ತೃತ್ವ ಸಂಹಾರಕರ್ತೃತ್ವಕ್ಕಿಂತ ಅಧಿಕವಾದ ಪಾಲನಕರ್ತೃತ್ವವೆಂಬ ಮಹಿಮೆ ಪರಮಾತ್ಮನಿಗೆ ಕೂಡುವುದಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅಯೋಗ'** (ಪರಮಾತ್ಮನಿಗೆ ರಕ್ಷಣಕರ್ತೃತ್ವವನ್ನು ಕೂಡುವುದಿಲ್ಲ) ಎಂಬ ಪೂರ್ವಪಕ್ಷ ನ್ಯಾಯವನ್ನು ಮತ್ತು **'ವಿಶೇಷವಾಕ್ಯ'** (ಪಾಲನಕರ್ತೃತ್ವವನ್ನು ಹೇಳುವ ವಿಶೇಷ ವಾಕ್ಯವಿರುವುದು) ಎಂಬ ಸಿದ್ಧಾಂತ ಸ್ಥಾಪಕಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಸಂಹಾರಕರ್ತುರಸಂಹಾರಾದನ್ಯರಕ್ಷಾಯಾ ಅಯೋಗಃ । 'ಸ ಸೃಜತಿ ಸ ಪಾಲಯತಿ ಸ ವಿನಾಶಯತಿ' ಇತ್ಯಾದಿ ವಿಶೇಷವಾಕ್ಯಾತ್ । ಅನ್ನದಾನಾದ್ಯುಪಪತ್ತೇಶ್ಚ ॥ ೧೩ ॥**

**ಭಾವಾರ್ಥ—** ಸಂಹಾರವನ್ನು ಮಾಡುವ ಪರಮಾತ್ಮನಿಗೆ ಸಂಹಾರ ಮಾಡದಿರುವುದಕ್ಕಿಂತ ಬೇರೆಯಾದ ರಕ್ಷಣೆಯು ಕೂಡುವುದಿಲ್ಲ ಎಂಬುದು ಸರಿಯಲ್ಲ. ಏಕೆಂದರೆ, 'ಆ ಪರಮಾತ್ಮನು ಸೃಷ್ಟಿಸುತ್ತಾನೆ, ರಕ್ಷಣೆ ಮಾಡುತ್ತಾನೆ, ನಾಶಗೊಳಿಸುತ್ತಾನೆ' ಎಂಬ ವಿಶೇಷ ವಚನವಿರುವುದರಿಂದ ಮತ್ತು ಅನ್ನದಾನವೇ ಮೊದಲಾದ ರಕ್ಷಣಾಕರ್ತೃತ್ವವು ಉಪಪನ್ನವಾಗುತ್ತದೆ.

**ವಿವರಣೆ—** ಸಂಹಾರ ಕರ್ತೃತ್ವಕ್ಕಿಂತ ಬೇರೆಯಾಗಿ ಪಾಲನಕರ್ತೃತ್ವವನ್ನು ಶ್ರುತಿಯು ಹೇಳುತ್ತಿದೆ. ಆದ್ದರಿಂದ ಪರಮಾತ್ಮನಿಗೆ ಅನ್ನದಾನಾದಿರೂಪವಾದ ಪಾಲನಕರ್ತೃತ್ವವೆಂಬ ಮಹಿಮೆಯನ್ನು ಒಪ್ಪಲೇಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಪ್ರಕೃತೈತಾವತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ**

ಪ್ರಕೃತೈತಾವತ್ವಂ=ಪ್ರಕೃತವಾದ ಸೃಷ್ಟ್ಯಾದಿಕರ್ತೃತ್ವಕ್ಕೆ ಸೃಷ್ಟ್ಯಾದಿಕರ್ತೃತ್ವದಲ್ಲಿ ಮಾತ್ರ ಪರ್ಯವಸಾನವನ್ನು ಪ್ರತಿಷೇಧತಿ=ಶ್ರುತಿಯು ನಿರಾಕರಿಸುತ್ತದೆ. ತತಃ= ಸೃಷ್ಟ್ಯಾದಿಕರ್ತೃತ್ವಕ್ಕಿಂತ ಭೂಯಶ್ಚ=ಅಧಿಕವಾದ ಪಾಲಕತ್ವವನ್ನು ಬ್ರವೀತಿ= ಶ್ರುತಿಯು ಹೇಳುತ್ತಿದೆ. ಹಿ=ಇದು ಸ್ಮೃತಿ ಪ್ರಸಿದ್ಧವೂ ಆಗಿದೆ.

# ಅವ್ಯಕ್ತಾಧಿಕರಣ (3-2-14)

ಓಂ ತದವ್ಯಕ್ತಮಾಹ ಹಿ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಭಕ್ತಿಯು ವಿಷಯ. ಲೋಕದಲ್ಲಿ ಸಫಲವಾದ ವ್ಯಾಪಾರಗಳನ್ನು ಮಾಡುವುದು ಕಂಡಿದೆ. ನಿಷ್ಫಲವಾದ ವ್ಯಾಪಾರಗಳನ್ನು ಮಾಡದಿರುವುದೂ ಕಂಡಿದೆ. ಆದ್ದರಿಂದ ಸಂಶಯವು ಬರುತ್ತದೆ- ಭಕ್ತಿಯನ್ನು ಮಾಡಬೇಕೋ? ಬೇಡವೋ? ಎಂದು.

**ಪೂರ್ವಪಕ್ಷ—** 'ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಂ' (ಪರಮಾತ್ಮನು ಪ್ರಾಕೃತರೂಪವಿಲ್ಲದವನು, ನಾಶರಹಿತ, ಎಂದಿಗೂ ಕಣ್ಣಿಗೆ ಕಾಣದವನು, ಷೋಡಶಕಲಾರಹಿತನು) ಎಂಬ ಶ್ರುತಿಯು ಪರಮಾತ್ಮನನ್ನು ಅವ್ಯಕ್ತ ನೆನ್ನುತ್ತಿದೆ. ಅವ್ಯಕ್ತನಾದಲ್ಲಿ ಧರ್ಮಾದಿಗಳಂತೆ ಅವನ ಪ್ರತ್ಯಕ್ಷವು ಅಸಂಭಾವಿತ ವಾದ್ದರಿಂದ (ಈಶ್ವರಃ ನ ಪ್ರತ್ಯಕ್ಷಯೋಗ್ಯಃ ಅವ್ಯಕ್ತಸ್ವಭಾವತ್ವಾತ್ ಅದೃಷ್ಟವತ್) ಅವನಲ್ಲಿ ಭಕ್ತಿಯು ಯುಕ್ತವಲ್ಲ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ತರ್ಕಬಾಧ'ವೆಂಬುದು. ಇದನ್ನು ಮತ್ತು 'ಪುಂಶಕ್ತಿ' (ಪರಮಾತ್ಮನ ಅಚಿಂತ್ಯವಾದ ಶಕ್ತಿ) ಎಂಬ ಸಿದ್ಧಾಂತ ಸಾಧಕ ಯುಕ್ತಿಯನ್ನು ಸಮರ್ಥಿಸುತ್ತಿದ್ದಾರೆ—

**ನ ಚಾವ್ಯಕ್ತಸ್ವಭಾವಸ್ಯ ದರ್ಶನೇ ತರ್ಕಬಾಧಃ । ಅನಂತಶಕ್ತಿತ್ವಾದ್ ವಿಷ್ಣೋಸ್ತಚ್ಛಕ್ತ್ಯಾ ಅವ್ಯಕ್ತಸ್ಯಾಪಿ ದರ್ಶನೋಪಪತ್ತೇಃ ॥ ೧೪ ॥**

**ಭಾವಾರ್ಥ—** ಪರಮಾತ್ಮನು ಅವ್ಯಕ್ತಸ್ವಭಾವವುಳ್ಳವನಾದ್ದರಿಂದ ಅವನು ಕಣ್ಣಿಗೆ ಗೋಚರಿಸು ವನು ಎಂದು ಒಪ್ಪಿದರೆ ಅನುಮಾನ ಬಾಧವು ಬರುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ ವಿಷ್ಣುವಿನಲ್ಲಿ ಅನಂತಶಕ್ತಿಯಿದೆ. ಆ ಶಕ್ತಿಯಿಂದಲೆ ಅವ್ಯಕ್ತನಾಗಿದ್ದರೂ ಅವನ ಪ್ರತ್ಯಕ್ಷವು ಕೂಡುತ್ತದೆ.

**ವಿವರಣೆ—**ಭಗವಂತನು ನಿತ್ಯ ಅವ್ಯಕ್ತನಾದರೂ ತನ್ನ ಅಂಚಿತ್ಯಶಕ್ತಿಯಿಂದ ಭಕ್ತರಿಗೆ ದೃಶ್ಯನಾಗುತ್ತಾನೆ. ಆದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವಾಗುತ್ತದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ತದವ್ಯಕ್ತಮಾಹ ಹಿ ಓಂ**

ತದ್=ಆ ಪರಮಾತ್ಮನು ಅವ್ಯಕ್ತಂ=ಅವ್ಯಕ್ತನು. ಹಿ=ಏಕೆಂದರೆ, ಆಹ= 'ಅರೂಪಮಕ್ಷಂ ಬ್ರಹ್ಮ ಸದಾಽವ್ಯಕ್ತಂ ಚ ನಿಷ್ಕಲಂ' ಎಂದು ಶ್ರುತಿ ಹೇಳುತ್ತಿದೆ.

# ಅಹಿಕುಂಡಲಾಧಿಕರಣ (3-2-15)

ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಭಕ್ತಿಯು ವಿಷಯ. ಲೋಕದಲ್ಲಿ ಮಾಡಬೇಕಾದ ಕಾರ್ಯಗಳು ಮಾಡಬಾರದ ಕಾರ್ಯಗಳೂ ಕಂಡಿರುವುದರಿಂದ ಭಕ್ತಿಯನ್ನು ಮಾಡಬೇಕೋ? ಬೇಡವೋ? ಎಂದು ಸಂಶಯವು ಬರುತ್ತದೆ.

**ಪೂರ್ವಪಕ್ಷ—** 'ಆನಂದೋ ಬ್ರಹ್ಮೇತಿ ವ್ಯಜಾನಾತ್' ಎಂಬ ಶ್ರುತಿಯು ಪರಮಾತ್ಮನನ್ನು ಆನಂದಸ್ವರೂಪವೆನ್ನುತ್ತಿದೆ. 'ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ಶ್ರುತಿಯು ಆನಂದವುಳ್ಳವನು ಎನ್ನುತ್ತಿದೆ. ಹಣವುಳ್ಳವನು ಹಣಕ್ಕಿಂತ ಬೇರೆಯಾದದ್ದು ಕಂಡಿರುವುದರಿಂದ ಗುಣಗಳು ಗುಣವುಳ್ಳವನ ಸ್ವರೂಪವಾಗುವುದು ವಿರುದ್ಧ. ಗುಣಗುಣಿಗಳಲ್ಲಿ ಭೇದವಿರಬೇಕಷ್ಟೇ! ಆದ್ದರಿಂದ ಮಹಾಮಹಿಮನಲ್ಲದ ಪರಮಾತ್ಮನಲ್ಲಿ ಭಕ್ತಿಮಾಡುವ ಆವಶ್ಯಕತೆಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಲೋಮತಾ' (ವಿರೋಧ) ವೆಂಬುದು ಇದನ್ನು ಮತ್ತು 'ಸುನಿದರ್ಶನ' (ಆನಂದವುಳ್ಳ ಪರಮಾತ್ಮನನ್ನು ಆನಂದಸ್ವರೂಪಿಯೆಂಬ ದೃಷ್ಟಾಂತದಿಂದ ಕೂಡಿಸಬಹುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಗುಣಾನಾಂ ಗುಣಿಸ್ವರೂಪತ್ವಂ ವಿರುದ್ಧಮ್ । ಕಾಲಾದಿ-ದೃಷ್ಟಾಂತಾತ್ ॥ ೧೫ ॥**

**ಭಾವಾರ್ಥ—**ಗುಣಗಳು ಗುಣವುಳ್ಳವನ ಸ್ವರೂಪವಾಗುವುದು ವಿರುದ್ಧವಾದ್ದ ರಿಂದ ಪರಮಾತ್ಮನು ಆನಂದಸ್ವರೂಪನಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಕಾಲಾದಿಗಳ ದೃಷ್ಟಾಂತದಿಂದ ಕೂಡಿಸಬಹುದಾಗಿದೆ.

**ವಿವರಣೆ—**ಕಾಲವು ಅಖಂಡವಾದರೂ 'ಪೂರ್ವಃ ಕಾಲಃ' (ಹಿಂದಿನ ಕಾಲ) ಎಂದು ವ್ಯವಹರಿಸುತ್ತೇವೆ. ಇಲ್ಲಿ ಪೂರ್ವರೂಪವಾದ ಸೂಕ್ಷ್ಮಕಾಲವು ವಿಶೇಷಣ ಕಾಲವು ವಿಶೇಷ್ಯ. ವಿಶೇಷಣ-ವಿಶೇಷ್ಯಗಳಲ್ಲಿ ಭೇದವಿರಲೇಬೇಕು. ಆದರೂ ವಿಶೇಷವನ್ನು ಅವಲಂಬಿಸಿ 'ಪೂರ್ವಃಕಾಲಃ' ಎಂದು ಹೇಳುತ್ತೇವೆ.

ಮೂಲದಲ್ಲಿ 'ಕಾಲಾದಿದೃಷ್ಟಾಂತಾತ್' ಎಂಬಲ್ಲಿರುವ ಆದಿ ಪದದಿಂದ ಅಹಿಕುಂಡಲದ ದೃಷ್ಟಾಂತವನ್ನೂ ಸ್ವೀಕರಿಸಬೇಕು. ಹಾವು ಹುತ್ತದಲ್ಲಿ ಮಲಗಿರುವಾಗ 'ಇದು ಹಾವಿನ ಕುಂಡಲ'ವೆನ್ನುತ್ತೇವೆ. ಹಾವು ಬೇರೆಯಲ್ಲ ಕುಂಡಲ ಬೇರೆಯಲ್ಲ. ಆದರೂ ಭೇದಾಭೇದವನ್ನು ಇಟ್ಟುಕೊಂಡು 'ಹಾವಿನ ಕುಂಡಲ'ವೆನ್ನುವಂತೆ, ಪ್ರಕಾಶಸ್ವರೂಪನಾದರೂ ಆದಿತ್ಯನನ್ನು ಪ್ರಕಾಶವುಳ್ಳವನು ಎಂದು ವ್ಯವಹರಿಸುವಂತೆ ವಿಶೇಷದ ಬಲದಿಂದ ಬ್ರಹ್ಮನು ಆನಂದವುಳ್ಳವನಾದರೂ 'ಬ್ರಹ್ಮನು ಆನಂದಸ್ವರೂಪಿ' ಎಂದೂ ಹೇಳಬಹುದು. ಮಂದಮತಿಗಳಿಗೂ ಅರ್ಥವಾಗುವುದಕ್ಕಾಗಿ ಅಹಿಕುಂಡಲದ ದೃಷ್ಟಾಂತವನ್ನು ಸೂಕ್ಷ್ಮಮತಿಗಳ ತಿಳುವಳಿಕೆಗಾಗಿ ಕಾಲ, ಪ್ರಕಾಶಗಳ ದೃಷ್ಟಾಂತವನ್ನು ನೀಡಿದ್ದಾರೆ ಎಂದು ತಿಳಿಯಬೇಕು. ಅನುರೂಪವಾದ ಅನೇಕ ದೃಷ್ಟಾಂತಗಳನ್ನು ತಿಳಿಸುವುದಕ್ಕಾಗಿಯೇ ಅನುವ್ಯಾಖ್ಯಾನದಲ್ಲಿ 'ಸುನಿದರ್ಶನಂ' ಎಂಬಲ್ಲಿ 'ಸು' ಎಂಬ ವಿಶೇಷಣವನ್ನು ನೀಡಿದ್ದಾರೆ. ಆದ್ದರಿಂದ ಈರೀತಿಯಾಗಿ ಆನಂದವುಳ್ಳ ಬ್ರಹ್ಮನಲ್ಲಿ ಭಕ್ತಿಯನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಉಭಯವ್ಯಪದೇಶಾತ್ತ್ವಹಿ ಕುಂಡವವತ್ ಓಂ**

ಉಭಯವ್ಯಪದೇಶಾತ್ತು='ಆನಂದೋ ಬ್ರಹ್ಮ', 'ಆನಂದಂ ಬ್ರಹ್ಮಣೋ ವಿದ್ವಾನ್' ಎಂದು ಎರಡು ವಿಧವಾದ ವ್ಯವಹಾರವು ಶ್ರುತಿಯಲ್ಲಿ ಹೇಳಿರುವುದರಿಂದ ಬ್ರಹ್ಮನು ಗುಣಸ್ವರೂಪನು. ಗುಣವುಳ್ಳವನು ಎರಡೂ ಆಗಿರುವನು. ಏಕೆಂದರೆ, ಅಹಿಕುಂಡಲವತ್=ಸರ್ಪವು ವಿಶೇಷ ಬಲದಿಂದ ಕುಂಡಲರೂಪವೂ ಕುಂಡಲಿಯೂ ಆದಂತೆ.

## ಪರಮತಾಧಿಕರಣ (3-2-16)

ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣಕ್ಕೆ ಭಗವಂತನ ಗುಣಗಳೇ ವಿಷಯ. ಆನಂದಾದಿಗುಣಗಳು ಭಗವಂತನಿಗೆ ಸಂಬಂಧಿಸಿದ್ದರಿಂದ ಅಲೌಕಿಕವೆನ್ನಬಹುದು.

ಲೋಕಪ್ರಸಿದ್ಧ ಶಬ್ದಗಳಿಂದಲೇ ಅವುಗಳನ್ನು ಕರೆದಿರುವುದರಿಂದ ಲೌಕಿಕವೂ ಎನ್ನಬಹುದಾದ್ದರಿಂದ ಭಗವಂತನ ಗುಣಗಳು ಅಲೌಕಿಕಗಳೋ? ಅಥವಾ ಲೌಕಿಕಗಳೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ—** 'ಆನಂದಂ ಬ್ರಹ್ಮಣೋ ವಿದ್ವಾನ್' ಮುಂತಾದ ವಾಕ್ಯಗಳಲ್ಲಿ ಆನಂದವು ಶ್ರುತವಾಗಿದೆ. ಈ ಆನಂದಾದಿ ಶಬ್ದಗಳಿಗೆ ಲೌಕಿಕ ಆನಂದದಲ್ಲಿಯೇ ಶಕ್ತಿಯು ಗೃಹೀತವಾಗಿದೆ. ಹೊರತು ಅಲೌಕಿಕ ಆನಂದದಲ್ಲಿ ಅಲ್ಲ. ಬ್ರಹ್ಮನಲ್ಲಿರುವ ಆನಂದಾದಿಗಳು ಲೋಕವಿಲಕ್ಷಣವಾದಲ್ಲಿ ಆನಂದಶಬ್ದವಾಚ್ಯತ್ವವಿಲ್ಲ. ಆನಂದಾದಿ ಶಬ್ದವಾಚ್ಯತ್ವವಿದ್ದಲ್ಲಿ ಲೋಕವಿಲಕ್ಷಣವಾಗಲಾರದು. ಆನಂದಾದಿ ಶಬ್ದವಾಚ್ಯತ್ವವನ್ನು ಕೂಡಿಸಲು ಬ್ರಹ್ಮಾನಂದವು ಲೌಕಿಕಾನಂದಸದೃಶವೆಂದು ಹೇಳಬೇಕು. ಅಂತಹ ಆನಂದಾದಿಗುಣವುಳ್ಳ ಬ್ರಹ್ಮನಲ್ಲಿ ಭಕ್ತಿಯು ಯುಕ್ತವಲ್ಲವೆಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿಯೂ 'ವಿಲೋಮತಾ' ಎಂಬುದೇ. (ಅಲೌಕಿಕತ್ವ, ಲೌಕಿಕ ಆನಂದಾದಿಶಬ್ದವಾಚ್ಯತ್ವ ಇವುಗಳಿಗೆ ಸಹಾನವಸ್ಥಾನರೂಪ ವಿರೋಧ) ಇದನ್ನು ಮತ್ತು 'ಅಲೌಕಿಕತ್ವ' (ಲೌಕಿಕ ಶಬ್ದವಾಚ್ಯಗಳಾದರೂ ಪರಮಾತ್ಮನ ಗುಣಗಳು ಅಲೌಕಿಕವಾಗಿವೆ) ಎಂಬ ಸಿದ್ಧಾಂತ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಬ್ರಹ್ಮಾನಂದಾದೀನಾಮನ್ಯಥಾತ್ವಾದತಚ್ಛಬ್ದತ್ವಂ ತಚ್ಛಬ್ದತ್ವೇ ಲೋಕೋಪಮತ್ವಂ ಚೇತಿ ವಿಲೋಮತಾ ।**

**'ಅಲೌಕಿಕಾಸ್ತಸ್ಯ ಶಬ್ದಾಸ್ತಥಾಽರ್ಥಾ ಅಲೌಕಿಕೋ ಹ್ಯೇಷ ವಿಷ್ಣುಃ ಪರತ್ವಾತ್ ।**

**ತಥಾಪಿ ಶಬ್ದಾ ಲೌಕಿಕಾ ಅಪ್ಯಮುಷ್ಮಿನ್ ಪ್ರವರ್ತಮಾನಾ ಅಧಿಕಾರ್ಥಾನ್ ವದಂತಿ ॥'**

**ಇತ್ಯಾದಿ ಶ್ರುತಿಭ್ಯೋಽಲೌಕಿಕತ್ವಾವಗಮಾತ್ ॥ ೧೬ ॥**

**ಭಾವಾರ್ಥ—**ಬ್ರಹ್ಮನ ಆನಂದಾದಿಗುಣಗಳು ಲೌಕಿಕಶಬ್ದವಾಚ್ಯವಾಗಲಾರವು. ಲೌಕಿಕ ಶಬ್ದವಾಚ್ಯಗಳಾದರೆ ಲೋಕಸದೃಶಗಳಾಗಬೇಕಾಗುವುದು ಎಂದು

ಈರೀತಿಯಾಗಿ ವಿರೋಧವು ಪ್ರಾಪ್ತವಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ, 'ವಿಷ್ಣುವಿನ ಗುಣಗಳನ್ನು ತಿಳಿಸುವ ಶಬ್ದಗಳೂ ಅಲೌಕಿಕಗಳು. (ವೈದಿಕವಾದವುಗಳು) ಅವುಗಳ ಅರ್ಥಗಳಾದ ಆನಂದಾದಿ ಗುಣಗಳೂ ಅಲೌಕಿಕಗಳೇ.(ಅಪ್ರಾಕೃತವಾದವುಗಳು) ಸರ್ವೋತ್ತಮನಾದ್ದರಿಂದ ಈ ವಿಷ್ಣುವೂ ಅಲೌಕಿಕನೇ. ಹಾಗಿದ್ದರೂ ಲೌಕಿಕವಾದ ಶಬ್ದಗಳು(ಪೌರುಷೇಯ ಆಗಮಗಳು) ಅವನಲ್ಲಿ ಪ್ರವೃತ್ತವಾದವುಗಳಾಗಿ ಅಧಿಕ ವಾದ ಅರ್ಥಗಳನ್ನು ತಿಳಿಸುತ್ತವೆ' ಎಂಬಿವೇ ಮೊದಲಾದ ಶ್ರುತಿಗಳಿಂದ ಅವನ ಗುಣಗಳು ಅಲೌಕಿಕವೆಂದು ಸಿದ್ಧವಾಗುತ್ತವೆ.

**ವಿವರಣೆ**—ಶ್ರುತಿಗಳಿಂದ ಪರಮಾತ್ಮನ ಗುಣಗಳು ಲೌಕಿಕಶಬ್ದವಾಚ್ಯ ಗಳಾದರೂ ಅಲೌಕಿಕ ಗಳೆಂದೇ ಸಿದ್ಧವಾಗುತ್ತದೆ. ಅಲೌಕಿಕತ್ವಕ್ಕೂ, ಲೌಕಿಕ ಆನಂದ ಶಬ್ದವಾಚ್ಯತ್ವ ಇವುಗಳಿಗೆ ವಿರೋಧವನ್ನು ಒಪ್ಪಿದರೆ 'ಅಲೌಕಿಕಾಸ್ತಸ್ಯ...' ಎಂಬ ಶ್ರುತಿಯ ವಿರೋಧವೇ ಬರುತ್ತದೆ. ಮಣ್ಣಿನ ಘಟವನ್ನು ತಿಳಿಸುವ ಘಟಶಬ್ದವು ಸುವರ್ಣ ಘಟವನ್ನೂ ತಿಳಿಸುತ್ತದೆಯಷ್ಟೇ! ಯಾವ ವಿರೋಧವೂ ಇಲ್ಲ. ಆದ್ದರಿಂದ ಇಂತಹ ಅಲೌಕಿಕ ಗುಣವುಳ್ಳ ಪರಮಾತ್ಮನಲ್ಲಿ ಭಕ್ತಿಯು ಯುಕ್ತವೇ ಆಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ**—

## ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ

ಬ್ರಹ್ಮನ ಆನಂದಾದಿಗಳು ಅತಃ=ಲೋಕಸಿದ್ಧ ಆನಂದಾದಿಗುಣಗಳಿಗಿಂತ ಪರಂ=ವಿಲಕ್ಷಣವಾಗಿವೆ. ಏಕೆಂದರೆ, ಸೇತೂನ್ಮಾನಸಂಬಂಧವ್ಯಪದೇಶೇಭ್ಯಃ ಸೇತು='ಏಷ ಸೇತುರ್ವಿಧೃತಿಃ ಯ ಏಷ ಆನಂದಃ ಪರಸ್ಯ'. ಪರಬ್ರಹ್ಮನ ಆನಂದವು 'ಸೇತು' ಅಂದರೆ ಜಗತ್ತಿಗೆ ಆಧಾರವೆಂದು ಹೇಳಿರುವುದರಿಂದ, ಉನ್ಮಾನ='ಯತೋ ವಾಚೋ ನಿವರ್ತಂತೇ' ಎಂದು ಅವನ ಆನಂದ ಪೂರ್ಣ ಎಂದಿರುವುದರಿಂದ, ಸಂಬಂಧ='ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' ಎಂದು ಜೀವ, ಪರಮಾತ್ಮರ ಆನಂದಗಳಿಗೆ ಬಿಂಬ ಪ್ರತಿಬಿಂಬಭಾವವನ್ನು ಹೇಳಿರುವುದರಿಂದ, ಭೇದವ್ಯಪದೇಶೇಭ್ಯಃ='ಅನ್ಯತ್

ಜ್ಞಾನಂ ತು ಜೀವಾನಾಂ ಅನ್ಯತ್ ಜ್ಞಾನಂ ಪರಸ್ಯ ಚ' ಎಂದು ಜೀವನ ಜ್ಞಾನಕ್ಕಿಂತಲೂ ಪರಮಾತ್ಮನ ಜ್ಞಾನಕ್ಕೆ ವೈಲಕ್ಷಣ್ಯವನ್ನು ಹೇಳಿದ್ದರಿಂದ.

## ಸ್ಥಾನವಿಶೇಷಾಧಿಕರಣ (3-2-17)

ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣದ ವಿಷಯ ಬ್ರಹ್ಮಾದಿಗಳ ಆನಂದಾದಿಗಳು. ಕೆಲವು ಬಿಂಬವಾಗಿ ಕೆಲವು ಪ್ರತಿಬಿಂಬವಾಗಿ ಕಂಡಿರುವುದರಿಂದ ಸಂಶಯ ಬರುತ್ತದೆ- ಬ್ರಹ್ಮಾದಿ ದೇವತೆಗಳ ಆನಂದಗಳು ಭಗವಂತನ ಆನಂದಾದಿಗುಣಗಳ ಪ್ರತಿಬಿಂಬಗಳೋ? ಅಲ್ಲವೋ? ಎಂದು.

**ಪೂರ್ವಪಕ್ಷ—** ಬ್ರಹ್ಮಾದಿಗಳ ಆನಂದದಲ್ಲಿ ತಾರತಮ್ಯವಿದೆ ಎಂದು ಹಿಂದೆಯೇ ಸಮರ್ಥನೆ ಮಾಡಲಾಗಿದೆ. ಇಂತಹ ಆನಂದಾದಿ ಗುಣಗಳಿಗೆ ಪರಮಾತ್ಮನ ಆನಂದಾದಿ ಗುಣಗಳು ಪ್ರತಿಬಿಂಬಗಳಾಗುವುದಾದರೆ ಪರಮಾತ್ಮನ ಗುಣಗಳಲ್ಲಿಯೂ ತಾರತಮ್ಯ ಬರಬೇಕಾಗುವುದು. ಆದ್ದರಿಂದ ಪರಮಾತ್ಮನಲ್ಲಿ ಅತಿಶಯಿತವಾದ ಭಕ್ತಿಯು ಅಯುಕ್ತವಾಗುವುದು.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ನಾನಾಭಾವ' (ಬ್ರಹ್ಮಾದಿದೇವತೆಗಳ ಆನಂದವು ನಾನಾ ಪ್ರಕಾರವಾಗಿರುವುದು) ಎಂಬುದು. ಇದನ್ನು ಮತ್ತು 'ಆಧಿಕ್ಯ' ಎಂಬ ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಬ್ರಹ್ಮಾದ್ಯಾನಂದವೈಚಿತ್ರ್ಯೇ ಬಿಂಬಭೂತವಿಷ್ಣ್ವಾನಂದ-ವೈಚಿತ್ರ್ಯಮ್ । ಆದಿತ್ಯಾದಿವದಾಧಿಕ್ಯಾತ್ । ನ ಹಿ ಸೂರ್ಯಕಾಂತ-ಪ್ರತಿಬಿಂಬಸ್ಯಾಗ್ನಿಜನಕತ್ವಶಕ್ತಿರ್ನ ಜಲಗತಸ್ಯೇತ್ಯೇತಾವತಾ ಸೂರ್ಯ-ವೈಚಿತ್ರ್ಯಮ್ । ಆಧಿಕ್ಯಂ ಹಿ ತತ್ರ ನಿಮಿತ್ತಮ್ । ಸೂರ್ಯಚಂದ್ರಾದಿ ಪ್ರತಿಬಿಂಬಂ ವಿನಾಽನ್ಯತ್ರ ತಥಾ ವಿಶೇಷಾದೃಷ್ಟೇಃ ॥ ೧೭ ॥**

**ಭಾವಾರ್ಥ—** ಬ್ರಹ್ಮಾದಿ ದೇವತೆಗಳ ಆನಂದದಲ್ಲಿ ತಾರತಮ್ಯವಿದ್ದರೂ ಬಿಂಬವಾದ ವಿಷ್ಣುವಿನ ಗುಣಗಳಲ್ಲಿಯೂ ತಾರತಮ್ಯವಿರಬೇಕು ಎಂಬ ನಿಯಮ ವಿಲ್ಲ. ಏಕೆಂದರೆ, ಸೂರ್ಯಾದಿಗಳಲ್ಲಿರುವಂತೆ ಪರಮಾತ್ಮನಲ್ಲಿಯೂ ಆಧಿಕ್ಯ

ವಿರುವುದರಿಂದ. ಸೂರ್ಯಕಾಂತಮಣಿಯಲ್ಲಿ ಸೂರ್ಯಪ್ರತಿಬಿಂಬ ಮೂಡಿದಾಗ ಅಗ್ನಿಜನಕತ್ವವು ಕಂಡಿದೆ, ಜಲದಲ್ಲಿ ಮೂಡಿದಾಗ ಅಗ್ನಿಜನಕತ್ವವಿಲ್ಲವೆಂಬ ಕಾರಣದಿಂದ ಸೂರ್ಯನಲ್ಲಿ ವೈಚಿತ್ರ್ಯವು ಬರುವುದಿಲ್ಲ. ಇದಕ್ಕೆ ಸೂರ್ಯನಲ್ಲಿರುವ ಆಧಿಕ್ಯವೇ ಕಾರಣ. ಸೂರ್ಯಚಂದ್ರಾದಿಗಳ ಪ್ರತಿಬಿಂಬವಿಲ್ಲದೆ ಮುಖಾದಿಪ್ರತಿ ಬಿಂಬಗಳಿಂದ ದಾಹಜನಕತ್ವವು ಕಂಡಿಲ್ಲವಾದ್ದರಿಂದ.

**ವಿವರಣೆ**—ಇಲ್ಲಿ ಎರಡು ವಿಧದಲ್ಲಿ ಬಿಂಬವಾದ ಪರಮಾತ್ಮನ ಗುಣಗಳಲ್ಲಿ ತಾರತಮ್ಯವಿಲ್ಲ ಎಂದು ಸಮರ್ಥಿಸುತ್ತಿದ್ದಾರೆ. ಒಂದು ಉಪಾಧಿಯ ವೈಲಕ್ಷಣ್ಯ. ಸೂರ್ಯನಪ್ರತಿಬಿಂಬ ಸೂರ್ಯಕಾಂತ ಮಣಿಯಲ್ಲಿ ಬಿದ್ದಾಗ ಮಾತ್ರ ದಾಹ ಜನಕತ್ವ, ಜಲದಲ್ಲಿ ಬಿದ್ದಾಗ ದಾಹ ಜನಕತ್ವವಿಲ್ಲ. ಅದರಂತೆ, ಬ್ರಹ್ಮಾದಿ ದೇವತೆಗಳ ಭಕ್ತ್ಯಾದಿಸಾಧನಗಳಲ್ಲಿ ವೈಚಿತ್ರ್ಯವಿರುವುದರಿಂದ ಅವರ ಆನಂದಾದಿಗುಣಗಳಲ್ಲಿ ವೈಚಿತ್ರ್ಯವಿದೆ. ಎರಡನೆಯದು ಬಿಂಬದ ವೈಚಿತ್ರ್ಯವು (ಆಧಿಕ್ಯವು). ಸೂರ್ಯನ ಪ್ರತಿಬಿಂಬ ಮಾತ್ರ ಅಗ್ನಿಜನಕವೇ ಹೊರತು ಮುಖದ ಪ್ರತಿಬಿಂಬವು ಅಗ್ನಿಜನಕವಲ್ಲ. ಈ ಎರಡೂ ಪ್ರಕಾರಗಳಲ್ಲಿ ಬಿಂಬನಾದ ಸೂರ್ಯನಲ್ಲಿ ವೈಚಿತ್ರ್ಯವು ಕಂಡಿಲ್ಲ. ಅದರಂತೆ ಬಿಂಬವಾದ ಪರಮಾತ್ಮನ ಆನಂದಾದಿಗುಣಗಳಲ್ಲಿ ವೈಚಿತ್ರ್ಯ (ತಾರತಮ್ಯ)ವಿಲ್ಲ. ಆದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವಾಗಿದೆ ಎಂದು ಸಿದ್ಧಾಂತ.

**ಸೂತ್ರಾರ್ಥ**—

### ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ

ಪ್ರಕಾಶಾದಿವತ್=ಸೂರ್ಯಾದಿ ಪ್ರತಿಬಿಂಬಗಳಂತೆ ಸ್ಥಾನವಿಶೇಷತ್= ಸ್ಥಾನ ಗಳ ಗುಣವೈಚಿತ್ರ್ಯದಿಂದಾಗಿ ಬ್ರಹ್ಮಾದಿಗಳ ಆನಂದದಲ್ಲಿ ವೈಚಿತ್ರ್ಯವು ಉಪಪನ್ನ ವಾಗಿದೆ.

## ತಥಾನ್ಯತ್ವಾಧಿಕರಣ (3-2-18)

ಓಂ ತಥಾನ್ಯತ್ ಪ್ರತಿಷೇಧಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಬ್ರಹ್ಮನು ವಿಷಯ. ಲೋಕದಲ್ಲಿ ವ್ಯಕ್ತವಾದ, ಅವ್ಯಕ್ತವಾದ

ಎರಡು ಪದಾರ್ಥಗಳು ಕಂಡಿದ್ದರಿಂದ, ಬ್ರಹ್ಮನು ವ್ಯಕ್ತನೋ? ಅವ್ಯಕ್ತನೋ? ಎಂದು ಸಂದೇಹ ಬರುತ್ತದೆ.

**ಪೂರ್ವಪಕ್ಷ—** ಭಗವಂತನಿಗೆ ಮತ್ಸ್ಯಕೂರ್ಮಾದಿ ನಾನಾರೂಪಗಳಿರುವಂತೆ ಸಾಧಕನ ಧ್ಯಾನಕಾಲದಲ್ಲಿ ಗೋಚರವಾಗುವ ವಾಸನಾಮಯ ಪ್ರತಿಮೆಯೂ ಅವನದ್ದೇ ಒಂದು ರೂಪವೇ ಆಗಿದೆ. ಭಕ್ತಿಯಿಲ್ಲದೆ ಧ್ಯಾನ ಮಾಡುವಾಗಲೂ ಆ ರೂಪವು ಪ್ರಕಟವಾಗುತ್ತದೆ. ಆ ರೂಪವೇ ಅಪೇಕ್ಷಿತ ಫಲವನ್ನು ಸಾಧಕನಿಗೆ ನೀಡುತ್ತಿದೆ. ಆದ್ದರಿಂದ ಭಕ್ತಿಯ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ನಾನಾಭಾವ' (ಪರಮಾತ್ಮನಿಗೆ ಅನೇಕ ರೂಪಗಳಿರುವುದು) ಎಂಬುದು. ಇದನ್ನು ಮತ್ತು 'ಆಧಿಕ್ಯ' (ಪರಮಾತ್ಮನಲ್ಲಿ ಅಪ್ರಾಕೃತತ್ವವೇ ಮೊದಲಾದ ಆಧಿಕ್ಯವಿದೆ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ನಾನಾಭಾವಾದ್ ವಿಷ್ಣೋಶ್ಚಿತ್ತಪ್ರತಿಬಿಂಬರೂಪತಾ । ಆಧಿಕ್ಯಾದೇವ । ಪ್ರತಿಬಿಂಬೇ ಹಿ ದೋಷಾಶ್ಚ ಪ್ರತೀಯಂತೇ । ಅತೋ ಹಿ ಶ್ರುತಿಃ ಪ್ರತಿಷೇಧತಿ 'ನೇದಂ ಯದಿದಮುಪಾಸತೇ' ಇತಿ ॥ ೧೮ ॥**

**ಭಾವಾರ್ಥ—** ವಿಷ್ಣುವಿಗೆ ಮತ್ಸ್ಯ ಕೂರ್ಮಾದಿ ನಾನಾರೂಪಗಳಿರುವುದರಿಂದ ಮನಸ್ಸಿನಲ್ಲಿ ತೋರುವ ವಾಸನಾಮಯವಾದ ಪ್ರತಿಮೆಯೂ ಅವನ ರೂಪವೆಂದು ಅಂಗೀಕರಿಸುವುದು ಸರಿಯಲ್ಲ. ವಿಷ್ಣುವಿನಲ್ಲಿ (ಅಪ್ರಾಕೃತತ್ವ ನಿರತಿಶಯ ಸೌಂದರ್ಯ ಮುಂತಾದ) ಆಧಿಕ್ಯವಿದೆ. ಪ್ರತಿಬಿಂಬವಾದ ಆ ಪ್ರತಿಮೆಯಲ್ಲಿ ಯಾದರೂ ಪ್ರಾಕೃತತ್ವ, ನಿರತಿಶಯ ಸೌಂದರ್ಯಾಭಾವ ಮುಂತಾದ ದೋಷಗಳು ತೋರುತ್ತಿವೆ. ಆದ್ದರಿಂದ ಮನಸ್ಸಿನಲ್ಲಿ ತೋರುವ ಪ್ರತಿಮೆ ಪರಮಾತ್ಮನ ರೂಪವಲ್ಲ. ಆದ್ದರಿಂದಲೇ ಶ್ರುತಿಯು 'ಸಾಧಕನು ಯಾವುದನ್ನು ಧ್ಯಾನದಲ್ಲಿ ಕಾಣುವನೋ ಅದು ಬ್ರಹ್ಮನಲ್ಲ' ಎಂದು ಪ್ರತಿಪಾದಿಸುತ್ತಿದೆ.

**ವಿವರಣೆ—**ವಿಷ್ಣುವಿನಲ್ಲಿ ಅಪ್ರಾಕೃತತ್ವ ಮೊದಲಾದ ಆಧಿಕ್ಯವಿರುವುದರಿಂದ ಚಿತ್ತದಲ್ಲಿ ತೋರುವ ಪ್ರತಿಮೆಯ ರೂಪನಲ್ಲ ಎಂಬುದು ಸಿದ್ಧಾಂತ. ಇದನ್ನು ಶ್ರುತಿ ಹೇಳುತ್ತದೆ—

'ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದದಿದಮುಪಾಸತೇ॥'

ಸಾಧಕನು ಯಾವ ಬ್ರಹ್ಮನನ್ನು ಮನಸ್ಸಿನಿಂದ ತಿಳಿಯುವುದಿಲ್ಲವೋ ಯಾವ ಬ್ರಹ್ಮನಿಂದಲೇ ಮನಸ್ಸು ತಿಳಿಯಲ್ಪಡುವುದೋ ಅವನನ್ನೇ ಬ್ರಹ್ಮನೆಂದು ತಿಳಿ. ಧ್ಯಾನಕಾಲದಲ್ಲಿ ಯಾವುದು ಕಾಣುವುದೋ ಅದು ಬ್ರಹ್ಮನಲ್ಲ. ಅದು ವಾಸನಾಯವಾದ ಬ್ರಹ್ಮನ ಪ್ರತಿಕೃತಿ ಮಾತ್ರ ಎಂದು. ಪ್ರತಿಮೆಗಿಂತ ಭಿನ್ನನಾದ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಲು ಭಕ್ತಿಯು ಆವಶ್ಯಕವಾಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ತಥಾನ್ಯತ್ ಪ್ರತಿಷೇಧಾತ್ ಓಂ

ತಥಾ=ಹೇಗೆ ಜೀವರ ಆನಂದಾದಿಗುಣಗಳು ಭಗವಂತನ ಆನಂದಾದಿಗಳಿಗಿಂತ ಭಿನ್ನವಾಗಿಯೋ ಅದರಂತೆ, ಅನ್ಯತ್=ಧ್ಯಾನಕಾಲದಲ್ಲಿ ತೋರುವ ವಸ್ತುವಿಗಿಂತ ಬ್ರಹ್ಮನು ಭಿನ್ನನೇ ಆಗಿದ್ದಾನೆ. ಏಕೆಂದರೆ ಪ್ರತಿಷೇಧಾತ್='ಯನ್ಮನಸಾ ನ ಮನುತೇ' ಎಂಬ ಶ್ರುತಿಯಲ್ಲಿ ನಿಷೇಧಮಾಡಿದ್ದರಿಂದ.

## ಸರ್ವಗತತ್ವಾಧಿಕರಣ (3-2-19)

ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಪರಮಾತ್ಮನೇ ವಿಷಯ. ಜನ್ಮಾದಿ ಕಾರಣತ್ವವು ಎರಡು ರೀತಿಯಲ್ಲೂ ಸಂಭವಿಸುವುದರಿಂದ ಸಂಶಯ ಬರುತ್ತದೆ–ವಿಷ್ಣುವೇ ಎಲ್ಲ ದೇಶಕಾಲಗಳಲ್ಲಿಯೂ ಸೃಷ್ಟಿಕರ್ತನೋ? ಅಥವಾ ಭಿನ್ನಕಾಲದಲ್ಲಿ ಭಿನ್ನವ್ಯಕ್ತಿಗಳೋ? ಎಂದು.

**ಪೂರ್ವಪಕ್ಷ—** ಲೋಕದಲ್ಲಿ ಒಂದೊಂದು ಕಾಲದಲ್ಲಿ ಒಬ್ಬೊಬ್ಬರು ನಿಯಾಮಕರಾಗಿರುವುದು ಕಂಡಿದೆ. ಅದರಂತೆ ಬೇರೆ ಬೇರೆ ಕಾಲಗಳಲ್ಲಿ ಬೇರೆಬೇರೆಯವರು ಸೃಷ್ಟ್ಯಾದಿಗಳನ್ನು ಮಾಡಬಹುದು. ಬೇರೆಯವರು ಸೃಷ್ಟ್ಯಾದಿಗಳನ್ನು ಮಾಡಲು ಸ್ವತಂತ್ರರಾಗಿರಬೇಕಲ್ಲ? ಎಂದರೆ ಪರಮಾತ್ಮನೇ

ಬೇರೆಯವರಿಗೆ ಸ್ವಾತಂತ್ರ್ಯವನ್ನು ನೀಡುತ್ತಾನೆ. ಅವರಿಂದಲೇ ಸೃಷ್ಟ್ಯಾದಿಗಳು ನಡೆಯುವುದರಿಂದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿಯು 'ನಾನಾಭಾವ' ಎಂಬುದು. ಇದನ್ನು ಮತ್ತು 'ಸ್ವಾತಂತ್ರ್ಯ' ಎಂಬ ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ನಾನಾವತಾರಕೌತುಕದರ್ಶನಾದ್ ವಿಷ್ಣೋಃ ಕ್ವಚಿದ್ ದೇಶಕಾಲಾಂತರೇ ಕೌತುಕಾದೇವ ಸೃಷ್ಟ್ಯಾದಿಕಮಕುರ್ವನ್ ಅನ್ಯಮೇವ ಸಾಮಸ್ತ್ಯೇನ ನಿಯೋಜಯತಿ । 'ಸರ್ವತ್ರ ಸರ್ವಮೇತಸ್ಮಾತ್' ಇತ್ಯಾದಿ ಶ್ರುತ್ಯಾ ಕ್ರೀಡಾಯಾಮಪಿ ಸ್ವಾತಂತ್ರ್ಯಾತ್ ।**

**'ಸ್ವಾತಂತ್ರ್ಯಾತ್ ಕ್ರೀಡತೇ ವಿಷ್ಣುರ್ನ ಚ ಸ್ವಾತಂತ್ರ್ಯಮನ್ಯಗಮ್ ।**
**ಕರೋತಿ ಕ್ವಾಪಿ ನಿಯತಾ ಕ್ರೀಡಾ ಸೃಷ್ಟ್ಯಾದಿಗಾಽಸ್ಯ ಚ ॥**
**ನಿಯತಕ್ರೀಡನಾದೇವ ಕರ್ತಾ ನಾನ್ಯೋಽಸ್ತಿಕಸ್ಯಚಿತ್ ।**
**ಅಸ್ವತಂತ್ರೋ ಹಿ ಚಲತಿ ಚಲಚಿತ್ತಾದಶಕ್ತಿತಃ ।**
**ಸ್ವತಂತ್ರಃ ಪೂರ್ಣಶಕ್ತಿಃ ಸನ್ ಕುತೋಽಸೌ ನಿಯತಿಂ ತ್ಯಜೇತ್॥'**

**ಇತಿ ಶ್ರುತೇಶ್ಚ ॥ ೧೯ ॥**

**ಭಾವಾರ್ಥ—** ಪರಮಾತ್ಮನಿಗೆ ರಾಮಕೃಷ್ಣಾದಿ ಅನೇಕ ಅವತಾರಗಳಲ್ಲಿ ಅರ್ಜುನನ ಸಾರಥ್ಯ ಮಾಡುವುದು ಮೊದಲಾದ ಲೀಲೆಯು ಕಂಡದ್ದರಿಂದ ಕೆಲವು ದೇಶದಲ್ಲಿ ಬೇರೆ ಕಾಲದಲ್ಲಿ ಲೀಲೆಯಿಂದಲೇ ತಾನು ಸೃಷ್ಟ್ಯಾದಿಗಳನ್ನು ಮಾಡದೆ (ಸಾಮಸ್ತ್ಯೇನ) ಸ್ವಾತಂತ್ರ್ಯವನ್ನು ಕೊಟ್ಟು ಪ್ರೇರಣೆ ಕೊಡುತ್ತಾನೆ ಎಂದು ಹೇಳಬಾರದು. ಏಕೆಂದರೆ 'ಸರ್ವತ್ರ ಸರ್ವಮೇತಸ್ಮಾತ್' ಎಂಬ ಶ್ರುತಿಯಿಂದ ಕ್ರೀಡೆಯಲ್ಲಿಯೂ ಅವನಿಗೆ ಸ್ವಾತಂತ್ರ್ಯವಿದೆಯೆಂದು ಸಿದ್ಧವಾಗುತ್ತದೆ. ಮತ್ತು 'ಪರಮಾತ್ಮನು ಸ್ವಾತಂತ್ರ್ಯ ದಿಂದಲೇ ಕ್ರೀಡಿಸುತ್ತಾನೆ. ಯಾವ ದೇಶಕಾಲಗಳಲ್ಲಿಯೂ ತನ್ನ ಸ್ವಾತಂತ್ರ್ಯವನ್ನು ಬೇರೆಯವರಿಗೆ ಕೊಡುವುದಿಲ್ಲ. ಸೃಷ್ಟ್ಯಾದಿ ವಿಷಯುಕವಾದ ಕ್ರೀಡೆಯು ನಿಯಮೇನ ಅವನಲ್ಲಿಯೇ ಇದೆ. ನಿಯಮೇನ ಕ್ರೀಡೆಯನ್ನು

ಮಾಡುವುದರಿಂದ ಯಾವುದಕ್ಕೂ ಅವನನ್ನು ಹೊರತುಪಡಿಸಿ ಬೇರೆ ಕರ್ತೃವಿಲ್ಲ. ಚಂಚಲವಾದ ಮನಸ್ಸುಳ್ಳವನು ಅಸ್ವತಂತ್ರನಾದ್ದರಿಂದ ತನ್ನ ಸ್ಥಾನವನ್ನು ಬಿಡುತ್ತಾನೆ. ಸ್ವತಂತ್ರನಾದ ಪೂರ್ಣಶಕ್ತಿಯುಳ್ಳ ಪರಮಾತ್ಮನು ತನ್ನ ನಿಯಮನವನ್ನು ಏಕೆ ತಾನೆ ಬಿಡುತ್ತಾನೆ?' ಎಂಬ ಶ್ರುತಿಯೂ ಇದೆ—

**ವಿವರಣೆ—** ಪರಮಾತ್ಮನು ಸ್ವತಂತ್ರನಾದ್ದರಿಂದ ತನ್ನ ನಿಯಮನವನ್ನು ಬೇರೆಯವರಿಗೆ ಕೊಡುವುದಿಲ್ಲ. ಈ ವಿಷಯದಲ್ಲಿ ಶ್ರುತಿಯೂ ಇದೆ.

ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು ।
ಸ್ವರೂಪ ಭೂತಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯುತಃ ॥
ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಂ ॥

ಎಲ್ಲ ಕಡೆಯಲ್ಲಿಯೂ ಎಲ್ಲ ಕಾಲದಲ್ಲಿಯೂ ಎಲ್ಲವೂ ಪರಮಾತ್ಮನ ಸ್ವರೂಪಭೂತವಾದ ಮಾಯೆಯೆಂಬ ಹೆಸರುಳ್ಳ ನಿತ್ಯಶಕ್ತಿಯಿಂದ ಸೃಷ್ಟವಾಗುತ್ತದೆ. ಆದ್ದರಿಂದಲೇ ಸನಾತನವಾದ ಆ ವಿಷ್ಣುವನ್ನು ಮಾಯಾಮಯ ಎನ್ನುವರು ಎಂದು.

ಪರಮಾತ್ಮನು ತನ್ನ ಸ್ವಾತಂತ್ರವನ್ನು ಯಾರಿಗೂ ಕೊಡುವುದಿಲ್ಲ. ಸತ್ಯಲೋಕದ ಆಧಿಪತ್ಯವನ್ನು ಚತುರ್ಮುಖನಿಗೆ ಕೊಡುತ್ತಾನೆ. ಆದರೆ ತನ್ನ ವೈಕುಂಠಲೋಕದ ಆಧಿಪತ್ಯವನ್ನು ಯಾರಿಗಾದರೂ ಕೊಡುತ್ತಾನೆಯೆ? ಮುಕ್ತರಿಗೆ ಸಾರೂಪ್ಯವನ್ನು ಕೊಟ್ಟರೂ ಶ್ರೀವತ್ಸ ಚಿಹ್ನೆ, ಕೌಸ್ತುಭಮಣಿಗಳನ್ನು ಕೊಡುವುದಿಲ್ಲ. ಪರಮಾತ್ಮನು ಸ್ವಾತಂತ್ರ್ಯವನ್ನು ಮತ್ತೊಬ್ಬನಿಗೆ ಕೊಟ್ಟು ಅವನಿಂದ ಸೃಷ್ಟಿ ಮಾಡಿಸುತ್ತಾನೆ ಎಂದಾದರೆ 'ಸರ್ವತ್ರ ಸರ್ವಮೇತಸ್ಮಾತ್' ಎಂದಿವೇ ಮೊದಲಾದ ಶ್ರುತಿಗಳ ವಿರೋಧವು ಬರುತ್ತದೆ. ಆದ್ದರಿಂದ ಅವನ ಪರಮೋತ್ಕರ್ಷಕ್ಕೆ ಎಂದಿಗೂ ಚ್ಯುತಿ ಯಿಲ್ಲವಾದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವೇ ಆಗಿದೆ.

**ಸೂತ್ರಾರ್ಥ—**

## ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ

ಅನೇನ=ಈ ಭಗವಂತನಿಂದಲೇ ಎಲ್ಲ ದೇಶ ಎಲ್ಲ ಕಾಲಗಳಲ್ಲಿಯೂ ಎಲ್ಲ ವಸ್ತುಗಳ ಸೃಷ್ಟ್ಯಾದಿಗಳು ನಡೆಯುತ್ತವೆ. ಏಕೆಂದರೆ, ಸರ್ವಗತತ್ವಮಾಯಾ ಮಯಶಬ್ದಾದಿಭ್ಯಃ='ಏಷ ಸರ್ವ ಏಷ ಸರ್ವಗತಃ' ಮುಂತಾದ ಶ್ರುತಿಯಲ್ಲಿ

ಸರ್ವಗತತ್ವ ಶ್ರುತವಾದ್ದರಿಂದ ಮತ್ತು 'ಸರ್ವತ್ರ ಸರ್ವಮೇತಸ್ಮಾತ್ ಸರ್ವದಾ ಸರ್ವವಸ್ತುಷು' ಎಂದು ಮಾಯಾಮಯ ಶಬ್ದವನ್ನು ವ್ಯಾಖ್ಯಾನಿಸುವ ಶ್ರುತಿ ಯಿರುವುದರಿಂದ, ಭಿನ್ನ ದೇಶ ಭಿನ್ನ ಕಾಲಗಳಲ್ಲಿ ಭಿನ್ನ ವ್ಯಕ್ತಿಗಳಿಂದ ಸೃಷ್ಟ್ಯಾದಿಗಳು ನಡೆಯುತ್ತವೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ.

## ಫಲೋತ್ಪತ್ತ್ಯಧಿಕರಣ (3-2-20)

ಓಂ ಫಲಮತ ಉಪಪತ್ತೇಃ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣದಲ್ಲಿ ವಿಷಯ ಶ್ರೀಹರಿ. ನಿರೀಶ್ವರವಾದಿಗಳು ಕರ್ಮದಿಂದ ಫಲವೆನ್ನು ತ್ತಾರೆ. ಸೇಶ್ವರವಾದಿಗಳು ಬ್ರಹ್ಮನಿಂದ ಫಲವೆನ್ನುತ್ತಾರೆ. ಇವರ ವಿರುದ್ಧವಾದ ಮಾತುಗಳಿಂದ ಸಂಶಯ ಬರುತ್ತದೆ– ಶ್ರೀಹರಿಯು ಫಲವನ್ನು ಕೊಡುವವನೋ? ಅಲ್ಲವೋ? ಎಂದು.

**ಪೂರ್ವಪಕ್ಷ—** ಕರ್ಮದಿಂದಲೇ ಫಲಪ್ರಾಪ್ತಿಯಾಗುತ್ತದೆ. ಕರ್ಮವಿಲ್ಲದೆ ಫಲಪ್ರಾಪ್ತಿಯಿಲ್ಲ. ಈರೀತಿಯಾಗಿ ಅನ್ವಯವ್ಯತಿರೇಕಗಳಿಂದ ಕರ್ಮವೇ ಫಲಕ್ಕೆ ಕಾರಣವೆಂದು ಸಿದ್ಧವಾಗುತ್ತದೆ. ಈಶ್ವರನೇ ಫಲವನ್ನು ಕೊಡುತ್ತಾನೆ ಎಂದು ಒಪ್ಪಿಕೊಂಡರೂ ಕರ್ಮವನ್ನು ಅನುಸರಿಸಿಯೇ ಫಲವನ್ನು ಕೊಡಬೇಕು. ಇಲ್ಲವಾದಲ್ಲಿ ಶ್ರೀಹರಿಗೆ ವೈಷಮ್ಯ ಮುಂತಾದ ದೋಷವು ಬರುತ್ತದೆ. ಆದ್ದರಿಂದ ಫಲವನ್ನು ಕೊಡುವುದು ಕರ್ಮವೇ ಆಗಿರುವುದರಿಂದ ಶ್ರೀಹರಿಯಲ್ಲಿ ಭಕ್ತಿಯನ್ನು ಮಾಡುವ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪ್ರಲೋಭ' (ವಂಚನೆ) ಎಂಬುದು. ಇದನ್ನು ಮತ್ತು 'ಸ್ವಾತಂತ್ರ್ಯ' (ಫಲಕ್ಕೆ ಸ್ವಾತಂತ್ರ್ಯವಿಲ್ಲ. ಈಶ್ವರನಿಗೇ ಸ್ವಾತಂತ್ರ್ಯ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಕರ್ಮಾನ್ವಯವ್ಯತಿರೇಕಾತ್ ಫಲಸ್ಯೇಶ್ವರಃ ಫಲದಾತೇತಿ ಪ್ರಲೋಭಮಾತ್ರಮ್ । ತಸ್ಯೈವ ಸ್ವಾತಂತ್ರ್ಯಾತ್ ।**

**'ಕರ್ಮಾಣ್ಯನಂತಾನಿ ಯಥೇಷ್ಟಮೀಶಃ ಸಂಪಾದ್ಯ ತೇಷಾಂ**

**ಫಲಮಿಚ್ಛಯೈವ ।**

**ಕ್ವಚಿದ್ ದದಾತಿ ಕ್ವ ಚ ನೋ ದದಾತಿ ನ ಹ್ಯಾನಂತ್ಯಾತ್ ಕರ್ಮಣಾಂ ಭೋಗನಾಶಃ।**
**ಸ್ವಾತಂತ್ರ್ಯಂ ಚೇತ್ ಕರ್ಮಣಾಂ ಸರ್ವಭೋಗಃ ಸ್ಯಾನ್ನ ಹ್ಯೇವಂ ಕ್ವಾಪಿ ತತ್ ಕೇನಚಿತ್ ಸ್ಯಾತ್।**
**ಅತೋಽಪಿ ಸ ಸ್ವೇಚ್ಛಯಾ ಕಿಂಚಿದೇವ ಫಲಂ ಕುರ್ಯಾದ್ ವಿಫಲಂ ಪ್ರಾಯಶಶ್ಚ।**
**ಕ್ವಚಿಜ್ಜ್ಞಾನಂ ಜನಯನ್ ಭಸ್ಮ ಕುರ್ಯಾತ್ ಸ್ವೇಚ್ಛಾವೃತ್ತಿಸ್ತಸ್ಯ ವಿಷ್ಣೋಃ ಸದೈವ ।।' ಇತಿ ಬ್ರಹ್ಮಾಂಡೇ।**
**'ಸ್ವತಂತ್ರ ಈಶ ಏವೈಕಸ್ತದ್ವಶಂ ಕರ್ಮ ಸರ್ವದಾ।**
**ಅತ ಈಶತ್ವಮೀಶಸ್ಯ ನ ಹೀಶೋಽನ್ಯಃ ಕಥಂಚನ ।। '**

**ಇತಿ ಶ್ರುತಿಃ ।।**

**ಅತಃ ಪ್ರಲೋಭಕಲ್ಪನೇ ಶ್ರುತಹಾನಿರಶ್ರುತಕಲ್ಪನಾ ಚೇತಿ ಹರಿರೇವ ಫಲಪ್ರದಃ ।। ೨೦ ।।**

**ಭಾವಾರ್ಥ—** ಕರ್ಮಮಾಡಿದರೆ ಫಲವು ದೊರೆಯುತ್ತದೆ. ಕರ್ಮ ಮಾಡದಿದ್ದರೆ ಫಲವು ದೊರೆಯುವುದಿಲ್ಲವೆಂದು ಅನ್ವಯವ್ಯತಿರೇಕಗಳಿಂದ ಕರ್ಮವೇ ಫಲದಾತೃವೆಂದು ಸಿದ್ಧವಾಗಿರುವುದರಿಂದ ಈಶ್ವರನು ಫಲವನ್ನು ಕೊಡುತ್ತಾನೆ ಎಂಬುದು ವಂಚನೆಯೇ ಆಗಿದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಶ್ರೀಹರಿಗೇ ಸ್ವಾತಂತ್ರ್ಯವಿರುವುದರಿಂದ. 'ಈಶ್ವರನು ತನ್ನ ಇಚ್ಛೆಗನುಗುಣವಾಗಿ ಅನಂತವಾದ ಕರ್ಮಗಳನ್ನು ಮಾಡಿಸಿ ಕೆಲವು ಕರ್ಮಗಳಿಗೆ ಫಲವನ್ನು ತನ್ನ ಇಚ್ಛೆಯಿಂದಲೇ ಕೊಡುತ್ತಾನೆ. ಕೆಲವು ಕರ್ಮಗಳಿಗೆ ಫಲವನ್ನು ಕೊಡುವುದಿಲ್ಲ. ಕರ್ಮಗಳು ಅನಂತವಾದ್ದರಿಂದ ಕೆಲವು ಭೋಗದಿಂದಲೂ ನಾಶವಾಗುವುದಿಲ್ಲ. ಒಂದುವೇಳೆ ಕರ್ಮಗಳಿಗೇ ಸ್ವಾತಂತ್ರ್ಯವಿರುವುದಾದರೆ ಎಲ್ಲ ಕರ್ಮಗಳ ಭೋಗವಾಗಬೇಕಿತ್ತು. ಆದರೆ ಯಾರಿಂದಲೂ ಎಲ್ಲಿಯೂ ಸರ್ವಕರ್ಮಗಳ ಭೋಗವಾಗುವುದಿಲ್ಲವಲ್ಲ! ಆದ್ದರಿಂದ ಆ ಶ್ರೀಹರಿಯು ತನ್ನ ಇಚ್ಛೆಯಿಂದಲೇ

ಕೆಲವು ಕರ್ಮಗಳಿಗೆ ಫಲವನ್ನು ನೀಡುತ್ತಾನೆ. ಕೆಲವು ಕರ್ಮಗಳಿಗೆ ಪ್ರಾಯಶ್ಚಿತ್ತಾದಿಗಳಿಂದ ಕರ್ಮರಹಿತವನ್ನಾಗಿ ಮಾಡುತ್ತಾನೆ. ಕೆಲವೊಮ್ಮೆ ಅಪರೋಕ್ಷಜ್ಞಾನವನ್ನು ಹುಟ್ಟಿಸಿ ಕರ್ಮಗಳನ್ನು ಸುಡುತ್ತಾನೆ. ಇದೆಲ್ಲವೂ ವಿಷ್ಣುವಿನ ಸ್ವೇಚ್ಛಾಧೀನ ವ್ಯಾಪಾರವು ಎಲ್ಲ ಕಾಲದಲ್ಲಿಯೂ ಇದ್ದೇ ಇರುತ್ತದೆ ಎಂದು ಬ್ರಹ್ಮಾಂಡದಲ್ಲಿ ಹೇಳಿದೆ. ಮತ್ತು 'ಸ್ವತಂತ್ರನಾದವನು ಈಶ್ವರನೊಬ್ಬನೇ. ಕರ್ಮವು ಯಾವಾಗಲೂ ಅವನ ಅಧೀನವೇ ಆಗಿರುತ್ತದೆ. ಆದ್ದರಿಂದ ಶ್ರೀಹರಿಗೆ ಈಶ್ವರತ್ವವು ಸಿದ್ಧವಾಗುತ್ತದೆ. ಇವನನ್ನು ಹೊರತು ಬೇರೆ ಯಾರೂ ಈಶ್ವರರೇ ಇಲ್ಲ, ಎಂದು ಶ್ರುತಿಯೂ ತಿಳಿಸುತ್ತಿದೆ. ಆದ್ದರಿಂದ ಈಶ್ವರನು ಫಲಕೊಡುತ್ತಾನೆ ಎಂಬುದು ಕೇವಲ ವಂಚನೆಯೇ ಆಗಿದೆ ಎಂದು ಕಲ್ಪಿಸಿದರೆ, ಶ್ರುತಪರಿತ್ಯಾಗ, ಅಶ್ರುತಕಲ್ಪನಾ ಎಂಬ ದೋಷಗಳಿರುವುದರಿಂದ ಶ್ರೀಹರಿಯೇ ಫಲವನ್ನು ಕೊಡುವವನು ಎಂದು ಸಿದ್ಧವಾಗುತ್ತದೆ.

**ವಿವರಣೆ**—ಅಚೇತನ ವಾದ ಕರ್ಮಕ್ಕೆ ಸ್ವಾತಂತ್ರ್ಯವಿಲ್ಲದಿರುವುದರಿಂದ ಕರ್ಮವು ಫಲವನ್ನು ಕೊಡುತ್ತದೆ ಎಂದು ಹೇಳುವುದು ಸರಿಯಲ್ಲ. ಶ್ರೀಹರಿಯಲ್ಲಿ ಸ್ವಾತಂತ್ರ್ಯವಿರುವುದರಿಂದ ಅವನೇ ಫಲವನ್ನು ಕೊಡುವವನು ಎಂದು ಒಪ್ಪಬೇಕು. ಒಂದುವೇಳೆ ಕರ್ಮವೇ ಫಲದಾತೃ ಎಂದು ಒಪ್ಪಿದರೆ, ಉದಾಹೃತವಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಶ್ರೀಹರಿಯ ಫಲದಾತೃತ್ವವನ್ನು ಬಿಡುವುದರಿಂದ 'ಶ್ರುತಹಾನ' ಎಲ್ಲಿಯೂ ಉಕ್ತವಾಗದ ಕರ್ಮಕ್ಕೆ ಫಲದಾತೃತ್ವವನ್ನು ಒಪ್ಪುವುದರಿಂದ 'ಅಶ್ರುತ ಕಲ್ಪನಾ' ಎಂಬ ಎರಡು ದೋಷಗಳು ಬರಬೇಕಾಗುವುದು. ಆದ್ದರಿಂದ ಶ್ರೀಹರಿಯೇ ಫಲವನ್ನು ಕೊಡುವವನು. ಅವನಲ್ಲಿ ಭಕ್ತಿಯು ಯುಕ್ತವಾಗಿದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

## ಓಂ ಫಲಮತ ಉಪಪತ್ತೇಃ ಓಂ

ಅತಃ=ಈಶ್ವರನಿಂದಲೇ ಫಲಂ=ಸ್ವರ್ಗಾದಿಫಲವು ದೊರೆಯುತ್ತದೆ. ಏಕೆಂದರೆ, ಉಪಪತ್ತೇಃ=ಈಶ್ವರನು ಚೇತನನಾದ್ದರಿಂದ ಅವನಿಗೆ ಫಲದಾನವು ಉಪಪನ್ನವಾಗುವುದರಿಂದ.

**ಇಲ್ಲಿಗೆ ತೃತೀಯಾಧ್ಯಾಯದ ದ್ವಿತೀಯ ಪಾದವು ಮುಗಿಯಿತು.**

# ತೃತೀಯಪಾದ

ಬ್ರಹ್ಮಸೂತ್ರಗಳ ಮೊದಲನೆಯ ಜಿಜ್ಞಾಸಾಧಿಕರಣದಲ್ಲಿ ಸಾಧಕನು ಜಿಜ್ಞಾಸೆಯನ್ನು ಮಾಡಬೇಕು ಎಂದು ನಿರ್ಣಯಿಸಲಾಗಿದೆ. ಜಿಜ್ಞಾಸೆಗೆ ಮತ್ತೊಂದು ಹೆಸರು ಉಪಾಸನೆ ಎಂದು. ಅದು ಶ್ರವಣ–ಮನನ–ಧ್ಯಾನರೂಪವಾದದ್ದು. ಅಂತಹ ಉಪಾಸನೆಯನ್ನು ಈ ಪಾದದಲ್ಲಿ ನಿರೂಪಣೆ ಮಾಡುತ್ತಿರುವುದರಿಂದ ಇದು ಉಪಾಸನಾ ಪಾದವೆಂದು ಪ್ರಸಿದ್ಧವಾಗಿದೆ. ಈ ಪಾದದ ಪೂರ್ವಪಕ್ಷ ಮತ್ತು ಸಿದ್ಧಾಂತ–ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ—

ಪೃಥಗ್‌ದೃಷ್ಟಿರಶಕ್ಯತ್ವಮನಿರ್ಣೀತಿಃ ಸಮುಚ್ಚಯಃ ।
ವಿಶೇಷದರ್ಶನಂ ಕಾರ್ಯಲೋಪೋ ನಾನೋಕ್ತಿರಾಶುತಾ ॥
ವಿಭ್ರಮೋಽಪ್ರಾಕೃತಿರ್ಲಿಂಗಮನವಸ್ಥಾಽವಿಶೇಷಿತಾ ।
ಅಪ್ರಯೋಜನತಾ ಜಾತಿಪ್ರಸಂಗೋಽದೂರಸಂಶ್ರಯಃ ।
ವಿಶಿಷ್ಟಕಾರಣಂ ಚೇಷ್ಟಾ ದೃಷ್ಟಿವೈರೂಪ್ಯಮುನ್ನತಿಃ ।
ಅನುಕ್ತಿರಪ್ರಯತ್ನತ್ವಂ ದೃಢಬಂಧಪರಾಭವೌ ॥
ಪುಂಸಾಮ್ಯಂ ಪ್ರಾಪ್ತಸಂತ್ಯಾಗಃ ಕಾರಣಾನಿರ್ಣಯೋ ಭ್ರಮಃ ।
ವಿಶೇಷದರ್ಶಿತಾಽಲಾಪೋ ಗುಣಸಾಮ್ಯಂ ಪೃಥಗ್‌ದೃಶಿಃ ॥
ಅಗಮ್ಯವರ್ತ್ಮ ಸಂಧಾನಮಿಷ್ಟಂ ಫಲಮಕಲ್ಪನಾ ।
ಶುದ್ಧವೈರೂಪ್ಯಮಂಗತ್ವಮವಿಶೇಷದೃಶಿಃ ಕ್ರಿಯಾ ॥
ಯುಕ್ತಯಃ ಪೂರ್ವಪಕ್ಷಸ್ಥಾಃ ।
ಸುಜ್ಞೇಯತ್ವಂ ವಿಧಿಕ್ರಿಯಾ ।
ಮಾಹಾತ್ಮ್ಯಮಲ್ಪಶಕ್ತಿತ್ವಂ ಯಥಾಯೋಗ್ಯಫಲಂ ಭವಃ ॥
ಫಲಸಾಮ್ಯಂ ವಿಶೇಷಶ್ಚ ಗುಣಾಧಿಕ್ಯಂ ಪ್ರಧಾನತಾ ।
ಯಥಾಶಕ್ತಿಕ್ರಿಯಾ ಸಂಧಿಃ ಪ್ರಮಾಣಬಲಮಾನತಿಃ ।
ಕಾರಣಂ ಕಾರ್ಯವೈಶೇಷ್ಯಂ ಸ್ವಭಾವೋ ವಸ್ತುದೂಷಣಮ್ ।
ಪ್ರತಿಕ್ರಿಯಾವಿರೋಧಶ್ಚ ಪ್ರತಿಸಂಧಿರನೂನತಾ ॥
ಸಂಸ್ಕಾರಪಾಟವಂ ಸ್ವೇಚ್ಛಾ ನಿಯತಿರ್ವಸ್ತುವೈಭವಮ್ ।

ವಿಶೇಷೋಕ್ತಿರಮಾನತ್ವಂ ಪ್ರಾಧಾನ್ಯಂ ಪ್ರೀತಿರಾಗಮಃ ॥
ಸುಸ್ಥಿರತ್ವಂ ಕೃತಪ್ರಾಪ್ತಿರನಾದಿಗುಣವಿಸ್ತರಃ ।
ಸಾಧನೋತ್ತಮತಾ ನಾನಾದೃಷ್ಟಿಃ ಶಿಷ್ಟಿರನೂನತಾ ॥
ಅವಿಘ್ನತ್ವಾವಿರೋಧೌ ಚ ಗುಣವೈಶೇಷ್ಯಮಾಗಮಃ ।
ಸಿದ್ಧಾಂತನಿರ್ಣಯೇ ಹ್ಯೇತಾ ಯುಕ್ತಯೋಽವ್ಯಾಹತಾಃ ಸದಾ ॥

ಸರ್ವವೇದಾಂತಾಧಿಕರಣದಲ್ಲಿ ಪೃಥಗ್‌ದೃಷ್ಟಿ, ಸುಜ್ಞೇಯತ್ವಗಳು ಪೂರ್ವ ಪಕ್ಷಯುಕ್ತಿ, ಸಿದ್ಧಾಂತಯುಕ್ತಿಗಳಾಗಿವೆ. ಅದರಂತೆ, ಉಪಸಂಹಾರಾಧಿಕರಣದಲ್ಲಿ ಅಶಕ್ಯತ್ವ, ವಿಧಿಕ್ರಿಯೆಗಳು, ಪ್ರಾಪ್ತ್ಯಧಿಕರಣದಲ್ಲಿ ಮತ್ತು ಸರ್ವಭೇದಾಧಿಕರಣದಲ್ಲಿ ಅನಿರ್ಣೀತಿ, ಮಹಾತ್ಮ್ಯಗಳು, ಆನಂದಾಧಿಕರಣದಲ್ಲಿ ಸಮುಚ್ಚಯ, ಅಲ್ಪಶಕ್ತಿತ್ವ ಗಳು, ಪ್ರಿಯಶಿರಸ್ತ್ವಾದ್ಯಧಿಕರಣದಲ್ಲಿ ವಿಶೇಷದರ್ಶನ, ಯಥಾಯೋಗ್ಯ ಫಲಗಳು, ಫಲಸಾಮ್ಯಾಧಿಕರಣದಲ್ಲಿ ಕಾರ್ಯಲೋಪ, ಭವಗಳು, ಆಧ್ಯಾನಾಧಿಕರಣದಲ್ಲಿ ನಾನೋಕ್ತಿ, ಫಲಸಾಮ್ಯಗಳು, ಆತ್ಮಗೃಹೀತ್ಯಧಿಕರಣದಲ್ಲಿ ಆಶುತಾ, ವಿಶೇಷಗಳು, ಅನ್ವಯಾಧಿಕರಣದಲ್ಲಿ ವಿಭ್ರಮ, ಗುಣಾಧಿಕ್ಯಗಳು, ಕಾರ್ಯಾಖ್ಯಾಧಿಕರಣದಲ್ಲಿ ಅಪ್ರಾಕೃತಿ, ಪ್ರಧಾನತಾಗಳು ಸಮಾನಾಧಿಕರಣದಲ್ಲಿ ಲಿಂಗ, ಯಥಾಶಕ್ತಿಕ್ರಿಯೆಗಳು ವಿಶೇಷಾಧಿಕರಣದಲ್ಲಿ ಅನವಸ್ಥಾ, ಸಂಧಿಗಳು, ಸಂಭೃತ್ಯಧಿಕರಣದಲ್ಲಿ ಅವಿಶೇಷಿತಾ, ಪ್ರಮಾಣ ಬಲಗಳು, ಪುರುಷವಿದ್ಯಾಧಿಕರಣದಲ್ಲಿ ಮತ್ತು ವೇದಾದ್ಯಧಿಕರಣದಲ್ಲಿ ಅಪ್ರಯೋಜನತಾ, ಆನತಿಗಳು ಮುಕ್ತೋಪಾಸನಾಧಿಕರಣದಲ್ಲಿ ಅತಿಪ್ರಸಂಗ, ಕಾರಣಗಳು, ಛಂದಾಧಿಕರಣದಲ್ಲಿ ವಿಶಿಷ್ಟಕಾರಣ, ಸ್ವಭಾವಗಳು, ಯಾವದಧಿ ಕಾರಾಧಿಕರಣದಲ್ಲಿ ಚೇಷ್ಟಾ, ವಸ್ತುದೂಷಣಗಳು, ಇಯದಾಮನನಾಧಿಕರಣದಲ್ಲಿ ದೃಷ್ಟವೈರೂಪ್ಯ, ಪ್ರತಿಕ್ರಿಯಾವಿರೋಧಗಳು, ವ್ಯತಿಹಾರಾಧಿಕರಣದಲ್ಲಿ ಉನ್ನತಿ, ಪ್ರತಿಸಂಧಿಗಳು, ಸತ್ಯಾಧಿಕರಣದಲ್ಲಿ ಅನುಕ್ತಿ, ಅನೂನತಾಗಳು, ಕಾಮಾಧಿಕರಣದಲ್ಲಿ ಅಪ್ರಯತ್ನತ್ವ, ಸಂಸ್ಕಾರಪಾಟವಗಳು, ತನ್ನಿರ್ಧಾರಣಾಧಿಕರಣದಲ್ಲಿ ದೃಢಬಂಧ, ಸ್ವೇಚ್ಛಾನಿಯತಿಗಳು, ಪ್ರಧಾನಾಧಿಕರಣದಲ್ಲಿ ಪರಾಭವ, ವಸ್ತುವೈಭವಗಳು, ಗುರುಪ್ರಸಾದಾಧಿಕರಣದಲ್ಲಿ ಪುಂಸಾಮ್ಯ, ವಿಶೇಷೋಕ್ತಿಗಳು ಪೂರ್ವವಿಕಲ್ಪಾಧಿ ಕರಣದಲ್ಲಿ ಪ್ರಾಪ್ತಸಂತ್ಯಾಗ, ಅಮಾನತ್ವಗಳು, ವಿದ್ಯಾಧಿಕರಣದಲ್ಲಿ ಕಾರಣ ನಿರ್ಣಯ, ಪ್ರಾಧಾನ್ಯಗಳು, ಅಬಾದಾಧಿಕರಣದಲ್ಲಿ ಭ್ರಮ, ಪ್ರೀತಿಗಳು, ಅನುಬಂಧಾದ್ಯಧಿಕರಣದಲ್ಲಿ ವಿಶೇಷದರ್ಶಿತಾ, ಆಗಮಗಳು, ದರ್ಶನಬೇದಾಧಿ

ಕರಣದಲ್ಲಿ ಆಲಾಪ, ಸುಸ್ಥಿರತ್ವಗಳು, ನಸಾಮಾನ್ಯಾಧಿಕರಣದಲ್ಲಿ ಗುಣಸಾಮ್ಯ, ಕೃತಪ್ರಾಪ್ತಿಗಳು, ತಾದ್ವಿಧ್ಯಾಧಿಕರಣದಲ್ಲಿ ಪೃಥಗ್‌ದೃಶಿ, ಅನಾದಿ ಗುಣವಿಸ್ತರಗಳು, ಏಕಾಧಿಕರಣದಲ್ಲಿ ಅಗಮ್ಯವರ್ತ್ಮ, ಸಾಧನೋತ್ತಮತಾಗಳು, ಅಂಗಾವಬದ್ಧಾಧಿ ಕರಣದಲ್ಲಿ ಸಂಧಾನ, ನಾನಾದೃಷ್ಟಿಗಳು, ಭೂಮಾಧಿಕರಣದಲ್ಲಿ ಇಷ್ಟಫಲ, ಶಿಷ್ಟಿಗಳು, ನಾನಾಧಿಕರಣದಲ್ಲಿ ಅಕಲ್ಪನಾ, ಅನೂನತಾಗಳು, ವಿಕಲ್ಪಾಧಿಕರಣದಲ್ಲಿ ಶುದ್ಧವೈರೂಪ್ಯ, ಅವಿಘ್ನತ್ವಗಳು, ಕಾಮ್ಯಾಧಿಕರಣದಲ್ಲಿ ಅಂಗತ್ವ, ಅವಿರೋಧಗಳು, ಯಥಾಶ್ರಯಭಾವಾಧಿಕರಣದಲ್ಲಿ ಅವಿಶೇಷದೃಶಿ, ಆಗಮಗಳು, ಸಹಾಶ್ರವಣಾಧಿ ಕರಣದಲ್ಲಿ ಕ್ರಿಯಾ, ಆಗಮಗಳು ಕ್ರಮವಾಗಿ ಪೂರ್ವಪಕ್ಷ ಮತ್ತು ಸಿದ್ಧಾಂತಸಾಧಕ ಯುಕ್ತಿಗಳಾಗಿವೆ.

## ಸರ್ವವೇದಾಧಿಕರಣ (3-3-1)

ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ ಎಂಬ ಸೂತ್ರದಿಂದ ಆರಂಭಗೊಳ್ಳುವ ಈ ಅಧಿಕರಣದಲ್ಲಿ ಬ್ರಹ್ಮನು ವಿಷಯ. ಬ್ರಹ್ಮಜ್ಞಾನ ಕ್ಕಾಗಿ ಶ್ರವಣಾದಿಗಳನ್ನು ಮಾಡಬೇಕು ಎಂದು ಸಾಮಾನ್ಯವಾಗಿ ಹೇಳಿರುವುದರಿಂದ, ಸಮಸ್ತಶಾಖೆಗಳಲ್ಲಿ ಪ್ರತಿಪಾದ್ಯನಾದ ಬ್ರಹ್ಮನನ್ನು ತಿಳಿಯುವುದೋ? ಅಥವಾ ತಮ್ಮ ತಮ್ಮ ಶಾಖೆಗಳಲ್ಲಿ ಮಾತ್ರ ಪ್ರತಿಪಾದ್ಯನಾದ ಬ್ರಹ್ಮನನ್ನು ತಿಳಿಯುವುದೋ? ಎಂಬ ಸಂಶಯ.

**ಪೂರ್ವಪಕ್ಷ**—ಸಾಧಕನು ಸಮಸ್ತಶಾಖೆಗಳನ್ನು ಅಧ್ಯಯನ ಮಾಡುವ ಆವಶ್ಯಕತೆಯಿಲ್ಲ. ಬೇರೆ ಬೇರೆ ಶಾಖೆಗಳಲ್ಲಿ ಬೇರೆ ಬೇರೆ ವಿಷಯಗಳನ್ನೇ ಪ್ರತಿಪಾದನೆ ಮಾಡಿರುತ್ತಾರೆ. ಒಂದುಕಡೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂದು ಸತ್ಯ, ಜ್ಞಾನ, ಅನಂತನನ್ನಾಗಿ ಬ್ರಹ್ಮನನ್ನು ಪ್ರತಿಪಾದಿಸಿದರೆ, ಮತ್ತೊಂದು ಶಾಖೆಯಲ್ಲಿ 'ಶ್ರೋತಾ ಮಂತಾ' ಎಂದು ಶ್ರೋತೃ, ಮಂತೃ ಸ್ವರೂಪನನ್ನಾಗಿ, 'ಯೋಽಯಮಾತ್ಮಾಽ ಪಹತಪಾಪ್ಮಾ' ಎಂದು ಬೇರೊಂದು ಶಾಖೆಯಲ್ಲಿ ಪಾಪರಹಿತನನ್ನಾಗಿ ಪ್ರತಿಪಾದಿಸಿರುವುದು ಕಂಡಿದೆ. ಸಮಸ್ತ ಶಾಖೆಗಳನ್ನು ಅಧ್ಯಯನ ಮಾಡಿ ಜ್ಞಾನಸಂಪಾದನೆ ಮಾಡಿಕೊಂಡವನಿಗೆ ಮಾತ್ರ ಧ್ಯಾನಮಾಡುವ ಅಧಿಕಾರವು ಪ್ರಾಪ್ತವಾಗುತ್ತದೆ ಎಂದು ಹೇಳುವುದಾದರೆ ಮಂದಮತಿಗಳಿಗೆ

ಧ್ಯಾನದಲ್ಲಿ ಅಧಿಕಾರವೇ ಇಲ್ಲವೆಂದಾಗಬೇಕಾದೀತು. ಆದ್ದರಿಂದ ತಮ್ಮ ತಮ್ಮ ಶಾಖೆಗಳಲ್ಲಿ ಹೇಳಿದ ರೀತಿಯಲ್ಲಿ ಬ್ರಹ್ಮನನ್ನು ತಿಳಿದರೆ ಸಾಕು. ಆದ್ದರಿಂದ ಸರ್ವಶಾಖಾನಿರ್ಣಾಯಕ ವಾದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಅಧ್ಯಯನ ಮಾಡಬೇಕಾಗಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಪೃಥಗ್‌ದೃಷ್ಟಿ'** (ಬೇರೆ ಬೇರೆ ಶಾಖೆಗಳಲ್ಲಿ ಬೇರೆ ಬೇರೆಯಾಗಿ ಹೇಳಿರುವುದು) ಎಂಬುದು. ಇದನ್ನು ಮತ್ತು **'ಸುಜ್ಞೇಯತ್ವ'** (ನಾನಾ ಶಾಖೆಗಳಿಂದ ಭಗವಂತನನ್ನು ತಿಳಿಯುವುದು) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**॥ ಹರಿಃ ಓಂ ॥ ನ ಚ ಪ್ರತಿಶಾಖಮುಚ್ಯಮಾನಾನಾಮರ್ಥಾನಾಂ ಪೃಥಕ್ತ್ವಾತ್ ತತ್ತಚ್ಛಾಖಿಭಿರೇವ ತತ್ರತತ್ರೋಕ್ತಂ ಜ್ಞೇಯಮಿತಿ ನಿಯಮಃ।**

**'ನಾನಾವೇದೈರಿತಿಹಾಸ್ಯೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚ।' ಇತಿ ಶ್ರುತೇಃ ಸುಷ್ಟು ಜ್ಞೇಯತ್ವಾದ್ ವಿಷ್ಣೋಃ ॥ ೧ ॥**

**ಭಾವಾರ್ಥ—** ಪ್ರತಿಯೊಂದು ಶಾಖೆಗಳಲ್ಲಿ ಹೇಳಲ್ಪಡುವ ವಿಷಯಗಳು ಬೇರೆ ಬೇರೆಯೇ ಆಗಿರುವುದರಿಂದ ಆಯಾಯಾ ಶಾಖೆಯವರು ತಮ್ಮ ತಮ್ಮ ಶಾಖೆಗಳಲ್ಲಿ ಉಕ್ತವಾದದ್ದನ್ನು ತಿಳಿಯಬೇಕು ಎಂದು ನಿಯಮವಿದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, 'ಅನೇಕ ವೇದಗಳಿಂದ, ಇತಿಹಾಸಗಳಿಂದ, ಪುರಾಣಗಳಿಂದ ಮತ್ತು ಯುಕ್ತಿಗಳಿಂದ ಭಗವಂತನೊಬ್ಬನೇ ಚೆನ್ನಾಗಿ ತಿಳಿಯಲ್ಪಡಬೇಕು' ಎಂಬ ಶ್ರುತಿಯಲ್ಲಿ ವಿಷ್ಣುವನ್ನು ಸುಜ್ಞೇಯನೆಂದು ಹೇಳಿರುವುದರಿಂದ.

**ವಿವರಣೆ—**ನಾನಾ ಶಾಖೆಗಳಲ್ಲಿ ಹೇಳಲ್ಪಟ್ಟ ವಿಚಿತ್ರವಾದ ಮಹಿಮಾವುಳ್ಳವನೆಂದು ಪರಮಾತ್ಮ ನನ್ನು ಚೆನ್ನಾಗಿ ತಿಳಿದಾಗ ಮಾತ್ರ ಮೋಕ್ಷಕ್ಕೆ ಸಾಧನವಾದ ಭಗವಂತನ ಪ್ರಸಾದವು ಲಭಿಸುವುದು. ಪ್ರತಿಯೊಂದು ಶಾಖೆಯಲ್ಲಿ ಪ್ರತಿಪಾದಿತವಾದ ವಿಷಯಗಳು ಬೇರೆಬೇರೆಯಾಗಿವೆ ಎಂಬ ಕಾರಣದಿಂದ ಬಿಡುವುದಾದರೆ ಒಂದೇ ಶಾಖೆಯಲ್ಲೇ 'ಕಂ ಬ್ರಹ್ಮ, ಖಂ ಬ್ರಹ್ಮ' ಎಂದು ಬ್ರಹ್ಮನನ್ನು ನಿರೂಪಣೆ ಮಾಡಿದ್ದರಿಂದ ಒಂದು ಶಾಖೆಯ ಅಧ್ಯಯನವನ್ನೂ ಬಿಡಬೇಕಾದೀತು. ಆದ್ದರಿಂದ ಸಾಧಕನು ಎಲ್ಲಾ ಶಾಖೆಗಳನ್ನು

ಅಧ್ಯಯನಮಾಡಬೇಕು. ವಸ್ತುತಃ ಮನುಷ್ಯರಿಗೆ ಸತ್, ಚಿತ್, ಆನಂದ, ಆತ್ಮ ಎಂಬ ನಾಲ್ಕು ಗುಣಗಳನ್ನು ಮಾತ್ರ ಉಪಾಸನೆ ಮಾಡುವ ಅಧಿಕಾರವಿದೆ. ಆದರೂ ಅದು ದೃಢವಾಗುವುದಕ್ಕೆ ಅವರವರ ಶಕ್ತಿಗನುಗುಣವಾಗಿ ಸರ್ವಶಾಖೆಗಳನ್ನೂ ಅಧ್ಯಯನ ಮಾಡಬೇಕೆಂದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ**

ಸರ್ವವೇದಾಂತಪ್ರತ್ಯಯಂ=ಎಲ್ಲ ವೇದಗಳ ಶ್ರವಣ ಮನನಾದಿಗಳಿಂದ ನಿರ್ಣೀತವಾದ ಜ್ಞಾನವಿಷಯನಾದವನು ಬ್ರಹ್ಮ. ಏಕೆಂದರೆ, ಚೋದನಾದ್ಯ ವಿಶೇಷಾತ್='ಆತ್ಮೇತ್ಯೇವೋಪಾಸೀತ' ಮುಂತಾದ ವಿಧಿಗಳು ಸರ್ವಾಧಿಕಾರಿ ಸಾಧಾರಣವಾದ್ದರಿಂದ.

## ಉಪಸಂಹಾರಾಧಿಕರಣ (3-3-2)

ಓಂ ಉಪಸಂಹಾರೋಽರ್ಥಾಭೇದಾದ್ ವಿಧಿಶೇಷವತ್ ಸಮಾನೇ ಚ ಓಂ ಎಂಬ ಸೂತ್ರದಿಂದ ಪ್ರಾರಂಭಗೊಳ್ಳುವ ಈ ಅಧಿಕರಣದಲ್ಲಿ ಪರಮಾತ್ಮನು ವಿಷಯ. 'ನಿದಿಧ್ಯಾಸಿತವ್ಯಃ' ಎಂಬ ವಾಕ್ಯವು ಸಾಮಾನ್ಯವಾಗಿ ಧ್ಯಾನವನ್ನು ವಿಧಾನ ಮಾಡುತ್ತಿದೆ. ಅದು ಎರಡು ವಿಧದಲ್ಲಿಯೂ ಕೂಡಬಹುದಾದ್ದರಿಂದ ಸಂಶಯ ಬರುತ್ತದೆ– ಎಲ್ಲ ಗುಣಗಳನ್ನು ಬುದ್ಧಿಯಲ್ಲಿ ಕ್ರೋಡೀಕರಿಸಿ ಧ್ಯಾನ ಮಾಡಬೇಕೋ? ಅಥವಾ ಬೇರೆ ರೀತಿಯಾಗಿಯೋ? ಎಂದು.

**ಪೂರ್ವಪಕ್ಷ—**ವೇದಗಳು ಅನಂತವಾಗಿವೆ. ಅವುಗಳಲ್ಲಿ ಹೇಳಲ್ಪಟ್ಟ ಗುಣಗಳನ್ನು ಒಂದೇ ಬುದ್ಧಿಯಲ್ಲಿ ಕ್ರೋಢೀಕರಿಸುವುದು ಅಸಾಧ್ಯವಾಗುತ್ತದೆ. ತೈಲಧಾರೆಯಂತೆ ಬುದ್ಧ್ಯಾರೋಹಪೂರ್ವಕವಾದ ಧ್ಯಾನವು ಅಸಾಧ್ಯ. ಧ್ಯಾನವು ಯುಕ್ತವಾಗುವುದಿಲ್ಲವೆಂದರೆ ಸಕಲ ವೇದಗಳ ಅಧ್ಯಯನದಿಂದ ಜ್ಞಾನಸಂಪಾದನೆ ಮಾಡುವುದು ವ್ಯರ್ಥ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅಶಕ್ಯತ್ವ' (ಸರ್ವಗುಣೋಪ

ಸಂಹಾರವು ಸಾಧ್ಯವಾಗುವುದಿಲ್ಲ) ಎಂಬುದು. ಇದನ್ನು ಮತ್ತು 'ವಿಧಿಕ್ರಿಯಾ' (ಸರ್ವಗುಣೋಪಸಂಹಾರವು ವಿಹಿತವಾದ ಕ್ರಿಯೆ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚಾಶಕ್ಯತಯಾ ಕಸ್ಯಾಪಿ ಸರ್ವಗುಣೋಪಸಂಹಾರೋ ನಾಸ್ತಿ ।**

**'ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಸ್ತೇನೈವ ವಿದ್ವಾನ್ ವಿಧಿ ಕೃನ್ನಾನ್ಯಥಾ ಸ್ಯಾತ್ ।'**

**ಇತಿ ಶ್ರುತೇರ್ವಿಹಿತಕ್ರಿಯಾಲೋಪಪ್ರಸಂಗಾತ್ ॥ ೨ ॥**

**ಭಾವಾರ್ಥ—** ಪರಮಾತ್ಮನ ಸರ್ವಗುಣಗಳನ್ನು ಒಂದೇ ಬುದ್ಧಿಯಲ್ಲಿ ಕ್ರೋಢೀಕರಿಸುವುದು ಯಾರಿಗೂ ಶಕ್ಯವಾಗುವುದಿಲ್ಲವಾದ್ದರಿಂದ ಸರ್ವಶಾಖೆಗಳ ಜ್ಞಾನ ವ್ಯರ್ಥವೆಂಬ ಪೂರ್ವಪಕ್ಷ ಸರಿಯಲ್ಲ. 'ಪರಮಾತ್ಮನ ಎಲ್ಲ ಗುಣಗಳನ್ನು ಯಾವಾಗಲೂ ಉಪಾಸನೆ ಮಾಡಬೇಕು. ಅದರಿಂದಲೇ ಜ್ಞಾನಿಯಾದವನು ವಿಹಿತ ವಾದದ್ದನ್ನು ಆಚರಿಸಿದಂತಾಗುವುದು. ಇಲ್ಲವಾದಲ್ಲಿ ವಿಹಿತವಾದದ್ದನ್ನು ಆಚರಿಸಿ ದಂತಾಗುವುದಿಲ್ಲ' ಎಂದು ಶ್ರುತಿಯು ಪ್ರತಿಪಾದಿಸುವುದರಿಂದ, ವಿಹಿತವಾದ ಕ್ರಿಯೆ ಗಳಿಗೆ ಲೋಪಬರಬೇಕಾಗುವುದು.

**ವಿವರಣೆ—** 'ಯಜೇತ' ಎಂಬ ವಿಧಿಯಿಂದ ವಿಹಿತವಾದ ಕರ್ಮಗಳನ್ನು ಹೇಗೆ ಮಾಡಲೇಬೇಕೋ ಅದರಂತೆ 'ಆತ್ಮೇತ್ಯೇವೋ ಪಾಸೀತ' ಎಂಬ ವಿಧಿಯಿಂದ ವಿಹಿತವಾದ ಸರ್ವಗುಣಗಳ ಉಪಸಂಹಾರ ಮಾಡಿ, ಉಪಾಸನೆಯನ್ನು ಮಾಡಲೇಬೇಕು. ಇಲ್ಲವಾದಲ್ಲಿ ವಿಹಿತ ಪರಿತ್ಯಾಗವೆಂಬ ದೋಷವು ಬರುತ್ತದೆ. ಸರ್ವಗುಣಗಳ ಉಪಸಂಹಾರ ಯಾರಿಗೂ ಶಕ್ಯವಾಗುವು ದಿಲ್ಲವೆಂದು ಹೇಳಲಾಗಿದೆಯಲ್ಲ? ಎಂದರೆ ಸರ್ವಜ್ಞರಾದ ಗುರುಗಳ ಅನುಗ್ರಹ ದಿಂದ ಅಶಕ್ಯವಾದದ್ದೂ ಸುಲಭವಾಗಿ ಮಾಡಲು ಸಾಧ್ಯವಾಗುತ್ತದೆ. 'ಉಪಾಸೀತ' ಎಂಬ ವಿಧಿಯಿರುವುದರಿಂದ ಸರ್ವಗುಣೋಪಸಂಹಾರವನ್ನು ಮಾಡುವ ಅಧಿ ಕಾರಿಗಳಿರುವುದೂ ಸಿದ್ಧವಾಗುತ್ತದೆ. ಇದನ್ನೇ ಮುಂದೆ ಪುರುಷ ವಿದ್ಯಾಧಿಕರಣದ ನ್ಯಾಯವಿವರಣದಲ್ಲಿ 'ಸರ್ವವಿದ್ಯೋಪಾಸಕಸ್ಯಾಧಿಕಾರಿಣೋ ಭಾವಾತ್' ಎಂದು

ತಿಳಿಸಿದ್ದಾರೆ. ಆದ್ದರಿಂದ ಕೆಲವರಿಗೆ ಸರ್ವಗುಣೋಪಸಂಹಾರ ಕೆಲವರಿಗೆ ಅಲ್ಪಗುಣೋಪಸಂಹಾರಗಳೆರಡನ್ನೂ ಒಪ್ಪಲಾಗಿದೆ.

**ಸೂತ್ರಾರ್ಥ—**

**ಓಂ ಉಪಸಂಹಾರೋಽರ್ಥಾಭೇದಾದ್**
**ವಿಧಿಶೇಷವತ್ ಸಮಾನೇ ಚ ಓಂ**

ಅರ್ಥಾಭೇದಾತ್=ಸಮಸ್ತವೇದಗಳಿಂದ ಪ್ರತಿಪಾದ್ಯವಾದ ಆನಂದಾದಿ ಗುಣಗಳ ಮತ್ತು ಅಪಹತಪಾಪ್ಮತ್ವವೇ ಮೊದಲಾದ ದೋಷಭಾವಗಳ ವಿಷಯದಲ್ಲಿ ಕೆಲವನ್ನು ಮಾತ್ರವೆಂದು ವಿಭಾಗ ಮಾಡದೆ ಉಪಸಂಹಾರಃ=ಒಂದೇ ಬುದ್ಧಿಯಲ್ಲಿ ಎಲ್ಲ ಗುಣಗಳ ಗ್ರಹಣರೂಪವಾದ ಧ್ಯಾನವು ವಿಧಿಶೇಷವತ್=ವಿಧಿವಿಹಿತವಾದ ಸಂಧ್ಯಾವಂದನಾದಿ ಕರ್ಮದಂತೆ ಶ್ರುತಿಯಲ್ಲಿ ವಿಹಿತವಾದ್ದರಿಂದ ಕರ್ತವ್ಯವೇ ಆಗಿದೆ. ಒಂದೇ ಬುದ್ಧಿಯಲ್ಲಿ ಆರೋಹಣವು ಸಮಾನೇ=ಬ್ರಹ್ಮನಲ್ಲಿ ಯೋಗ್ಯವಾದ ಗುಣಗಳಲ್ಲಿ ಮಾತ್ರ. ಚ=ಅಯೋಗ್ಯವಾದ ರೋದನಾದಿಗಳಲ್ಲಲ್ಲ.

## ಪ್ರಾಪ್ತ್ಯಧಿಕರಣ (3-3-3)

ಓಂ ಪ್ರಾಪ್ತೇಶ್ಚ ಸಮಂಜಸಂ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಸರ್ವಗುಣೋಪಸಂಹಾರ, ಅನುಪಸಂಹಾರಗಳು ವಿಷಯ. ಕರ್ತವ್ಯವೆಂದು ಹಿಂದೆ ಹೇಳಿದ್ದರೂ ಅದಕ್ಕೆ ವಿರೋಧವೂ ಕಾಣುತ್ತಿರುವುದರಿಂದ ಸಂಶಯ ಬರುತ್ತದೆ– ಸರ್ವಗುಣೋಪಸಂಹಾರವು ಯುಕ್ತವೋ? ಅಯುಕ್ತವೋ? ಎಂದು.

**ಪೂರ್ವಪಕ್ಷ**—ಸರ್ವಗುಣಗಳ ಉಪಸಂಹಾರ–ಅನುಪಸಂಹಾರಗಳು ಒಬ್ಬ ವ್ಯಕ್ತಿಗೇ ವಿರುದ್ಧವಾದವುಗಳು. 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ವಿಧಿಯು ಸರ್ವರಿಗೂ ಸಮಾನವಾಗಿದೆ. ಯಾರು ಎಷ್ಟು ಗುಣಗಳನ್ನು ಉಪಸಂಹಾರಮಾಡಬೇಕೆಂದು ಅಧಿಕಾರಿಯ ನಿರ್ಣಯವಾಗಿಲ್ಲ. ಆದ್ದರಿಂದ ಸರ್ವಪರಿಜ್ಞಾನ ಆವಶ್ಯಕವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅನಿರ್ಣೀತಿ' (ಯಾರಿಗೆ

ಸರ್ವಗುಣೋಪಸಂಹಾರವಿದೆ, ಯಾರಿಗೆ ಇಲ್ಲ ಎಂದು ನಿರ್ಣಯವಾಗದಿರುವುದು) ಎಂಬುದು. ಇದನ್ನು ಮತ್ತು 'ಮಾಹಾತ್ಮ್ಯ' (ಗುಣಪ್ರತಿಭಾಸವೆಂಬ ಯೋಗ್ಯತಾರೂಪಮಹಿಮೆ) ಎಂಬ ಸಿದ್ಧಾಂತಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ಕೇಷಾಂಚಿತ್ ಸರ್ವಗುಣೋಪಸಂಹಾರಸ್ಯ ಕರ್ತವ್ಯತ್ವೇ ಸರ್ವೇಷಾಮಪಿ ತಥಾ ಸ್ಯಾತ್। ಅನೇನ ನೋಪಸಂಹರ್ತವ್ಯಾ ಅನೇನೋಪಸಂಹರ್ತವ್ಯಾ ಇತ್ಯನಿರ್ಣೀತೇರಿತಿ ನ ಮಂತವ್ಯಮ್।**

**'ಯಸ್ಯ ಯಾವದ್ ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ।**
**ಯುಗಪತ್ ಸ್ವಭುಜೌ ಯದ್ವದ್ ಧ್ಯಾಯೇತ್ ತಾವತ ಏವ ಸಃ।**
**ಯುಗಪದ್ ಬ್ರಹ್ಮಣಃ ಸರ್ವೇ ಭಾಸಂತೇ ಹಿ ಗುಣಾ ಹರೇಃ।**
**ತದನ್ಯೇಷಾಂ ಯಥಾಯೋಗ್ಯಂ ಸ್ವಮಾಹಾತ್ಮ್ಯಾನುಸಾರತಃ॥'**

**ಇತಿ ಶ್ರುತೇರ್ಯುಗಪದ್ಗುಣಪ್ರತೀತ್ಯಾದಿಮಾಹಾತ್ಮ್ಯನ್ನಿರ್ಣಯೋಪಪತ್ತೇಃ ॥ ೩ ॥**

**ಭಾವಾರ್ಥ—** ಕೆಲವರು ಸರ್ವಗುಣೋಪಸಂಹಾರವನ್ನು ಮಾಡಬೇಕೆಂದರೆ ಸರ್ವರಿಗೂ ಸರ್ವಗುಣೋಪಸಂಹಾರವು ಬರಬೇಕಾದೀತು. ಏಕೆಂದರೆ 'ಇವನು ಸರ್ವಗುಣೋಪಸಂಹಾರವನ್ನು ಮಾಡಬೇಕು, ಇವನು ಸರ್ವಗುಣೋಪಸಂಹಾರವನ್ನು ಮಾಡಬಾರದು' ಎಂಬಿವೇ ಮೊದಲಾದ ನಿರ್ಣಯವಿಲ್ಲದಿರುವುದರಿಂದ ಎಂದು ಆಕ್ಷೇಪಿಸಬಾರದು. ಏಕೆಂದರೆ, 'ತನ್ನ ದೇಹದ ಎಡ ಬಲಭುಜಗಳು ಒಟ್ಟಿಗೆ ಸ್ಪಷ್ಟವಾಗಿ ತೋರುವಂತೆ, ಯಾವಾತನಿಗೆ ಎಷ್ಟು ಗುಣಗಳು ಸ್ಪಷ್ಟವಾಗಿ ಉಪಾಸನೆ ಮಾಡುವಾಗ ಪ್ರತಿಭಾಸವಾಗುತ್ತವೋ ಅವನು ಅಷ್ಟುಗುಣಗಳನ್ನು ಉಪಾಸನೆ ಮಾಡಬೇಕು. ಚತುರ್ಮುಖನಿಗೆ ಶ್ರೀಹರಿಯ ಎಲ್ಲಾ ಗುಣಗಳು ಒಟ್ಟಿಗೇ ಸ್ಪಷ್ಟವಾಗಿ ತೋರುತ್ತವೆ. ಚತುರ್ಮುಖನನ್ನು ಬಿಟ್ಟು ಉಳಿದವರಿಗೆ ಅವರವರ ಯೋಗ್ಯತೆಗನುಗುಣವಾಗಿ ತಮ್ಮ ಮಹಿಮೆಯನ್ನನುಸರಿಸಿ ಗುಣಗಳು ತೋರುತ್ತವೆ' ಎಂದು ಶ್ರುತಿಯಿರುವುದರಿಂದ. ಒಟ್ಟಿಗೇ ಗುಣಗಳು ತೋರುವಿಕೆ ಮುಂತಾದ ಮಹಿಮೆಯಿಂದ ನಿರ್ಣಯವಾಗುತ್ತದೆ.

**ವಿವರಣೆ**—ಈ ಅಧಿಕಾರಿಯು ಇಷ್ಟೇ ಗುಣಗಳನ್ನು ಉಪಸಂಹಾರ ಮಾಡಬೇಕು ಎಂಬ ನಿರ್ಣಯವಿಲ್ಲದಿದ್ದರೂ ಯಾರಿಗೆ ಎಷ್ಟು ಗುಣಗಳು ಯೋಗ್ಯತೆಗನುಸಾರ ಪ್ರತಿಭಾಸವಾಗುತ್ತವೋ ಅಷ್ಟು ಗುಣಗಳನ್ನು ಉಪಾಸನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

'ಗುಣಪ್ರತೀತ್ಯಾದಿ ಮಾಹಾತ್ಮ್ಯಾದ್' ಎಂಬಲ್ಲಿರುವ ಆದಿಶಬ್ದದಿಂದ ಯೋಗ್ಯ ಉಪದೇಶಕರಾದ ಸರ್ವಜ್ಞರಾದ ಗುರುಗಳ ಮಾತನ್ನೂ ಗ್ರಹಿಸಬೇಕು. ಅವರ ಮಾತಿನಿಂದ ಎಷ್ಟು ಗುಣಗಳು ಪ್ರತಿಭಾಸವಾಗುತ್ತವೋ ಅಷ್ಟೂ ಗುಣಗಳನ್ನು ಉಪಸಂಹಾರ ಮಾಡಬೇಕೆಂದೂ ಸಿದ್ಧವಾಗುವುದು. ಸರ್ವಗುಣೋಪ ಸಂಹಾರ ಕ್ಕಾಗಿ ಸರ್ವವೇದಗಳ ಪರಿಜ್ಞಾನ ಆವಶ್ಯಕವಾಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಪ್ರಾಪ್ತೇಶ್ಚ ಸಮಂಜಸಂ ಓಂ

ಗುಣಗಳ ಉಪಸಂಹಾರ, ಅನುಪಸಂಹಾರಗಳೆರಡೂ ಕರ್ತವ್ಯವೆಂಬುದು ಸಮಂಜಸಂ=ಯುಕ್ತವಾಗುತ್ತದೆ. ಏಕೆಂದರೆ, ಪ್ರಾಪ್ತೇಃ=ಆಯಾಯಾ ಪುರುಷರ ಯೋಗ್ಯತೆಗೆ ಅನುಗುಣವಾಗಿರುವುದರಿಂದ ಅವಿರೋಧವು ಪ್ರಾಪ್ತವಾಗುತ್ತದೆ.

## ಸರ್ವಾಭೇದಾಧಿಕರಣ (3-3-4)

ಓಂ ಸರ್ವಾಭೇದಾದನ್ಯತ್ರೇಮೇ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಸರ್ವಗುಣೋಪಸಂಹಾರವೇ ವಿಷಯ. ಎರಡು ವಿಧ ವಾಗಿಯೂ ಕಂಡಿರುವುದರಿಂದ ಸರ್ವಗುಣೋಪಸಂಹಾರವನ್ನು ಮಾಡಬೇಕೋ? ಬೇಡವೋ? ಎಂದು ಸಂದೇಹ.

**ಪೂರ್ವಪಕ್ಷ**—'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯಲ್ಲಿ ಫಲವು ಸಮಾನವಾಗಿ ಶ್ರುತವಾಗಿದೆ. ಸರ್ವಗುಣೋಪಸಂಹಾರ ಮಾಡದವನಿಗಿಂತ ಫಲವಿಶೇಷವೇನೂ ಸರ್ವಗುಣೋಪಸಂಹಾರ ಮಾಡಿದವನಿಗೆ ಶ್ರುತವಾಗಿಲ್ಲ. ಫಲದಲ್ಲಿ ಏನೂ ವ್ಯತ್ಯಾಸವಿಲ್ಲದಿರುವುದರಿಂದ ಸರ್ವಗುಣೋಪಸಂಹಾರವನ್ನು

ಮಾಡುವ ಆವಶ್ಯಕತೆಯಿಲ್ಲ. ಆದ್ದರಿಂದ ಸರ್ವವೇದಪರಿಜ್ಞಾನವೂ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅನಿರ್ಣೀತಿ'** (ಫಲವಿಶೇಷವನ್ನು ನಿರ್ಣಯಿಸದಿರುವುದು) ಎಂಬುದು. ಇದನ್ನು ಮತ್ತು **'ಮಾಹಾತ್ಮ್ಯ'** (ಬ್ರಹ್ಮಾದಿಗಳಿಗೆ ಸರ್ವಗುಣೋಪಸಂಹಾರವೆಂಬ ಮಹಿಮೆಯನ್ನು ಹೇಳಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಫಲಾನಿರ್ಣೀತಿಃ । ಮಾಹಾತ್ಮ್ಯೇನೈವಾನ್ಯತ್ ಫಲಂ ಮಹತಾಮಿತಿ ನಿರ್ಣಯೋಪಪತ್ತೇಃ ॥ ೪ ॥**

**ಭಾವಾರ್ಥ—** ಸರ್ವಗುಣೋಪಸಂಹಾರವನ್ನು ಮಾಡಿದವನಿಗೆ ಫಲವಿಶೇಷವನ್ನು ನಿರ್ಣಯಿಸದಿರುವುದರಿಂದ ಸರ್ವಗುಣೋಪಸಂಹಾರದ ಆವಶ್ಯಕತೆಯಿಲ್ಲ ಎಂದು ಆಕ್ಷೇಪಿಸಬಾರದು. ಶ್ರೇಷ್ಠರಾದ ಬ್ರಹ್ಮಾದಿಗಳಿಗೆ ಸರ್ವಗುಣೋಪಸಂಹಾರವನ್ನು ಹೇಳಿರುವ ಮಹಿಮೆಯಿಂದಲೇ ಬೇರೆ ಫಲವಿದೆ ಎಂದು ನಿರ್ಣಯಿಸಬಹುದಾಗಿದೆ.

**ವಿವರಣೆ—**ಸರ್ವಗುಣೋಪಸಂಹಾರವೆಂಬ ಮಹಿಮೆಯನ್ನು ಬ್ರಹ್ಮಾದಿದೇವತೆಗಳಿಗೆ ಶ್ರುತಿಯು ವಿಧಿಸಿದೆ. ಆದರಿಂದಲೇ ಸರ್ವಗುಣೋಪ ಸಂಹಾರವನ್ನು ಮಾಡದವನಿಗಿಂತ ಬೇರೆ ಫಲ ಎಂದರೆ ಅಧಿಕವಾದ ಫಲವಿದೆ ಎಂದು ಸಿದ್ಧವಾಗುತ್ತದೆ. ಇಲ್ಲವಾದಲ್ಲಿ ಸರ್ವಗುಣೋಪಸಂಹಾರವನ್ನು ವಿಧಿಸುವ ವಾಕ್ಯವು ವ್ಯರ್ಥವಾಗಿ (ಫಲವಿಲ್ಲದಿರುವುದರಿಂದ) ಅಪ್ರಮಾಣವಾಗ ಬೇಕಾಗು ತ್ತದೆ. ಮತ್ತು ಅತಿಶಯವಾದ ಫಲವಿಲ್ಲದಿದ್ದರೂ ಸರ್ವಗುಣೋಪ ಸಂಹಾರವನ್ನು ಮಾಡುವ ಬ್ರಹ್ಮಾದಿಗಳು ಪ್ರೇಕ್ಷಾವಂತರಾಗದಿರಬೇಕಾದೀತು. ಆದ್ದರಿಂದ ಸರ್ವವೇದ ಪರಿಜ್ಞಾನ ಅತ್ಯವಶ್ಯವಾಗಿದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಸರ್ವಾಭೇದಾದನ್ಯತ್ರೇಮೇ ಓಂ**

ಸರ್ವಾಭೇದಾತ್=ಸಮಸ್ತಗುಣಗಳನ್ನು ವಿಭಾಗವಿಲ್ಲದೆ ಉಪಸಂಹಾರ

ಮಾಡಿ ಉಪಾಸನೆ ಮಾಡುವವರಾದ್ದರಿಂದ ಇಮೇ=ಸರ್ವಗುಣೋಪಸಂಹಾರ ಮಾಡುವ ಬ್ರಹ್ಮಾದಿಗಳು ಅನ್ಯತ್ರ=ಸರ್ವಗುಣೋಪಸಂಹಾರವನ್ನು ಮಾಡದೇ ಇರುವವರಿಗಿಂತ ವಿಲಕ್ಷಣಫಲವನ್ನು ಹೊಂದುವರು.

## ಆನಂದಾಧಿಕರಣ (3-3-5)

ಓಂ ಆನಂದಾದಯಃ ಪ್ರಧಾನಸ್ಯ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಪರಮಾತ್ಮನ ಗುಣಗಳೇ ವಿಷಯ. ಉಪಾಸನೆಯನ್ನು ವಿಧಾನಮಾಡುವ ಶ್ರುತಿಯಲ್ಲಿ ವಿಶೇಷವನ್ನು ಹೇಳದಿರುವುದರಿಂದ ಉಪಾಸ್ಯವಾದ ಗುಣಗಳ ಸಂಖ್ಯೆಯು ಕ್ಲೃಪ್ತವಾಗಿದೆಯೋ? ಇಲ್ಲವೋ? ಎಂದು ಸಂದೇಹ.

**ಪೂರ್ವಪಕ್ಷ—**ಯಾವ ಯಾವ ಸಾಧಕನು ಎಷ್ಟೆಷ್ಟು ಗುಣಗಳನ್ನು ಉಪಾಸನೆ ಮಾಡಬೇಕೆಂದು ನಿರ್ಣಾಯಕ ಪ್ರಮಾಣವಿಲ್ಲ. ಸ್ವೇಚ್ಛೆಯಿಂದ ಉಪಾಸನೆಯನ್ನು ಮಾಡುವುದರಿಂದ ಗುಣಸಮುಚ್ಚಯ ಮಾಡುವಾಗ ತನ್ನ ಉಪಾಸನೆಗೆ ಯೋಗ್ಯ, ಅಯೋಗ್ಯವಾದ ಗುಣಗಳ ಸಮುಚ್ಚಯವೂ ಆಗುತ್ತದೆ. ಅನೇಕ ರತ್ನಗಳನ್ನು ರಾಶಿಯಾಗಿ ಕೂಡಿಟ್ಟಿರುವ ಸಂದರ್ಭದಲ್ಲಿ ಸ್ವೇಚ್ಛೆಯಿಂದ ತೆಗೆದುಕೊಂಡು ಹೋಗಲು ಅವಕಾಶವಿದ್ದಾಗ ರತ್ನಗಳೊಂದಿಗೆ ವಿಜಾತೀಯವಾದ ವೈಢೂರ್ಯ ಮುಂತಾದದ್ದನ್ನೂ ತೆಗೆದುಕೊಂಡು ಹೋಗುವುದು ಕಂಡಿದೆ. ಆದ್ದರಿಂದ ಧ್ಯಾನವು ಯುಕ್ತವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಮುಚ್ಚಯ' (ಸರ್ವಗುಣೋಪ ಸಂಹಾರ) ಎಂಬುದು. ಇದನ್ನು ಮತ್ತು 'ಅಲ್ಪಶಕ್ತಿತ್ವ' (ಮನುಷ್ಯರಿಗೆ ಸರ್ವ ಗುಣೋಪಸಂಹಾರವನ್ನು ಮಾಡುವ ಶಕ್ತಿಯಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ಆನಂದಾದೀನಾಂ ಕೇಷಾಂಚಿತ್ ಸಮುಚ್ಚಯೇ ಪ್ರಾಪ್ತೇ ಸರ್ವಗುಣ-ಸಮುಚ್ಚಯಃ ಸರ್ವೇಷಾಂ ಸ್ಯಾದಿತಿ ನ ಮಂತವ್ಯಮ್ । ಅಲ್ಪಶಕ್ತಿತ್ವಾತ್ ತೇಷಾಂ ಪುಂಸಾಮ್ ॥ ೫ ॥**

**ಭಾವಾರ್ಥ—** ಉಪಾಸಕನು ಆನಂದವೇ ಮೊದಲಾದ ಕೆಲವು ಗುಣಗಳನ್ನು

ಸಮುಚ್ಚಯಮಾಡುವಾಗ ಎಲ್ಲ ಗುಣಗಳನ್ನೂ (ಅಯೋಗ್ಯವಾದ ಗುಣಗಳನ್ನೂ) ಸಮುಚ್ಚಯ ಮಾಡಬೇಕಾಗುವುದು ಎಂದು ಆಕ್ಷೇಪಿಸಬಾರದು. ಏಕೆಂದರೆ, ಉಪಾಸಕರಾದ ಪುರುಷರಿಗೆ ಅಲ್ಪಶಕ್ತಿಯಿರುವುದರಿಂದ.

**ವಿವರಣೆ**—ಮನುಷ್ಯರಿಗೆ ಸರ್ವಗುಣೋಪಾಸನೆಯನ್ನು ಮಾಡುವ ಶಕ್ತಿಯಿಲ್ಲದಿರುವುದರಿಂದ ಪರಮಾತ್ಮನ ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕೇ ಗುಣಗಳನ್ನು ಉಪಾಸನೆ ಮಾಡಬೇಕು. 'ಯಂ ಯಂ ಯಥಾ ಉಪಾಸತೇ ತದೇವ ಭವತಿ' ಎಂಬ ಪ್ರಮಾಣದಂತೆ, ಪರಮಾತ್ಮನನ್ನು 'ಸತ್'=ದೋಷರಹಿತ ಎಂದು ಉಪಾಸನೆ ಮಾಡುವುದರಿಂದ ಉಪಾಸಕನಿಗೆ ಜನನರಾಹಿತ್ಯವು, 'ಚಿತ್' ಎಂದು ಉಪಾಸನೆ ಮಾಡುವುದರಿಂದ ತನಗೆ ಯೋಗ್ಯವಾದ ಜ್ಞಾನ, 'ಆನಂದ' ಎಂದು ಉಪಾಸನೆ ಮಾಡಿದ್ದರಿಂದ ಮೋಕ್ಷದಲ್ಲಿಯೂ ಆನಂದ 'ಆತ್ಮಾ'=ಸ್ವಾಮಿ ಎಂದು ಉಪಾಸನೆ ಮಾಡಿದ್ದರಿಂದ ಸ್ವಾವರ ನಿಯಾಮಕತ್ವವು ಪ್ರಾಪ್ತವಾಗುತ್ತದೆ. ಇವುಗಳು ಎಲ್ಲರಿಗೂ ಅಪೇಕ್ಷಿತವೇ ಆಗಿವೆ. ರತ್ನಗಳನ್ನು ರಾಶಿಯಾಗಿ ಮಾಡಿಟ್ಟಲ್ಲಿ 'ನೀವು ಈ ಜಾತಿಯ ಇಷ್ಟೇ ರತ್ನಗಳನ್ನೇ ತೆಗೆದುಕೊಂಡು ಹೋಗಬೇಕು. ಬೇರೆಯವನ್ನಲ್ಲ' ಎಂದು ನಿಯಮ ಮಾಡಿದಾಗ ಬೇರೇ ರತ್ನಗಳನ್ನು ತೆಗೆದುಕೊಂಡು ಹೋಗುವುದಿಲ್ಲ. ಆದರಂತೆ, ನಾಲ್ಕು ಗುಣಗಳನ್ನು ಮಾತ್ರ ಸಮುಚ್ಚಯ ಮಾಡಲು ಶಕ್ತಿಯಿರುವುದರಿಂದ ಬೇರೆ ಗುಣವನ್ನು ಸಮುಚ್ಚಯ ಮಾಡಬಾರದು ಎಂದು ಸಿದ್ಧತವಾಗುತ್ತದೆ.

**ಸೂತ್ರಾರ್ಥ—**

### ಓಂ ಆನಂದಾದಯಃ ಪ್ರಧಾನಸ್ಯ ಓಂ

ಆನಂದಾದಯಃ=ಆನಂದ, ಜ್ಞಾನ, ದೋಷರಹಿತತ್ವ, ಸ್ವಾಮಿತ್ವ ಎಂಬ ನಾಲ್ಕು ಗುಣಗಳು ಪ್ರಧಾನಸ್ಯ=ಮೋಕ್ಷಕ್ಕೋಸ್ಕರ ಎಲ್ಲ ಮುಮುಕ್ಷುಗಳಿಂದಲೂ ಧ್ಯಾನಿಸಲ್ಪಡಬೇಕು.

## ಪ್ರಿಯಶಿರಸ್ತ್ವಾದ್ಯಧಿಕರಣ (3-3-6)

ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ ಎಂಬ

ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಪ್ರಿಯಶಿರಸ್ತ್ವಾದಿಗಳೇ ವಿಷಯ. ಎರಡು ವಿಧವಾದ ಗುಣಗಳು ಪ್ರತೀತವಾದ್ದರಿಂದ ಎಲ್ಲ ಸಾಧಕರಿಗೂ ಪ್ರಿಯಶಿರಸ್ತ್ವಾದಿಗುಣಗಳು ಉಪಾಸ್ಯವೋ? ಅಲ್ಲವೋ? ಎಂದು ಸಂದೇಹ.

**ಪೂರ್ವಪಕ್ಷ**—ಪರಮಾತ್ಮನನ್ನು ಆನಂದರೂಪನೆಂದು ಉಪಾಸನೆ ಮಾಡಬೇಕೆಂದು ಹಿಂದಿನ ಅಧಿಕರಣದಲ್ಲಿ ಪ್ರತಿಪಾದಿಸಿದ್ದಾರೆ. ಪ್ರಿಯ, ಮೋದ, ಪ್ರಮೋದಗಳು ಆನಂದದ ವೈಚಿತ್ರ್ಯಗಳೇ ಆಗಿವೆ. 'ತಸ್ಯ ಪ್ರಿಯಮೇವ ಶಿರಃ' ಇತ್ಯಾದಿಯಾಗಿ ತೈತ್ತರೀಯದಲ್ಲಿ ಹೇಳಿರುವಂತೆ ಭಗವಂತನ ಶಿರಸ್ಸು ಪ್ರಿಯರೂಪ, ದಕ್ಷಿಣಬಾಹು ಮೋದರೂಪ, ಉತ್ತರಬಾಹು ಪ್ರಮೋದ, ಆನಂದವೇ ಹೃದಯ ಎಂದು ಉಪಾಸನೆ ಮಾಡಬೇಕು. ಆವಾಗಲೇ ಆನಂದಾದಿಗಳನ್ನು ಸರಿಯಾಗಿ ಉಪಾಸನೆ ಮಾಡಿದಂತಾಗುವುದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶೇಷ ದರ್ಶನ' (ಆನಂದದಲ್ಲಿ ವೈಚಿತ್ರ್ಯವು ಶ್ರುತಿಸಿದ್ಧವಾಗಿರುವುದು) ಎಂಬುದು. ಇದನ್ನು ಮತ್ತು 'ಯಥಾ ಯೋಗ್ಯಫಲ' (ತನಗೆ ಯೋಗ್ಯವಾದ ಗುಣಗಳನ್ನು ಉಪಾಸನೆ ಮಾಡಿದರನೇ ಫಲ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ಪ್ರಿಯಶಿರಸ್ತ್ವಾದೀನಾಮಾನಂದಾದಿವಿಶೇಷತ್ವೇನೈವ ದರ್ಶನಾತ್ ತೇಷಾಮಪಿ ಸರ್ವೋಪಸಂಹಾರ್ಯತ್ವಮಿತಿ ನ ಮಂತವ್ಯಮ್ ।**

**'ಯಥಾಯೋಗ್ಯಾನ್ ಗುಣಪೂಗಾನುಪಾಸ್ಯ ಫಲಂ ಭವೇನ್ಮುಕ್ತಿಗಂ ನಾನ್ಯಥಾ ಸ್ಯಾತ್ ।**

**ನಿತ್ಯೈಕಾಗ್ರ್ಯವ್ಯಂಗ್ಯತಾಹೇತುತಚ್ಚ ಸಾಕ್ಷಾದ್ ದೃಶಿರ್ನೋ ತದ್ವಿಶೇಷೈಃ ಸ್ಮೃತೈಶ್ಚ ॥'**

**ಇತಿ ಶ್ರುತೇಃ ಸ್ವಯೋಗ್ಯಗುಣೈರೇವ ಫಲಭಾವಾತ್ ॥ ೬ ॥**

**ಭಾವಾರ್ಥ—** ಪ್ರಿಯಶಿರಸ್ತ್ವ ಮೊದಲಾದ ಗುಣಗಳು ಆನಂದದ ಪ್ರಭೇದವೇ ಆಗಿವೆ ಎಂದು ಶ್ರುತಿಯಲ್ಲಿ ಕಂಡದ್ದರಿಂದ ಆ ಗುಣಗಳನ್ನು ಸರ್ವರೂ ಉಪಸಂಹಾರ ಮಾಡಬೇಕು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, 'ತಮಗೆ

ಯೋಗ್ಯವಾದ ಗುಣಸಮೂಹವನ್ನೇ ಉಪಾಸನೆ ಮಾಡಿ ಮುಕ್ತಿಯಲ್ಲಿ ಫಲವನ್ನು ಪಡೆಯಬೇಕು. ಇಲ್ಲದಿದ್ದರೆ ಅನರ್ಥವೇ ಆದೀತು. (ಯೋಗ್ಯವಲ್ಲದ ಗುಣಗಳನ್ನು ಉಪಾಸನೆ ಮಾಡಿದರೆ ಫಲವು ಲಭಿಸುವುದಿಲ್ಲ) ಏಕಾಗ್ರತೆಗೆ ಭಂಗವನ್ನುಂಟು ಮಾಡುವುದರಿಂದಲೂ ವಿಶೇಷಗುಣಗಳು ಸ್ಮೃತಿಸಿದ್ಧವೇ ಆಗಿದ್ದರೂ ಅಪರೋಕ್ಷ ಜ್ಞಾನಿಗೂ ಫಲವನ್ನುಂಟು ಮಾಡಲಾರವು' ಎಂದು ಶ್ರುತಿಯಿರುವುದರಿಂದ ತನಗೆ ಯೋಗ್ಯವಾದ ಗುಣಗಳಿಂದಲೇ ಫಲವು ಪ್ರಾಪ್ತವಾಗುತ್ತದೆ.

**ವಿವರಣೆ**—ತನಗೆ ಯೋಗ್ಯವಾದ ಗುಣಗಳನ್ನುಪಾಸನೆ ಮಾಡಿದರೇನೇ ಫಲ. ಗುಣಗಳ ವಿಶೇಷಗಳು ಸ್ಮೃತಿಯಿಂದ ಸಿದ್ಧವಾಗಿದ್ದರೂ ಅವುಗಳನ್ನು ಉಪಾಸನೆ ಮಾಡುವಾಗ ಏಕಾಗ್ರತೆಗೆ ಭಂಗ ಬರುತ್ತದೆ. ಇದು ಅಪರೋಕ್ಷಜ್ಞಾನಿಗೂ ತಪ್ಪಿದ್ದಲ್ಲ ಎಂದಮೇಲೆ ಉಳಿದವರ ಪಾಡೇನು? ಅಷ್ಟೇ ಅಲ್ಲದೆ, 'ಸೈಷಾऽऽನಂದಸ್ಯ ಮೀಮಾಂಸಾ ಭವತಿ' ಎಂದು ಶ್ರುತಿಯು ಫಲರೂಪವಾದ ಆನಂದದಲ್ಲಿ ತಾರತಮ್ಯವನ್ನು ತಿಳಿಸುತ್ತಿದೆ. ಆದ್ದರಿಂದ ಸಾಧನವಾದ ಉಪಾಸನೆಯಲ್ಲಿಯೂ ತಾರತಮ್ಯವಿರಬೇಕಷ್ಟೇ! ಇದರಿಂದ ಎಲ್ಲರಿಗೂ ಸರ್ವಗುಣೋಪಸಂಹಾರ ವಿಲ್ಲವೆನ್ನುವುದು ಸ್ಪಷ್ಟ.

ನಮಗೆ ಯೋಗ್ಯವಾದ ಗುಣಗಳನ್ನು ಹೇಗೆ ತಿಳಿಯುವುದು? ಎಂದರೆ ಏಕಾಗ್ರವಾಗಿ ಉಪಾಸನೆ ಮಾಡುವಾಗ ಯಾವ ಗುಣಗಳು ಅಭಿವ್ಯಕ್ತವಾಗುವವೋ ಅವುಗಳು ಯೋಗ್ಯವಾದವುಗಳು ಹೊರತು ಅವುಗಳ ಅವಾಂತರ ಪ್ರಭೇದಗಳಲ್ಲ. ಬ್ರಾಹ್ಮಣನಾಗಿದ್ದರೆ ಸಾಕು. ಅವನು ಶ್ರಾದ್ಧಕ್ಕೆ ಅರ್ಹನಾಗುತ್ತಾನೆ. ಅವನಲ್ಲಿ ವಿಶೇಷವನ್ನು ಹುಡುಕುವುದು ಹೇಗೆ ವ್ಯರ್ಥವೋ ಅದರಂತೆ ಯೋಗ್ಯವಾದ ನಾಲ್ಕು ಗುಣಗಳನ್ನೇ ಉಪಾಸನೆ ಮಾಡಬೇಕು. ಹೊರತು ಇತರ ಗುಣಗಳನ್ನು ಅಲ್ಲ. ಅವುಗಳ ಪ್ರಭೇದಗಳನ್ನು ಅಲ್ಲ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

### ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ

ಪ್ರಿಯಶಿರಸ್ತ್ವಾದ್ಯಪ್ರಾಪ್ತಿಃ='ತಸ್ಯ ಪ್ರಿಯಮೇವ ಶಿರಃ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟ ಪ್ರಿಯಶಿರಸ್ತ್ವಾದಿಗುಣಗಳ ಉಪಾಸನೆಯು ಯೋಗ್ಯತೆಯಿಲ್ಲದಿರುವುದ

ರಿಂದ ಎಲ್ಲ ಸಾಧಕರಿಗೂ ಇಲ್ಲ. ಹಿ=ಏಕೆಂದರೆ, ಭೇದೇ=ಮೋಕ್ಷರೂಪಫಲದ ತಾರತಮ್ಯವಿಷಯದಲ್ಲಿ ಹಿ=ಪ್ರಸಿದ್ಧವಾದ ಸ್ಮೃತಿ ಇದೆ. ಭೇದೇ=ಫಲಭೇದಕ್ಕೆ ಉಪಚಯಾಪಚಯೌ=ಗುಣೋಪಾಸನೆಯಲ್ಲಿ ವೃದ್ಧಿಹ್ರಾಸಗಳು ಆವಶ್ಯಕ ವಾಗಿವೆ.

## ಫಲಸಾಮ್ಯಾಧಿಕರಣ (3-3-7)

ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿ ಕರಣಕ್ಕೆ ಬಹುಗುಣಗಳು ವಿಷಯ. ಫಲಾಧಿಕ್ಯ ಮತ್ತು ವಿಶೇಷಗಳನ್ನು ಹೇಳದಿರುವುದರಿಂದ ಸಂಶಯ ಬರುತ್ತದೆ– ಬಹುಗುಣಗಳು ದೇವತೆಗಳ ಉಪಾಸನೆಗೆ ಯೋಗ್ಯಗಳೋ? ಅಲ್ಲವೋ? ಎಂದು.

**ಪೂರ್ವಪಕ್ಷ—**ಬ್ರಹ್ಮದೇವರು ಸರ್ವಗುಣಗಳನ್ನು ಉಪಾಸನೆ ಮಾಡಬೇಕು ಎಂಬ ವಿಷಯದಲ್ಲಿ ಪ್ರಮಾಣವಿದೆ. ಇತರರು ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕು ಎಂಬುದಕ್ಕೂ ಆಧಾರವಿದೆ. ನಾಲ್ಕಕ್ಕಿಂತ ಹೆಚ್ಚಿನ ಗುಣಗಳನ್ನು ಉಪಾಸನೆ ಮಾಡಬೇಕೆಂಬ ವಿಷಯದಲ್ಲಿ ಪ್ರಮಾಣವಿಲ್ಲ. ಶಕ್ತಿಯಿಂದ ಯೋಗ್ಯತಾನಿರ್ಣಯ ಎಂದಾಗುವುದಾದರೆ ಅಯೋಗ್ಯಗುಣಗಳನ್ನು ಉಪಾಸನೆ ಮಾಡುವ ಪ್ರಯತ್ನದಿಂದ ಅನರ್ಥವಾಗಬೇಕಾದೀತು. ಆದ್ದರಿಂದ ದೇವತೆಗಳಿಗೆ ಬಹುಗುಣೋಪಾಸನೆಯು ಯೋಗ್ಯವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕಾರ್ಯಲೋಪ' (ಬಹುಗುಣೋಪಾಸನೆ ರೂಪ ಕಾರ್ಯಕ್ಕೆ ಲೋಪವುಂಟಾಗುವುದು) ಎಂಬುದು. ಇದನ್ನು ಮತ್ತು 'ಭವ' (ದೇವತೆಗಳಿಗೆ ಬಹುಗುಣೋಪಾಸನೆಯ ನಿಯಮವಿದೆ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ತರ್ಹಿ ಬ್ರಹ್ಮಣೋಽನ್ಯೇಷಾಂ ದೇವಾದೀನಾಮಪಿ ಬಹುಗುಣೋ-ಪಾಸನಯಾ ಕಾರ್ಯಂ ನಾಸ್ತಿ, ಮಧ್ಯೇ ನಿಯಮಾಸಿದ್ಧೇರಿತಿ ನ ಮಂತವ್ಯಮ್ । ತೇಷಾಂ ಭಾವ್ಯುತ್ಕರ್ಷಂ ಜ್ಞಾತ್ವಾ ತದಭಿಜ್ಞಸ್ಯ ಬ್ರಹ್ಮಣ ಏವ ಗುಣನಿಯಮೋಪದೇಶೋಪಪತ್ತೇಃ ।**

'ಯೋ ಯೋ ಭಾವೋ ದೇವತಾನಾಂ ವಿಮುಕ್ತೌ ತತ್ತತ್
ಪ್ರಾಪ್ತೌ ಸುಗುಣಾನೀಶಿತುಶ್ಚ ।
ಬ್ರಹ್ಮಾ ದಿಶತ್ಯಥ ತಾಂಸ್ತೇ ವಿಚಿಂತ್ಯ ತತ್ತದ್ಭಾವಂ
ಪ್ರಾಪ್ನುವಂತ್ಯಾತ್ಮಶಕ್ತ್ಯಾ ॥' ಇತಿ ಶ್ರುತೇಃ ॥೭ ॥

**ಭಾವಾರ್ಥ—** ಹಾಗಾದರೆ, (ತಮಗೆ ಯೋಗ್ಯವಾದ ಗುಣಗಳನ್ನು ಉಪಾಸನೆ ಮಾಡಿದರೆ ಫಲವು ಲಭಿಸುತ್ತದೆ ಎಂದು ಅಂಗೀಕರಿಸಿದರೆ) ಚತುರ್ಮುಖನಿಗಿಂತ ಬೇರೆ ದೇವತೆಗಳಿಗೆ ಬಹುಗುಣಗಳನ್ನು ಉಪಾಸನೆ ಮಾಡುವ ಆವಶ್ಯಕತೆ ಇಲ್ಲ, ಮಧ್ಯದಲ್ಲಿ (ಮನುಷ್ಯರು ಉಪಾಸನೆ ಮಾಡುವ ನಾಲ್ಕು ಗುಣಗಳಿಗಿಂತ ಮೇಲೆ, ಚತುರ್ಮುಖನು ಉಪಾಸನೆ ಮಾಡುವ ಸರ್ವಗುಣೋಪಾಸನೆಗಿಂತ ಕೆಳಗೆ, ಮಧ್ಯದ ಬಹುಗುಣೋಪಾಸನೆ ವಿಷಯದಲ್ಲಿ) ಪ್ರಮಾಣವಿಲ್ಲದಿರುವುದರಿಂದ ಬಹುಗುಣೋಪಾಸನೆಯನ್ನು ಮಾಡುವುದು ಬೇಡ ಎಂದು ಆಕ್ಷೇಪಿಸಬಾರದು. ಏಕೆಂದರೆ, ಆ ದೇವತೆಗಳ ಮುಂದಿನ ಉತ್ಕರ್ಷವನ್ನು ತಿಳಿದಿರುವ ಸರ್ವಜ್ಞನಾದ ಚತುರ್ಮುಖನು ಗುಣಗಳ ನಿಯಮವನ್ನು ಉಪದೇಶ ಮಾಡುತ್ತಾನೆ. ಈ ವಿಷಯ ದಲ್ಲಿ 'ದೇವತೆಗಳಿಗೆ ಮೋಕ್ಷದಲ್ಲಿ ಯಾವ ಯಾವ ಫಲವು ಪ್ರಾಪ್ತವಾಗಲಿಕ್ಕಿದೆಯೋ ಆಯಾ ಫಲವನ್ನು ಪಡೆಯಲು ಕಾರಣವಾದ ಭಗವಂತನ ಗುಣಗಳನ್ನು ಚತುರ್ಮುಖನು ಉಪದೇಶಿಸುತ್ತಾನೆ. ಅನಂತರ ಆ ದೇವತೆಗಳು ಆಯಾ ಗುಣಗಳನ್ನು ತಮ್ಮ ಶಕ್ಯನುಸಾರ ಉಪಾಸನೆ ಮಾಡಿ ಆಯಾ ಫಲವನ್ನು ಪಡೆಯುತ್ತಾರೆ' ಎಂದು ಶ್ರುತಿಯಿದೆ.

**ವಿವರಣೆ—**ಮೇಲೆ ಹೇಳಿರುವ ಶ್ರುತಿಯೇ ಪ್ರಮಾಣವಾಗಿರುವುದರಿಂದ ದೇವತೆಗಳ ಬಹುಗುಣೋಪಾಸನೆಯು ಯೋಗ್ಯವಾಗಿದೆ ಎಂದು ಸಿದ್ಧವಾಗುತ್ತದೆ.

ಮೂಲದಲ್ಲಿ ಹೇಳಿದ 'ಬ್ರಹ್ಮಣ ಏವ' ಎಂಬ ಬ್ರಹ್ಮಶಬ್ದದಿಂದ (ಉಪ ಲಕ್ಷಣಯಾ) ಸರ್ವಜ್ಞಗುರುಗಳನ್ನು ಸ್ವೀಕರಿಸಬೇಕು. 'ತೇಷಾಂ ವಿಶೇಷ ಮಾಚಾರ್ಯೋ ವೇತ್ತಿ ಸರ್ವಜ್ಞತಾಂ ಗತಃ' ಎಂಬ ಪ್ರಮಾಣದಂತೆ ಬ್ರಹ್ಮದೇವರು ಮಾತ್ರವಲ್ಲದೆ ಸರ್ವಜ್ಞರಾದ ಗುರುಗಳೂ ಉಪದೇಶ ಮಾಡುತ್ತಾರೆ ಎಂದರ್ಥ. ಹೀಗೆ ಅರ್ಥವನ್ನು ಮಾಡಿದರೆ ಏವಕಾರದ ವಿರೋಧವು ಬರುತ್ತದೆಯಲ್ಲ?

ಎಂದರೆ, ಏವಕಾರವು ಉಪದೇಶಕರು ಸಿಗುವುದು ದುರ್ಲಭವೆಂದು ತಿಳಿಸುತ್ತಿದೆಯೇ ಹೊರತು ಅನ್ಯಯೋಗವ್ಯವಚ್ಛೇದ ಎಂಬುದನ್ನಲ್ಲ.

**ಸೂತ್ರಾರ್ಥ—**

### ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ

ಅರ್ಥಸಾಮಾನ್ಯಾತ್=ಉಪಾಸನೆಯಿಂದ ಅವರವರಿಗೆ ಪ್ರಾಪ್ಯವಾದ ಅರ್ಥಸಾಮಾನ್ಯವನ್ನವಲಂಬಿಸಿ ಇತರೇ=ಸರ್ವಗುಣಗಳು ಮತ್ತು ನಾಲ್ಕು ಗುಣಗಳು ಇವುಗಳಿಗಿಂತ ಭಿನ್ನವಾದ ಮಧ್ಯಮ ಗುಣಗಳೂ ತು=ಕೂಡ ಚತುರ್ಮುಖ ಭಿನ್ನರಾದ ದೇವತೆಗಳಿಗೆ ಉಪಸಂಹಾರ ಮಾಡಿ ಉಪಾಸನೆ ಮಾಡಲು ಯೋಗ್ಯವಾಗಿವೆ.

## ಆಧ್ಯಾನಾಧಿಕರಣ (3-3-8)

ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣದಲ್ಲಿ ಗುಣೋಪಸಂಹಾರ, ಗುಣಾನುಪಸಂಹಾರಗಳು ವಿಷಯ. ಲೋಕದಲ್ಲಿ ಮಾಡಬೇಕಾದ, ಮಾಡಬಾರದ ಕ್ರಿಯೆಗಳು ಕಂಡಿರುವುದರಿಂದ ಗುಣೋಪಸಂಹಾರವನ್ನು ಮಾಡಬೇಕೋ? ಬೇಡವೋ? ಎಂಬುದು ಸಂದೇಹ.

**ಪೂರ್ವಪಕ್ಷ—**ಸರ್ವಗುಣೋಪಸಂಹಾರಕ್ಕಾಗಿ ವೇದಗಳಲ್ಲಿ ಗುಣಗಳನ್ನು ಹೇಳಿರುವುದೇ ಆಗಿದ್ದರೆ, ಎಲ್ಲ ಗುಣಗಳನ್ನು ಒಂದೇ ಸ್ಥಳದಲ್ಲಿ ಹೇಳಬೇಕಿತ್ತು. ಗುಣೋಪಸಂಹಾರವೆಂದರೆ, ಎಲ್ಲ ಗುಣಗಳನ್ನು ಒಂದೇ ಬುದ್ಧಿಯಲ್ಲಿ ಆರೋಹ ಮಾಡಿಕೊಳ್ಳುವುದು. ಒಂದು ಮಾಲೆಯಲ್ಲಿ ಮಣಿಗಳನ್ನು ಪೋಣಿಸುವಾಗ ಮೊದಲು ಎಲ್ಲ ಮಣಿಗಳನ್ನು ಒಂದು ಕಡೆಯಲ್ಲಿ ಒಟ್ಟು ಮಾಡಿಕೊಳ್ಳುವಂತೆ ಒಂದು ಕಡೆಯಲ್ಲಿ ಹೇಳಬೇಕಿತ್ತು. ನಾನಾಶಾಖೆಗಳಲ್ಲಿ ಹೇಳಬಾರದಿತ್ತು. ನಾನಾ ಶಾಖೆಗಳಲ್ಲಿ ಗುಣಗಳನ್ನು ಹೇಳಿರುವುದರಿಂದ ಗುಣೋಪಸಂಹಾರವು ಶಕ್ಯವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಿಸುವ ಯುಕ್ತಿ 'ನಾನೋಕ್ತಿ' (ಗುಣಗಳನ್ನು ನಾನಾ ಶಾಖೆಗಳಲ್ಲಿ ಹೇಳಿರುವುದು) ಇದನ್ನು ಮತ್ತು 'ಪ್ರಯತ್ನಸಾಮ್ಯ' (ಪ್ರಯತ್ನಕ್ಕೆ ಅನುಗುಣವಾದ ಫಲ) ಎಂಬ ಸಿದ್ಧಾಂತ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ನಾನಾಸ್ಥಾನೇಷೂಕ್ತಗುಣನಾಮನುಪಾಸನಾರ್ಥತಾ । ವಿಪ್ರ-ಕೀರ್ಣಗುಣಾನ್ ಪಿಂಡೀಕೃತ್ಯೋಪಾಸಿತುಸ್ತತ್ಸದೃಶಫಲಪ್ರಾಪ್ತೇಸ್ತಥಾ ಧ್ಯಾನಾರ್ಥಮೇವ ಗುಣಾನಾಮುಕ್ತಿರಿತ್ಯುಪಪತ್ತಿಃ ॥ ೮ ॥**

**ಭಾವಾರ್ಥ—** ನಾನಾ ಶಾಖೆಗಳಲ್ಲಿ ಗುಣಗಳನ್ನು ಹೇಳಿರುವುದರಿಂದ ಉಪಸಂಹಾರವು ಕೂಡುವುದಿಲ್ಲವಾದ್ದರಿಂದ ಉಪಾಸನೆಯೂ ಶಕ್ಯವಲ್ಲವೆಂದು ಪೂರ್ವಪಕ್ಷ ಮಾಡುವುದು ಸರಿಯಲ್ಲ. ನಾನಾಶಾಖೆಗಳಲ್ಲಿ (ವಿಪ್ರಕೀರ್ಣವಾದ) ಬಿಡಿಬಿಡಿಯಾಗಿ ಹೇಳಿದ ಗುಣಗಳನ್ನು ಒಟ್ಟುಮಾಡಿ (ಒಂದೇ ಬುದ್ಧಿಯಲ್ಲಿ ಆರೋಹಣಮಾಡಿ) ಉಪಾಸನೆ ಮಾಡುವವನಿಗೆ ತನ್ನ ಪ್ರಯತ್ನಕ್ಕೆ ಅನುಗುಣವಾದ ಫಲವು ಪ್ರಾಪ್ತವಾಗುವುದರಿಂದ ಹಾಗೆ ಧ್ಯಾನಮಾಡುವುದಕ್ಕಾಗಿಯೇ ಗುಣಗಳನ್ನು ಹೇಳಿರುವುದು ಎಂದು ಉಪಪನ್ನವಾಗುತ್ತದೆ.

**ವಿವರಣೆ—** 'ಯಾವತ್ ಸೇವಾ ಪರೇ ತತ್ತ್ವೇ ತಾವತ್ ಸುಖವಿಶೇಷತಾ' ಎಂದು ಹೇಳಿದಂತೆ ಶಾಸ್ತ್ರಗಳಲ್ಲಿ ಹೆಚ್ಚು ಪರಿಶ್ರಮಪಟ್ಟು ಭಗವಂತನ ಗುಣಗಳನ್ನು ತಿಳಿದು ಉಪಾಸನೆ ಮಾಡುವುದು ಹರಿಸೇವೆ. ಇದರಿಂದ ಮುಕ್ತಿಯಲ್ಲಿ ಸುಖವಿಶೇಷವೇ ಫಲ. ಅಂತಹ ಫಲಕ್ಕಾಗಿ ಪ್ರಯತ್ನಮಾಡಲಿ ಎಂಬ ಉದ್ದೇಶದಿಂದ ವೇದದಲ್ಲಿ ಬೇರೆ ಬೇರೆ ಶಾಖೆಗಳಲ್ಲಿ ಗುಣಗಳನ್ನು ಹೇಳಿದ್ದಾರೆ. ಆದ್ದರಿಂದ ಸರ್ವಗುಣೋಪಸಂಹಾರವು ಯುಕ್ತವೇ ಆಗಿದೆ.

**ಸೂತ್ರಾರ್ಥ—**

## ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ

ವೇದಗಳಲ್ಲಿ ಸರ್ವಗುಣಗಳನ್ನು ಹೇಳಿರುವುದು ಅವುಗಳನ್ನು ಉಪಸಂಹಾರ ಮಾಡುವುದು ಆಧ್ಯಾನಾಯ=ಸಮಸ್ತ ಗುಣಗಳ ಜ್ಞಾನಕ್ಕೋಸ್ಕರ ಆ ಸಮಸ್ತ ಗುಣಗಳನ್ನು ಏಕೀಕರಿಸಿ ಧ್ಯಾನಕ್ಕೋಸ್ಕರ ಏಕೆಂದರೆ, ಪ್ರಯೋಜನಾಭಾವಾತ್=

ಗುಣೋಕ್ತಿ ಮತ್ತು ಉಪಸಂಹಾರಗಳಿಗೆ ಧ್ಯಾನಕ್ಕಿಂತಲೂ ಬೇರೆ ಪ್ರಯೋಜನ ವಿಲ್ಲದಿರುವುದರಿಂದ.

## ಆತ್ಮಗೃಹೀತ್ಯಧಿಕರಣ (3-3-9)

ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ಭಗವಂತನ ಗುಣಗಳು. 'ಆತ್ಮಶಬ್ದಾಚ್ಚ' ಎಂಬಲ್ಲಿ ಆತ್ಮತ್ವವನ್ನು ಹೇಳಿದ್ದಾರೆ. 'ಆನಂದಾದಯಃ ಪ್ರಧಾನಸ್ಯ' ಎಂಬಲ್ಲಿ ನಾಲ್ಕು ಗುಣಗಳನ್ನು ಹೇಳಿದ್ದಾರೆ. ಆದ್ದರಿಂದ ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡಬೇಕೋ? ಅಥವಾ ಆನಂದಾದಿ ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕೋ? ಎಂದು ಸಂಶಯ.

**ಪೂರ್ವಪಕ್ಷ**—'ಓಂ ಆನಂದಾದಯಃ ಪ್ರಧಾನಸ್ಯ ಓಂ' ಎಂಬಲ್ಲಿ ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕೆಂದು ಹೇಳಿದ್ದಾರೆ. ಆದರೆ ಇದಕ್ಕೆ ವಿರುದ್ಧವಾಗಿ 'ಆತ್ಮೇತ್ಯೇವೋಪಾಸೀತ' ಎಂದು ಏವಕಾರ ಸಹಿತವಾದ ಶ್ರುತಿಯು ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡಬೇಕು ಎಂದು ಹೇಳಿದೆ. ಇತರ ಮೂರು ಗುಣಗಳನ್ನು ಬಿಟ್ಟು ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡುವುದರಿಂದ ಶೀಘ್ರವಾಗಿ ಭಗವಂತನ ಸಾಕ್ಷಾತ್ಕಾರವಾಗುವುದರಿಂದ ಆತ್ಮತ್ವವನ್ನೇ ಉಪಾಸನೆ ಮಾಡಬೇಕೇ ಹೊರತು ಇತರ ಮೂರು ಗುಣಗಳನ್ನಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಆಶುತಾ'** (ಶೀಘ್ರವಾಗಿ ಫಲದೊರಕುವುದು) ಎಂಬುದು. ಇದನ್ನು ಮತ್ತು **'ವಿಶೇಷ'** (ಆನಂದಾದಿಗಳು ಆತ್ಮಶಬ್ದದ ವಿಶೇಷಾರ್ಥಗಳೇ ಆಗಿವೆ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾಶ್ವಾಪರೋಕ್ಷ್ಯಾಯಾನಂದಾದೀನಾಮಪಿ ಲೋಪೇನಾತ್ಮೇತ್ಯೇ-ತಾವತಾ ಪೂರ್ಯತೇ । ಆತ್ಮಶಬ್ದಾರ್ಥವಿಶೇಷತ್ವಾದಾನಂದಾದೀನಾಮ್ ॥೯॥**

**ಭಾವಾರ್ಥ :** ಶೀಘ್ರವಾಗಿ ಭಗವಂತನ ಸಾಕ್ಷಾತ್ಕಾರವಾಗುವುದಕ್ಕಾಗಿ ಆನಂದಾದಿಗುಣಗಳನ್ನು ಬಿಟ್ಟು ಆತ್ಮತ್ವವನ್ನು ಉಪಾಸನೆ ಮಾಡುವುದರಿಂದಲೇ

ಉಪಾಸನೆಯು ಪೂರ್ಣವಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ ಆನಂದಾದಿಗುಣಗಳು ಆತ್ಮಶಬ್ದಾರ್ಥವಾದ ಆತ್ಮತ್ವದ ಪ್ರಭೇದಗಳೇ ಆಗಿವೆ.

**ವಿವರಣೆ—**'ಅತ್ರ ಹ್ಯೇತೇ ಸರ್ವ ಏಕೀಭವಂತಿ' ಆನಂದಾದಿಗಳೆಲ್ಲವೂ ಆತ್ಮಶಬ್ದಾರ್ಥದಲ್ಲಿ ಸೇರಿವೆ ಎಂದು ಶ್ರುತಿಯು ಹೇಳುತ್ತದೆ. ಅದರಂತೆ,

ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ ।
ನಿತ್ಯತ್ವಾಚ್ಚ ತಥಾತ್ಮೇತಿ ವೇದವಾದಿಭಿರೀಶ್ವರಃ ।

ಆನಂದವನ್ನು ಅನುಭವಿಸುವುದರಿಂದಲೂ(ಆನಂದ), ದೋಷರಹಿತನಾದ್ದರಿಂದಲೂ(ಸತ್) ನಿತ್ಯನಾದ್ದರಿಂದಲೂ(ಚಿತ್) ವೇದವಾದಿಗಳು ಈಶ್ವರನನ್ನು ಆತ್ಮಾ ಎಂದು ಹೇಳುತ್ತಾರೆ ಎಂದು ಹೇಳಿರುವುದರಿಂದ ನಾಲ್ಕು ಗುಣಗಳನ್ನೇ ಉಪಾಸನೆ ಮಾಡಬೇಕು ಎಂದರ್ಥ.

ಆತ್ಮಶಬ್ದದ ಅರ್ಥಗಳೇ ಆನಂದಾದಿಗಳು ಎಂದು ಹೇಳಿದ್ದರಿಂದ 'ಆತ್ಮೇತ್ಯೇವೋಪಾಸೀತ' ಎಂಬಲ್ಲಿರುವ ಏವಕಾರದ ವಿರೋಧವಿಲ್ಲ. ಅಥವಾ 'ಆತ್ಮಾ ಇತಿ ಉಪಾಸೀತ ಏವ' ಎಂದು ಅನ್ವಯವನ್ನು ಮಾಡಿದಾಗ 'ಆತ್ಮಾನೆಂದು ಉಪಾಸನೆ ಮಾಡಲೇಬೇಕು' ಎಂದು ಅರ್ಥವಾಗುವುದರಿಂದಲೂ ಯಾವ ವಿರೋಧವೂ ಇಲ್ಲ. ಆದ್ದರಿಂದ ನಾಲ್ಕು ಗುಣಗಳನ್ನು ಉಪಾಸನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

## ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ

ಇತರವತ್=ಸತ್ಯಜ್ಞಾನಾದಿ ವಾಕ್ಯದಲ್ಲಿ ಸತ್ಯಾದಿಪದಗಳಿಂದ ಬೇರೆ ಬೇರೆ ಗುಣಗಳನ್ನೆಂಬಂತೆ, ಆತ್ಮಗೃಹೀತಿಃ='ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯದಲ್ಲಿ ಆತ್ಮ ಪದದಿಂದ ಆನಂದಾದಿ ನಾಲ್ಕು ಗುಣಗಳನ್ನು ಗ್ರಹಿಸಬೇಕು. ಏಕೆಂದರೆ ಉತ್ತರಾತ್= 'ಅತ್ರ ಹ್ಯೇತೇ ಸರ್ವಏಕೀಭವಂತಿ' ಎಂದು ಮುಂದೆ ವಾಕ್ಯವಿರುವುದರಿಂದ.

## ಅನ್ವಯಾಧಿಕರಣ (3-3-10)

ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ ಎಂಬ ಒಂದೇ

ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಆತ್ಮಶಬ್ದೋಕ್ತವಾದ ಗುಣಗಳು ವಿಷಯ. ಆನಂದಾದಿಗಳು ಸರ್ವೋಪಾಸ್ಯವಾಗಿ ಕಂಡಿವೆ. ಪ್ರಿಯಶಿರಸ್ತ್ವಾದಿಗಳು ಸರ್ವೋಪಾಸ್ಯಗಳಾಗಿ ಕಂಡಿಲ್ಲ. ಆದ್ದರಿಂದ ಸಂಶಯ ಬರುತ್ತದೆ– ಆತ್ಮಶಬ್ದೋಕ್ತವಾದ ಗುಣಗಳು ಸರ್ವೋಪಾಸ್ಯಗಳೋ? ಅಲ್ಲವೋ? ಎಂದು.

**ಪೂರ್ವಪಕ್ಷ**—ಹಿಂದಿನ ಅಧಿಕರಣದಲ್ಲಿ ಆನಂದಾದಿಗುಣಗಳು ಆತ್ಮಶಬ್ದದಲ್ಲಿಯೇ ಸೇರಿವೆ, ಅವುಗಳನ್ನು ಉಪಾಸನೆ ಮಾಡಬೇಕು ಎಂದು ಹೇಳಲಾಗಿದೆ. ಆದರೆ ಅದು ಸರಿಯಲ್ಲ. ಏಕೆಂದರೆ 'ಆಪ್ತವ್ಯಾಪ್ತೇರಾತ್ಮಶಬ್ದಃ ಪರಮಸ್ಯ ಪ್ರಯುಜ್ಯತೇ' ಎಂಬ ಪ್ರಮಾಣದಂತೆ ಪಡೆಯಬೇಕಾದದ್ದನ್ನೆಲ್ಲವನ್ನೂ ಪಡೆದದ್ದರಿಂದ ಪರಮಾತ್ಮನಿಗೆ ಆತ್ಮಶಬ್ದದ ಪ್ರಯೋಗವಿದೆ ಎಂದು ಆತ್ಮಶಬ್ದವು ಅವನಲ್ಲಿರುವ ಸರ್ವಗುಣಗಳನ್ನು ಪ್ರತಿಪಾದನೆ ಮಾಡುತ್ತದೆ. ಆತ್ಮಶಬ್ದೋಕ್ತವಾದ ಗುಣಗಳನ್ನು ಉಪಾಸನೆ ಮಾಡಬೇಕು ಎಂದರೆ ನಾಲ್ಕೇ ಗುಣಗಳನ್ನು ಉಪಾಸನೆ ಮಾಡಬೇಕೋ? ಅಥವಾ ಬೇರೆ ಗುಣಗಳನ್ನು ಉಪಾಸನೆ ಮಾಡಬೇಕೋ? ಎಂದು ಗೊಂದಲವೇ ಉಂಟಾಗುತ್ತದೆ. ಆದ್ದರಿಂದ ಅಲ್ಪಗುಣೋಪಸಂಹಾರದ ವಿಷಯದಲ್ಲಿ ಏವಕಾರವನ್ನೊಳಗೊಂಡ 'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯವು ಪ್ರಮಾಣವಾಗುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ವಿಭ್ರಮ**' ಎಂಬುದು. ಇದನ್ನು ಮತ್ತು '**ಗುಣಾಧಿಕ್ಯ**' (ಆತ್ಮಶಬ್ದವು ಅಧಿಕಗುಣವುಳ್ಳವರಿಗೆ ಅಧಿಕಗುಣಗಳನ್ನು ತಿಳಿಸುತ್ತದೆ) ಎಂಬ ಸಿದ್ಧಾಂತಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚಾತ್ಮಶಬ್ದೋ ವಿಭ್ರಮಕರಃ। ಗುಣಾಧಿಕಾನಾಮಧಿಕಾರಿಣಾಂ ಭಗವದ್ಗುಣಾನಧಿಕಾನ್ ಪ್ರಕಾಶಯತೀತ್ಯವಧಾರಣೋಪಪತ್ತೇಃ ॥ ೧೦ ॥**

**ಭಾವಾರ್ಥ—** ಆತ್ಮಶಬ್ದವು ನಾಲ್ಕುಗುಣಗಳನ್ನು ಉಪಾಸನೆ ಮಾಡುವ ವಿಷಯದಲ್ಲಿ ಭ್ರಾಂತಿಯನ್ನುಂಟುಮಾಡುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ ಅಧಿಕಗುಣವುಳ್ಳ ಅಧಿಕಾರಿಗಳಾದ ಬ್ರಹ್ಮಾದಿದೇವತೆಗಳಿಗೆ ಅಧಿಕಗುಣಗಳನ್ನು ಬೋಧಿಸುತ್ತದೆ ಎಂದು ಹೇಳಿ ಅವಧಾರಣವನ್ನು (ಏವಕಾರವನ್ನು) ಕೂಡಿಸಬಹುದು.

**ವಿವರಣೆ**—ಆತ್ಮಶಬ್ದವು ಅಧಿಕಗುಣವುಳ್ಳವರಿಗೆ ಅಧಿಕಗುಣಗಳನ್ನು ತಿಳಿಸುತ್ತದೆ. ಇದಕ್ಕೆ ಪ್ರಮಾಣ-'ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತ ರೇಷಾಂ ನ ಚೈವ' (ಆತ್ಮಶಬ್ದವು ಬ್ರಹ್ಮಾದಿದೇವತೆಗಳಿಗೆ ಎಲ್ಲ ಗುಣಗಳನ್ನು ತಿಳಿಸುತ್ತದೆ. ಇತರರಿಗಲ್ಲ) ಎಂಬ ವಾಕ್ಯವು.

ಅನ್ಯಯೋಗವ್ಯವಚ್ಛೇದ ಎಂಬ ಅರ್ಥವನ್ನು ತಿಳಿಸುವ ಏವಕಾರವುಳ್ಳ 'ಆತ್ಮೇತ್ಯೇವೋಪಾಸೀತ' ಎಂಬ ವಿಧಿಯು ಬ್ರಹ್ಮದೇವರಿಗೂ ಅನ್ವಯಿಸುತ್ತದೆ. ಆತ್ಮಶಬ್ದಕ್ಕೆ ಸರ್ವಗುಣಾಭಿಧಾಯಕತ್ವವನ್ನು ಅಂಗೀಕರಿಸದಿದ್ದರೆ, ಅದು ನಾಲ್ಕೇ ಗುಣವನ್ನು ಬೋಧಿಸುತ್ತದೆ ಎಂದು ಅಂಗೀಕರಿಸಿದರೆ, ಆಗ ಬ್ರಹ್ಮದೇವರೂ ನಾಲ್ಕೇ ಗುಣಗಳನ್ನು ಉಪಾಸನೆ ಮಾಡಬೇಕು ಎಂದಾಗುತ್ತದೆ. ಇದು 'ಸರ್ವೈರ್ಗುಣೈ-ರುಪಾಸ್ಯೋಽಸೌ ಬ್ರಹ್ಮಣಾ ಪರಮೇಶ್ವರಃ' (ಬ್ರಹ್ಮನಿಂದ ಸರ್ವಗುಣ ವಿಶಿಷ್ಟನಾಗಿ ಭಗವಂತನು ಉಪಾಸ್ಯನಾಗಿದ್ದಾನೆ) ಎಂಬ ಪ್ರಮಾಣಕ್ಕೆ ವಿರುದ್ಧವಾದದ್ದು. ಆದ್ದರಿಂದ ಆತ್ಮಶಬ್ದವು ಸರ್ವಗುಣಾಭಿಧಾಯಿಕವೆಂದೇ ಅಂಗೀಕರಿಸಬೇಕು. ಆವಾಗ ಸರ್ವಗುಣೋಪಸಂಹಾರಕ್ಕೂ, ಅನುಪಸಂಹಾರಕ್ಕೂ ಇದು ಪ್ರಮಾಣವಾಗುತ್ತದೆ. ಅಧಿಕಾರಿಭೇದೇನ ಅರ್ಥವಿಶೇಷವನ್ನು ತಿಳಿಸುತ್ತದೆ. ಚತುರ್ಮುಖನಿಗೆ ಸರ್ವಗುಣಗಳನ್ನು, ಇತರ ದೇವತೆಗಳಿಗೆ ಅವರ ಉಪಾಸನೆಗೆ ಯೋಗ್ಯವಾದ ಗುಣಗಳನ್ನು, ಅಧಮಾಧಿಕಾರಿಗಳಿಗೆ ನಾಲ್ಕೇ ಗುಣಗಳನ್ನು ತಿಳಿಸುತ್ತದೆ. ಈವಾಗ ಯಾವುದೇ ಗೊಂದಲವಿಲ್ಲದಿರುವುದರಿಂದ ಆ ಆತ್ಮಶಬ್ದೋಕ್ತವಾದ ಗುಣಗಳನ್ನು ಎಲ್ಲರೂ ಉಪಾಸೆ ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

## ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ

ಸರ್ವಗುಣೋಪಸಂಹಾರವಿಲ್ಲ ಎಂಬ ವಿಷಯದಲ್ಲಿ 'ಆತ್ಮೇತ್ಯೇವೋಪಾಸೀತ' ಎಂಬ ಶ್ರುತಿಯು ಪ್ರಮಾಣವಾಗಲಾರದು. ಏಕೆಂದರೆ, ಅನ್ವಯಾತ್ ಇತಿ ಚೇತ್=ಆತ್ಮಶಬ್ದವು ಸಮಸ್ತಗುಣಗಳನ್ನು ಹೇಳುತ್ತದೆ ಎಂಬ ವಿಷಯದಲ್ಲಿ ಪ್ರಮಾಣವಿರುವುದರಿಂದ ಎಂದರೆ, ಸ್ಯಾತ್=ಆತ್ಮಶಬ್ದವು ಸರ್ವಗುಣ ವಾಚಿಯಾಗಿದೆ. ಆದರೂ ಅನುಪಪತ್ತಿ ಇಲ್ಲ. ಏಕೆಂದರೆ, ಅವಧಾರಣಾತ್=ಅವಧಾರಣಾರ್ಥಕವಾದ ಏವ ಶಬ್ದವಿರುವುದರಿಂದ.

## ಕಾರ್ಯಾಧಿಕರಣ (3-3-11)

ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಭಗವಂತನ ಗುಣಗಳೇ ವಿಷಯ. ಭಗವಂತನ ಗುಣಗಳನ್ನು ಅಲೌಕಿಕವೆಂದು ಪ್ರತಿಪಾದಿಸಿದ್ದಾರೆ. ಆದರೆ ಲೋಕದೃಷ್ಟಿಯೂ ಇರುವುದರಿಂದ ಸಂಶಯ ಬರುತ್ತದೆ– ಉಪಾಸಕನು ಅಲೌಕಿಕ ಗುಣಗಳನ್ನು ಧ್ಯಾನ ಮಾಡಬೇಕೋ? ಅಥವಾ ಲೌಕಿಕ ಗುಣಗಳನ್ನು ಧ್ಯಾನಮಾಡಬೇಕೋ? ಎಂದು.

**ಪೂರ್ವಪಕ್ಷ—**ಭಗವಂತನಲ್ಲಿ ಅಲೌಕಿಕವಾದ ಗುಣಗಳಿವೆ ಎಂಬುವುದು ನಿರ್ವಿವಾದ ವಿಷಯ. ನಮಗೆ ಲೌಕಿಕ ಗುಣಗಳ ಅನುಭವವಿದೆ. ಅದರ ಸಂಸ್ಕಾರದಿಂದ ಉಂಟಾದ ಸ್ಮೃತಿರೂಪವಾದ ಧ್ಯಾನವು ಲೌಕಿಕಗುಣಗಳದ್ದೇ ಆಗುತ್ತದೆ. ಅವುಗಳು ಆವನಲ್ಲಿಲ್ಲದಿರುವುದರಿಂದ ಅವಿದ್ಯಮಾನ ಉಪಾಸನೆಯಾಗುವುದರಿಂದ ಧ್ಯಾನವು ಯುಕ್ತವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅಪಾಕೃತಿ' (ಧ್ಯಾನವೇ ಇಲ್ಲದಂತಾಗುವುದು) ಎಂಬುದು ಇದನ್ನು ಮತ್ತು 'ಪ್ರಾಧಾನ್ಯ' (ಅಲೌಕಿಕವಾದ ಮೋಕ್ಷಜನಕತ್ವವಿರುವುದರಿಂದ) ಎಂಬ ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ.

**ಅಲೌಕಿಕಗುಣನಾಮಪ್ರತೀತೇರ್ಲೌಕಿಕಗುಣಧ್ಯಾನೇ ತದಪಾಕೃತಿ-ರೇವ ಭವತೀತಿ ನ ಮಂತವ್ಯಮ್ । ಲೌಕಿಕವಿಲಕ್ಷಣಾ ಅತ್ಯುತ್ತಮಾ ಇತಿ ಧ್ಯಾನಸ್ಯೈವ ಪ್ರಾಧಾನ್ಯಾತ್ ॥ ೧೧ ॥**

**ಭಾವಾರ್ಥ—** ಅಲೌಕಿಕಗುಣಗಳು ಅನನುಭೂತಗಳಾದ್ದರಿಂದ ಧ್ಯಾನಿಸಲು ಬರುವುದಿಲ್ಲ. ಲೌಕಿಕಗುಣಗಳ ಧ್ಯಾನವು ಕೂಡುವುದಿಲ್ಲವಾದ್ದರಿಂದ ಭಗವಂತನ ಗುಣೋಪಾಸನೆಯೇ ಕೂಡುವುದಿಲ್ಲವೆಂದು ಪೂರ್ವಪಕ್ಷ ಮಾಡಬಾರದು. ಏಕೆಂದರೆ ಅಲೌಕಿಕವಾದ ಮೋಕ್ಷಕ್ಕೆ ಸಾಧನವಾದ್ದರಿಂದ ಅಲೌಕಿಕವಾದ ಅತ್ಯುತ್ತಮವಾದ ಗುಣಗಳನ್ನೇ ಧ್ಯಾನಮಾಡಬೇಕು.

**ವಿವರಣೆ—** ಗುಣೋಪಾಸನೆಯಿಂದ ಪ್ರಾಪ್ತ ವಾಗುವ ಫಲ ಮೋಕ್ಷ. ಅದು

ಅಲೌಕಿಕವಾದ್ದರಿಂದ ಉಪಾಸನೆ ಮಾಡಬೇಕಾದ ಗುಣಗಳೂ ಅಲೌಕಿಕಗಳೇ ಎಂದು ಸಿದ್ಧಾಂತ.

ಅಲೌಕಿಕಗುಣಗಳ ಜ್ಞಾನವೇ ಇಲ್ಲವಾದ್ದರಿಂದ ಸಂಸ್ಕಾರವೂ ಇಲ್ಲ, ಆದ್ದರಿಂದ ಅವುಗಳ ಧ್ಯಾನವು ಹೇಗೆ ಕೂಡುತ್ತದೆ? ಎಂಬ ಪ್ರಶ್ನೆಗೆ ಅಭಿಮಾನ್ಯಧಿಕರಣದ ಅನುವ್ಯಾಖ್ಯಾನ–ಸುಧಾಗಳಲ್ಲಿ ಉತ್ತರವನ್ನು ನೀಡಲಾಗಿದೆ—

''ಶಾಸ್ತ್ರೋಕ್ತವಸ್ತುನಶ್ಚೈವ ವ್ಯುತ್ಪತ್ತಿಃ ಶಾಸ್ತ್ರಲಿಂಗತಃ'' ಎಂದು 'ಶಾಸ್ತ್ರದಲ್ಲಿ ಹೇಳಲ್ಪಟ್ಟ ಪಾಶಹಸ್ತತ್ವ, ಸಹಸ್ರಾಕ್ಷತ್ವ ಮೊದಲಾದ ದೇವತಾಲಕ್ಷಣಗಳ ಸಹಾಯದಿಂದ ಶಬ್ದಗಳಿಗೆ ಶಕ್ತಿಯನ್ನು ಗ್ರಹಿಸುವುದು ಸುಲಭವಾಗಿದೆ'. 'ಉದ್ದವಾದ ಕತ್ತುಳ್ಳ ಪಶು ಒಂಟೆ' ಎಂದು ಹೇಳಿ ಒಂಟೆ ಮೊದಲಾದ ಪ್ರಾಣಿಗಳನ್ನು ಪರಿಚಯ ಮಾಡಿಸುವುದು ಲೋಕದಲ್ಲಿ ಕಂಡಿದೆ. ಅದರಂತೆ, ಪಾಶ, ಹಸ್ತ ಮೊದಲಾದ ಶಬ್ದಗಳಿಗೆ ಲೋಕದಲ್ಲಿ ಶಕ್ತಿ ಗೃಹೀತವಾದ್ದರಿಂದ 'ಯಃ ಪಾಶಹಸ್ತಃ ಸಃ ವರುಣಃ' (ಯಾವನು ಕೈಯಲ್ಲಿ ಪಾಶವುಳ್ಳವನೋ ಅವನು ವರುಣ) 'ಯಃ ಸಹಸ್ರಾಕ್ಷಃ ಸಃ ಇಂದ್ರಃ' (ಯಾವನು ಸಾವಿರ ಕಣ್ಣುಳ್ಳವನೋ ಅವನು ಇಂದ್ರ) ಎಂದು ವಾಕ್ಯಪ್ರಯೋಗವನ್ನು ಮಾಡಿದಾಗ ಉಪಸ್ಥಿತರಾದ ವರುಣ ಇಂದ್ರರಲ್ಲಿ ಶಕ್ತಿಯು ಗೃಹೀತವಾಗುತ್ತದೆ. ಅದರಂತೆ, ಆನಂದ ಮೊದಲಾದ ಶಬ್ದಗಳಿಗೆ ಲೌಕಿಕವಾದ ಆನಂದದಲ್ಲಿ ಶಕ್ತಿಯು ಗೃಹೀತವಾಗಿದೆ. ಲೌಕಿಕವಾದ ಆನಂದಕ್ಕೂ ಅಲೌಕಿಕವಾದ ಆನಂದಕ್ಕೂ ನಿರವಧಿಕಪ್ರೇಮಾಸ್ಪದತ್ವವೆಂಬ ಸಾದೃಶ್ಯವಿರುವುದರಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆದ ಗುರುಗಳು 'ಅನುಕೂಲವೇದನೀಯೋ ಭಗವದ್ಗುಣೋ ಯಃ ಸ ಆನಂದಃ' ಎಂದು ಉಪದೇಶ ಮಾಡಿದಾಗ ಅಲೌಕಿಕವಾದ ಆನಂದದಲ್ಲಿಯೂ ಶಕ್ತಿಯು ಗೃಹೀತವಾಗುತ್ತದೆ. ಆದ್ದರಿಂದ ಅಲೌಕಿಕಗುಣಗಳ ಉಪಾಸನೆಯನ್ನೇ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

## ಓಂ ಕಾರ್ಯಾಖ್ಯಾನಾದಪೂರ್ವಮ್ ಓಂ

ಕಾರ್ಯಾಖ್ಯಾನಾತ್=ಧ್ಯಾನಕಾರ್ಯವಾದ ಮೋಕ್ಷವು ಅಲೌಕಿಕವಾದ್ದರಿಂದ ಅಪೂರ್ವಂ=ಬೇರೆಕಡೆಗಳಲ್ಲಿ ಕಾಣದ ಅಲೌಕಿಕಗುಣ ಸಮೂಹವನ್ನೇ ಧ್ಯಾನಿಸಬೇಕು.

# ಸಮಾನಾಧಿಕರಣ (3-3-12)

ಓಂ ಸಮಾನ ಏವಂ ಚಾಭೇದಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದ ವಿಷಯ ಗುಣೋಪಾಸನೆ. ಕೃಷ್ಯಾದಿ ಕ್ರಿಯೆಗಳನ್ನು ಮಾಡಿದಾಗ ಫಲ ಕೂಡುವುದೂ, ಫಲ ಕೊಡದಿರುವುದೂ ಕಂಡಿದ್ದರಿಂದ ಸಂಶಯ ಬರುತ್ತದೆ— ಉಪಾಸನೆಯೂ ಅನುಗುಣವಾದ ಫಲವನ್ನು ಕೊಡುತ್ತದೋ? ಇಲ್ಲವೋ? ಎಂದು.

**ಪೂರ್ವಪಕ್ಷ**—ಚತುರ್ಮುಖನಿಗೂ ಸರಸ್ವತೀದೇವಿಗೂ ವೇದೋಕ್ತವಾದ ಸಮಸ್ತಗುಣೋಪಸಂಹಾರವು ಸಮಾನವೇ ಆಗಿದೆ. ಸರಸ್ವತಿಯೂ ಅವಾಂತರ ವೇದಾಭಿಮಾನಿಯಾದ್ದರಿಂದ 'ನಾರಾಯಣನು ವಿಚಿತ್ರವಾದ ಕ್ರಿಯೆ ಉಳ್ಳವನು' ಎಂದು ಸಾಮಾನ್ಯವಾಗಿ ಸರ್ವಗುಣೋಪಸಂಹಾರವನ್ನು ಇಬ್ಬರೂ ಮಾಡುತ್ತಾರೆ. ಆದ್ದರಿಂದ ಮೋಕ್ಷದಲ್ಲಿ ಭಗವಂತನ ಒಂದೇ ಅವಯವದಲ್ಲಿ ಇರುವಿಕೆ ಎಂಬ ಸ್ಥಾನೈಕ್ಯರೂಪವಾದ ಫಲ ಸಮಾನವೇ ಆಗಿರುತ್ತದೆ. ಇದು ಇವರಿಬ್ಬರಿಗೂ ಸಮಾನವಾದ ಉಪಾಸನೆಯ ಫಲವಾಗಿದೆ. ಆದರೆ ಚತುರ್ಮುಖನಿಗೆ ಸರಸ್ವತಿಗಿಂತ ನೂರುಪಟ್ಟು ಅಧಿಕವಾದ ಆನಂದವಿರುವುದರಿಂದ ಗುಣದಲ್ಲಿ ತಾರತಮ್ಯವಿದೆ. ಹಾಗಾದರೆ ಫಲವು ಸಮವೂ ವಿಷವೂ ಆಗಿದೆ. ಆದರೆ ಉಪಾಸನೆಯು ಸಮವೇ ಆಗಿದೆ. ವಿಷಮವಾದ ಮತ್ತೊಂದು ಉಪಾಸನೆಯನ್ನು ಹೇಳಿಲ್ಲ. ಉಪಾಸನೆಯು ಸಮಾನವಾಗಿದ್ದರೂ ಗುಣತಾರತಮ್ಯವು ವಿಷಮವಾದ್ದರಿಂದ ಉಪಾಸನೆಗೆ ಅನುಗುಣವಾದ ಫಲ ದೊರೆಯುವುದಿಲ್ಲವಾದ್ದರಿಂದ ಉಪಾಸನೆಯು ಯುಕ್ತವಲ್ಲ ಎಂಬ ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಲಿಂಗ**' ಎಂಬುದು ಇದನ್ನು ಮತ್ತು '**ಯಥಾಶಕ್ತಿಕ್ರಿಯಾ**' (ಸರಸ್ವತಿಗೆ ಶಕ್ಯನುಸಾರವಾದ ಉಪಾಸನೆ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ಬ್ರಹ್ಮಣೋ ಬ್ರಹ್ಮಾಣ್ಯಾಶ್ಚ ಸ್ಥಾನೈಕ್ಯಂ ಗುಣತಾರತಮ್ಯಂ ಚ ಯಥಾಗುಣೋಪಾಸನಂ ಮುಕ್ತಾವಾಧಿಕ್ಯಂ ನ ಭವತೀತ್ಯತ್ರ ಲಿಂಗಮ್, ಸಮವಿಷಮೋಪಾಸನಾಯುಕ್ತೇರಿತಿ ನ ಮಂತವ್ಯಮ್ ।**

'ಯಥಾಶಕ್ತಿ ಸ್ಮೃತಾನ್ ಧಾತ್ರಾ ಗುಣಾನ್ ವಿಷ್ಣೋಃ ಸರಸ್ವತೀ ।
ಸ್ಮರೇತ್ ತ್ರೈವಿಕ್ರಮಾದ್ಯಾಂಸ್ತು ನಿತ್ಯವಿಕ್ರಾಂತಿಪೂರ್ವಕೈಃ ।
ಕದಾಚಿಲ್ಲೋಪಯೇದ್ದೇವೀ ಸ್ಥಾನೈಕ್ಯಂ ನ ಗುಣೈಸ್ತತಃ ।
ಸಾಮ್ಯಂ ತಯೋರ್ಯಥಾವಿಷ್ಣೋರ್ಗುಣೋಪಾಸಾ ಫಲಂ ಭವೇತ್ ॥'
ಇತ್ಯಧ್ಯಾತ್ಮವಚನಾದ್ ಯಥಾಶಕ್ತಿಕ್ರಿಯಾ ದೇವ್ಯಾಃ ॥ ೧೨ ॥

**ಭಾವಾರ್ಥ—** ಚತುರ್ಮುಖನಿಗೂ ಸರಸ್ವತಿಗೂ ಸ್ಥಾನೈಕ್ಯ ಮತ್ತು ಗುಣ ತಾರತಮ್ಯಗಳು ಇವೆ. ಸಮಾನವಾದ ಗುಣೋಪಾಸನೆಯು ಮೋಕ್ಷದಲ್ಲಿ ಆಧಿಕ್ಯ ವಿರಬಾರದು ಎಂಬ ವಿಷಯದಲ್ಲಿ ಲಿಂಗವಾಗಿದೆ. (ಹೇತುವಾಗಿದೆ) (ಉಪಾಸನೆಯೂ ಸಮ— ವಿಷಮವಾದ್ದರಿಂದ ಫಲವೂ ಸಮ— ವಿಷಮ ವಾಗಿದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ,) ವಿರುದ್ಧವಾದ್ದರಿಂದ ಸಮ— ವಿಷಮವಾದ ಉಪಾಸನೆ ಎಂಬುದು ಕೂಡುವುದಿಲ್ಲ ಎಂದು ಪೂರ್ವಪಕ್ಷ ಮಾಡಬಾರದು. ಏಕೆಂದರೆ, 'ಬ್ರಹ್ಮದೇವರಿಂದ ಶಕ್ತ್ಯನುಸಾರ ಸ್ಮರಿಸಲ್ಪಟ್ಟ ಭಗವಂತನ ಗುಣಗಳನ್ನು ಸರಸ್ವತಿಯೂ ಸ್ಮರಿಸುತ್ತಾಳೆ. ಆದರೆ ಮೂರು ಹೆಜ್ಜೆಗಳಿಂದ ಮಾಡಲ್ಪಟ್ಟ ತ್ರೈವಿಕ್ರಮಾದಿಗುಣಗಳನ್ನು ಕೆಲವೊಮ್ಮೆ ಉಪಾಸನೆ ಮಾಡುವುದಿಲ್ಲ. ಆದ್ದರಿಂದ ಸ್ಥಾನೈಕ್ಯವಿರುತ್ತದೆ. ಗುಣಗಳೊಂದಿಗೆ ಸಾಮ್ಯ ಅವರಿಗೆ ಇರುವುದಿಲ್ಲ. ವಿಷ್ಣುವಿಗೆ ಗುಣೋಪಾಸನೆ ಹೇಗೆ ನಡೆಯುವುದೋ ಅದಕ್ಕನುಗುಣವಾದ ಫಲವು ದೊರೆಯುತ್ತದೆ' ಎಂದು ಅಧ್ಯಾತ್ಮ ಎಂಬ ಗ್ರಂಥದ ವಚನವಿರುವುದರಿಂದ ಸರಸ್ವತಿದೇವಿಗೆ ಶಕ್ತ್ಯನುಸಾರವಾದ ಉಪಾಸನೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ.

**ವಿವರಣೆ—**ಉಪಾಸನೆಯು ವಿಷಮವಾದ್ದರಿಂದ ಫಲವೂ ವಿಷಮವಾಗಿದೆ. ಚತುರ್ಮುಖ ಸರಸ್ವತಿಯರಿಬ್ಬರೂ ಭಗವಂತನ ಕ್ರಿಯೆಗಳನ್ನು (ಸಾಮಾನ್ಯತಃ) ಕ್ರಿಯಾತ್ವೇನ ಉಪಾಸನೆ ಮಾಡುತ್ತಾರೆ. ಆದರೆ ಚತುರ್ಮುಖನು ಮಾತ್ರ ಕ್ರಿಯೆಗಳನ್ನು (ವಿಶಿಷ್ಟ) ತ್ರೈವಿಕ್ರಮತ್ವೇನ ರೂಪೇಣ ಉಪಾಸನೆ ಮಾಡುತ್ತಾರೆ. ಚತುರ್ಮುಖನಿಗೆ ಜ್ಞಾನ, ವಿಜ್ಞಾನಗಳೆರಡೂ ಇರುವುದರಿಂದ ಎರಡು ವಿಧವಾದ ಉಪಾಸನೆಯು ಸಾಧ್ಯವಾಗುತ್ತದೆ. ('ಜ್ಞಾನಂ ವಿಷ್ಣೋರುತ್ತಮತ್ವೇ ತದೇವ ಪ್ರತಿಪೂರುಷಮ್ । ವಿಶೇಷೇಣ ತು ವಿಜ್ಞಾನಂ ತಚ್ಚ ಜಾನಾತಿ ಸರ್ವವಿತ್॥ 'ವಿಷ್ಣು

ಸರ್ವೋತ್ತಮತ್ವ ವಿಷಯದಲ್ಲಿ ಯಾವ ಜ್ಞಾನವಿದೆಯೋ ಅದು ಜ್ಞಾನವೆನಿಸುತ್ತದೆ. ಆಯಾ ಜೀವನಿಗೆ ಯೋಗ್ಯವಾದ ವಿಶೇಷಗುಣಗಳನ್ನೂ ವಿಷಯೀಕರಿಸಿದರೆ ಅದು ವಿಜ್ಞಾನವೆನಿಸುತ್ತದೆ. ಅದನ್ನು ಸರ್ವಜ್ಞ ನಾದ ಚತುರ್ಮುಖನು 'ತಿಳಿಯುತ್ತಾನೆ' (ಭಾ.ತಾ.ನಿ.) ಸಾಮಾನ್ಯವಾಗಿ ಗುಣ ಗಳನ್ನು ಉಪಾಸನೆ ಮಾಡುವುದರ ಫಲವಾಗಿ ಚತುರ್ಮುಖ ಸರಸ್ವತಿಯರಿಬ್ಬರೂ ಸ್ವಾದ್ವೈಕ್ಯವನ್ನು ಪಡೆದಿದ್ದಾರೆ. ವಿಶೇಷವಾಗಿ ಉಪಾಸನೆ ಮಾಡುವುದರ ಫಲವಾಗಿ ಚತುರ್ಮುಖನು ಮಾತ್ರ ಸರಸ್ವತಿಗಿಂತ ನೂರುಪಟ್ಟು ಅಧಿಕವಾದ ಆನಂದಾದಿ ಗಳನ್ನು ಪಡೆಯುತ್ತಾನೆ. ಹೀಗೆ ಉಪಾಸನೆಗೆ ಅನುಗುಣವಾಗಿಯೇ ಫಲವನ್ನು ಪಡೆಯುವುದರಿಂದ ಉಪಾಸನೆಯು ಯುಕ್ತವೇ ಆಗಿದೆ.

**ಸೂತ್ರಾರ್ಥ—**

### ಓಂ ಸಮಾನ ಏವಂ ಚಾಭೇದಾತ್ ಓಂ

ಏವಂ ಚ=ಭಗವಂತನ ಗುಣಗಳು ಅಲೌಕಿಕವಾಗಿದ್ದರೂ ಸರಸ್ವತಿಯು ಸಮಾನೇ ಚ=ಯೋಗ್ಯವಾದ ಗುಣಗಳ ವಿಷಯದಲ್ಲಿಯೇ ಉಪಸಂಹಾರವನ್ನು ಮಾಡಬೇಕು. ಅಯೋಗ್ಯಕ್ರಿಯಾ ವಿಶೇಷಗಳ ಉಪಾಸನೆ ಸರಸ್ವತಿಗಿಲ್ಲವೇ ಎಂದರೆ, ಅಭೇದಾತ್=ಸಾಮಾನ್ಯಕ್ರಿಯೆಗಳಲ್ಲಿಯೇ ಅಂತರ್ಭಾವವನ್ನು ಹೊಂದುವುದ ರಿಂದ.

## ವಿಶೇಷಾಧಿಕರಣ (3-3-13)

ಓಂ ನವಾ ವಿಶೇಷಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿ ಕರಣದಲ್ಲಿ ಆತ್ಮಶಬ್ದೋಕ್ತವಾದ ಗುಣಗಳು ವಿಷಯ. ಕೆಲವು ಉಪಾಸನೆ ಮಾಡಬೇಕಾದ ಗುಣಗಳು, ಕೆಲವು ಉಪಾಸನೆ ಮಾಡಬಾರದ ಗುಣಗಳೂ ಕಂಡಿರುವುದರಿಂದ ಆತ್ಮಶಬ್ದೋಕ್ತವಾದ ಗುಣಗಳನ್ನು ಉಪಾಸನೆ ಮಾಡಬೇಕೋ? ಬೇಡವೋ? ಎಂದು ಸಂಶಯ.

**ಪೂರ್ವಪಕ್ಷ**—ಆತ್ಮಶಬ್ದೋಕ್ತವಾದ ಗುಣಗಳು ಉಪಾಸನೆ ಮಾಡಲು ಯೋಗ್ಯವಾದುವುಗಳಲ್ಲ. ಆತ್ಮಶಬ್ದವು ಭಗವಂತನ ಸಮಸ್ತಗಳನ್ನು ತಿಳಿಸುತ್ತದೆ.

ಅವುಗಳನ್ನು ಉಪಾಸನೆ ಮಾಡಲು ಯೋಗ್ಯತೆಯ ಅಪೇಕ್ಷೆಯಿದೆ. ಉತ್ತಮಾಧಿಕಾರಿಯಾದ ಚತುರ್ಮುಖನಿಗೆ ಪರಮಾತ್ಮನ ಎಲ್ಲ ಧರ್ಮಗಳನ್ನು, ಸರಸ್ವತಿಗೆ ಅಶೇಷ ಗುಣಗಳನ್ನು ಕ್ರಿಯಾಸಾಮಾನ್ಯವನ್ನು, ಉಪಾಸನೆ ಮಾಡುವ ಯೋಗ್ಯತೆಯಿರುತ್ತದೆ. ಹೀಗೆ ಒಬ್ಬೊಬ್ಬರ ಯೋಗ್ಯತೆ ಒಂದೊಂದು ವಿಧವಾಗಿರುತ್ತದೆ. ಆದರೆ ಆತ್ಮಶಬ್ದವು ಮಾತ್ರ ನ್ಯೂನಾಧಿಕವಿಲ್ಲದೆ ಎಲ್ಲ ಗುಣಗಳನ್ನು ತಿಳಿಸುವುದರಿಂದ ಆತ್ಮಶಬ್ದೋಕ್ತವಾದ ಗುಣಗಳನ್ನು ಉಪಾಸನೆ ಮಾಡಬಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅನವಸ್ಥಾ' (ವ್ಯವಸ್ಥೆಯಿಲ್ಲದಿರುವುದು) ಇದನ್ನು ಮತ್ತು 'ಸಂಧಿ' (ಸಂಧಿ=ಅಭಿಸಂಧಿ=ಅಭಿಪ್ರಾಯ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾತ್ಮಶಬ್ದೇನಾಸ್ಯ ಪುರುಷಸ್ಯೈತಾವಂತೋ ಗುಣಾ ಉಚ್ಯಂತ ಇತಿ ವ್ಯವಸ್ಥಿತ್ಯಭಾವಃ । ಯಸ್ಯ ಯಾವಂತೋಽರ್ಥಾ ಯುಗಪದ್ ಧ್ಯಾತುಂ ಶಕ್ಯಂತೇ ತಸ್ಯ ತಾವಂತ ಇತಿ ಸಂಧೇಃ ॥ ೧೩ ॥**

**ಭಾವಾರ್ಥ**—ಆತ್ಮಶಬ್ದದಿಂದ ಈ ಪುರುಷನಿಗೆ ಇಷ್ಟೇ ಗುಣಗಳು ಹೇಳಲ್ಪಡುತ್ತವೆ ಎಂಬ (ವ್ಯವಸ್ಥೆ) ನಿಯಮವಿಲ್ಲದಿರುವುದರಿಂದ ಆತ್ಮಶಬ್ದೋಕ್ತವಾದ ಗುಣಗಳು ಉಪಾಸ್ಯಗಳಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಯಾವನಿಗೆ ಎಷ್ಟುಗುಣಗಳನ್ನು ಒಟ್ಟಿಗೆ ಉಪಾಸನೆ ಮಾಡಲು ಸಾಧ್ಯವಾಗುವುದೋ ಆತ್ಮನಿಗೆ ಅಷ್ಟೇ ಗುಣಗಳು ಆತ್ಮಶಬ್ದದಿಂದ ಹೇಳಲ್ಪಡುತ್ತವೆ ಎಂಬ ಅಭಿಪ್ರಾಯವಿದೆ.

**ವಿವರಣೆ**—ಸಮುದ್ರದ ಅಪಾರ ಜಲರಾಶಿಯಿಂದ ತನ್ನ ಬಳಿಯಿರುವ ಘಟದಲ್ಲಿ ತನ್ನ ಶಕ್ತಿಗೆ ಅನುಗುಣವಾಗಿ ನೀರನ್ನು ತುಂಬಿಸಿ ತರುವಂತೆ, ಉಪಾಸಕನಿಗೆ ಧ್ಯಾನಕಾಲದಲ್ಲಿ ಎಷ್ಟು ಗುಣಗಳನ್ನು ಉಪಸಂಹಾರ ಮಾಡುವ ಶಕ್ತಿಯಿದೆಯೋ ಅವನಿಗೆ ಅಷ್ಟೇ ಗುಣಗಳನ್ನು ಆತ್ಮಶಬ್ದವು ತಿಳಿಸುತ್ತದೆ ಎಂದು ಅಭಿಪ್ರಾಯ. ಆದ್ದರಿಂದ ಆತ್ಮಶಬ್ದೋಕ್ತವಾದ ತಮಗೆ ಯೋಗ್ಯವಾದ ಗುಣಗಳನ್ನು ಎಲ್ಲರೂ ಉಪಾಸನೆ ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ನವಾ ವಿಶೇಷಾತ್ ಓಂ**

ನವಾ=ಆತ್ಮಶಬ್ದದಿಂದ ಎಲ್ಲರಿಗೂ ಪರಮಾತ್ಮನ ಸಮಸ್ತ ಗುಣಗಳ ಗ್ರಹಣವಾಗುವುದಿಲ್ಲ. ಏಕೆಂದರೆ, ವಿಶೇಷಾತ್=ಅಧಿಕಾರಿಯೋಗ್ಯತಾ ವಿಶೇಷದಿಂದಾಗಿ.

## ಸಂಭೃತ್ಯಧಿಕರಣ (3-3-14)

ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಸಂಭೃತಿ (ಸರಿಯಾಗಿ ಪೋಷಿಸುವುದು) (ದ್ಯುವ್ಯಾಪ್ತಿ ಪ್ರಕಾಶದಿಂದ ವ್ಯಾಪ್ತಿ) ಎಂಬ ಗುಣಗಳು ವಿಷಯ. ಉಪಾಸನೆ ಮಾಡಬಹುದಾದ ಗುಣಗಳು ಕೆಲವು ಮತ್ತು ಉಪಾಸನೆ ಮಾಡಬಾರದ ಗುಣಗಳು ಕೆಲವು. ಹೀಗೆ ಎರಡು ವಿಧವಾದ ಗುಣಗಳು ಕಂಡಿರುವುದರಿಂದ ಸಂಭೃತಿ ಮತ್ತು ದ್ಯುವ್ಯಾಪ್ತಿ ಎಂಬ ಗುಣಗಳು ಸರ್ವರಿಂದಲೂ ಉಪಾಸ್ಯಗಳೋ? ಅಲ್ಲವೋ? ಎಂದು ಸಂದೇಹ.

**ಪೂರ್ವಪಕ್ಷ**—ಪರಮಾತ್ಮನಲ್ಲಿ ಸಂಭೃತಿ, ದ್ಯುವ್ಯಾಪ್ತಿ ಎಂಬ ಗುಣಗಳೂ ಪ್ರಮಾಣದಿಂದ ಸಿದ್ಧವಾಗಿವೆ. ಇವುಗಳನ್ನು ಉಪಾಸಕನು ಉಪಾಸನೆ ಮಾಡುವುದರಿಂದ 'ಯಂ ಯಂ ಯಥೋಪಾಸತೇ ತದೇವ ಭವತಿ' ಎಂಬ ನಿಯಮದಂತೆ ಸ್ವಾವರ-ಭರಣವು, ಪ್ರಕಾಶದಿಂದ ವ್ಯಾಪ್ತಿಯೂ ಸಿದ್ಧವಾಗುತ್ತವೆ. ಇವುಗಳು ಮುಮುಕ್ಷುವಿಗೆ ಅಪೇಕ್ಷಿತವಾಗಿವೆ. ಆದ್ದರಿಂದ ಆ ಗುಣಗಳೂ ಉಪಾಸ್ಯಗಳೇ ಆಗಿವೆ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಿಸುವ ಯುಕ್ತಿ ''ಅವಿಶೇಷಿತಾ'' (ಮುಮುಕ್ಷುತ್ವವು ಎಲ್ಲರಿಗೂ ಇರುವುದು) ಎಂಬುದು. ಇದನ್ನು ಮತ್ತು 'ಪ್ರಮಾಣಬಲ' (ಪ್ರಮಾಣಬಲದಿಂದ ಬುದ್ಧ್ಯಾರೂಢವಾಗುವಷ್ಟು ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು) ಎಂಬ ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಮುಮುಕ್ಷುವ ಇತ್ಯವಿಶೇಷಾದ್ಭರಣಸ್ಯ ದ್ಯುತೇಶ್ಚ ಸರ್ವೇಷಾಮಪೇಕ್ಷಿತತ್ವಾಚ್ಚ ಸಂಭೃತಿದ್ಯುವ್ಯಾಪ್ತೀ ಅಪಿ ಸಾಮಾನ್ಯೇ ।**

**'ಸತ್ಯೋ ಜ್ಞಾನಂ ಪರಮಾನಂದರೂಪ ಆತ್ಮೇತ್ಯೇವಂ**

**ನಿತ್ಯದೋಪಾಸನಂ ಸ್ಯಾತ್ ।**

**ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ ಸರ್ವೈರ್ಗುಣೈರ್ದೇವಗಣಾ ಉಪಾಸತೇ ।**

**ಗುಣ್ಯಾಕಾರಸ್ಮೃತೇರೇವ ದ್ಯುತಿಮಾತ್ರಂ ಪ್ರತೀಯತೇ ।**
**ನ ವ್ಯಾಪ್ತಿರ್ಜಗದಸ್ಮೃತ್ಯಾ ನಾನಾಶಕ್ತಿರ್ಯತೋ ಮತಾ ।**
**ದೇವಾನಾಂ ಯುಗಪಜ್ಜ್ಞಾನಂ ಮಾನುಷಾಣಾಂ ತಥಾ ನ ತು ।**
**ಪರ್ಯಾಯೇಣಾಪಿ ಸತ್ಯಾಃ ಸ್ಯುರ್ನೈವಾನ್ಯೇಷಾಂ ಕಥಂಚನ ॥'**

**ಇತ್ಯಾದಿ ಪ್ರಮಾಣಬಲಾತ್ ॥ ೧೪ ॥**

**ಭಾವಾರ್ಥ**—ಮೋಕ್ಷ ಪಡೆಯುವ ಇಚ್ಛೆ ಎಲ್ಲರಿಗೂ ಇರುವುದರಿಂದ ಭರಣ, ದ್ಯುತಿ ಎಂಬ ಗುಣಗಳು ಎಲ್ಲರಿಗೂ ಅಪೇಕ್ಷಿತವಾದ್ದರಿಂದಲೂ ಅವುಗಳು ಎಲ್ಲರಿಗೂ ಉಪಾಸ್ಯಗಳೇ ಆಗಿವೆ ಎಂದು ಆಕ್ಷೇಪಿಸಬಾರದು. ಏಕೆಂದರೆ, 'ಸತ್ಯ, ಜ್ಞಾನ, ಪರಾನಂದ, ಆತ್ಮ ಎಂಬುದಾಗಿ ಯಾವಾಗಲೂ ಉಪಾಸನೆಯನ್ನು ಮಾಡಬೇಕು. ಜ್ಞಾನಿಯು ಬೇರೆ ಯಾವ ಗುಣದಿಂದಲೂ ಉಪಾಸನೆಯನ್ನು ಮಾಡಬಾರದು. ದೇವತೆಗಳು ಎಲ್ಲ ಗುಣಗಳಿಂದ ಉಪಾಸನೆ ಮಾಡುತ್ತಾರೆ. ಗುಣವುಳ್ಳ ಭಗವಂತನ ಸ್ಮರಣೆಯಿಂದಲೇ ಪ್ರಕಾಶವು ತೋರುತ್ತದೆ. ಸಮಸ್ತ ಪ್ರಪಂಚ ಜ್ಞಾನವೇ ಇಲ್ಲದಿರುವುದರಿಂದ ವ್ಯಾಪ್ತಿಯು ಪ್ರತೀತವಾಗುವುದಿಲ್ಲ. ಏಕೆಂದರೆ ಸ್ವರೂಪಶಕ್ತಿ (ಯೋಗ್ಯತೆ) ಭಿನ್ನಭಿನ್ನವಾಗಿದೆ. ದೇವತೆಗಳಿಗೆ ಒಟ್ಟಿಗೆ ಆ ಗುಣಗಳ ಜ್ಞಾನ ಬರುತ್ತದೆ. ಮನುಷ್ಯರಿಗೆ ಒಟ್ಟಿಗೆ ಆ ಗುಣಗಳ ಜ್ಞಾನ ಬರುವುದಿಲ್ಲ. ಬೇರೆಯವರಿಗೆ ಕ್ರಮವಾಗಿಯೂ (ಒಂದರನಂತರ ಒಂದು) ಆ ಗುಣಗಳು ಪ್ರತೀತವಾಗುವುದಿಲ್ಲ ಎಂಬ ಪ್ರಮಾಣದ ಬಲವಿರುವುದರಿಂದ.

**ವಿವರಣೆ**—ಧ್ಯಾನಕಾಲದಲ್ಲಿ ಒಟ್ಟಿಗೆ ಎಷ್ಟು ಗುಣಗಳು ಬುದ್ಧ್ಯಾರೂಢವಾಗುವವೋ ಅಷ್ಟೇ ಗುಣಗಳನ್ನು ಉಪಾಸನೆ ಮಾಡಬೇಕು. ದೇವತೆಗಳಿಗೆ ಸಂಭೃತಿ ಮೊದಲಾದ ಅನೇಕ ಗುಣಗಳು ಏಕಕಾಲದಲ್ಲಿ ಬುದ್ಧ್ಯಾರೂಢವಾಗುವುದರಿಂದ ಅವರು ಅನೇಕ ಗುಣಗಳನ್ನು ಉಪಾಸನೆ ಮಾಡುತ್ತಾರೆ. ಮನುಷ್ಯರಿಗೆ ಒಟ್ಟಿಗೆ ನಾಲ್ಕು ಗುಣಗಳು ಮಾತ್ರ ಬುದ್ಧ್ಯಾರೂಢವಾಗುವುದರಿಂದ ಆನಂದಾದಿ ನಾಲ್ಕು ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು. ಇದಕ್ಕೆ ಕಾರಣ ಅವರವರ

ಯೋಗ್ಯತೆಯೇ. ಹಾಗಾದರೆ ಮುಮುಕ್ಷು ಅಪೇಕ್ಷಿಸುವ ಪ್ರಕಾಶಾದಿಗಳು ಲಭಿಸುವುದು ಹೇಗೆ? ಎಂದರೆ, ಇಂದ್ರನೀಲಮಣಿ ಸದೃಶವಾದ ಪ್ರಭೆಯುಳ್ಳ ಪ್ರಕಾಶಮಾನವಾದ ಅವಯವಗಳುಳ್ಳ ರಾಮಕೃಷ್ಣಾದಿ ರೂಪಗಳನ್ನು ಸ್ಮರಿಸುವುದರಿಂದ ತಮ್ಮ ಅವಯವಗಳಿಗೂ ಪ್ರಕಾಶವು ಲಭಿಸುತ್ತದೆ. ಜಗದ್ವ್ಯಾಪ್ತತ್ವೇನ ಭಗವಂತನ ಸ್ಮೃತಿಯು ಬರುವುದಿಲ್ಲವಾದ್ದರಿಂದ ವ್ಯಾಪ್ತಿಯು ಲಭಿಸಲಾರದು. ಅಂತೂ ಮನುಷ್ಯನು ಆನಂದಾದಿ ನಾಲ್ಕು ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಸಂಭೃತಿದ್ಯುತಿವ್ಯಾಪ್ತ್ಯಪಿ ಚಾತಃ ಓಂ**

ಸಂಭೃತಿದ್ಯುವ್ಯಾಪ್ತೀ=ಸಂಭೃತಿ, ದ್ಯುತಿವ್ಯಾಪ್ತಿ ಎಂಬ ಗುಣಗಳು ಸರ್ವೋಪಾಸ್ಯಗಳಲ್ಲ. ಏಕೆಂದರೆ ಅತಶ್ಚ=ಯೋಗ್ಯತಾ ವಿಶೇಷದಿಂದಲೇ.

## ಪುರುಷವಿದ್ಯಾಧಿಕರಣ (3-3-15)

ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ಸರ್ವವಿದ್ಯೋಪಸಂಹಾರ. ಮಾಡಬೇಕಾದ ಕ್ರಿಯಾಯಗಳು, ಮಾಡಬಾರದ ಕ್ರಿಯೆಗಳೂ ಕಂಡಿರುವುದರಿಂದ ಸರ್ವವಿದ್ಯೋಪಸಂಹಾರವನ್ನು ಮಾಡಬೇಕೋ? ಬೇಡವೋ? ಎಂಬುದು ಸಂಶಯ.

**ಪೂರ್ವಪಕ್ಷ—**ಪುರುಷಸೂಕ್ತಾದಿಗಳಲ್ಲಿ ಪರಮಾತ್ಮನ ಬಹಳ ಗುಣಗಳು ಪ್ರತಿಪಾದಿತವಾಗಿವೆ. 'ಸತ್ಯಂ ಜ್ಞಾನಮನಂತಮ್' ಮುಂತಾದ ವಾಕ್ಯಗಳು ಅಲ್ಪಗುಣಗಳನ್ನು ಪ್ರತಿಪಾದನೆ ಮಾಡುತ್ತಿವೆ. ಮಹಾಗುಣೋಪಾಸಕನು ಪುರುಷಸೂಕ್ತಾದಿಗಳಲ್ಲಿ ಹೇಳಿದ ಬಹುಗುಣಗಳನ್ನು ಉಪಸಂಹಾರ ಮಾಡಿ ಉಪಾಸನೆ ಮಾಡಲಿ. ಅಲ್ಪಗುಣೋಪಾಸಕನು 'ಸತ್ಯಂ ಜ್ಞಾನಂ' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಅಷ್ಟೇ ಗುಣಗಳನ್ನು ಉಪಸಂಹಾರ ಮಾಡಿ ಉಪಾಸನೆ ಮಾಡಲಿ. ಆದ್ದರಿಂದ ಸರ್ವವೇದೋಕ್ತವಾದ ಗುಣಗಳನ್ನು ಉಪಸಂಹಾರ ಮಾಡುವುದು ಯುಕ್ತವಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅಪ್ರಯೋಜನತಾ' (ಸರ್ವ ಗುಣೋಪಸಂಹಾರದಿಂದ ಪ್ರಯೋಜನವಿಲ್ಲದಿರುವುದರಿಂದ ವ್ಯರ್ಥ) ಎಂಬುದು. ಇದನ್ನು 'ಆನತಿ' (ಪ್ರಾಪ್ತಿ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ಕ್ವಚಿದ್ ಬಹುಗುಣಾಃ ಕ್ವಚಿದಲ್ಪಗುಣಾಃ ಶ್ರುತಿಷ್ವೇವೋಚ್ಯಂತ ಇತ್ಯುಪಸಂಹಾರಸ್ಯಾಪ್ರಯೋಜನತೇತಿ ನ ವಾಚ್ಯಮ್ । 'ಗುಣಾಃ ಸರ್ವೇ ಬ್ರಹ್ಮಣೈವ ಹ್ಯುಪಾಸ್ಯಾ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ ।' ಇತಿ ಶ್ರುತೇಃ । ಸರ್ವಗುಣೋಪಾಸಕಸ್ಯಾಪ್ಯಧಿಕಾರಿಣೋ ಭಾವಾದೇಕತ್ರಾ-ಪೃಥಕ್‌ಸರ್ವಗುಣಾನುಕ್ತೇರ್ಬಲಾದುಪಸಂಹಾರಾನತೇಃ ॥ ೧೫ ॥**

**ಭಾವಾರ್ಥ**—ವೇದಗಳಲ್ಲಿ ಕೆಲವು ಕಡೆಗಳಲ್ಲಿ (ಪುರುಷಸೂಕ್ತಾದಿಗಳಲ್ಲಿ) ಬಹುಗುಣಗಳು ಹೇಳಲ್ಪಡುತ್ತವೆ. ಇನ್ನು ಕೆಲವು ಕಡೆಗಳಲ್ಲಿ (ಸತ್ಯಂ ಜ್ಞಾನಂ ಇತ್ಯಾದಿ ವಾಕ್ಯಗಳಲ್ಲಿ) ಅಲ್ಪಗುಣಗಳು ಹೇಳಲ್ಪಡುತ್ತವೆ. ಆಯಾ ಅಧಿಕಾರಿಗಳು ಆಯಾ ಭಾಗಗಳಲ್ಲಿ ಹೇಳಲ್ಪಟ್ಟ ಗುಣಗಳನ್ನು ಉಪಸಂಹಾರ ಮಾಡಿದರೆ ಸಾಕು. ಸರ್ವ ವೇದೋಕ್ತಗುಣಗಳನ್ನು ಉಪಸಂಹಾರ ಮಾಡಿದರೆ ಯಾವ ಪ್ರಯೋಜನವೂ ಇಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಎಲ್ಲ ಗುಣಗಳೂ ಚತುರ್ಮುಖ ನಿಂದಲೇ ಉಪಾಸಿಸಲು ಯೋಗ್ಯವಾದವುಗಳು. ಬೇರೆ ದೇವತೆಗಳಿಂದಲೂ ಅಲ್ಲ ಎಂದಮೇಲೆ ಎಲ್ಲ ಮನುಷ್ಯರಿಂದ ಅಲ್ಲ ಎನ್ನುವುದನ್ನು ಏನು ಹೇಳಬೇಕು?' ಎಂದು ಶ್ರುತಿಯಿರುವುದರಿಂದ ಸರ್ವಗುಣಗಳನ್ನು ಉಪಾಸನೆ ಮಾಡುವ ಅಧಿ ಕಾರಿಯಿದ್ದಾನೆ ಎಂದು ಸಿದ್ಧವಾಯಿತು. ಸರ್ವಗುಣಗಳನ್ನೂ ಒಂದು ಕಡೆಯಲ್ಲಿ ಹೇಳದೇ ಇರುವುದರಿಂದ ಅರ್ಥಾತ್ ಸರ್ವಗುಣೋಪಸಂಹಾರವು ಪ್ರಾಪ್ತವಾಗು ತ್ತದೆ.

**ವಿವರಣೆ**— ಸರ್ವಗುಣೋಪಾಸನೆಯನ್ನು ಮಾಡುವ ಅಧಿಕಾರಿ ಇದ್ದಾನೆ ಎಂದು 'ಗುಣಾಃ ಸರ್ವೇ ಬ್ರಹ್ಮಣೈವ ಹ್ಯುಪಾಸ್ಯಾಃ' (ಬ್ರಹ್ಮನಿಂದ ಸಕಲಗುಣಗಳು ಉಪಾಸನೆ ಮಾಡಲ್ಪಡಬೇಕು) ಎಂದು ಸ್ಮೃತಿಯು ತಿಳಿಸುತ್ತಿದೆ. ಆದರೆ ಸರ್ವಗುಣಗಳನ್ನೂ ಎಲ್ಲೂ ಒಂದು ಕಡೆ ಹೇಳಲಿಲ್ಲ. ಪುರುಷಸೂಕ್ತದಲ್ಲಿಯೂ

ಬಹಳ ಗುಣಗಳನ್ನು ಹೇಳಿದ್ದಾರೆ. ಆದರೆ ಸರ್ವಗುಣಗಳನ್ನು ಹೇಳಿಲ್ಲ ಎಂದರೆ ಅರ್ಥಾತ್ ಸರ್ವವೇದೋಕ್ತವಾದ ಗುಣಗಳನ್ನು ಉಪಸಂಹಾರ ಮಾಡಬೇಕು ಎಂದು ಪ್ರಾಪ್ತವಾಗುತ್ತದೆ ಎಂಬುದು ಸಿದ್ಧಾಂತ.

ಮೂಲದಲ್ಲಿ 'ಏಕತ್ರಾಽಪೃಥಕ್ ಸರ್ವಗುಣಾನುಕ್ತೇಶ್ಚ' ಎಂದಿದೆ. ಏಕತ್ರ=ಒಂದು ಭಾಗದಲ್ಲಿಯೂ ಆ=ಚೆನ್ನಾಗಿ ಪೃಥಕ್=ವಿಸ್ತಾರದಿಂದ ಸರ್ವಗುಣಾನುಕ್ತೇಃ=ಎಲ್ಲ ಗುಣಗಳನ್ನು ಹೇಳದಿರುವುದರಿಂದ ಎಂದರ್ಥ.

**ಸೂತ್ರಾರ್ಥ—**

**ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ**

ಪುರುಷವಿದ್ಯಾಯಾಮಪಿ=ಪುರುಷಸೂಕ್ತದಲ್ಲಿಯೂ ಇತರೇಷಾಂ=ಬೇರೆ ಕೆಲವು ಗುಣಗಳನ್ನು ಅನಾಮ್ನಾನಾತ್=ಹೇಳದಿರುವುದರಿಂದ ಚ=ಕೆಲವನ್ನು ಹೇಳಿರುವುದರಿಂದ ಸರ್ವವೇದೋಕ್ತವಾದ ಗುಣೋಪಸಂಹಾರವನ್ನು ಮಾಡ ಬೇಕು.

## ವೇಧಾದ್ಯಧಿಕರಣ (3-3-16)

ಓಂ ವೇಧಾದ್ಯರ್ಥಭೇದಾತ್ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿ ಕರಣಕ್ಕೆ ಭೇದನಾದಿಗುಣಗಳೇ ವಿಷಯ. ಉಪಾಸನೆಗೆ ಯೋಗ್ಯವಾದ, ಉಪಾಸನೆಗೆ ಯೋಗ್ಯವಿಲ್ಲದ ಗುಣಗಳೂ ಕಂಡಿರುವುದರಿಂದ ಭೇದನಾದಿಗಳು ಸರ್ವರಿಂದಲೂ ಉಪಾಸ್ಯಗಳೋ? ಅಲ್ಲವೋ? ಎಂದು ಸಂದೇಹ.

**ಪೂರ್ವಪಕ್ಷ—**'ಅಗ್ನೇ ತ್ವಚಂ ಯಾತುಧಾನಸ್ಯ ಭಿಂದಿ (ಪರಮಾತ್ಮನೇ! ರಾಕ್ಷಸ ಚರ್ಮವನ್ನು ಸೀಳು) ಎಂಬ ಶ್ರುತಿಯಲ್ಲಿ ಭೇದನಾದಿ ಗುಣಗಳು ಭಗವಂತನಲ್ಲಿ ಶ್ರುತವಾಗಿವೆ. ಈ ಗುಣಗಳನ್ನು ಭಗವಂತನಲ್ಲಿ ಉಪಾಸನೆ ಮಾಡುವುದರಿಂದ ದುಷ್ಟನಿಗ್ರಹರೂಪವಾದ ಫಲವು ಸಿದ್ಧವಾಗುತ್ತದೆ. ಮತ್ತು ಇದು ಎಲ್ಲರಿಗೆ ಅಪೇಕ್ಷಿತವೂ ಆಗಿದೆ. ಆದ್ದರಿಂದ ಭಗವಂತನಲ್ಲಿರುವ ಭೇದನಾದಿ ಗುಣಗಳನ್ನು ಉಪಾಸನೆ ಮಾಡಬೇಕು ಎಂಬುದು ಪೂರ್ವಪಕ್ಷ. ಇದಕ್ಕೆ ಸಾಧಕ

ವಾದ ಯುಕ್ತಿ 'ಅಪ್ರಯೋಜನತಾ' (ದುರ್ಜನರಿಗೆ ಸಜ್ಜನದ್ರೋಹ ರೂಪವಾದ ಪ್ರಯೋಜನವಾಗದಿರುವುದು) ಎಂಬುದು.

**ಸಿದ್ಧಾಂತ**–ಸಿದ್ಧಾಂತಸಾಧಕವಾದ ಯುಕ್ತಿ 'ಆನತಿ' (ಪ್ರಾಪ್ತಿ) ಎಂಬುದು. ಯತಿಗಳಿಗೂ ಉಪಾಸನೆಯು ಪ್ರಾಪ್ತವಾದ್ದರಿಂದ ಅವರಿಗೆ ಇಂತಹ ಉಪಾಸನೆಯು ನಿಷಿದ್ಧವಾದ್ದರಿಂದ ಭೇದನಾದಿಗುಣಗಳು ಸರ್ವರಿಂದಲೂ ಉಪಾಸ್ಯಗಳಲ್ಲ ಎಂದು ಸಿದ್ಧವಾಗುತ್ತದೆ.

ವಸ್ತುತಃ ನ್ಯಾಯವಿವರಣದಲ್ಲಿ ಶ್ರೀಮದಾಚಾರ್ಯರು ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ವಿವರಿಸಿಲ್ಲ. ಭಾಷ್ಯದಲ್ಲಿ ಹೇಳಿದಂತೆ ಶಿಷ್ಯರು ತಾವೇ ಊಹಿಸಿಕೊಳ್ಳಲಿ ಎಂಬುದು ಅವರ ಆಶಯ. ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನೂ ಪ್ರತ್ಯೇಕವಾಗಿ ಹೇಳಲಿಲ್ಲ. ಒಂದಧಿಕರಣದಲ್ಲಿ ಹೇಳಿದ ನ್ಯಾಯಗಳನ್ನು ಮತ್ತೊಂದು ಕಡೆ ಆವೃತ್ತಿ ಮಾಡಿಕೊಳ್ಳಬೇಕು ಎಂಬುದನ್ನೂ ಈ ಹಿಂದೆ ಅನೇಕಬಾರಿ ಮಾಡಿ ತೋರಿಸಿದ್ದಾರೆ. ಆವೃತ್ತಿಯ ಜವಾಬ್ದಾರಿಯನ್ನೂ ಶಿಷ್ಯರಿಗಾಗಿಯೇ ಬಿಟ್ಟಿದ್ದಾರೆ. ಅದನ್ನು ಸಮರ್ಥವಾಗಿ ನಿಭಾಯಿಸಿದ್ದಾರೆ ವಾದಿರಾಜಸ್ವಾಮಿಗಳು. ಅವರ ವ್ಯಾಖ್ಯಾನವನ್ನು ಅನುಸರಿಸಿ ಈ ಅಧಿಕರಣವನ್ನು ರಚಿಸಲಾಗಿದೆ.

**ಸೂತ್ರಾರ್ಥ—**

### ಓಂ ವೇಧಾದ್ಯರ್ಥಭೇದಾತ್ ಓಂ

ವೇಧಾದಿ=ದುಷ್ಟರನ್ನು ಶಿಕ್ಷಿಸುವುದೇ ಮುಂತಾದ ಗುಣಗಳು ಯತಿಗಳಿಂದ ಉಪಾಸ್ಯಗಳಲ್ಲ. ಏಕೆಂದರೆ, ಅರ್ಥಭೇದಾತ್=ಯತಿಗಳಿಂದ ಪ್ರಾಪ್ಯವಾದ ಫಲದಲ್ಲಿ ವೈಲಕ್ಷಣ್ಯವಿರುವುದರಿಂದ.

## ಮುಕ್ತೋಪಾಸನಾಧಿಕರಣ (3-3-17)

ಓಂ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ಓಂ ಎಂಬ ಸೂತ್ರದಿಂದ ಪ್ರಾರಂಭವಾಗುವ ಈ ಅಧಿಕರಣದ ವಿಷಯ ಪ್ರಕೃತವಾದ ಉಪಾಸನೆ. ಮುಕ್ತರು ಈಗಾಗಲೇ ಪಡೆಯಬೇಕಾದ ಫಲವನ್ನು

ಪಡೆದಿದ್ದಾರೆ. ಆದರೂ ಕ್ರಿಯೆಗಳು ಶ್ರುತವಾಗುತ್ತಿರುವುದರಿಂದ ಸಂಶಯ ಬರುತ್ತದೆ— ಮುಕ್ತರು ಉಪಾಸನೆಯನ್ನು ಮಾಡುತ್ತಾರೋ? ಇಲ್ಲವೋ? ಎಂದು.

**ಪೂರ್ವಪಕ್ಷ**—ಮುಕ್ತನು ಮೋಕ್ಷದಲ್ಲಿಯೂ ಉಪಾಸನೆಯನ್ನು ಮಾಡುವುದ ರಿಂದ ಉಪಾಸನೆಯಿಂದ ಫಲವು ಪ್ರಾಪ್ತವಾಗುವುದು ಎಂದು ಒಪ್ಪಬೇಕಾಗು ವುದು. ಫಲವು ಪ್ರಾಪ್ತವಾದರೆ ಆ ಫಲವು ಉಪಾಸನೆಗಿಂತ ಪೂರ್ವದಲ್ಲಿ ಮುಕ್ತಿಯಲ್ಲಿ ಇಲ್ಲದಿರುವುದರಿಂದ ಮುಕ್ತನು ಅಪೂರ್ಣನಾಗಬೇಕಾಗುತ್ತದೆ. ಆದ್ದರಿಂದ ಮುಕ್ತಿಯಲ್ಲಿ ಉಪಾಸನೆಯು ಯುಕ್ತವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಅತಿಪ್ರಸಂಗ**' ಎಂಬುದು. ಇದನ್ನು ಮತ್ತು '**ಕಾರಣ**' (ಸಂಸ್ಕಾರವೆಂಬ ಕಾರಣವಿರುವುದು) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಮುಕ್ತಾವುಪಾಸನಾಭಾವೇ ಫಲಾದಿಕಮಪಿ ಸ್ಯಾದಿತಿ ಪ್ರಸಂಗಃ । ಉಪಾಸನಾಯಾಃ ಸಂಸ್ಕಾರಾಖ್ಯಕಾರಣಸ್ಯ ಸತ್ತ್ವಾತ್ । 'ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ ।' ಇತ್ಯವೃದ್ಧಿಪ್ರಮಾಣಭಾವಾಚ್ಚ ॥ ೧೬ ॥**

**ಭಾವಾರ್ಥ**—ಮುಕ್ತಿಯಲ್ಲಿ ಉಪಾಸನೆಯು ಇರುವುದಾದರೆ ಅದರಿಂದ ಫಲವೂ ಪ್ರಾಪ್ತವಾಗಬೇಕಾದೀತು ಎಂಬ ಅತಿಪ್ರಸಂಗ ಬರುತ್ತದೆ ಎಂದು ಆಕ್ಷೇಪಿಸಬಾರದು. ಉಪಾಸನೆಗೆ ಬೇಕಾದ ಸಂಸ್ಕಾರವೆಂಬ ಕಾರಣವಿರುವುದರಿಂದ. ಮತ್ತು 'ಮೋಕ್ಷದಲ್ಲಿ ಜೀವನು ಕ್ಷೀಣನೂ ಆಗುವುದಿಲ್ಲ, ವೃದ್ಧಿಯನ್ನೂ ಹೊಂದುವು ದಿಲ್ಲ' ಎಂದು ಅವೃದ್ಧಿಯ (ಅಪೂರ್ಣತ್ವದ) ವಿಷಯದಲ್ಲಿ ಪ್ರಮಾಣವೂ ಇರುವುದರಿಂದ.

**ವಿವರಣೆ**—ಮುಕ್ತನು ಮುಕ್ತಿಯಲ್ಲೂ ಉಪಾಸನೆಯನ್ನು ಮಾಡುತ್ತಾನೆ. ಏಕೆಂದರೆ, ಉಪಾಸನೆಗೆ ಕಾರಣ ವಾದ ಸಂಸ್ಕಾರವಿರುವುದರಿಂದ. ಸಂಸ್ಕಾರವೆಂದರೆ ಸ್ವಭಾವ. ಮೊದಲಿನಿಂದಲೂ ಉಪಾಸನೆ ಮಾಡುವ ಸ್ವಭಾವವಿರುವುದರಿಂದ ಮುಕ್ತಿಯಲ್ಲಿ ಸ್ವಭಾವದಿಂದಲೇ ಉಪಾಸನೆಯನ್ನು ಮಾಡುತ್ತಾನೆ. ಹಾಗಾದರೆ ಫಲವು ಪ್ರಾಪ್ತವಾಗಿ ಅಪೂರ್ಣತ್ವ ಬರುತ್ತದೆಯಲ್ಲ? ಎಂದರೆ, ಅವನ ಉಪಾಸನೆಗೆ ಯಾವುದೇ ಫಲವಿಲ್ಲವೆಂದು ಪ್ರಮಾಣವಿರುವುದರಿಂದ ಅಪೂರ್ಣತ್ವವು

ಬರುವುದಿಲ್ಲ. ಆದ್ದರಿಂದ ಮುಕ್ತಿಯಲ್ಲೂ ಉಪಾಸನೆಯು ಯುಕ್ತವಾಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಮ್ ಓಂ**

ಹಾನೌ=ಬಂಧಹಾನಿರೂಪವಾದ ಮೋಕ್ಷದಲ್ಲಿ ತದುಕ್ತಂ='ಏತತ್ ಸಾಮಗಾಯನ್ನಾಸ್ತೇ' ಎಂದು ಮುಕ್ತರ ಉಪಾಸನೆಯು ಹೇಳಲ್ಪಟ್ಟಿದೆ. ಆ ಉಪಾಸನೆಯು ಕುಶಾಚ್ಛಂದಸ್ತುತ್ಯುಪಗಾನವತ್=ಸ್ವಾಧ್ಯಾಯದ ನಂತರ ದರ್ಭೆಯನ್ನು ಹಿಡಿದು ಸ್ವೇಚ್ಛೆಯಿಂದ ಮಾಡುವ ಯಜುರಾದಿ ಮಂತ್ರಗಳಿಂದ ಸ್ತುತಿ, ಸಾಮವೇದದಿಂದ ಮಾಡುವ ಗಾನದಂತೆ. ಸ್ವೇಚ್ಛೆಯಿಂದಲೇ ಮಾಡಲ್ಪಡುವುದು. ಏಕೆಂದರೆ, ಉಪಾಯನಶಬ್ದಶೇಷತ್ವಾತ್=ಉಪಾಸನೆಯನ್ನು ವಿಧಿಸುವ ವಾಕ್ಯಗಳು ಮೋಕ್ಷವಾಕ್ಯಗಳಿಗೆ ಸಂಬಂಧಿಸಿದ್ದರಿಂದ.

## ಛಂದಾಧಿಕರಣ (3-4-18)

ಓಂ ಛಂದತ ಉಭಯಾವಿರೋಧಾತ್ ಓಂ ಎಂಬ ಸೂತ್ರದಿಂದ ಆರಂಭಗೊಳ್ಳುವ ಈ ಅಧಿಕರಣದಲ್ಲಿ ಮುಕ್ತರು ವಿಷಯ. ಕರ್ಮಾಚರಣೆಯನ್ನು ಮಾಡಿದರೂ ಮಾಡದಿದ್ದರೂ ಯಾವ ವಿರೋಧವೂ ಇಲ್ಲದಿರುವುದರಿಂದ ಸಂಶಯ ಬರುತ್ತದೆ– ಮುಕ್ತಿಯಲ್ಲೂ ಉಪಾಸನೆಯಂತೆ ಕರ್ಮವನ್ನು ಮಾಡುತ್ತಾರೋ? ಇಲ್ಲವೋ? ಎಂದು.

**ಪೂರ್ವಪಕ್ಷ—**ಮುಕ್ತರು ಮುಕ್ತಿಯಲ್ಲಿ ನಿತ್ಯವೂ ಉಪಾಸನೆಯನ್ನು ಮಾಡುವಂತೆ ಕರ್ಮವನ್ನು ಮಾಡಬೇಕು. ಕರ್ಮಾಚರಣೆಯನ್ನು ಮಾಡುವ ಶಕ್ತಿಯು ಅವರಲ್ಲಿದೆ. ಕರ್ಮವು ಪೂಜಾರೂಪವೆಂದು ಸಿದ್ಧವಾಗಿದೆ. ಇಷ್ಟಿದ್ದರೂ ಕರ್ಮವನ್ನು ಮಾಡುವುದಿಲ್ಲವೆಂದರೆ ಉಪಾಸನೆಯನ್ನು ಮಾಡುವ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅದೂರಸಂಶ್ರಯ' (ಶಕ್ತಿ

ಯಿರುವುದರಿಂದ ಕರ್ಮಮಾಡುವುದು) ಎಂಬುದು ಇದನ್ನು ಮತ್ತು 'ಕಾರ್ಯ ವೈಶೇಷ್ಯ' (ಉಪಾಸನೆಗೂ ಕರ್ಮಕ್ಕೂ ವ್ಯತ್ಯಾಸವಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಕರ್ಮಕರಣಶಕ್ತೇರಪ್ಯದೂರತ್ವಾತ್ ತತ್ಸಂಶ್ರಯನಿಯಮಃ। ಉಪಾಸನಾಖ್ಯಕಾರ್ಯೇ ನಿತ್ಯಕೃತಿಸಂಸ್ಕಾರೋ ನ ತಥಾ ಕರ್ಮಣೀತಿ ಕಾರ್ಯವೈಶೇಷ್ಯಾತ್ ॥ ೧೭ ॥**

**ಭಾವಾರ್ಥ—**ಕರ್ಮವನ್ನು ಮಾಡುವ ಶಕ್ತಿಯು ಮುಕ್ತರಲ್ಲಿರುವುದರಿಂದ ಕರ್ಮವನ್ನು ಮಾಡಲೇಬೇಕು ಎಂದು ಪೂರ್ವಪಕ್ಷ ಮಾಡಬಾರದು. ಉಪಾಸನೆ ಯೆಂಬ ಕಾರ್ಯವು ಮಾಡಲು ಹೇಗೆ ಸಂಸ್ಕಾರವೆಂಬುದು ನಿತ್ಯವಾಗಿದೆಯೋ ಕರ್ಮ ಮಾಡುವುದರಲ್ಲಿ ಅಂತಹ ಸಂಸ್ಕಾರವಿಲ್ಲದಿರುವುದರಿಂದ ಉಪಾಸನೆಗೂ ಕರ್ಮಕ್ಕೂ ವೈಲಕ್ಷಣ್ಯವಿದೆ.

**ವಿವರಣೆ—**ಉಪಾಸನೆಯನ್ನು ಮಾಡುವಂತೆ ಮುಕ್ತಿಯಲ್ಲಿ ಕರ್ಮವನ್ನು ಮಾಡಲಿ ಎಂದು ಹೇಳುವಂತಿಲ್ಲ. ಉಪಾಸನೆ ಮಾಡಲು ಬೇಕಾದ ಸಂಸ್ಕಾರ=ಸ್ವಭಾವವಿದೆ. ಆದರೆ ಕರ್ಮ ಮಾಡಲು ಬೇಕಾದ ಸಂಸ್ಕಾರವಿಲ್ಲ. ಬ್ರಾಹ್ಮಣನಿಗೆ ವೇದಾಧ್ಯಯನದ ಸಂಸ್ಕಾರವು ನಿತ್ಯದಲ್ಲಿರುವಂತೆ ಅಂಗಡಿ ವ್ಯಾಪಾರದ ಸಂಸ್ಕಾರವಿರುವುದಿಲ್ಲವಷ್ಟೇ! ಹಾಗಾದರೆ ಕರ್ಮವನ್ನು ಮಾಡುವುದೇ ಇಲ್ಲವೇ? ಎಂದರೆ, ಮಾಡುತ್ತಾನೆ. ಆದರೆ ಉಪಾಸನೆಯನ್ನು ಮಾಡುವಂತೆ ನಿಯತವಾಗಿ ಮಾಡುವುದಿಲ್ಲ. ಇಚ್ಛೆ ಬಂದಾಗ ಮಾಡುತ್ತಾನೆ ಎಂದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಛಂದತ ಉಭಯಾವಿರೋಧಾತ್ ಓಂ**

ಛಂದತಃ=ಮುಕ್ತರು ಸ್ವೇಚ್ಛೆಯಿಂದಲೇ ಕರ್ಮವನ್ನು ಮಾಡುತ್ತಾರೆ. ಏಕೆಂದರೆ, ಉಭಯಾವಿರೋಧಾತ್=ಕರ್ಮವನ್ನು ಮಾಡಲೇಬೇಕೆಂದು ವಿಧಿಯಾಗಲೀ, ಮಾಡದಿದ್ದರೆ ಪ್ರತ್ಯವಾಯವಾಗಲೀ ಇಲ್ಲದಿರುವುದರಿಂದ.

# ಅನಿಯಮಾಧಿಕರಣ (3-3-19)

ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನುಮಾನಾಭ್ಯಾಮ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಮೋಕ್ಷವು ವಿಷಯ. ಉಪಾಸನೆಯಲ್ಲಿ ನಿಯಮ, ಕರ್ಮದಲ್ಲಿ ಅನಿಯಮವು ಕಂಡಿರುವುದರಿಂದ ಸಂಶಯವು ಬರುತ್ತದೆ— ಎಲ್ಲ ಬ್ರಹ್ಮಜ್ಞಾನಿಗಳಿಗೂ ಮೋಕ್ಷವಿದೆಯೋ? ಅಥವಾ ಕೆಲವರಿಗಿದೆ ಕೆಲವರಿಗಿಲ್ಲವೆಂಬ ವ್ಯವಸ್ಥೆಯಿದೆಯೋ?

**ಪೂರ್ವಪಕ್ಷ**—ಕೆಲವರಿಗೆ ಯೋಗ್ಯತೆಯಿರುವುದರಿಂದ ಸರ್ವಗುಣೋಪಸಂಹಾರವು. ಇನ್ನು ಕೆಲವರಿಗೆ ಯೋಗ್ಯತೆಯಿಲ್ಲದಿರುವುದರಿಂದ ಸರ್ವಗುಣೋಪಸಂಹಾರವಿಲ್ಲ. ಆದರಂತೆ ಕೆಲವರಿಗೆ ಉತ್ತಮರ ದ್ರೋಹ-ಶಾಪಗಳಿಂದ ಅಯೋಗ್ಯತೆಯು ಪ್ರಾಪ್ತವಾಗುತ್ತದೆ. ಆವಾಗ ಯೋಗ್ಯತೆಯಿರುವ ಕೆಲವರಿಗೆ ಮೋಕ್ಷವು ಲಭಿಸುತ್ತದೆ. ಯೋಗ್ಯತೆಯಿಲ್ಲದಿರುವ ಕೆಲವರಿಗೆ ಮೋಕ್ಷವು ಲಭಿಸುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶಿಷ್ಟಕಾರಣ' (ಅಯೋಗ್ಯತೆಯೆಂಬ ಕಾರಣ) ಇದನ್ನು 'ಸ್ವಭಾವ' (ಪರಮಾತ್ಮನ ಸ್ವಭಾವ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ.

**ನ ಚಾಯೋಗ್ಯತಾಖ್ಯವಿಶಿಷ್ಟಕಾರಣಾಜ್ಜ್ಞಾನಿಷ್ವಪಿ ಕೇಷಾಂಚಿನ್ಮೋಕ್ಷೋ ನ ಭವತೀತಿ ನಿಯಮಃ । ಜ್ಞಾನಿನಾಂ ಮೋಕ್ಷಂ ದದಾತ್ಯೇವೇಶ್ವರಃ ಸ್ವಭಾವಾತ್ । ಅಯೋಗ್ಯಾನಾಂ ಜ್ಞಾನಸ್ಯೈವಾನುಪಪತ್ತೇಃ ॥ ೧೯ ॥**

**ಭಾವಾರ್ಥ**—ಅಯೋಗ್ಯತೆಯೆಂಬ ವಿಶಿಷ್ಟವಾದ ಕಾರಣವು ಜ್ಞಾನಿಗಳಲ್ಲಿಯೂ ಇರುವುದರಿಂದ ಕೆಲವರಿಗೆ ಮೋಕ್ಷವು ಪ್ರಾಪ್ತವಾಗುವುದಿಲ್ಲವೆಂಬ ನಿಯಮವು ಸಿದ್ಧವಾಗುತ್ತದೆ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಜ್ಞಾನಿಗಳಿಗೆ ಮೋಕ್ಷವನ್ನು ಕೊಡುವುದು ಪರಮಾತ್ಮನ ಸ್ವಭಾವವಾಗಿದೆ. ಆದ್ದರಿಂದ ಅಯೋಗ್ಯರಿಗೆ ಜ್ಞಾನವೇ ಹುಟ್ಟುವುದಿಲ್ಲ.

**ವಿವರಣೆ**— 'ಯಸ್ಯ ಪ್ರಸಾದಾತ್' ಎಂಬ ಶ್ರುತಿಯು ಮೋಕ್ಷಕ್ಕೆ ಪರಮಾತ್ಮನ

ಅನುಗ್ರಹವೇ ಕಾರಣವೆಂದು ಪ್ರತಿಪಾದಿಸುತ್ತಿದೆ. ಅಪರೋಕ್ಷಜ್ಞಾನಿಗಳಲ್ಲಿ ಭಗವಂತನಿಗೆ ವಿಶೇಷಪ್ರೀತಿಯಿರುವುದರಿಂದ ಅವರಲ್ಲಿಯೇ ಅನುಗ್ರಹವನ್ನು ಮಾಡಿ ಮೋಕ್ಷವನ್ನು ಕೊಡುತ್ತಾನೆ. ಹಾಗಾದರೆ ಅಯೋಗ್ಯರಾದ ಜ್ಞಾನಿಗಳಿಗೆ ಮೋಕ್ಷವು ಲಭಿಸುವುದಿಲ್ಲವೇ? ಎಂದರೆ ಈಶ್ವರನ ಸ್ವಭಾವದಿಂದ ಅಯೋಗ್ಯರಿಗೆ ಅಪರೋಕ್ಷಜ್ಞಾನವೇ ಹುಟ್ಟುವುದಿಲ್ಲ. ಮೂಲದಲ್ಲಿರುವ 'ಸ್ವಭಾವಾತ್' ಎಂಬ ಪದವನ್ನು ಎರಡು ಕಡೆಯಲ್ಲಿಯೂ ಅನ್ವಯಮಾಡಿಕೊಳ್ಳ ಬೇಕು. ಹಾಗಾಗಿ ಬ್ರಹ್ಮಜ್ಞಾನಿಗಳಿಗೆಲ್ಲರಿಗೂ ಮೋಕ್ಷವು ಲಭಿಸುವುದರಿಂದ ಎಲ್ಲರೂ ಪರಮಾತ್ಮನ ಉಪಾಸನೆಯನ್ನು ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಅನಿಯಮಃ ಸರ್ವೇಷಾಮವಿರೋಧಾತ್**

**ಶಬ್ದಾನುಮಾನಾಭ್ಯಾಂ ಓಂ**

ಸರ್ವೇಷಾಂ=ಎಲ್ಲ ಅಪರೋಕ್ಷಜ್ಞಾನಿಗಳಿಗೆ ಮೋಕ್ಷದ ವಿಷಯದಲ್ಲಿ ಅನಿಯಮಃ=ಕೆಲವರಿಗಿದೆ, ಕೆಲವರಿಗಿಲ್ಲ ಎಂಬ ನಿಯಮವಿಲ್ಲ. ಏಕೆಂದರೆ, ಸರ್ವೇಷಾಂ=ಯಾರಿಗೂ ಅವಿರೋಧಾತ್=ನಿಷೇಧವನ್ನು ಮಾಡುವ ವಚನವಿಲ್ಲ. ಅಲ್ಲದೆ ಶಬ್ದಾನುಮಾನಾಭ್ಯಾಂ='ನ ಕಶ್ಚಿದ್ ಬ್ರಹ್ಮವಿತ್ ಸೃತಿಮನುಭವತಿ ಮುಕ್ತೋ ಹ್ಯೇವ ಭವತಿ' (ಯಾವ ಒಬ್ಬ ಬ್ರಹ್ಮಜ್ಞಾನಿಯೂ ಸಂಸಾರವನ್ನು ಅನುಭವಿಸುವುದಿಲ್ಲ. ಮುಕ್ತನೇ ಆಗುತ್ತಾನೆ) ಎಂಬ ಶ್ರುತಿಯಿರುವುದರಿಂದ, ಶ್ರುತಿ ಮೂಲಕ ಅನುಮಾನವೂ ಇರುವುದರಿಂದ.

## ಯಾವದಧಿಕರಣ (3-3-20)

ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಮ್ ಓಂ ಎಂಬ ಸೂತ್ರದಿಂದ ಆರಂಭಗೊಳ್ಳುವ ಈ ಅಧಿಕರಣದಲ್ಲಿ ಸಾಧಕರು ವಿಷಯ. ಉಪಾಸನಾ ಕ್ರಿಯೆಯಲ್ಲಿ ಕೆಲವರಿಗೆ ಮಾತ್ರ ಅಧಿಕಾರವನ್ನು ಹೇಳಿರುವುದರಿಂದ, ಭೋಜನಾದಿ ಕ್ರಿಯೆಯಲ್ಲಿ ಅಧಿಕಾನಿಯಮವು ಲೋಕದಲ್ಲಿ ಕಾಣದಿರುವುದರಿಂದ ಸಂಶಯವು ಬರುತ್ತದೆ– ಸಾಧಕರು ಉಪಾಸನಾ ಕ್ರಿಯೆಯಲ್ಲಿ ನಿಯಮೇನ ಅಧಿಕಾರವುಳ್ಳವರೋ? ಅಥವಾ ಇಲ್ಲವೋ? ಎಂದು.

**ಪೂರ್ವಪಕ್ಷ**—ಮುಕ್ತಿಯಲ್ಲಿ ಆನಂದ ತಾರತಮ್ಯವೇ ಇಲ್ಲ. ಇರುವುದಾದರೆ ಅಲ್ಲಿಯೂ ಬರಬೇಕಾದೀತು. ಲೋಕದಲ್ಲಿರುವಂತೆ ದ್ವೇಷ, ಅಸೂಯೆಗಳು ಅವುಗಳು ಇರುವುದಾದರೆ ಅದು ಮೋಕ್ಷವೇ ಆಗಲಾರದು. ಸಾಧಕರ ಪ್ರಯತ್ನಕ್ಕೆ ಅನುಸಾರವಾಗಿ ಒಬ್ಬರಿಗೆ ಹೆಚ್ಚು ಒಬ್ಬರಿಗೆ ಕಡಿಮೆಯೆಂದು ಆನಂದವಿರಬಹುದು. ಹೊರತು ಯೋಗ್ಯತೆಗನುಗುಣವಾಗಿ ಅಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಚೇಷ್ಟಾ' (ಪ್ರಯತ್ನ) ಎಂಬುದು. ಇದನ್ನು ಮತ್ತು 'ವಸ್ತದೂಷಣ' (ಯೋಗ್ಯತೆಗಿಂತ ಅಧಿಕಪ್ರಯತ್ನ ಮಾಡಿದರೆ ವಸ್ತುವಿನಲ್ಲಿ ದೋಷವು ಪ್ರಾಪ್ತವಾಗುತ್ತದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪ್ರಯತ್ನಾನುಸಾರಿಣೋ ಮುಕ್ತಾವಾಧಿಕಾರಿಕಾ ಆನಂದಾದಯಃ । ಅಧಿಕಾರಾನುಸಾರಿತ್ವಾತ್ ಪ್ರಯತ್ನಸ್ಯ । ಕಥಂಚಿದಧಿಕಯತ್ನೇ ತತ್ಸಾಧನಾದಿ-ವಸ್ತೂನಾಂ ದೂಷಣಪ್ರಾಪ್ತೇಃ ।**

**'ಸ್ವಾಧಿಕಾರಾಧಿಕೋ ಯತ್ನಃ ಪ್ರಾಯಶೋ ನೋಪಪದ್ಯತೇ ।**
**ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ ಸಮಾಪತೇತ್ ॥'**

**ಇತಿ ವಚನಾಚ್ಚ ॥ ೧೯ ॥**

**ಭಾವಾರ್ಥ**—ಮುಕ್ತಿಯಲ್ಲಿ ಪ್ರಯತ್ನಕ್ಕನುಗುಣವಾಗಿ ಅಧಿಕಾರಿಗಳಿಗೆ ಆನಂದಗಳು ಲಭಿಸುತ್ತವೆ ಎಂದು ಆಕ್ಷೇಪ ಮಾಡುವಂತಿಲ್ಲ. ಅಧಿಕಾರಕ್ಕೆ (ಯೋಗ್ಯತೆಗೆ) ಅನುಗುಣವಾಗಿಯೇ ಪ್ರಯತ್ನವು ಇರುತ್ತದೆ. ಅಧಿಕಾರವನ್ನು ಮೀರಿ ಪ್ರಯತ್ನವನ್ನು ಮಾಡಿದರೆ ಅದಕ್ಕೆ ಸಾಧನವಾದ ವಸ್ತುಗಳಲ್ಲಿ ದೋಷವು ಬರುತ್ತದೆ. 'ತಮ್ಮ ಅಧಿಕಾರ ಪ್ರಯತ್ನಕ್ಕಿಂತಲೂ ಅಧಿಕವಾದ ಪ್ರಯತ್ನವು ಪ್ರಾಯಃ ಕೂಡುವು ದಿಲ್ಲ. ಅಧಿಕಾರಕ್ಕಿಂತಲೂ ಅಧಿಕವಾದ ಪ್ರಯತ್ನ ಮಾಡಿದರೆ ಯಾವುದಾದರೂ ದೋಷವು ಸಂಭವಿಸುತ್ತದೆ' ಎಂಬ ಪ್ರಮಾಣವೂ ಇರುವುದರಿಂದ.

**ವಿವರಣೆ**—ಯೋಗ್ಯತೆಗಿಂತ ಅಧಿಕ ಪ್ರಯತ್ನ ಮಾಡಿದರೆ ವಸ್ತುವಿನಲ್ಲಿ

ದೋಷ ಪ್ರಾಪ್ತವಾಗುತ್ತಿದೆ. ಇಂದ್ರಪದವಿಯಲ್ಲಿ ಕುಳಿತವರಿಗೆ ಮಾತ್ರ ನೂರು ಅಶ್ವಮೇಧಗಳನ್ನು ಮಾಡುವ ಯೋಗ್ಯತೆ. ಆ ಯೋಗ್ಯತೆಯಿಲ್ಲದವರು ಯೋಗ್ಯತೆ ಮೀರಿ (ಪೃಥು ಮಹಾರಾಜ ಮೊದಲಾದವರು) ನೂರು ಅಶ್ವಮೇಧಯಾಗಗಳನ್ನು ಮಾಡಿದರೆ ಅದಕ್ಕೆ ಸಾಧಕವಾದ ಕುದುರೆಗೆ ಮರಣ, ಅಪಹರಣ ಮುಂತಾದ ದೋಷಗಳು ಸಂಭವಿಸಿರುವುದು ಕಂಡಿದೆ.

ಮೂಲದಲ್ಲಿ 'ತತ್ಸಾಧನಾದಿವಸ್ತೂನಾಮ್' ಎಂಬಲ್ಲಿರುವ ಆದಿಪದಿಂದ ಪಾಪವು ಪ್ರಾಪ್ತವಾಗುತ್ತದೆ ಎಂಬುದನ್ನು ಸ್ವೀಕರಿಸಬೇಕು. ಕೆಲವೊಮ್ಮೆ ಯೋಗ್ಯತೆಗಿಂತ ಅಧಿಕ ಪ್ರಯತ್ನ ಮಾಡಿ ಪುಣ್ಯಸಂಪಾದನೆ ಮಾಡಿದರೂ ಪುಣ್ಯನಾಶಕವಾದ ಪಾಪವೂ ಸಂಭವಿಸುತ್ತಿದೆ ಎಂದರ್ಥ. ಆದ್ದರಿಂದ ಉಪಾಸನೆಗೆ ಅಧಿಕಾರನಿಯಮವನ್ನು ಒಪ್ಪಲೇಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ**

### ಓಂ ಯಾವದಧಿಕಾರಮದಸ್ಥಿತಿರಾಧಿಕಾರಿಕಾಣಾಮ್ ಓಂ

ಅಧಿಕಾರಿಕಾಣಾಂ=ಯೋಗ್ಯತಾನುನುಸಾರವಾಗಿ ಉಪಾಸನೆಯನ್ನು ಮಾಡುವ ಬ್ರಹ್ಮಾದಿಗಳಿಗೆ ಯಾವದಧಿಕಾರಂ=ಅಧಿಕಾರಕ್ಕನುಗುಣವಾಗಿಯೇ ಗತಾ=ಮುಕ್ತಿಯಲ್ಲಿ ಅವಸ್ಥಿತಿಃ=ಉಪಾಸನೆಯಂತೆ ತಾರತಮ್ಯರಿಂದಲೇ ಮೋಕ್ಷದಲ್ಲಿ ಸ್ಥಿತಿಯು.

## ಇಯದಾಮನನಾಧಿಕರಣ (3-3-21)

ಓಂ ಇಯದಾಮನನಾತ್ ಓಂ ಎಂಬ ಸೂತ್ರದಿಂದ ಆರಂಭವಾಗಿರುವ ಈ ಅಧಿಕರಣದ ವಿಷಯ ಉಪಾಸನಾಧಿಕಾರಿಗಳು. ಯಾವುದೇ ವಿಶೇಷವಾದ ವಚನ ವಿಲ್ಲದಿರುವುದರಿಂದ ಸಂಶಯ ಬರುತ್ತದೆ— ಉಪಾಸನಾಧಿಕಾರಿಗಳಲ್ಲಿ ಪ್ರಾಣ ದೇವರೇ ಕೊನೆಯೋ? ಅಥವಾ ಅವರ ಅನಂತರವೂ ಇನ್ನೂ ಯಾರಾದರೂ ಇರುವರೋ? ಎಂದು.

**ಪೂರ್ವಪಕ್ಷ**—ನಾಮಾಭಿಮಾನಿನಿಯಾದ ಉಷೆಯನ್ನು ಆರಂಭಿಸಿ ಪ್ರಾಣದೇವರ ವರೆಗೆ ಒಬ್ಬರಿಗಿಂತ ಒಬ್ಬರು ಉತ್ತಮರು ಎಂದು ಹೇಳಿ

ಪ್ರಾಣನಿಗಿಂತ ಉತ್ತಮನನ್ನು ಹೇಳಿಲ್ಲ. ಆದರೂ ಪ್ರಾಣನಿಗಿಂತ ಪೂರ್ವದಲ್ಲಿ ಒಬ್ಬರಿಗಿಂತ ಒಬ್ಬರು ಉತ್ತಮರಿರುವುದು ಕಂಡಿದೆ. ಹಾಗೆಯೇ ಲೋಕದಲ್ಲಿಯೂ ಒಬ್ಬ ವ್ಯಕ್ತಿಗಿಂತ ಮತ್ತೊಬ್ಬ ವ್ಯಕ್ತಿ ಉತ್ತಮರಾಗಿರುವುದೂ ಕಂಡಿದೆ. ಆದ್ದರಿಂದ ಪ್ರಾಣನಿಗಿಂತಲೂ ಉತ್ತಮರಿರಬಹುದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ದೃಷ್ಟವೈರೂಪ್ಯ' (ಲೋಕದಲ್ಲಿ ಕಂಡದ್ದಕ್ಕಿಂತ ವಿರುದ್ಧವಾಗಿರುವುದು) ಎಂಬುದು. ಇದನ್ನು 'ಪ್ರತಿಕ್ರಿಯಾ ವಿರೋಧಃ' (ಪ್ರಾಯಶ್ಚಿತ್ತವನ್ನು ಹೇಳಿದ್ದರ ವಿರೋಧ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚೈಕಸ್ಮಾದೇಕೋ ವಿಶಿಷ್ಟೋ ದೃಷ್ಟ ಏವೇತಿ ಪ್ರಾಣಾದ್ ವಿಶಿಷ್ಟ-ಜೀವಾಭಾವೇ ದೃಷ್ಟವೈರೂಪ್ಯಮಿತಿ ದೋಷಃ ।**

**'ಯಃ ಸರ್ವಮವಜಾನೀಯಾದೃತೇ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರೀಯಮ್ ।**

**ಸ ಪ್ರಾಣಾನವರುದ್ಧ್ಯೇಮಂ ಮಂತ್ರಮಾವರ್ತಯೀತ ।**

**ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।**

**ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥' ಇತಿ ।**

**'ಸ ಹ್ಯೇಷಾಂ ಭೂತಾನಾಂ ವರಿಷ್ಠೋ ನ ಹ್ಯೇತಸ್ಮಾತ್ ಕಶ್ಚನೋಪರಿ ವಿನಾ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಮ್' ಇತಿ ಪ್ರತಿಕ್ರಿಯಾವಿಧಾನಾದಿವಿರೋಧಾತ್ ॥**

**ಭಾವಾರ್ಥ**—ಒಬ್ಬನಿಗಿಂತ ಒಬ್ಬನು ಉತ್ತಮನಾಗಿ ಕಂಡೇ ಇದ್ದಾನೆ. ಆದ್ದರಿಂದ ಪ್ರಾಣನಿಗಿಂತ ಉತ್ತಮನಾದ ಜೀವನಿಲ್ಲವಾದರೆ ಪ್ರತ್ಯಕ್ಷವಿರೋಧವು ಬರುತ್ತದೆ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಯಾವನು ಉತ್ತಮ

ದೇವನಾದ ನಾರಾಯಣನನ್ನು, ಉತ್ತಮಳಾದ ಲಕ್ಷ್ಮೀದೇವಿಯನ್ನು ಹೊರತುಪಡಿಸಿ ಮುಖ್ಯಪ್ರಾಣನಿಂದ ಆರಂಭಿಸಿ ಎಲ್ಲ ಪ್ರಪಂಚವನ್ನು ಅವಮಾನ ಮಾಡುವನೋ ಅವನು ಪ್ರಾಣಾಯಾಮವನ್ನು ಮಾಡಿ 'ಆತ್ಮಾ ದೇವಾನಾಂ...' ಎಂಬ ಮಂತ್ರ ವನ್ನು ಜಪಿಸಬೇಕು. ಏಕೆಂದರೆ, ಆ ಪ್ರಾಣನೇ ನಾರಾಯಣನನ್ನು ಲಕ್ಷ್ಮಿಯನ್ನು ಹೊರತುಪಡಿಸಿ ಎಲ್ಲ ಪ್ರಾಣಿಗಳಿಗಿಂತ ಶ್ರೇಷ್ಠನು' ಅವನಿಗಿಂತ ಉತ್ತಮರಿಲ್ಲ. ಎಂದು ಪ್ರಾಯಶ್ಚಿತ್ತವನ್ನು ಹೇಳಿದ್ದರ ವಿರೋಧವು ಬರುತ್ತದೆ.

**ವಿವರಣೆ**—ಲಕ್ಷ್ಮೀನಾರಾಯಣರನ್ನು ಬಿಟ್ಟು ಉಳಿದವರಲ್ಲಿ ಮುಖ್ಯ ಪ್ರಾಣನೇ ಉತ್ತಮ ಎಂಬಿವೇ ವಾಕ್ಯಗಳು 'ಒಬ್ಬನಿಗಿಂತ ಒಬ್ಬನು ಉತ್ತಮನಾಗಿ ಕಂಡಿದ್ದಾನೆ' ಎಂಬ ನ್ಯಾಯದ ವಿರೋಧವನ್ನು ಪರಿಹರಿಸುತ್ತವೆ. ಇದರೊಂದಿಗೆ 'ಅನಾವೃತಿರ್ದೇಹಿನಾಂ ದೇಹಪಾತೇ ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ' (ಮುಖ್ಯಪ್ರಾಣನು ಇಲ್ಲವಾದಾಗ ಮಾತ್ರ ಮನುಷ್ಯನು ದೇಹವು ಉರುಳಿ ಬೀಳುವುದು. ಆದ್ದರಿಂದ ಮುಖ್ಯಪ್ರಾಣನು ಎಲ್ಲ ದೇವತೆಗಳಿಗಿಂತ ಉತ್ತಮನು) ಎಂಬ ಮಹಾಭಾರತವಾಕ್ಯದ ವಿರೋಧವೂ ಬರುತ್ತದೆ ಎಂದು ತಿಳಿಯಬೇಕು.

'ಆತ್ಮಾ ದೇವಾನಾಂ...' ಎಂಬ ಮಂತ್ರದ ಅರ್ಥ–ಏಷಃ ದೇವಃ=ಈ ಮುಖ್ಯಪ್ರಾಣನು ದೇವಾನಾಂ=ದೇವತೆಗಳಿಗೆ ಆತ್ಮಾ=ಸ್ವಾಮಿಯು. ಭುವಸ್ಯ= ಲೋಕದ ಗರ್ಭಃ=ಗರ್ಭದಂತೆ ಒಳಗಿರುವನು. ಯಥಾವಶಂ=ಯಥೇಷ್ಟವಾಗಿ ಚರತಿ=ಎಲ್ಲಕಡೆಗಳಲ್ಲಿಯೂ ಸಂಚರಿಸುತ್ತಾನೆ. ಅಸ್ಯ=ಈ ಪ್ರಾಣ ಘೋಷಾಃ ಇತ್= ಅಶರೀರವಾಣಿಗಳು ರಥದ ಘೋಷದಂತೆ ಶೃಣ್ವಿರೇ=ಸ್ಪಷ್ಟವಾಗಿ ಕೇಳಲ್ಪಡುತ್ತವೆ. ರೂಪಂ ನ=ರೂಪವು ಕಾಣಲ್ಪಡುವುದಿಲ್ಲ ತಸ್ಮೈ=ಅಂತಹ ವಾತಾಯ=ಮುಖ್ಯ ಪ್ರಾಣನಿಗೆ ಹವಿಷಾ=ಹವಿಸ್ಸಿನಿಂದ ವಿಧೇಮ=ಹೋಮಿಸುತ್ತೇವೆ ಎಂದು.

ಹೀಗೆ ಲೋಕದಲ್ಲಿ ಒಬ್ಬರಿಗಿಂತ ಮತ್ತೊಬ್ಬರು ಉತ್ತಮರು ಎಂದು ಕಂಡಿದ್ದರೂ ಪ್ರಮಾಣಗಳ ವಿರೋಧವಿರುವುದರಿಂದ ಉಪಾಸಕರಲ್ಲಿ ಮುಖ್ಯಪ್ರಾಣನೇ ಶ್ರೇಷ್ಠ ನೆಂದು ಒಪ್ಪಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ**—

**ಓಂ ಇಯದಾಮನನಾತ್ ಓಂ**

ಇಯತ್=ಉಪಾಸಕರಿಗೆ ಪ್ರಾಣನೇ ಅವಧಿ. ಆಮನನಾತ್='ಸ ಹ್ಯೇಷಾಂ ಭೂತಾನಾಂ ವರಿಷ್ಠೋ...' ಎಂಬ ಶ್ರುತಿಯಲ್ಲಿ ಆ ರೀತಿ ಹೇಳಿದ್ದರಿಂದ.

## ವ್ಯತಿಹಾರಾಧಿಕರಣ (3-3-22)

ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ವಿಷ್ಣು ವಿಷಯ. ವಿರುದ್ಧವಾದ ವಚನಗಳಿರುವುದರಿಂದ ವಿಷ್ಣುವು ಪ್ರಾಣನಿಗಿಂತ ಉತ್ತಮನೋ? ಅಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ**—ಸನತ್ಕುಮಾರರು ನಾರದರ ಬಳಿ ಬಂದು ಬ್ರಹ್ಮೋಪದೇಶ ವನ್ನು ಕೊಡಿ ಎಂದು ಕೇಳಿಕೊಂಡಾಗ ನಾರದರು 'ನಾಮೋಪಾಸ್ವ' (ನಾಮಾಭಿ ಮಾನಿಯಾದ ಉಷೆಯನ್ನು ಧ್ಯಾನಿಸು) ಎಂದರು. ಆದಕ್ಕೆ ಸನತ್‌ಕುಮಾರರು, 'ಅಸ್ತಿ ಭಗವೋ ನಾಮ್ನೋ ಭೂಯಃ' (ಉಷೆಗಿಂತಲೂ ಶ್ರೇಷ್ಠರಿದ್ದಾರೆಯೋ?) ಎಂದು ಕೇಳಿದಾಗ ಉಷೆಗಿಂತ ವಾಗಭಿಮಾನಿಯಾದ ಸ್ವಾಹಾ ಉತ್ತಮಳು ಎಂದು ಉತ್ತರಿಸುತ್ತಾರೆ. ಹೀಗೆ ಪ್ರಶ್ನೋತ್ತರಗಳು ನಡೆದು ಕೊನೆಗೆ 'ಪ್ರಾಣೋ ವಾ ಆಶಾಯಾ ಭೂಯಾನ್' (ಪ್ರಾಣನು ಭಾರತಿಗಿಂತ ಉತ್ತಮನು) ಎಂದು ಹೇಳಿದ್ದಾರೆ. ಆಮೇಲೆ ಪ್ರಾಣನಿಗಿಂತ ಉತ್ತಮನು ಯಾರು? ಎಂದು ಪ್ರಶ್ನಿಸದೇ ಇರುವುದರಿಂದ ಪ್ರಾಣನೇ ಉತ್ತಮ. ಪ್ರಾಣನಿಗಿಂತ ಉತ್ತಮರಿಲ್ಲ ಎಂದು ಸಿದ್ಧವಾಗುತ್ತದೆ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಉನ್ನತಿ' (ಪ್ರಾಣನ ಶ್ರೇಷ್ಠತ್ವ) ಎಂಬುದು. ಇದನ್ನು ಮತ್ತು 'ಪ್ರತಿಸಂಧಿ' (ಅಧ್ಯಾಹಾರ) ಎಂಬ ಸಿದ್ಧಾಂತವನ್ನು ವಿವರಿಸುತ್ತಿದ್ದಾರೆ—

**'ಅಸ್ತಿ ಭಗವಃ ಪ್ರಾಣಾದ್ ಭೂಯ' ಇತಿ ಪ್ರಶ್ನಾದ್ಯಭಾವಾತ್ ಪ್ರಾಣಸ್ಯೈವೋನ್ನತಿಪ್ರತೀತೇರ್ನ ವಿಷ್ಣೋರಪಿ ತತಃ ಪರತ್ವಮಿತಿ ನ ಮಂತವ್ಯಮ್ । 'ಏಷ ತು ವಾ ಅತಿವದತಿ' ಇತಿವಿಶೇಷಣಾತ್ ಪ್ರಶ್ನಪ್ರತಿವಚನಪ್ರತಿಸಂಧಾನೋಪಪತ್ತೇಃ ॥ ೨೨ ॥**

**ಭಾವಾರ್ಥ**—'ಪ್ರಾಣನಿಗಿಂತ ಉತ್ತಮನಿದ್ದಾನೇನು?' ಎಂದು ಪ್ರಶ್ನೆ ಮುಂತಾದದ್ದು ಇಲ್ಲದಿರುವುದರಿಂದ ಪ್ರಾಣನಿಗೇ ಉತ್ತಮತ್ವವು ತೋರುತ್ತದೆ. ವಿಷ್ಣುವೂ ಅವನಿಗಿಂತ ಉತ್ತಮನಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಏಷ ತು ವಾ ಅತಿವದತಿ' ಎಂಬಲ್ಲಿ 'ತು' ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದ ಪ್ರಶ್ನೆ ಮತ್ತು ಉತ್ತರಗಳ ಅಧ್ಯಾಹಾರವನ್ನು ಮಾಡಿಕೊಳ್ಳಬೇಕಾಗುತ್ತದೆ.

**ವಿವರಣೆ**—'ಪ್ರಾಣನನ್ನೇ ಶ್ರೇಷ್ಠನೆಂದು ಹೇಳುವವನು ಉತ್ತಮ ಉಪದೇಶಕ' ಎಂದು ಹೇಳಿದ ಮೇಲೆ ಉಪನಿಷತ್ತಿನಲ್ಲಿ ನಾರದರು 'ಏಷ ತು ಅತಿವದತಿ ಯಃ ಸತ್ಯೇನಾತಿವದತಿ ಸತ್ಯಂ ತ್ವೇವ ವಿಜಿಜ್ಞಾಸಿತವ್ಯಮ್' (ಯಾವನು ಸತ್ಯನನ್ನು ಉತ್ತಮನೆಂದು ಉಪದೇಶಿಸುವನೋ ಅವನು ಉತ್ತಮ ಉಪದೇಶಕನಾಗಿದ್ದಾನೆ. ಸತ್ಯನು ತಿಳಿಯಲ್ಪಡಬೇಕು) ಎಂದು ಹೇಳಿದ್ದಾರೆ. ಇಲ್ಲಿ ಸತ್ಯನೆಂದರೆ 'ಸ ಸತ್ಯೋ ಭಗವಾನ್ ವಿಷ್ಣುಃ ಯನ್ನಿರ್ದೋಷೋ ನಿಯಾಮಕಃ' (ದೋಷರಹಿತನಾದನು ನಿಯಾಮಕನೂ ಆದ್ದರಿಂದ ವಿಷ್ಣುವು ಸತ್ಯನೆನಿಸಿದ್ದಾನೆ) ಎಂಬ ಪ್ರಮಾಣದಂತೆ ವಿಷ್ಣುವೇ. 'ಏಷ ತು' ಎಂದು ತು ಶಬ್ದವನ್ನು ಹೇಳಿದ್ದಾರೆ. ತುಶಬ್ದವು ಇದು ಬೇರೆ ಪ್ರಕರಣ ಎಂದು ತಿಳಿಸುತ್ತದೆ. ಅಂದರೆ, ಹಿಂದಿನದ್ದು ಪ್ರಾಣ ಪ್ರಕರಣ. ಇದು ವಿಷ್ಣುಪ್ರಕರಣ ಎಂದರ್ಥ. ಆದ್ದರಿಂದ ಎಲ್ಲ ಪ್ರಕರಣಗಳಲ್ಲಿ ಪ್ರಶ್ನೆ, ಉತ್ತರಗಳು ಇರುವಂತೆ ಇಲ್ಲಿಯೂ 'ಅಸ್ತಿ ಭಗವಃ ಪ್ರಾಣಾದ್ ಭೂಯಃ' (ಪೂಜ್ಯರೇ! ಪ್ರಾಣನಿಗಿಂತಲೂ ಉತ್ತಮನಿದ್ದಾನೆಯೇ?) ಎಂಬ ಪ್ರಶ್ನೆಯನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅದಕ್ಕೆ ಪ್ರಾಣನಿಗಿಂತ ಸತ್ಯನಾಮಕನಾದ ವಿಷ್ಣು ಶ್ರೇಷ್ಠನೆಂಬ ಉತ್ತರವು ಸರಿ ಹೋಗುತ್ತದೆ. ಆದ್ದರಿಂದ ಪ್ರಾಣನೇ ಶ್ರೇಷ್ಠನಲ್ಲ. ಪ್ರಾಣನಿಗಿಂತಲೂ ವಿಷ್ಣು ಶ್ರೇಷ್ಠನೆಂಬುದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

## ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ

ವ್ಯತಿಹಾರಃ=ಪ್ರಶ್ನೋತ್ತರಗಳು ಅಶ್ರುತವಾಗಿದ್ದರೂ ಅದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಹಿ=ಏಕೆಂದರೆ, ಇತರವತ್=ನಾಮಾದಿಗಳಿಂದ ವಾಗಾದಿಗಳನ್ನೆಂಬಂತೆ, ವಿಶಿಂಷಂತಿ=ಪ್ರಾಣನನ್ನು ಹೇಳುವವನಿಗಿಂತ ಸತ್ಯವನ್ನು ಉತ್ತಮನೆಂದು ಹೇಳುವವರನ್ನು ತುಶಬ್ದದಿಂದ ಪ್ರತ್ಯೇಕಿಸುತ್ತಾರೆ.

# ಸತ್ಯಾಧಿಕರಣ (3-3-23)

ಓಂ ಸ್ಯೆವ ಹಿ ಸತ್ಯಾದಯಃ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಪ್ರಾಣನು ವಿಷಯ. ಸತ್ಯಶಬ್ದವಾಚ್ಯನಾದ ವಿಷ್ಣು ಉತ್ತಮನೆಂದು ಹಿಂದೆ ಹೇಳಿದ್ದಾರೆ. ಅವನಿಗಿಂತ ಉತ್ತಮರಿರಬಹುದಾದ್ದರಿಂದ ಸಂದೇಹ ಬರುತ್ತದೆ— ಪ್ರಾಣನಿಂದ ಸತ್ಯಶಬ್ದವಾಚ್ಯನಾದ ವಿಷ್ಣುವೇ ಉತ್ತಮನೋ? ಅಥವಾ ಅವನಿಗಿಂತ ಉತ್ತಮರು ಬೇರೆ ಇರುವರೋ? ಎಂದು.

**ಪೂರ್ವಪಕ್ಷ**—ಛಾಂದೋಗ್ಯದಲ್ಲಿ ಪ್ರಾಣಪ್ರಕರಣದ ನಂತರ ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ಕೃತಿ, ಸುಖ, ಭೂಮ, ಅಹಂಕಾರ, ಆತ್ಮ ಎಂಬ ಶಬ್ದಗಳು ಶ್ರುತವಾಗಿವೆ. ಇವುಗಳಿಗೆ ಪರಸ್ಪರ ಅಭೇದವನ್ನು ಹೇಳಲಿಲ್ಲ. ಹಾಗಿದ್ದರೂ ಅಭೇದವನ್ನು ಇಟ್ಟುಕೊಳ್ಳುವುದಾದರೆ, ಪ್ರಾಣನಿಗೆ ಅಭೇದವನ್ನು ಇಟ್ಟುಕೊಳ್ಳ ಬೇಕಾಗುವುದು. ಆದ್ದರಿಂದ ಭೇದವಿದೆ ಎಂದೇ ಒಪ್ಪಬೇಕು. ಹಾಗಾಗಿ ವಿಜ್ಞಾನಾದಿ ಪದ ವಾಚ್ಯವಾದ ವಿಜ್ಞಾನಾದಿಗಳಿಗೆ ಸತ್ಯಪದವಾಚ್ಯನಾದ ವಿಷ್ಣುವಿಗಿಂತ ಉತ್ತಮತ್ವವು ಪ್ರಾಪ್ತವಾಗುತ್ತದೆ. ಆದ್ದರಿಂದ ವಿಷ್ಣುವೇ ಸರ್ವೋತ್ತಮನೆಂಬುದು ಯುಕ್ತವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅನುಕ್ತಿ' (ಅಭೇದವನ್ನು ಹೇಳದಿರುವುದು) ಎಂಬುದು. ಇದನ್ನು ಮತ್ತು 'ಅನೂನತ್ವ' (ಪೂರ್ಣತ್ವ) ಎಂಬ ಸಿದ್ಧಾಂತಸಾಧಕವಾದದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಸತ್ಯಾದೀನಾಮಭೇದಾನುಕ್ತೇರನ್ಯತ್ವಮ್ ।**

**'ಸತ್ಯಂ ಪೂರ್ಣಂ ವಿಜ್ಞಾನಂ ಪೂರ್ಣಂ ಕೃತಿಃ ಪೂರ್ಣಾ ನಿಷ್ಠಾ ಪೂರ್ಣಾ ಶ್ರದ್ಧಾ ಪೂರ್ಣಾ ಮತಿಃ ಪೂರ್ಣಾ ಸುಖಂ ಪೂರ್ಣಂ ಭೂಮಾ ಪೂರ್ಣೋಽಹಂ ಪೂರ್ಣ ಆತ್ಮಾ ಪೂರ್ಣೋ ನಾತ್ರ ಕಿಂಚಿದೂನಂ ಪೂರ್ಣಮೇವಾಧಸ್ತಾತ್ ಪೂರ್ಣಮುಪರಿಷ್ಟಾತ್ ಪೂರ್ಣಂ ಮಧ್ಯತಃ ಪೂರ್ಣಂ ಸರ್ವತಃ । ತದೇಷ ಶ್ಲೋಕೋ ಭವತಿ ।**

'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।
ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥'

ಇತಿ ಶ್ರುತೇಃ ಸರ್ವೇಷಾಮನೂನತ್ವಾತ್ ।

'ಸತ್ಯಾದ್ಯಾ ಅಹಮಾತ್ಮಾಂತಾ ಯದ್ಗುಣಾಃ ಸಮುದೀರಿತಾಃ ।
ತಸ್ಮೈ ನಮೋ ಭಗವತೇ ಯಸ್ಮಾದೇವ ವಿಮುಚ್ಯತೇ ॥'

ಇತಿ ವಚನಾಚ್ಚ ॥ ೨೨ ॥

**ಭಾವಾರ್ಥ—** ಸತ್ಯ, ವಿಜ್ಞಾನಾದಿಗಳಿಗೆ ಅಭೇದವನ್ನು ಹೇಳದಿರುವುದರಿಂದ ಭೇದವು ಸಿದ್ಧವಾಗುತ್ತದೆ. (ವಿಷ್ಣುವಿಗೆ ಉತ್ತಮತ್ವವು ಕೂಡುವುದಿಲ್ಲ) ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ 'ಸತ್ಯನಾಮಕನಾದ ವಿಷ್ಣುವು ಪೂರ್ಣ, ವಿಜ್ಞಾನವು ಪೂರ್ಣ, ಕೃತಿಯು ಪೂರ್ಣ. ನಿಷ್ಠೆಯು ಪೂರ್ಣ, ಮತಿಯು ಪೂರ್ಣ, ಶ್ರದ್ಧೆಯು ಪೂರ್ಣ, ಸುಖ ಪೂರ್ಣ, ಭೂಮ ಪೂರ್ಣ, ಅಹಂಕಾರ ಪೂರ್ಣ, ಆತ್ಮನೂ ಪೂರ್ಣ, ಅಪೂರ್ಣವಾದದ್ದು ಯಾವುದೂ ಇಲ್ಲ, ಕೆಳಗೆ, ಮೇಲೆ, ಮಧ್ಯ, ಎಲ್ಲೆಡೆಯೂ ಪೂರ್ಣವೇ ವ್ಯಾಪಿಸಿದೆ. ಈ ವಿಷಯದಲ್ಲಿ ಹೀಗೊಂದು ಪ್ರಶಂಸೆಯು ಕೇಳಿ ಬರುತ್ತದೆ— ಮೂಲರೂಪವು ಪೂರ್ಣವಾಗಿದೆ. ಅವತಾರ ರೂಪವೂ ಪೂರ್ಣ ವಾಗಿದೆ. ಪೂರ್ಣವಾದ ಮೂಲರೂಪದಿಂದ ಪೂರ್ಣವಾದ ಅವತಾರ ರೂಪವು ಹೊರಬರುತ್ತದೆ. ಪೂರ್ಣವಾದ ಅವತಾರ ರೂಪವನ್ನು ತನ್ನೊಳಗೆ ಇಟ್ಟುಕೊಂಡು ಮೂಲರೂಪವು ಪೂರ್ಣವಾಗಿಯೇ ಉಳಿಯುತ್ತದೆ ಎಂಬ ಶ್ರುತಿಯಿಂದ ಎಲ್ಲ ರೂಪಗಳಿಗೂ ಪೂರ್ಣತ್ವವನ್ನೇ ಹೇಳಿದ್ದಾರೆ. ಮತ್ತು, 'ಸತ್ಯವನ್ನು ಆರಂಭಿಸಿ ಅಹಂಕಾರ, ಆತ್ಮಪರ್ಯಂತವಾಗಿ ಯಾರ ಗುಣಗಳು ಹೇಳಲ್ಪಟ್ಟಿವೆಯೋ ಯಾವನಿಂದ ಜೀವನು ಮೋಕ್ಷವನ್ನು ಪಡೆಯುತ್ತಾನೋ ಅಂತಹ ಮೋಕ್ಷಕಾರಣನಾದ ಪರಮಾತ್ಮನಿಗೆ ನಮಸ್ಕಾರ' ಎಂಬ ವಾಕ್ಯದಿಂದಲೂ ಅಭೇದವು ಸಿದ್ಧವಾಗು ತ್ತದೆ.

**ವಿವರಣೆ—**ಸತ್ಯಾದಿಶಬ್ದದಿಂದ ವಾಚ್ಯನಾದವನು ವಿಷ್ಣುವೇ ಹೊರತು ಇತರ ದೇವತೆಗಳಲ್ಲ. ಎಲ್ಲದಕ್ಕೂ ಪೂರ್ಣತ್ವವನ್ನು ಹೇಳಿದ್ದರಿಂದ. ಪೂರ್ಣತ್ವವನ್ನು ಹೇಳಿದ್ದರಿಂದ ಸತ್ಯಶಬ್ದವಾಚ್ಯನಾದವನು, ವಿಜ್ಞಾನಾದಿ ಶಬ್ದವಾಚ್ಯರು ಸಮಾನರು

ಆಗಲಿ. ಅಭಿನ್ನರು ಯಾಕೆ ಆಗಬೇಕು? ಎಂದರೆ ಬಹಳ ಮಂದಿ ಗುಣ ಪರಿಪೂರ್ಣರಿರುವುದು ಯುಕ್ತಿವಿರುದ್ಧವಾದ್ದರಿಂದ ಅಭೇದವನ್ನು ಹೇಳುವುದೇ ನ್ಯಾಯ ಸಂಮ್ಮತವಾಗಿದೆ. ಇನ್ನು 'ಸತ್ಯಾದ್ಯಾ ಅಹಮಾತ್ಮಾಂತಾ' ಎಂಬ ವಾಕ್ಯ ವಂತೂ ಸ್ಪಷ್ಟವಾಗಿಯೇ ಅಭೇದವನ್ನು ಹೇಳುವುದರಿಂದ ವಿಜ್ಞಾನಾದಿಗಳೆಲ್ಲವೂ ಸತ್ಯನಾಮಕನಾದ ವಿಷ್ಣುವಿನ ಅಭಿನ್ನವಾದ ಗುಣಗಳು. ಅಷ್ಟೇ ಅಲ್ಲದೆ 'ಸ ವಾ ಏಷ ಏವಂ ಪಶ್ಯನ್ನೇವಂ ವಿಜಾನನ್ನಾತ್ಮರತಿಃ' ಎಂಬ ಶ್ರುತಿಯು ಅಹಂಕಾರ, ಆತ್ಮಗಳ ಜ್ಞಾನದಿಂದಲೂ ಮೋಕ್ಷವನ್ನು ತಿಳಿಸುತ್ತದೆ. ಮೋಕ್ಷವಾದರೂ ಭಗವಂತನ ಪ್ರಸಾದದಿಂದ ಮಾತ್ರ ಲಭಿಸುವುದರಿಂದ ಪರಮಾತ್ಮನಿಗೆ ಅಹಂಕಾರಾದಿಗಳಿಗೂ ಅಭೇದವು ಸಿದ್ಧವಾಗುತ್ತದೆ. ಆದ್ದರಿಂದ ಪ್ರಾಣನಿಗಿಂತ ವಿಷ್ಣು ಉತ್ತಮ. ಅವನಿಗಿಂತ ಉತ್ತಮರು ಯಾರೂ ಇಲ್ಲ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಸೈವ ಹಿ ಸತ್ಯಾದಯಃ ಓಂ

ಸತ್ಯಾದಯಃ=ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ನಿಷ್ಠಾ, ಕೃತಿ, ಸುಖ, ಭೂಮಾ, ಅಹಂಕಾರ ಹಾಗೂ ಆತ್ಮಾ ಎಂದು ಪ್ರಾಣನ ಅನಂತರ ಹೇಳಲ್ಪಟ್ಟವರು ಸೈವ=ಪರಮಾತ್ಮನೇ ಹಿ=ಪ್ರಮಾಣವಿರುವುದರಿಂದ.

## ಕಾಮಾಧಿಕರಣ (3-3-24)

ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಲಕ್ಷ್ಮೀದೇವಿಯು ವಿಷಯ. ಉಪಾಸನೆಗೆ ಅಧಿಕಾರಿಗಳಾದ ಕೆಲವು ಚೇತನರು, ಅನಧಿಕಾರಿಗಳಾದ ಕೆಲವು ಚೇತನರು ಹೀಗೆ ಎರಡು ವಿಧವಾದ ಚೇತನರು ಕಂಡಿರುವುದರಿಂದ ಲಕ್ಷ್ಮೀದೇವಿಯು ಉಪಾಸನಾ ಅಧಿಕಾರವನ್ನು ಹೊಂದಿದ್ದಾಳೋ? ಇಲ್ಲವೋ? ಎಂದು ಸಂದೇಹ ಬರುತ್ತದೆ.

**ಪೂರ್ವಪಕ್ಷ—**ಲಕ್ಷ್ಮೀದೇವಿಯು ನಿತ್ಯಮುಕ್ತಳಾದ್ದರಿಂದ ಉಪಾಸನಾದಿ ಗಳಲ್ಲಿ ಪ್ರಯತ್ನಪಡಬೇಕಾಗಿಲ್ಲ. ಆದ್ದರಿಂದ ಉಪಾಸನೆಯು ಕೂಡುವುದಿಲ್ಲ. ಒಂದುವೇಳೆ ಅವಳು ಮಾಡುತ್ತಿರುವ ಉಪಾಸನೆಯನ್ನು ಸಮರ್ಥಿಸಲು

ಪ್ರಯತ್ನವನ್ನು ಒಪ್ಪಿದರೆ ಅವಳು ಸಂಸಾರಿಯಾಗಬೇಕಾಗುತ್ತದೆ. ಆವಾಗ ಪ್ರಾಣ ದೇವರು ಉಪಾಸಕರಲ್ಲಿ ಶ್ರೇಷ್ಠರೆಂಬುವುದು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅಪ್ರಯತ್ನ'** ಎಂಬುದು. ಇದನ್ನು ಮತ್ತು **'ಸಂಸ್ಕಾರಪಾಟವ'** (ಬಲವಾದ ಸಂಸ್ಕಾರ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ಸಮರ್ಥಿಸುತ್ತಿದ್ದಾರೆ—

**ನ ಚ ಶ್ರಿಯೋಽಪ್ರಯತ್ನತ್ವಾದನುಪಾಸನಂ ಸಂಸಾರೋ ವಾ । ನಿತ್ಯಂ ಭಗವದುಪಸ್ಥಿತೇರತಿಪ್ರಿಯತ್ವಾತ್ ಸಂಸ್ಕಾರಪಾಟವಾನ್ನಿತ್ಯೋಪಾಸೋಪಪತ್ತೇಶ್ಚ ॥ ೨೪ ॥**

**ಭಾವಾರ್ಥ**—ಲಕ್ಷ್ಮೀದೇವಿಗೆ ಪ್ರಯತ್ನವಿಲ್ಲದಿರುವುದರಿಂದ ಉಪಾಸನೆಯಿಲ್ಲವೆಂದಾಗುವುದು. (ಪ್ರಯತ್ನವಿರುವುದಾದರೆ) ಸಂಸಾರವು ಬರಬೇಕಾಗುತ್ತದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಯಾವಾಗಲೂ (ಉಪಸ್ಥಿತೇಃ=ಸ್ವಸಮೀಪೇ ಸ್ಥಿತತ್ವಾತ್) ಭಗವಂತನ ಸಮೀಪದಲ್ಲಿ ತಾನು ಇರುವುದರಿಂದ ಬಲವಾದ ಸಂಸ್ಕಾರವು ಇರುವುದರಿಂದ ಯಾವಾಗಲೂ ಉಪಾಸನೆಯು ಸಿದ್ಧವಾಗುತ್ತದೆ.

**ವಿವರಣೆ**—ಲಕ್ಷ್ಮೀದೇವಿಯು ಅನಾದಿಕಾಲದಿಂದ ಭಗವಂತನ ಧ್ಯಾನವನ್ನು ಮಾಡುತ್ತಿದ್ದಾಳೆ. ಆದ್ದರಿಂದ ಅವಳಿಗೆ ಬಲವಾದ ಸಂಸ್ಕಾರವಿದೆ. ಹಾಗಾಗಿ ಸರ್ವದಾ ಉಪಾಸನೆಯು ಸಿದ್ಧವಾಗುತ್ತದೆ. ಮತ್ತು ಯಾವಾಗಲೂ ಭಗವಂತನ ಸಮೀಪದಲ್ಲಿರುವುದರಿಂದ ಭಗವಂತನು ಅತಿ ಪ್ರಿಯನಾಗಿದ್ದಾನೆ. ಅತಿಪ್ರಿಯರಾದವರನ್ನು ಯಾವಾಗಲೂ ಧ್ಯಾನಮಾಡುವುದು ಲೋಕದಲ್ಲಿ ಕಂಡಿದೆ. ಅದರಂತೆ ಲಕ್ಷ್ಮಿಯೂ ನಿರಂತರ ಧ್ಯಾನಮಾಡುತ್ತಾಳೆ.

ಯದ್ಯಪಿ ಈ ಅಧಿಕರಣದಲ್ಲಿ ಮೂರು ಸೂತ್ರಗಳಿವೆ. ಮೊದಲನೆಯ ಸೂತ್ರದಲ್ಲಿ ಲಕ್ಷ್ಮೀದೇವಿಗೂ ಸೃಷ್ಟ್ಯಾದಿಗಳು ಇರುವುದರಿಂದ; ಉಳಿದವರಂತೆ ಅವಳಿಗೂ ಸಂಸಾರವಿದೆ ಎಂದು ಆಶಂಕೆ ಮಾಡಿಕೊಂಡು ಅವಳಿಗೆ ಸ್ವೇಚ್ಛೆಯಿಂದ ಅವತಾರವೇ ಹೊರತು ಜನ್ಮವಿಲ್ಲವಾದ್ದರಿಂದ ಅವಳು ಸಂಸಾರಿಗಳ ಗುಂಪಿನಲ್ಲಿ ಸೇರುವುದಿಲ್ಲವೆಂದು ಸಿದ್ಧಾಂತ ಮಾಡಿದ್ದಾರೆ. ಆದರೆ ಈ ಪೂರ್ವಪಕ್ಷ, ಸಿದ್ಧಾಂತ

ಗಳು ಉಪಾಸನೆಗೆ ಸಂಬಂಧಪಡದವುಗಳಾದ್ದರಿಂದ ಉಪಾಸನಾಪಾದದಲ್ಲಿ ಇವುಗಳ ಆವಶ್ಯಕತೆಯಿಲ್ಲವೆಂದು ಶ್ರೀಮದಾಚಾರ್ಯರು ಎರಡನೆಯ ಸೂತ್ರ ವಾದ ಓಂ ಆದರಾದಲೋಪ ಓಂ ಎಂಬ ಸೂತ್ರದ ಪೂರ್ವಪಕ್ಷ ಸಿದ್ಧಾಂತ ನ್ಯಾಯಗಳನ್ನು ಉಪಾಸನೆಗೆ ಸಂಬಂಧಿಸಿದ್ದರಿಂದ ಇಲ್ಲಿ ಸಂಗ್ರಹಿಸಿದ್ದಾರೆ.

ಆದ್ದರಿಂದ ಯಾವುದೇ ಫಲಾಪೇಕ್ಷೆಯಿಲ್ಲದೆ ಲಕ್ಷ್ಮೀದೇವಿಯು ನಿತ್ಯ ದಲ್ಲಿಯೂ ಭಗವಂತನ ಉಪಾಸನೆಯನ್ನು ಮಾಡುತ್ತಾಳೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯ ಓಂ

ಕಾಮಾತ್=ಇಚ್ಛಾಧೀನವಾದ ಕಾಮಾತ್ ಚ=ಈಶ್ವರನ ಇಚ್ಛಾಧೀನವಾದ ಇಚ್ಛೆಯಿಂದಲೆ ಲಕ್ಷ್ಮೀದೇವಿಯು ತತ್ರ=ಆ ಪರಮಾತ್ಮನ ಸಮೀಪದಲ್ಲಿ ಮೂಲರೂಪದಿಂದ ಇರುವವಳಾಗಿ ಇತರತ್ರ ಚ=ಭೂಮ್ಯಾದಿಗಳಲ್ಲಿಯೂ ಅವತರಿಸುತ್ತಾಳೆ. ಏನು ಪ್ರಮಾಣವೆಂದರೆ, ಆಯತನಾದಿಭ್ಯಃ=ಸರ್ವಗತತ್ವವನ್ನು ಬೋಧಿಸುವ ಶ್ರುತಿಯಿರುವುದರಿಂದ ಚ=ಲಕ್ಷ್ಮೀ ಬದ್ಧಳೂ ಮೋಚಕಳೂ ಆದ್ದರಿಂದ ನಾಮಾದಿಗಣದಲ್ಲಿ ಪರಿಗಣಿತಳಾಗಿಲ್ಲ.

## ನಿರ್ಧಾರಣಾಧಿಕರಣ (3-3-25)

ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ ಹಿ ಅಪ್ರತಿಬಂಧಃ ಫಲಮ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಶ್ರವಣಾದಿ ಉಪಾಸನೆಯೇ ವಿಷಯ. 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ವಿಧಿವಾಕ್ಯದಲ್ಲಿ ವಿಕಲ್ಪದ್ಯೋತಕವಾದ ವಾಶಬ್ದವಾಗಲೀ ಸಮುಚ್ಚಯದ್ಯೋತಕ ವಾದ ಚಶಬ್ದವಾಗಲೀ ಇಲ್ಲದಿರುವುದರಿಂದ ಸಂಶಯ ಬರುತ್ತದೆ— ಎಲ್ಲ ಉಪಾಸನೆಗಳನ್ನೂ ಮಾಡಬೇಕೋ? ಅಥವಾ ಯಾವುದಾದರೂ ಒಂದನ್ನು ಮಾಡಬಹುದೋ? ಎಂದು.

**ಪೂರ್ವಪಕ್ಷ**—ಉಪಾಸನೆಯು ಭಗವಂತನ ದರ್ಶನಕ್ಕಾಗಿ ಹೊರತು ಬೇರೆ

ಪ್ರಯೋಜನವಿಲ್ಲ. ಭಗವಂತನ ದರ್ಶನವು ಶ್ರವಣ–ಮನನಾದಿಗಳಿಂದಲೇ ಆಗುವಾಗ ಧ್ಯಾನದಿಂದ ಏನೂ ಪ್ರಯೋಜನವಿಲ್ಲ. ದರ್ಶನಕ್ಕೆ ಪ್ರತಿಬಂಧಕ ದೃಢವಾದ್ದರಿಂದ ಧ್ಯಾನದಿಂದಲೇ ಬ್ರಹ್ಮದರ್ಶನವೆಂದು ಹೇಳುವುದಾದರೆ ಆಗ ಶ್ರವಣಮನನಾದಿಗಳಿಂದ ಏನು ಪ್ರಯೋಜನ? ಕೇವಲ ಧ್ಯಾನವೊಂದೇ ಸಾಕು. ಶ್ರವಣಮನನಾದಿಗಳಿಂದ ಸಹಿತವಾದ ಧ್ಯಾನದಿಂದಲೇ ದರ್ಶನ ಎಂಬ ವಿಷಯದಲ್ಲಿಯೂ ಪ್ರಮಾಣವಿಲ್ಲ. ಆದ್ದರಿಂದ ಶ್ರವಣ, ಮನನಾದಿ ಸಮಸ್ತವನ್ನೂ ಮಾಡಬೇಕಾಗಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ದೃಢಬಂಧ'** (ಪ್ರತಿಬಂಧಕ ದೃಢವಾಗಿರುವುದು) ಎಂಬುದು. ಇದನ್ನು ಮತ್ತು **'ಈಶ್ವರೇಚ್ಛಾನಿಯತಿ'** (ನಿಯತ ವಾದ ಈಶ್ವರನ ಇಚ್ಛೆ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸು ತ್ತಿದ್ದಾರೆ—

**ನ ಚ ಬಂಧದಾರ್ಢ್ಯೇ ಶ್ರವಣಾದೀನಾಮಫಲತಾ । ಅನ್ಯಥೋಪಾಸಾಂ ವಿನೈವ ಶ್ರವಣಾದಿಜ್ಞಾನಮಾತ್ರೇಣ ಮುಕ್ತಿರಿತಿ ದೋಷಃ ।**

**'ಶ್ರವಣಾದಿತ್ರಯೋತ್ಪನ್ನದೃಷ್ಟ್ಯೈವ ಸ್ವೇಚ್ಛಯಾ ಹರಿಃ ।**
**ಪ್ರಸನ್ನೋ ಮುಕ್ತಿದೋ ನಿತ್ಯಮನ್ಯಥಾ ನ ಕಥಂಚನ ॥'**

**ಇತೀಶ್ವರೇಚ್ಛಾನಿಯತಿಶ್ರುತೇಃ ॥ ೨೫ ॥**

**ಭಾವಾರ್ಥ**—ಪ್ರತಿಬಂಧಕವು ದೃಢವೆಂದಾದರೆ ಶ್ರವಣ ಮನನಾದಿ ಗಳೆಲ್ಲದರಿಂದಲೂ ಪ್ರಯೋಜನವಿಲ್ಲ. ಪ್ರತಿಬಂಧಕವು ಅದೃಢವಾದರೆ ಉಪಾಸನೆ ಯಿಲ್ಲದೆ ಕೇವಲ ಶ್ರವಣ ಮನನಾದಿಗಳ ಜ್ಞಾನದಿಂದಲೇ ಮುಕ್ತಿಯಾಗುತ್ತದೆ. ಆದ್ದರಿಂದ ಉಪಾಸನೆಯ ಆವಶ್ಯಕತೆಯಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಶ್ರವಣ, ಮನನ, ನಿದಿಧ್ಯಾಸನ ಎಂಬ ಈ ಮೂರರಿಂದ ಉತ್ಪನ್ನವಾದ ದರ್ಶನದಿಂದಲೇ ತನ್ನ ಇಚ್ಛೆಯಂತೆ ಪ್ರಸನ್ನನಾದ ಪರಮಾತ್ಮನು ಮೋಕ್ಷವನ್ನು ಕೊಡುತ್ತಾನೆ ಹೊರತು ಬೇರೆ ರೀತಿಯಲ್ಲ' ಎಂಬುದಾಗಿ ಈಶ್ವರನ ಇಚ್ಛೆಗೆ ನಿಯಮವು ಶ್ರುತವಾಗಿದೆ.

**ವಿವರಣೆ**— ಪ್ರತಿಬಂಧಕವು ಅದೃಢವೆಂದೇ ಒಪ್ಪುತ್ತೇವೆ. ಆದರೂ ಶ್ರವಣ,

ಮನನ, ನಿದಿಧ್ಯಾಸನ ಇವುಗಳಿಂದಲೇ ಮುಕ್ತಿಯನ್ನು ಕೊಡುತ್ತೇನೆ ಎಂಬುದು ನಿಯತವಾದ ಈಶ್ವರನ ಇಚ್ಛೆ. ಈ ಇಚ್ಛೆಯನ್ನೂ ಈಶ್ವರನು 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯು ಪ್ರಾಮಾಣ್ಯವನ್ನು ಕಾಪಾಡುವುದಕ್ಕಾಗಿ ಹೊಂದಿದ್ದಾನೆ. ಆದ್ದರಿಂದ ಶ್ರವಣಾದಿ ಮೂರೂ ಅಪೇಕ್ಷಿತವೇ ಆಗಿವೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ತನ್ನಿರ್ಧಾರಣಾರ್ಥನಿಯಮಸ್ತದ್‌ದೃಷ್ಟೇಃ ಪೃಥಗ್ ಹಿ ಅಪ್ರತಿಬಂಧಃ ಫಲಮ್ ಓಂ

ತನ್ನಿರ್ಧಾರಣಾರ್ಥನಿಯಮಃ=ತತ್ವನಿಶ್ಚಯ ಮತ್ತು ಅದರಿಂದ ಸಹಿತವಾದ 'ಇದೇ ವೇದದ ಅರ್ಥ ಬೇರೆಯದಲ್ಲ' ಎಂಬ ವೇದಾರ್ಥನಿಯಮವು ಶ್ರವಣ ಮನನ ಫಲವಾದ ಇವೆರಡೂ ತದ್‌ದೃಷ್ಟೇಃ=ಬ್ರಹ್ಮದರ್ಶನಕ್ಕಿಂತಲೂ ಪೃಥಕ್= ಭಿನ್ನವಾಗಿದೆ. ಆದರೂ ಶ್ರವಣ ಮನನಾದಿಗಳು ವ್ಯರ್ಥವಲ್ಲ. ಏಕೆಂದರೆ ಹಿ= ಯಾವ ಕಾರಣದಿಂದ ಅಪ್ರತಿಬಂಧಃ=ಬ್ರಹ್ಮದರ್ಶನಕ್ಕೆ ಪ್ರತಿಬಂಧಕವಾದ ಅಜ್ಞಾನ ನಿವೃತ್ತಿ ಫಲಂ=ಶ್ರವಣ ಮನನಾದಿಗಳ ಫಲವು ಹಿ=ಹೇಗೆಂದು 'ಆತ್ಮಾ ವಾऽರೇ ದ್ರಷ್ಟವ್ಯಃ' ಎಂಬ ಶ್ರುತಿಯು ಹೇಳುತ್ತದೆ.

# ಪ್ರದಾನಾಧಿಕರಣ (3-3-26)

ಓಂ ಪ್ರದಾನವದೇವ ಹಿ ತದುಕ್ತಮ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಶ್ರವಣಾದಿಗಳು ವಿಷಯ. 'ಶ್ರೋತ್ರವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ವಿಧಿವಾಕ್ಯದಲ್ಲಿ ಗುರುಮುಖದಿಂದ ಶ್ರವಣ ಮಾಡಬೇಕು ಎಂಬ ವಿಶೇಷವಿಧಿ ಇಲ್ಲದಿರುವುದರಿಂದ ಸಂಶಯ ಬರುತ್ತದೆ— ಗುರುಪ್ರಸಾದ ಪೂರ್ವಕವಾದ ಶ್ರವಣ-ಮನನಾದಿಗಳು ಜ್ಞಾನಸಾಧನಗಳೋ? ಅಥವಾ ಕೇವಲ ಶ್ರವಣಾದಿಗಳು ಜ್ಞಾನಸಾಧನಗಳೋ? ಎಂದು.

**ಪೂರ್ವಪಕ್ಷ**—'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ವಿಧಿಯು ಕೇವಲ ಶ್ರವಣಾದಿಗಳನ್ನೇ ಜ್ಞಾನ ಸಾಧನವೆನ್ನುತ್ತದೆ. ಆದ್ದರಿಂದ

ಪ್ರಸನ್ನನಾದ ಗುರುವಿನಿಂದಲೇ ಶ್ರವಣಾದಿಗಳನ್ನು ಮಾಡಬೇಕು ಎಂಬ ನಿಯಮವಿಲ್ಲ. ಒಂದುವೇಳೆ ಜ್ಞಾನವು ಗುರುವಿನ ಅಧೀನವೆಂದಾದರೆ ಮೋಕ್ಷವೂ ಗುರುವಿನ ಅಧೀನವಾಗಬೇಕಾಗುತ್ತದೆ. ಗುರುವಿನ ಕೋಪ, ಶಾಪಗಳಿಂದ ಜ್ಞಾನಿಗೂ ಮೋಕ್ಷ ತಪ್ಪಿದಂತಾಗುವುದು. ಆದ್ದರಿಂದ ಗುರುಪ್ರಸಾದದ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪರಾಭವ' (ಜ್ಞಾನ ಮತ್ತು ಮೋಕ್ಷಗಳು ಸಿಗದಿರಬಹುದು) ಎಂಬುದು. ಇದನ್ನು ಮತ್ತು 'ವಸ್ತುವೈಭವ' (ಬ್ರಹ್ಮಜ್ಞಾನ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ.

**ನ ಚ ಗುರ್ವಧೀನತ್ವೇ ಜ್ಞಾನಮೋಕ್ಷಯೋರ್ಜ್ಞಾನಿನೋಽಪಿ ಕದಾಚಿದ್ಗುರುಕೋಪಾಜ್ಜ್ಞಾನಪರಾಭಾವೇನಾಮುಕ್ತಿಪ್ರಸಂಗಾನ್ನ ಗುರ್ವಧೀನತ್ವಮಿತಿ ।**

**'ಜ್ಞಾನಿನೋ ಗುರುಶಾಪೇಽಪಿ ನಾಮುಕ್ತಿಃ ಸಂಸೃತೇಃ ಕ್ವಚಿತ್ ।**
**ಆನಂದಹ್ರಾಸದೋಷೇಣ ಸೈವ ಮುಕ್ತಿರ್ವಿದುಷ್ಯತಿ ॥'**

**ಇತಿ ವಚನಾನ್ಮುಕ್ತಿದೂಷಣೇನೈವ ಗುರುಶಾಪಾದೇಃ ಕೃತಾರ್ಥತ್ವಾತ್। ಜ್ಞಾನಿನೋ ಬ್ರಹ್ಮವಸ್ತುವೈಭವೇನ ಮುಕ್ತಿಃ ಸ್ಯಾದಿತಿ ಗುರೋರ್ವರೇಣ ವಾ ಮುಕ್ತ್ಯನುಪಪತ್ತೇಃ ॥ ೨೬ ॥**

**ಭಾವಾರ್ಥ**—ಜ್ಞಾನ ಮತ್ತು ಮೋಕ್ಷಗಳು ಗುರ್ವಧೀನವಾದರೆ ಜ್ಞಾನಿಗೂ ಕೆಲವೊಮ್ಮೆ ಗುರುಗಳ ಕೋಪದಿಂದ ಜ್ಞಾನವಿಲ್ಲದಂತಾಗುವುದರಿಂದ ಮೋಕ್ಷವೇ ಸಿಗದಿರುವಂತಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ, 'ಜ್ಞಾನಿಯಾದವನಿಗೆ ಗುರುಶಾಪ ಬಂದರೂ ಎಂದಿಗೂ ಸಂಸಾರದಿಂದ ಮುಕ್ತಿಯು ಸಿಗುವುದಿಲ್ಲವೆಂದಾಗುವುದಿಲ್ಲ. ಆ ಮುಕ್ತಿಯು ಆನಂದಹ್ರಾಸ ಮುಂತಾದ ದೋಷದಿಂದ ದುಷ್ಟವಾಗುತ್ತದೆ' ಎಂದು ವಾಕ್ಯವಿರುವುದರಿಂದ ಗುರುಕೋಪಾದಿಗಳು ಮುಕ್ತಿಯಲ್ಲಿ (ಆನಂದಹ್ರಾಸವೆಂಬ) ದೋಷವನ್ನು ತಂದುಕೊಡುವ ಮೂಲಕ ಸಾರ್ಥಕವಾಗುತ್ತವೆ. ಜ್ಞಾನಿಗೆ 'ಸಾಕ್ಷಾತ್ಕೃತನಾದ ಬ್ರಹ್ಮನ ಜ್ಞಾನದಿಂದಲೇ

ಮೋಕ್ಷವಾಗುತ್ತದೆ' ಎಂಬ ಗುರುಗಳ ವರದಿಂದ ಅಮುಕ್ತಿಯು ಕೂಡುವುದಿಲ್ಲ (ಮುಕ್ತಿಯು ನಿಶ್ಚಿತವಾಗಿ ಆಗುತ್ತದೆ)

**ವಿವರಣೆ**—ಗುರ್ವನುಗ್ರಹದಿಂದ ಪ್ರಾಪ್ತವಾದ ಜ್ಞಾನದಿಂದ ಮೋಕ್ಷವಾಗುತ್ತದೆ. ಹಾಗಾದರೆ ಮೋಕ್ಷವು ಗುರ್ವಧೀನವಾಗಿ ಗುರುಶಾಪದಿಂದ ಜ್ಞಾನಿಗೂ ಮೋಕ್ಷವು ತಪ್ಪುತ್ತದೆ ಎಂಬ ಪೂರ್ವಪಕ್ಷಿಯ ಪ್ರಶ್ನೆಯು ಉಳಿಯುತ್ತದೆಯಲ್ಲ? ಎಂದರೆ ಇಲ್ಲ. ಗುರುಶಾಪದಿಂದ ಯಾರಿಗೂ ಮೋಕ್ಷವು ತಪ್ಪುವುದಿಲ್ಲ. ಆದರೆ ಆನಂದಹ್ರಾಸ ಮಾತ್ರ ಆಗುತ್ತದೆ. ಆನಂದಹ್ರಾಸಾದಿಗಳನ್ನು ತಂದುಕೊಡುವುದರಿಂದ ಗುರೂಪದೇಶದಿಂದ ಶ್ರವಣಾದಿಗಳನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ಪ್ರದಾನವದೇವ ಹಿ ತದುಕ್ತಮ್ ಓಂ**

ತತ್=ಶ್ರವಣ ಮನನ ನಿದಿಧ್ಯಾಸನಗಳು ಪ್ರದಾನವದೇವ=ಪ್ರೀತಿಪೂರ್ವಕ ಜ್ಞಾನೋಪದೇಶದಿಂದ ಕೂಡಿಯೇ ಜ್ಞಾನಸಾಧನಗಳು; ಕೇವಲ ಅಲ್ಲ. ಏಕೆಂದರೆ, ತತ್=ಜ್ಞಾನಕ್ಕೆ ಪ್ರಸಾದದ ಅಧೀನತೆಯು ಉಕ್ತಂ='ಆಚಾರ್ಯವಾನ್ ಪುರುಷೋ ವೇದ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

## ಲಿಂಗಭೂಯಸ್ತ್ವಾಧಿಕರಣ (3-3-27)

ಓಂ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದ ವಿಷಯ ಗುರುಪ್ರಸಾದದಿಂದ ಪಡೆದುಕೊಳ್ಳುವ ಶ್ರವಣಾದಿಗಳು. ಕೆಲವು ಕಡೆಗಳಲ್ಲಿ ಸಹಕಾರಿಯು ಪ್ರಬಲವಾದದ್ದು ಕಂಡಿದೆ. (ಕೃಷಿಯಲ್ಲಿ ಮಳೆ ಎಂಬ ಸಹಕಾರಿ ಪ್ರಬಲವಾಗಿ ಕಂಡಿದೆ) ಕೆಲವು ಕಡೆಗಳಲ್ಲಿ ಪ್ರಧಾನ ಸಾಧನವು ಪ್ರಬಲವಾಗಿ ಕಂಡಿದೆ. (ಕೃಷಿಯಲ್ಲಿಯೇ ಕರ್ಷಣವು ಪ್ರಬಲವಾಗಿ ಕಂಡಿದೆ) ಕೆಲವು ಕಡೆಗಳಲ್ಲಿ ಎರಡೂ ಪ್ರಧಾನವಾಗಿ ಕಂಡಿವೆ. (ಸ್ವರ್ಗಕ್ಕೆ ಪ್ರಧಾನ-ಸಹಕಾರಿಗಳಾದ ಜ್ಯೋತಿಷ್ಟೋಮ, ಅಶ್ವಮೇಧಗಳೆರಡೂ ಪ್ರಧಾನವಾಗಿ ಕಂಡಿವೆ) ಆದ್ದರಿಂದ ಸಂಶಯ ಬರುತ್ತದೆ- ಗುರು ಪ್ರಸಾದವು ಪ್ರಬಲವೋ? ಶಿಷ್ಯನ ಪ್ರಯತ್ನವು ಬಲಿಷ್ಠವೋ? ಅಥವಾ ಎರಡೂ ಸಮಾನವೋ? ಎಂದು.

**ಪೂರ್ವಪಕ್ಷ**—ಪ್ರಸನ್ನನಾದ ಗುರುವಿನಿಂದ ಶ್ರವಣಮಾಡಿದರೆ ಪರಮಾತ್ಮನ ಅಪರೋಕ್ಷವಾಗುತ್ತದೆ ಎಂದು ಹೇಳಿದ್ದಾರೆ. ಆದ್ದರಿಂದ ಶ್ರವಣಕ್ಕೆ ಗುರುಪ್ರಸಾದವು ಸಹಕಾರಿಯೆಂದು ಸಿದ್ಧವಾಯಿತು. ಶ್ರವಣಾದಿರೂಪವಾದ ಶಿಷ್ಯನ ಪ್ರಯತ್ನವೇ ಪ್ರಬಲ. ಸಾಧನಕ್ಕಿಂತ ಸಹಕಾರಿಗೆ ಪ್ರಾಬಲ್ಯವು ಎಲ್ಲಿಯೂ ಕಂಡಿಲ್ಲ. ಶಿಷ್ಯನ ಪ್ರಯತ್ನಕ್ಕೆ ಆಧಿಕ್ಯವಿಲ್ಲದಿದ್ದರೂ ಗುರುಶಿಷ್ಯರಲ್ಲಿ ಪುರುಷತ್ವವು ಸಮಾನವಾಗಿದೆ. ಆದ್ದರಿಂದ ಧಾರಣಾದಿರೂಪವಾದ ಶಿಷ್ಯನ ಪ್ರಯತ್ನವು ದುರ್ಬಲವಲ್ಲ. ಸಮಾನವೇ ಆಗಿರುತ್ತದೆ. ಆದ್ದರಿಂದ ಗುರುಪ್ರಸಾದದ ಆವಶ್ಯಕತೆಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಪುಂಸಾಮ್ಯ'** (ಪುರುಷತ್ವವು ಗುರು–ಶಿಷ್ಯರಲ್ಲಿ ಸಮಾನ) ಎಂಬುದು. ಇದನ್ನು ಮತ್ತು **'ವಿಶೇಷೋಕ್ತಿ'** (ವಿಶೇಷವಾದ ವಚನ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ಶಿಷ್ಯಸ್ಯಾಪಿ ಪುರುಷತ್ವಸಾಮ್ಯಾದ್ ಧಾರಣಾದೇಸ್ತತ್ಪ್ರಯತ್ನಸ್ಯ ನ ದೌರ್ಬಲ್ಯಮಿತಿ ನ ಮಂತವ್ಯಮ್ । 'ಗುರುಪ್ರಸಾದೋ ಬಲವಾನ್' ಇತ್ಯಾದಿ ವಿಶೇಷೋಕ್ತೇಃ ॥ ೨೭ ॥**

**ಭಾವಾರ್ಥ**—ಶಿಷ್ಯನಲ್ಲಿಯೂ ಪುರುಷತ್ವವು ಸಮಾನವಾದ್ದರಿಂದ ಧಾರಣಾದಿ ರೂಪವಾದ ಪ್ರಯತ್ನವು ದುರ್ಬಲವಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. 'ಗುರುಪ್ರಸಾದೋ ಬಲವಾನ್' ಎಂಬಿವೇ ಮೊದಲಾದ ವಿಶೇಷ ವಾಕ್ಯಗಳಿರುವುದ ರಿಂದ.

**ವಿವರಣೆ**— 'ಗುರುಪ್ರಸಾದೋ ಬಲವಾನ್ ನ ತಸ್ಮಾದ್ ಬಲವತ್ತರಮ್ । ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ॥' (ಗುರುವಿನ ಅನುಗ್ರಹವೇ ಪ್ರಬಲ ಅದಕ್ಕಿಂತ ಪ್ರಬಲವಾದದ್ದು ಮತ್ತೊಂದಿಲ್ಲ. ಹಾಗಿದ್ದರೂ ಮೋಕ್ಷಪ್ರಾಪ್ತಿಗಾಗಿ ಶ್ರವಣಾದಿಗಳನ್ನು ಮಾಡಬೇಕು) ಎಂಬ ವಿಶೇಷವಚನ ವಿರುವುದರಿಂದ ಸಹಕಾರಿಯಾಗಿದ್ದರೂ ಗುರುಪ್ರಸಾದವೇ ಪ್ರಬಲವೆಂದು ಸಿದ್ಧವಾಗುತ್ತದೆ. ಸಹಕಾರಿಗೆ ಪ್ರಾಬಲ್ಯವು ಎಲ್ಲಿಯೂ ಕಂಡಿಲ್ಲವಾದ್ದರಿಂದ

ಸಹಕಾರಿಯಾದ ಗುರುಪ್ರಸಾದಕ್ಕೆ ಪ್ರಾಬಲ್ಯವನ್ನು ಹೇಗೆ ಒಪ್ಪಿಕೊಳ್ಳುವುದು? ಎಂಬ ಪೂರ್ವಪಕ್ಷಿಯ ಪ್ರಶ್ನೆಗೆ ಸಹಕಾರಿಗೂ ಪ್ರಾಬಲ್ಯವು ಕಂಡಿದೆ ಎಂದೇ ಉತ್ತರ. ಪಾಪಸಾಧನವಾದ ಹಿಂಸೆಗೆ ಯಾಗಸಂಬಂಧ ವೆಂಬ ಸಹಕಾರಿಯು ಸೇರಿದಾಗ ಹಿಂಸೆಯಲ್ಲಿರುವ ಪಾಪಜನಕತ್ವವು ಹೋಗಿ ಪುಣ್ಯಜನಕತ್ವವು ಬರುತ್ತದೆ. ಆದ್ದರಿಂದ ಯಾಗದ ಸಂಬಂಧವೇ ಪ್ರಧಾನ. ಅದರಂತೆ ಇಲ್ಲಿಯೂ ಸಾಧನವಾದ ಶ್ರವಣಾದಿಗಳಿಗಿಂತ ಸಹಕಾರಿಯಾದ ಗುರುಪ್ರಸಾದವು ಪ್ರಬಲವಾಗುತ್ತದೆ ಎಂದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಲಿಂಗಭೂಯಸ್ತ್ವಾತ್ ತದ್ಧಿ ಬಲೀಯಸ್ತದಪಿ ಓಂ

ತತ್=ಆ ಗುರುಪ್ರಸಾದವು ಬಲೀಯಃ=ಬಲಿಷ್ಠವಾದದ್ದು ಏಕೆಂದರೆ ಲಿಂಗಭೂಯಸ್ತ್ವಾತ್=ಬಹಳವಾದ ಲಿಂಗಗಳು ಕಂಡಿರುವುದರಿಂದ ಹಾಗಿದ್ದರೂ ತದಪಿ=ಶ್ರವಣಾದಿಗಳನ್ನು ಮಾಡಬೇಕು. ಹಿ='ಶ್ರೋತವ್ಯಃ' ಎಂಬ ಶ್ರುತಿಯಿರುವುದರಿಂದ.

## ಪೂರ್ವವಿಕಲ್ಪಾಧಿಕರಣ (3-3-28)

ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದ ವಿಷಯ ಗುರುಗಳು. ಒಬ್ಬ ಯಜಮಾನನ ಬಳಿ ಕೆಲಸಕ್ಕೆಂದು ಸೇರಿದ ಸೇವಕನು ಮೊದಲು ಲಭಿಸಿದ ಯಜಮಾನನನ್ನು ಬಿಡುವುದು ಮತ್ತು ಬಿಡದೇ ಇರುವುದು ಎಂಬ ಎರಡೂ ಲೋಕದಲ್ಲಿ ಕಂಡಿದ್ದರಿಂದ, ಪ್ರಥಮ ಪ್ರಾಪ್ತರಾದ ಗುರುಗಳನ್ನೇ ಆಶ್ರಯಿಸಬೇಕೆಂಬ ನಿಯಮವೋ? ಅಥವಾ ಪ್ರಥಮ ಪ್ರಾಪ್ತರಾದ ಗುರುಗಳನ್ನು ಪರಿತ್ಯಜಿಸಿ ಮತ್ತೊಬ್ಬರನ್ನು ಆಶ್ರಯಿಸಬಹುದೋ? ಎಂಬುದು ಸಂದೇಹ.

**ಪೂರ್ವಪಕ್ಷ**—ಸಾಧಕನು ಗುರುಗಳನ್ನು ಆಶ್ರಯಿಸುವುದರಿಂದಲೇ ಮಂಗಳವಾಗುವುದರಿಂದ ಪ್ರಥಮಪ್ರಾಪ್ತರಾದ ಗುರುಗಳನ್ನು ಪರಿತ್ಯಜಿಸಬಾರದು. ಗುರುಗಳನ್ನು ಪರಿತ್ಯಾಗಮಾಡಿದರೆ 'ಗುರುತ್ಯಾಗೇ ಭವೇನ್ಮೃತ್ಯುಃ

ಮಂತ್ರತ್ಯಾಗೇ ದರಿದ್ರತಾ । ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್'' (ಗುರುಗಳನ್ನು ಪರಿತ್ಯಜಿಸಿದರೆ ಮರಣ, ಮಂತ್ರವನ್ನು ಪರಿತ್ಯಜಿಸಿದರೆ ದಾರಿದ್ರ್ಯವು ಬರುತ್ತದೆ. ಗುರು, ಮಂತ್ರಗಳೆರಡನ್ನು ಪರಿತ್ಯಜಿಸುವವನು ರೌರವ ನರಕವನ್ನು ಪಡೆಯುತ್ತಾನೆ) ಎಂದು ದೋಷವು ಶ್ರುತವಾಗಿದೆ. ಆದ್ದರಿಂದ ಸರ್ವಜ್ಞಗುರುಗಳು ಪ್ರಾಪ್ತರಾದಾಗ್ಯೂ, ಪ್ರಥಮ ಪ್ರಾಪ್ತರಾದ ಗುರುಗಳನ್ನು ಪರಿತ್ಯಜಿಸಬಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಿಸುವ ಯುಕ್ತಿ 'ಪ್ರಾಪ್ತಸಂತ್ಯಾಗ' (ಪ್ರಾಪ್ತರಾದ ಗುರುಗಳನ್ನು ಪರಿತ್ಯಜಿಸಿದರೆ ದೋಷಪ್ರಾಪ್ತಿ) ಎಂಬುದು. ಇದನ್ನು ಹಾಗೆಯೇ **'ಅಮಾನತ್ವ'** (ಪ್ರಮಾಣವಿಲ್ಲದಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚೋತ್ತಮಗುರುಸ್ವೀಕಾರಾರ್ಥತ್ವೇನ ಪ್ರಾಪ್ತಸಂತ್ಯಾಗನಿಮಿತ್ತ-ದೋಷಃ । ತತ್ರ ದೋಷೇ ಮಾನಾಭಾವಾತ್ ।। ೨೮ ।।**

**ಭಾವಾರ್ಥ**—ಉತ್ತಮ ಗುರುಗಳನ್ನು ಸ್ವೀಕಾರಮಾಡುವುದರಿಂದ ಪ್ರಾಪ್ತ ರಾದ ಗುರುಗಳನ್ನು ಬಿಡುವುದರಿಂದ ದೋಷವು ಪ್ರಾಪ್ತವಾಗುವುದು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಪ್ರಾಪ್ತರಾದ ಗುರುಗಳನ್ನು ಪರಿತ್ಯಜಿಸಿದರೆ ದೋಷಪ್ರಾಪ್ತವಾಗುತ್ತದೆ ಎಂಬುದಕ್ಕೆ ಪ್ರಮಾಣವಿಲ್ಲವಾದ್ದರಿಂದ.

**ವಿವರಣೆ**—ಉತ್ತಮಗುರುಗಳು ಪ್ರಾಪ್ತರಾದಾಗ ಪ್ರಥಮ ಗುರುಗಳನ್ನು ಪರಿತ್ಯಜಿಸಿದರೆ ದೋಷಪ್ರಾಪ್ತವಾಗುತ್ತದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. 'ಗುರುತ್ಯಾಗೇ ಭವೇನ್ಮೃತ್ಯುಃ' ಮುಂತಾದ ವಾಕ್ಯಗಳನ್ನು ದೋಷವಿಷಯದಲ್ಲಿ ಪ್ರಮಾಣವನ್ನಾಗಿ ಹೇಳಲಾಗಿದೆಯಲ್ಲ? ಎಂದರೆ ಮೊದಲಿಗೆ ದೊರಕಿದ ಗುರುಗಳಿ ಗಿಂತ ಅಧಮಗುರುಗಳ ಬಳಿ ಹೋದವನಿಗೆ, ಅಥವಾ ಸಮಾನವಾದ ಗುರುಗಳು ಸಿಕ್ಕಾಗ ಪೂರ್ವಗುರುಗಳ ಅಪ್ಪಣೆಯನ್ನು ಪಡೆಯದವನಿಗೆ ಮಾತ್ರ ದೋಷವನ್ನು ಹೇಳಿದ್ದೇ ಹೊರತು ಉತ್ತಮಗುರುಗಳ ಬಳಿ ಅಥವಾ ಪೂರ್ವಗುರುಗಳ ಅಪ್ಪಣೆ ಪಡೆದು ಸಮಾನಗುರುಗಳ ಬಳಿಗೆ ಹೋದವನಿಗೆ ಅಲ್ಲ. ಆದ್ದರಿಂದ ಆ ಸರ್ವಜ್ಞ ಗುರುಗಳು ಪ್ರಾಪ್ತರಾದಾಗ ಅವರನ್ನು ಸ್ವೀಕರಿಸಿದರೆ ಯಾವ ದೋಷವೂ ಇಲ್ಲ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾಮಾನಸವತ್ ಓಂ

ಕ್ರಿಯಾಮಾನಸವತ್=ಸಮಾನಫಲವುಳ್ಳ ಮಾನಸಕ್ರಿಯಾರೂಪ ಧ್ಯಾನದಂತೆ ಪೂರ್ವವಿಕಲ್ಪಃ ಸ್ಯಾತ್=ಪೂರ್ವದಲ್ಲಿ ಪ್ರಾಪ್ತನಾದ ಗುರುವಿಗೆ ಸಮಾನನಾದ ಅನಂತರ ಪ್ರಾಪ್ತನಾದ ಗುರುವನ್ನು ಸ್ವೀಕರಿಸಬಹುದು. ಅಥವಾ ಬಿಡಬಹುದು ಎಂದು ವಿಕಲ್ಪ ಹೊರತು ವಿಧಿ ಇಲ್ಲ. ಏಕೆಂದರೆ, ಪ್ರಕರಣಾತ್=ಪ್ರಕೃಷ್ಟ ಅನುಗ್ರಹವನ್ನು ಅಪೇಕ್ಷಿಸಿ ಗುರುವು ಸ್ವೀಕಾರ್ಯನಾದ್ದರಿಂದ.

## ವಿದ್ಯಾಧಿಕರಣ (3-3-29)

ಓಂ ವಿದ್ಯೈವ ತು ನಿರ್ಧಾರಣಾತ್ ಓಂ ಎಂಬ ಸೂತ್ರದಿಂದ ಆರಂಭ ವಾಗುವ ಈ ಅಧಿಕರಣದಲ್ಲಿ ಭಗವದುಪಾಸನೆಯು ವಿಷಯ. ಮಾಡಬಾರದ ವಿಷಭಕ್ಷಣಾದಿ ಕ್ರಿಯೆಗಳು ಕಂಡಿರುವುದು, ಮಾಡಬೇಕಾದ ಅನ್ನಭಕ್ಷಣಾದಿ ಕ್ರಿಯೆಗಳು ಕಂಡಿರುವುದರಿಂದ ಸಂಶಯವು ಬರುತ್ತದೆ– ಉಪಾಸನೆ ಕ್ರಿಯೆಯನ್ನು ಮಾಡಬಾರದೊ? ಮಾಡಬೇಕೋ? ಎಂದು.

**ಪೂರ್ವಪಕ್ಷ—**'ತರತಿ ಶೋಕಮಾತ್ಮವಿತ್' (ಆತ್ಮಜ್ಞಾನಿಯು ಸಂಸಾರವನ್ನು ದಾಟುತ್ತಾನೆ) ಎಂಬ ವಾಕ್ಯಗಳು ಜ್ಞಾನವೇ ಮೋಕ್ಷಕ್ಕೆ ಕಾರಣವೆಂದು ಪ್ರತಿಪಾದಿಸುತ್ತಿವೆ. 'ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ' (ಜನಕನೇ ಮೊದಲಾದವರು ಕರ್ಮದಿಂದಲೇ ಮೋಕ್ಷವನ್ನು ಪಡೆದಿದ್ದಾರೆ) ಹೀಗೆ ಎರಡು ವಿಧವಾದ ವಾಕ್ಯಗಳಿರುವುದರಿಂದ ಮೋಕ್ಷಕ್ಕೆ ಕಾರಣವಾದದ್ದು ಯಾವುದೆಂದು ನಿರ್ಧಾರವಾಗದಿರುವುದರಿಂದ ಉಪಾಸನೆಯನ್ನು ಮಾಡುವುದು ವ್ಯರ್ಥ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕಾರಣಾನಿರ್ಣಯ' (ಮೋಕ್ಷಕ್ಕೆ ಕಾರಣವು ಯಾವುದೆಂದು ನಿರ್ಣಯವಾಗದಿರುವುದು) ಇದನ್ನು ಮತ್ತು 'ಪ್ರಾಧಾನ್ಯ' (ಜ್ಞಾನವು ಮೋಕ್ಷಸಾಧನವೆಂದು ಹೇಳುವ ವಾಕ್ಯಕ್ಕೆ ಪ್ರಾಬಲ್ಯವಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ವಿದ್ಯಾ ಕರ್ಮ ವಾ ಸಂಸಾರನಿವೃತ್ತಿಕಾರಣಮಿತಿ ಕಾರಣಾನಿರ್ಣಯಃ। 'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಇತ್ಯವಧಾರಣಾದ್ ವಿದ್ಯಾವಚನಸ್ಯ ಪ್ರಾಧಾನ್ಯಾತ್ ॥ ೨೯ ॥**

**ಭಾವಾರ್ಥ**—ಸಂಸಾರನಿವೃತ್ತಿಗೆ (ಮುಕ್ತಿಗೆ) ಕಾರಣವಾದದ್ದು ವಿದ್ಯೆಯೋ ಕರ್ಮವೋ ಎಂದು ನಿರ್ಣಯವಿಲ್ಲದಿರುವುದರಿಂದ ಉಪಾಸನೆಯನ್ನು ಮಾಡುವ ಆವಶ್ಯಕತೆಯಿಲ್ಲ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ 'ನಾನ್ಯಃ ಪಂಥಾ ಅಯನಾಯ ವಿದ್ಯತೇ' (ಜ್ಞಾನವೇ ಮೋಕ್ಷಕ್ಕೆ ಕಾರಣ ಬೇರೆ ಮಾರ್ಗವಿಲ್ಲ) ಎಂದು ಅವಧಾರಣವಿರುವುದರಿಂದ ಜ್ಞಾನವು ಮೋಕ್ಷ ಸಾಧನ ಎಂಬ ವಾಕ್ಯಕ್ಕೆ ಪ್ರಾಬಲ್ಯವು ಸಿದ್ಧವಾಗುತ್ತದೆ.

**ವಿವರಣೆ**—'ನಾನ್ಯಃ ಪಂಥಾ...' ಎಂಬ ವಾಕ್ಯದಲ್ಲಿ ಮೋಕ್ಷಕ್ಕೆ ಸಾಧನ ವಾದದ್ದು ಜ್ಞಾನವೇ ಹೊರತು ಬೇರೆಯಿಲ್ಲ ಎಂದು ಅನ್ಯಯೋಗವ್ಯವಚ್ಛೇದ ಎಂಬ ಅವಧಾರಣವಿರುವುದರಿಂದ ಜ್ಞಾನವೇ ಮೋಕ್ಷಸಾಧನವೆಂದು ಸಿದ್ಧವಾಗುತ್ತದೆ. ಕರ್ಮವು ಮೋಕ್ಷಕ್ಕೆ ಕಾರಣವಾದ್ದರಿಂದಲೇ 'ಕರ್ತೃಕರಣಯೋಸ್ತೃತೀಯಾ' ಎಂಬ ಸೂತ್ರದಿಂದ 'ಕರ್ಮಣೈವ ಹಿ...' ಎಂಬಲ್ಲಿ ತೃತೀಯಾ ವಿಭಕ್ತಿಯು ಪ್ರಾಪ್ತವಾಗಿದೆ. ಅದು ಅನುಪಪನ್ನವಾಗುತ್ತದೆ ಎಂದು ಆಕ್ಷೇಪಿಸುವಂತಿಲ್ಲ. 'ಲಾಂಗಲೇನ ಜೀವಾಮಃ' (ನೇಗಿಲಿನಿಂದ ಬದುಕುತ್ತೇವೆ) ಎಂಬಲ್ಲಿ ಲಾಂಗಲದಿಂದ ಕೃಷಿಯನ್ನು ಮಾಡಿ ಬದುಕುತ್ತಿದ್ದೇವೆ ಎಂಬುದಾಗಿ ಪರಂಪರೆಯಿಂದ ಕರಣವಾದದ್ದಕ್ಕೂ ತೃತೀಯಾ ವಿಭಕ್ತಿಯು ಬಂದಿರುವಂತೆ ಕರ್ಮದಿಂದ ಜ್ಞಾನ, ಜ್ಞಾನದಿಂದ ಮೋಕ್ಷವೆಂದು ಪರಂಪರೆಯಿಂದ ಕರಣವಾದ್ದರಿಂದ ತೃತೀಯಾ ವಿಭಕ್ತಿಯು ಬಂದಿದೆ ಎಂದು ತಿಳಿಯಬೇಕು. ಹೀಗೆ ಅರ್ಥವನ್ನು ಮಾಡಿದರೆ 'ಕರ್ಮಣೈವ' ಎಂಬಲ್ಲಿರುವ ಏವಕಾರದ ವಿರೋಧವು ಬರುತ್ತದೆಯಲ್ಲ? ಎಂದರೆ 'ಸಂಸಿದ್ಧಿಮ್' ಎಂಬ ಶಬ್ದಕ್ಕೆ ಮೋಕ್ಷ ಎಂದರ್ಥವಲ್ಲ ಹೊರತು ಜ್ಞಾನವೆಂದರ್ಥ. ಜ್ಞಾನಕ್ಕೆ ಕರ್ಮವು ಕರಣವಾದ್ದರಿಂದ ತೃತೀಯಾ ವಿಭಕ್ತಿಯು ಬಂದಿದೆ ಎಂದರ್ಥೈಸಿಕೊಳ್ಳಬೇಕು. ಜ್ಞಾನವೇ ಮೋಕ್ಷಸಾಧನವೆಂದು ನಿರ್ಣಯವಾಗಿರುವುದರಿಂದ ಉಪಾಸನೆಯನ್ನು ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ವಿದ್ಯೈವ ತು ನಿರ್ಧಾರಣಾತ್ ಓಂ

ನಿರ್ಧಾರಣಾತ್='ನಾನ್ಯಃ ಪಂಥಾ ವಿದ್ಯತೇ ಅಯನಾಮಯ' ಎಂಬ ಶ್ರುತಿಯಲ್ಲಿ ಬೇರೆ ಮಾರ್ಗಗಳನ್ನು ನಿಷೇಧಿಸಿ ಜ್ಞಾನವನ್ನು ಮೋಕ್ಷಸಾಧನವೆಂದು ನಿಶ್ಚಯಿಸಿರುವುದರಿಂದ ವಿದ್ಯೈವ=ಜ್ಞಾನವೇ ಮೋಕ್ಷಸಾಧನ. ತು=ಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ಹೇಳುವ ಶ್ರುತಿಯು ಪ್ರಬಲವಾದ್ದರಿಂದ.

## ಅಬಾಧಾಧಿಕರಣ (3-3-30)

ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಭಾಧಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಮೋಕ್ಷವು ವಿಷಯ. ವಾಕ್ಯಗಳಲ್ಲಿ ವಿರೋಧವಿರುವುದರಿಂದ ಮೋಕ್ಷವು ಜ್ಞಾನಸಾಧ್ಯವೋ? ಕರ್ಮಸಾಧ್ಯವೋ? ಎಂದು ಸಂಶಯವು ಬರುತ್ತದೆ.

**ಪೂರ್ವಪಕ್ಷ—**'ಕರ್ಮಣೈವ ಹಿ ಸಂಸಿದ್ಧಿಮ್' ಎಂಬ ಸ್ಮೃತಿಯು ಏವಕಾರ ದಿಂದ ಕರ್ಮವೇ ಮೋಕ್ಷಸಾಧನವೆಂದು ಹೇಳುತ್ತಿದೆ. ಆದ್ದರಿಂದ 'ನಾನ್ಯಃ ಪಂಥಾಃ' ಎಂದು ಶ್ರುತಿಯಿಂದ ಜ್ಞಾನವೇ ಮೋಕ್ಷಸಾಧನವೆಂದು ನಿರ್ಣಯಿಸುವುದು ಸರಿಯಲ್ಲ. 'ಕರ್ಮಣೈವ' ಎಂಬ ಸ್ಮೃತಿಯು ಶ್ರುತಿಯನ್ನು ಹೇಗೆ ಬಾಧಿಸುತ್ತದೆ? ಎಂದರೆ ಸ್ಮೃತಿಯು ಭಗವಂತನ ವಾಕ್ಯವಾದ್ದರಿಂದ ಪ್ರಬಲವಾಗಿ ಶ್ರುತಿಯನ್ನು ಬಾಧಿಸಲು ಸಮರ್ಥವಾಗುತ್ತದೆ. ಹಾಗಾಗಿ ಜ್ಞಾನವನ್ನೇ ಪ್ರಧಾನೋಪಾಯ ವನ್ನಾಗಿ ಹೇಳುವ ಶ್ರುತಿವಚನವೇ ಪ್ರಧಾನ ಎನ್ನುವುದು ಭ್ರಾಂತಿಮೂಲಕವಾಗಿದೆ. ಆದ್ದರಿಂದ ಕರ್ಮವೂ ಮೋಕ್ಷಸಾಧನ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಭ್ರಮ' ಎಂಬುದು. ಇದನ್ನು ಮತ್ತು 'ಪ್ರೀತಿ' (ಭಗವಂತನ ಪ್ರೀತಿಯ ಮೋಕ್ಷಸಾಧನ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ವಿದ್ಯಾವಚನಸ್ಯ ಪ್ರಾಧಾನ್ಯಂ ಭ್ರಮಃ ।**

'ಪ್ರಿಯೋ ಹಿ ಜ್ಞಾನಿನೋऽತ್ಯರ್ಥಮಹಂ ಸ ಚ ಮಮ ಪ್ರಿಯಃ।'

ಇತಿ ಭಗವತಸ್ತಸ್ಮಿನ್ನೇವಾಧಿಕಪ್ರೀತಿವಚನಾತ್ । 'ಯಮೇವೈಷ ವೃಣುತೇ ತೇನ ಲಭ್ಯಃ' ಇತಿ ತತ್ಪ್ರೀತೇರೇವ ಮೋಕ್ಷವಚನಾಚ್ಚ ॥ ೩೦ ॥

**ಭಾವಾರ್ಥ**—ಜ್ಞಾನವು ಮೋಕ್ಷಸಾಧನವೆಂದು ಪ್ರತಿಪಾದಿಸುವ 'ನಾನ್ಯಃ ಪಂಥಾ' ಎಂಬ ವಾಕ್ಯವೇ ಪ್ರಧಾನವೆಂದು ಹೇಳುವುದು ಭ್ರಾಂತಿಮೂಲಕವಾಗಿದೆ ಎಂಬ ಆಕ್ಷೇಪವು ಸರಿಯಲ್ಲ. ಏಕೆಂದರೆ 'ಜ್ಞಾನಿಗೆ ನಾನು ಬಹಳ ಪ್ರಿಯನಾಗಿದ್ದೇನೆ. ಆ ಜ್ಞಾನಿಯೂ ನನಗೆ ಪ್ರಿಯನು' ಎಂದು ಪರಮಾತ್ಮನಿಗೆ ಜ್ಞಾನಿಯಲ್ಲಿಯೇ ಅಧಿಕವಾದ ಪ್ರೀತಿಯನ್ನು ತಿಳಿಸುವ ವಚನವಿರುವುದರಿಂದ ಮತ್ತು, 'ಯಾವನನ್ನು ಪರಮಾತ್ಮನು ಭಕ್ತನೆಂದು ಸ್ವೀಕರಿಸುವನೋ ಅವನಿಂದ ಪರಮಾತ್ಮನು ಪ್ರಾಪ್ಯನು' ಎಂಬ ವಚನದಿಂದಲೂ ಆವನ ಪ್ರೀತಿಯನ್ನೇ ಹೇಳಲಾಗಿರುವುದರಿಂದ.

**ವಿವರಣೆ**—ಅನೇಕ ವಚನಗಳಿಂದ ಪ್ರೀತಿಯು ಮೋಕ್ಷಸಾಧನವೆಂದು ಸಿದ್ಧವಾದ್ದರಿಂದ ಆ ಪ್ರೀತಿ ಯಾದರೂ ಜ್ಞಾನಿಯಲ್ಲಿಯೇ ಇರುವುದರಿಂದ ಜ್ಞಾನವೇ ಮೋಕ್ಷಸಾಧನವೆಂದು ನಿರ್ಣಯಿಸಿರುವುದು ಸರಿಯಾಗಿಯೇ ಇದೆ. ಹೊರತು ಭ್ರಾಂತಿ ಮೂಲಕವಲ್ಲ. ಹಾಗಾದರೆ 'ಕರ್ಮಣೈವ' ಎಂಬಲ್ಲಿರುವ ಏವಕಾರವು ಅನುಪಪನ್ನವಾಗುತ್ತಿದೆ ಎಂದು ಆಕ್ಷೇಪಿಸುವುದು ಸರಿಯಲ್ಲ. ಆ ಏವಕಾರಕ್ಕೆ ಅನ್ಯಯೋಗವ್ಯವಚ್ಛೇದ (ಕರ್ಮವೇ ಕಾರಣ ಬೇರೆಯದಲ್ಲ.) ಎಂಬರ್ಥವಲ್ಲ. ಹೊರತು ಅಯೋಗ ವ್ಯವಚ್ಛೇದ ಎಂದರ್ಥ. ಅದು ಕರ್ಮದಲ್ಲಿ ಮೋಕ್ಷಸಾಧನತ್ವ ಅಭಾವವನ್ನು ನಿರಾಕರಿಸುತ್ತದೆ. ಕರ್ಮವೂ ಜ್ಞಾನದ್ವಾರಾ ಮೋಕ್ಷಸಾಧನವೆಂದು ಅರ್ಥವಾಗು ತ್ತದೆ. ಆದ್ದರಿಂದ ಏವಕಾರದ ವಿರೋಧವಿಲ್ಲ. ಜ್ಞಾನವು ಮೋಕ್ಷಸಾಧನವಾದ್ದರಿಂದ ಉಪಾಸನೆಯನ್ನು ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

ಓಂ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ

ಜ್ಞಾನವೇ ಮೋಕ್ಷಸಾಧನವೆಂಬ ವಿಷಯದಲ್ಲಿ 'ಕರ್ಮಣೈವ ಹಿ...'

ಮುಂತಾದ ಸ್ಮೃತಿಗಳ ಬಾಧೋ ನ=ವಿರೋಧವಿಲ್ಲ. ಏಕೆಂದರೆ, ಶ್ರುತ್ಯಾದಿ ಬಲೀಯಸ್ತ್ವಾಚ್ಚ=ಶ್ರುತಿಲಿಂಗಾದಿಗಳು ಬಲಿಷ್ಠವಾದ್ದರಿಂದ.

## ಅನುಬಂಧಾಧ್ಯಧಿಕರಣ (3-3-31)

ಓಂ ಅನುಬಂಧಾದಿಭ್ಯಶ್ಚ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ಜ್ಞಾನ. ಈ ಹಿಂದೆ ಜ್ಞಾನವೇ ಮೋಕ್ಷಸಾಧನವೆಂದಿದ್ದಾರೆ. ಭಕ್ತಿಯ ಪ್ರಸ್ತಾಪವಾಗಿಲ್ಲ. ಆದ್ದರಿಂದ ಸಂಶಯ ಬರುತ್ತದೆ– ಜ್ಞಾನಕ್ಕೆ ಭಕ್ತಿಯ ಅಪೇಕ್ಷೆ ಇದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ**—ಗುರುವಿನ ಅನುಗ್ರಹದಿಂದಲೇ ನೇರವಾಗಿ ಜ್ಞಾನವು ಲಭಿಸುವಾಗ ಭಕ್ತಿಯ ಆವಶ್ಯಕತೆಯೇನು? ಮತ್ತು ದ್ವೇಷದಿಂದ ಧ್ಯಾನಿಸುವವರಿಗೂ ದೇವರು ದೊರೆತಿದ್ದಾನೆಂದು 'ದ್ವೇಷಾಚ್ಚೇದ್ಯಾದಯೋ ನೃಪಾಃ' ಮುಂತಾದ ವಾಕ್ಯಗಳು ಹೇಳುವಾಗ ಭಕ್ತಿಯ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶೇಷದರ್ಶಿತಾ' (ವಿಶೇಷಜ್ಞಾನ= ಭಗವಂತನ ಅಪರೋಕ್ಷಜ್ಞಾನ) ಎಂಬುದು. ಇದನ್ನು ಮತ್ತು 'ಆಗಮ' (ಆ= ಚೆನ್ನಾಗಿ ಭಕ್ತಿಯು ಜ್ಞಾನಸಾಧನವೆಂಬುದನ್ನು ಗಮ=ಗಮಯತಿ=ತಿಳಿಸಿಕೊಡುವುದರಿಂದ ಪ್ರಮಾಣಗಳು ಆಗಮವೆನಿಸಿವೆ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಾರೆ—

**ನ ಚ ಕಸ್ಯಚಿದ್ ವಿಶೇಷಜ್ಞಾನೋಪಪತ್ತೇರ್ಭಕ್ತ್ಯಾದಿಕಂ ವಿನಾ ಮುಕ್ತಿಃ।**

**'ಭಕ್ತ್ಯೈವೈನಂ ಜಾನಾತಿ ಭಕ್ತ್ಯೈವೈನಂ ಪಶ್ಯತಿ ಭಕ್ತ್ಯೈವ ಬಂಧಾದ್ ವಿಮುಚ್ಯತೇ ಭಕ್ತ್ಯೈವಾನಂದೀಭವತಿ' 'ಯಮೇವೈಷ ವೃಣುತೇ ತೇನ ಲಭ್ಯಃ' 'ಭಿನತ್ತಿ ಕರ್ಮಸಂಘಾತಂ ಪ್ರಸನ್ನೋ ಭಗವಾನ್ ಹರಿಃ।' ಇತ್ಯಾದ್ಯಾಗಮಾತ್ ॥ ೩೧ ॥**

**ಭಾವಾರ್ಥ**—ಯಾವನಾದರೊಬ್ಬ ಶಿಷ್ಯನಿಗೆ ಭಕ್ತ್ಯಾದಿಗಳಿಲ್ಲದೆ ಗುರುವಿನ ಅನುಗ್ರಹದಿಂದ ಜ್ಞಾನವುಂಟಾಗಿ ಮೋಕ್ಷವಾಗಬಹುದಾದ್ದರಿಂದ ಭಕ್ತಿಯ

ಆವಶ್ಯಕತೆಯಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಭಕ್ತಿಯಿಂದಲೇ ಭಗವಂತನನ್ನು ಪರೋಕ್ಷವಾಗಿ ತಿಳಿಯುತ್ತಾನೆ. ಭಕ್ತಿಯಿಂದಲೇ ಪ್ರತ್ಯಕ್ಷವಾಗಿ ತಿಳಿಯುತ್ತಾನೆ. ಭಕ್ತಿಯಿಂದಲೇ ಸಂಸಾರದಿಂದ ಬಿಡುಗಡೆಯನ್ನು ಪಡೆಯುತ್ತಾನೆ. ಭಕ್ತಿಯಿಂದಲೇ ಮೋಕ್ಷದರಲ್ಲಿ ಆನಂದವನ್ನು ಪಡುತ್ತಾನೆ', 'ಪರಮಾತ್ಮನು ಯಾರನ್ನು ವರಿಸುತ್ತಾನೋ ಅವನಿಗೆ ಮಾತ್ರ ಪ್ರಾಪ್ಯನು. ಅವನಿಗೇ ತನ್ನ ಸ್ವರೂಪವನ್ನು ತೋರಿಸುತ್ತಾನೆ', 'ಪ್ರಸನ್ನನಾದ ಪರಮಾತ್ಮನು ಕರ್ಮದ ಗಂಟನ್ನು ನಾಶಪಡಿಸುತ್ತಾನೆ' ಮೊದಲಾದ ಆಗಮವಿರುವುದರಿಂದ.

**ವಿವರಣೆ**—'ಭಕ್ತ್ಯೈವೈನಂ ಪಶ್ಯತಿ' ಎಂಬ ಆಗಮವು ಏವಕಾರದಿಂದ ಭಕ್ತಿಯಿಲ್ಲದೆ ಬೇರೆಯದರಿಂದ ವಿಶೇಷಜ್ಞಾನವು ಪ್ರಾಪ್ತವಾಗುವುದಿಲ್ಲವೆಂದು ತಿಳಿಸುತ್ತಿದೆ. ಇನ್ನು ದ್ವೇಷದಿಂದ ಧ್ಯಾನಮಾಡಿದರೆ ಅಂಧಂ ತಮಸ್ಸು ಪ್ರಾಪ್ತವಾಗುವುದೇ ಹೊರತು ಮೋಕ್ಷವಲ್ಲ. 'ದ್ವೇಷಾಚ್ಚೈದ್ಯಾದಯೋ ನೃಪಾಃ' ಎಂಬ ವಾಕ್ಯವು ಸ್ವಾಭಾವಿಕವಾಗಿ ಭಗವಂತನಲ್ಲಿ ಭಕ್ತಿಯಿರುವವನು ಶಾಪಾದಿಗಳಿಂದ ದ್ವೇಷವನ್ನು ಮಾಡಿದರೂ ಅವನನ್ನು ಉದ್ಧರಿಸುವನು ಎಂದು ಭಗವಂತನ ಭಕ್ತಿಪ್ರಿಯತ್ವವನ್ನು ತಿಳಿಸಲು ಹೊರಟಿದೆಯೇ ಹೊರತು ದ್ವೇಷದಿಂದ ಧ್ಯಾನಮಾಡುವವರಿಗೆ ಭಗವಂತನ ಪ್ರಾಪ್ತಿಯನ್ನು ಹೇಳುತ್ತಿಲ್ಲ. ಆದ್ದರಿಂದ ಭಕ್ತ್ಯಾದಿಗಳ ಅಪೇಕ್ಷೆಯಿದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

### ಓಂ ಅನುಬಂಧಾದಿಭ್ಯಶ್ಚ ಓಂ

ಬ್ರಹ್ಮಸಾಕ್ಷಾತ್ಕಾರವು ಅನುಬಂಧಾದಿಭ್ಯಃ=ಭಕ್ತಿ ಮತ್ತು ಶಮ ದಮಾದಿಗಳಿಂದ ಉಂಟಾಗುತ್ತದೆ. ಚ=ಈ ವಿಷಯದಲ್ಲಿ ಅನೇಕ ವಾಕ್ಯಗಳೂ ಪ್ರಮಾಣವಾಗಿವೆ.

'ಅನುಬಂಧಸ್ತು ಭಕ್ತಿಃ ಸ್ಯಾತ್ ಬಂಧಃ ಸ್ನೇಹ ಉದಾಹೃತಃ' ಎಂಬ ಕೋಶದಂತೆ ಅನುಬಂಧಶಬ್ದಕ್ಕೆ ಭಕ್ತಿಯೆಂಬರ್ಥವಿದೆ.

## ಪ್ರಜ್ಞಾಂತರಾಧಿಕರಣ (3-3-32)

ಓಂ ಪ್ರಜ್ಞಾಂತರಪೃಥಕ್ತ್ವವದ್ ದೃಷ್ಟಿಶ್ಚ ತದುಕ್ತಮ್ ಓಂ ಎಂಬ ಒಂದು

ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಭಗವಂತನ ದರ್ಶನವು ವಿಷಯ. ಲೋಕದಲ್ಲಿ ಏಕಪ್ರಕಾರವಾಗಿರುವ ಮನುಷ್ಯತ್ವ ಮುಂತಾದ ಧರ್ಮಗಳು, ಅನೇಕ ಪ್ರಕಾರವಾಗಿರುವ ರೂಪಾದಿಧರ್ಮಗಳು ಕಂಡಿರುವುದರಿಂದ ಸಂಶಯ ಬರುತ್ತದೆ– ಭಗವಂತನ ದರ್ಶನವು ಎಲ್ಲ ಸಾಧಕರಿಗೂ ಏಕಪ್ರಕಾರವಾಗಿದೆಯೋ? ಅಥವಾ ಭಿನ್ನವಾಗಿದೆಯೋ? ಎಂದು.

**ಪೂರ್ವಪಕ್ಷ**—'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎಂದು ಶ್ರುತಿಯು ಎಲ್ಲ ಸಾಧಕರಿಗೂ ಒಂದೇ ರೀತಿಯಾದ ಅಪರೋಕ್ಷಜ್ಞಾನವು ಮೋಕ್ಷಸಾಧಕ ವೆನ್ನುತ್ತಿದೆ. 'ಭಕ್ತ್ಯಾ ಮಾಮಭಿಜಾನಾತಿ' ಎಂಬ ವಾಕ್ಯವೂ ಭಕ್ತಿಯಿಂದ ನನ್ನ ಪೂರ್ಣ ಅಪರೋಕ್ಷಜ್ಞಾನವುಂಟಾಗುತ್ತದೆ ಎಂದು ತಿಳಿಸುತ್ತಿದೆ. ಈ ವಾಕ್ಯಗಳ ಪರ್ಯಾ ಲೋಚನೆಯಿಂದ ಸಾಧಕರ ಅಪರೋಕ್ಷಜ್ಞಾನವು ಏಕಪ್ರಕಾರವಾಗಿದೆ ಎಂದು ತಿಳಿದುಬರುತ್ತದೆ. ಹೀಗಿರುವಾಗ ಅದರಿಂದ ಲಭಿಸುವ ಮೋಕ್ಷದಲ್ಲಿ ಮಾತ್ರ ತಾರತಮ್ಯವೇಕೆ? ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಆಲಾಪಃ' (ಸಾಮಾನ್ಯವಾದ ಹೇಳಿಕೆ) ಎಂಬುದು ಇದನ್ನು ಮತ್ತು 'ಸುಸ್ಥಿರತ್ವ' (ಎಲ್ಲ ಸಾಧಕರ ದರ್ಶನದಲ್ಲಿಯೂ ಭೇದವಿದೆ ಎಂಬ ನಿಯಮ ಸುಸ್ಥಿರವಾಗಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ.

**ನ ಚ 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' 'ಯಾವಾನ್ ಯಶ್ಚಾಸ್ಮಿ-ತತ್ತ್ವತಃ' 'ತತೋ ಮಾಂ ತತ್ತ್ವತೋ ಜ್ಞಾತ್ವಾ' ಇತ್ಯಾದಿ ಸಾಮಾನ್ಯಾಲಾಪಮಾತ್ರೇಣ ದರ್ಶನಸ್ಯಾವಿಶೇಷಃ । 'ಯಥಾಯೋಗ್ಯಮೇವೈಷ ಆತ್ಮಾನಂ ದರ್ಶಯತಿ ಯಥಾಧಿಕಾರಂ ದೇವೇಭ್ಯೋಽತೋ ಬ್ರಹ್ಮೈವೈನಮಭಿಪಶ್ಯತ್ಯಥಾತ್ಮೈವಾತ್ಮಾನಮಭಿಪಶ್ಯತಿ, ಸುಸ್ಥಿರೋ ಹ್ಯೇಷ ನಿಯಮಃ' ಇತಿ ದರ್ಶನವಿಶೇಷನಿಯಮಸ್ಯ ಸುಸ್ಥಿರತ್ವವಚನಾತ್ । ಯಾವಾನ್ ಯಶ್ಚಾಸ್ಮೀತಿ ಬ್ರಹ್ಮಣ ಏವ ಜ್ಞಾನೋಪಪತ್ತೇಃ । 'ಯಾವಾನ್' ಇತ್ಯತ್ರಾಪಿ ಸಾಮಾನ್ಯವಿಶೇಷಜ್ಞಾನೋಪಪತ್ತೇಶ್ಚ ॥ ೩೨ ॥**

**ಭಾವಾರ್ಥ**—'ಪರಮಾತ್ಮನ ಅಪರೋಕ್ಷಜ್ಞಾನವನ್ನು ಪಡೆದೇ ಮುಕ್ತನಾಗುತ್ತಾನೆ. ಬೇರೆಯದರಿಂದಲ್ಲ' ಮತ್ತು 'ನಾನು ಯಥಾರ್ಥವಾಗಿ ಯಾವ ಪರಿಮಾಣವುಳ್ಳವನಾಗಿರುವನೋ ಮತ್ತು ಯಾವ ಗುಣವಿಶಿಷ್ಟನಾಗಿರುವನೋ ಹಾಗೆಯೇ ನನ್ನನ್ನು ಯಥಾರ್ಥವಾಗಿ ತಿಳಿದು ನನ್ನನ್ನು ಸೇರುತ್ತಾನೆ' ಎಂದು ಇವೇ ಮೊದಲಾದ ವಾಕ್ಯಗಳಲ್ಲಿ ಸಾಮಾನ್ಯವಾಗಿ ಹೇಳಿದ್ದರಿಂದ, ಭಗವಂತನ ದರ್ಶನದಲ್ಲಿ ಯಾವುದೇ ವ್ಯತ್ಯಾಸವಿಲ್ಲ ಎಂದು ಸಿದ್ಧವಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ, 'ಪರಮಾತ್ಮನು ಅವರವರ ಯೋಗ್ಯತಾನುಸಾರವಾಗಿಯೇ ತನ್ನನ್ನು ತೋರಿಸುತ್ತಾನೆ. ದೇವತೆಗಳಿಗೆ ಅಧಿಕಾರಕ್ಕನುಗುಣವಾಗಿ ತೋರಿಸುತ್ತಾನೆ. ದೇವತೆಗಳಿಗಿಂತ ಚತುರ್ಮುಖನೇ ಈ ಪರಮಾತ್ಮನನ್ನು ಚೆನ್ನಾಗಿ ತಿಳಿಯುತ್ತಾನೆ. ಪರಮಾತ್ಮನೇ ತನ್ನನ್ನು ತಾನು ಪೂರ್ಣವಾಗಿ ತಿಳಿದಿದ್ದಾನೆ. ಈ ನಿಯಮವು ಸ್ಥಿರವಾದದ್ದು.' ಎಂಬುದು ದರ್ಶನದಲ್ಲಿ ಭೇದವಿದೆ ಎಂಬ ನಿಯಮವು ವಾಕ್ಯದಿಂದ ಸ್ಥಿರವಾಗಿದೆ. 'ಯಾವನ್ ಯಶ್ಚಾಸ್ಮಿ' ಎಂದು ಹೇಳಿದ್ದು ಚತುರ್ಮುಖನ ಜ್ಞಾನವನ್ನು ಕುರಿತು ಎಂದು ಉಪಪನ್ನವಾಗುತ್ತದೆ. ಮತ್ತು 'ಯಾವಾನ್' ಎಂಬುದೂ ಸಾಮಾನ್ಯರೂಪದಿಂದ ವಿಶೇಷಜ್ಞಾನವು ಎಲ್ಲರಿಗೂ ಕೂಡುತ್ತದೆ.

**ವಿವರಣೆ**—ಎಲ್ಲ ಸಾಧಕರಿಗೂ ದರ್ಶನವು ಏಕಪ್ರಕಾರವಲ್ಲ. ದರ್ಶನದಲ್ಲಿ ಭೇದವಿದೆ ಎಂಬ ನಿಯಮವು ಸುಸ್ಥಿರವಾಗಿದೆ. ಅವರವರ ಯೋಗ್ಯತೆ, ಅಧಿಕಾರಕ್ಕನುಗುಣವಾಗಿ ಎಲ್ಲರಿಗೂ ದರ್ಶನವಿದೆ. ಆದರೆ, 'ಯಾವಾನ್ ಯಶ್ಚಾಸ್ಮಿ' ಎಂದು ಎಷ್ಟು ಪರಿಮಾಣವುಳ್ಳವನೋ ಯಾವ ಗುಣವಿಶಿಷ್ಟನೋ ಆ ರೀತಿಯಲ್ಲಿ ಉಳಿದ ದೇವತೆಗಳಿಗಿಂತ ಅಧಿಕವಾಗಿ ಪರಮಾತ್ಮನನ್ನು ತಿಳಿಯುವುದು ಚತುರ್ಮುಖನು ಮಾತ್ರ ಎಂದು ಸಿದ್ಧವಾಗುತ್ತದೆ. 'ಯಾವಾನ್ ಯಶ್ಚಾಸ್ಮಿ' ಎಂದು ಸಾಮಾನ್ಯವಾಗಿ ದರ್ಶನವನ್ನು ಹೇಳಿದಂತೆ ಕಂಡರೂ ಅದೂ (ಯಸ್ಯ ಯಾವಾನಸ್ಮಿ= ದರ್ಶನಯೋಗ್ಯೋಽಸ್ಮಿ ಸಃ ತಾವಂತಂ ಮಾಂ ತತ್ತ್ವತೋ ಜ್ಞಾತ್ವಾ ಯಾವ ಸಾಧಕನಿಗೆ ಎಷ್ಟು ದರ್ಶನಕ್ಕೆ ಯೋಗ್ಯನೋ ಅಷ್ಟು ನನ್ನನ್ನು ತಿಳಿದು ಮೋಕ್ಷ ಹೊಂದುತ್ತಾನೆ ಎಂದರ್ಥ ಮಾಡುವುದರಿಂದ) ವಿಶೇಷದರ್ಶನದಲ್ಲಿಯೇ ಪರ್ಯವಸಾನವಾಗುತ್ತದೆ. ಹಾಗಾದರೆ ಎಲ್ಲ ಸಾಧಕರಿಗೂ ದರ್ಶನಸಾಮಾನ್ಯವನ್ನು ಹೇಳುವ 'ದೃಷ್ಟ್ವೈವ ತಂ ಮುಚ್ಯತೇ' ಎಂಬ ಶ್ರುತಿಯ ವಿರೋಧವು ಬರುತ್ತದೆ

ಯಲ್ಲ? ಎಂದರೆ, ಆ ಶ್ರುತಿಗೂ 'ಯಥಾಯೋಗ್ಯಮೇವೈಷ' ಎಂಬ ಶ್ರುತಿಯ ವಿರೋಧವಿರುವುದರಿಂದ 'ಅವರವರ ಯೋಗ್ಯತೆಗನುಗುಣವಾಗಿ ದರ್ಶನಮಾಡಿಸಿ ಮುಕ್ತಿ ಹೊಂದಿಸುತ್ತಾನೆ' ಎಂದೇ ಅರ್ಥೈಸಬೇಕು. ಆದ್ದರಿಂದ ಭಗವಂತನ ದರ್ಶನದಲ್ಲಿ ವ್ಯತ್ಯಾಸವಿರುವುದರಿಂದ ಮುಕ್ತಿಯಲ್ಲೂ ತಾರತಮ್ಯವು ಯುಕ್ತವೇ ಆಗಿದೆ.

**ಸೂತ್ರಾರ್ಥ—**

### ಓಂ ಪ್ರಜ್ಞಾಂತರಪೃಥಕ್ತ್ವವದ್ ದೃಷ್ಟಿಶ್ಚ ತದುಕ್ತಮ್ ಓಂ

ಪ್ರಜ್ಞಾಂತರಪೃಥಕ್ತ್ವವತ್=ಪ್ರಜ್ಞಾವಿಶೇಷವು ಧ್ಯಾನವು ಅನೇಕ ಪ್ರಕಾರ ವಾಗಿರುವಂತೆ ದೃಷ್ಟಿಶ್ಚ=ಬ್ರಹ್ಮಜ್ಞಾನವೂ ಪೃಥಕ್=ಅನೇಕ ಪ್ರಕಾರವಾಗಿದೆ. ತತ್= ಆ ಜ್ಞಾನದ ತಾರತಮ್ಯವು ಉಕ್ತಂ='ಯಥಾಯೋಗ್ಯಮೇವೈಷ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

## ನ ಸಾಮಾನ್ಯಾಧಿಕರಣ (3-3-33)

ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಭಗವಂತನ ದರ್ಶನವು ವಿಷಯ. 'ಬ್ರಹ್ಮವಿದಾಪ್ನೋತಿ ಪರಮ್' ಎಂಬ ಶ್ರುತಿಯು ಬ್ರಹ್ಮಜ್ಞಾನದಿಂದ ಮುಕ್ತಿಯಾಗುತ್ತದೆ ಎಂದು ಸಾಮಾನ್ಯವಾಗಿ ಹೇಳಿರುವುದರಿಂದ ಬಿಂಬರೂಪದ ದರ್ಶನದಿಂದಲೇ ಮುಕ್ತಿಯಾಗುತ್ತದೋ? ಅಥವಾ ಯಾವುದಾದರೂ ಒಂದು ರೂಪದ ದರ್ಶನದಿಂದಲೂ ಮುಕ್ತಿಯಾಗುತ್ತದೋ? ಎಂದು ಸಂಶಯ.

**ಪೂರ್ವಪಕ್ಷ—**ಭಗವಂತನ ಯಾವುದಾದರೂ ಒಂದು ರೂಪವನ್ನು ಕಂಡರೂ ಮೋಕ್ಷವಾಗುತ್ತದೆ. ಯಾವುದೋ ಒಂದು ರೂಪಕ್ಕೆ ಮಾತ್ರ ಮೋಕ್ಷನೀಡುವ ಶಕ್ತಿಯಿದೆ. ಮತ್ತೊಂದು ರೂಪಕ್ಕಿಲ್ಲ ಎಂದು ಹೇಳುವುದು ಸರಿಯಲ್ಲ. ಎಲ್ಲ ರೂಪಗಳೂ ಸಮಾನವೇ ಆಗಿವೆ. ಆದ್ದರಿಂದ ಸಾಧಕನು ಬಿಂಬೋಪಾಸನೆಯನ್ನೇ ಮಾಡಬೇಕೆಂಬ ನಿಯಮವಿಲ್ಲ. ಯಾವ ರೂಪದ ಉಪಾಸನೆಯನ್ನಾದರೂ ಮಾಡಬಹುದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಗುಣಸಾಮ್ಯ'** (ಎಲ್ಲ ಭಗವದ್ರೂಪಗಳಲ್ಲಿಯೂ ಸಮಾನವಾದ ಗುಣಗಳಿವೆ) ಎಂಬುದು. ಇದನ್ನು ಮತ್ತು **'ಸ್ವಕೃತಪ್ರಾಪ್ತಿ'** (ತಾನು ಮಾಡಿದ ಕರ್ಮದ ಫಲ ತನಗೆ ಬರುವಂತೆ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಭಗವತಃ ಸರ್ವತ್ರ ಗುಣಸಾಮ್ಯಾದ್ ಯಸ್ಯ ಕಸ್ಯಾಪಿ ರೂಪಸ್ಯ ದರ್ಶನಾತ್ ಸರ್ವೇಷಾಂ ಮುಕ್ತಿಃ ।**

**'ಸಮೋಽಪಿ ಭಗವಾನ್ ಸ್ವಬಿಂಬದರ್ಶನ ಏವೈನಂ ಮೋಚಯತಿ ।**

**ಯಥಾ ಸಮೇಷ್ವಪಿ ಕರ್ಮಸು ಸ್ವಕೃತಮೇವೈನಂ ಭೋಜಯತಿ'**

**ಇತಿ ಶ್ರುತ್ಯುಕ್ತಸ್ವಕೃತಪ್ರಾಪ್ತಿದೃಷ್ಟಾಂತಾತ್ ॥ ೩೩ ॥**

**ಭಾವಾರ್ಥ**—ಭಗವಂತನ ಎಲ್ಲ ರೂಪಗಳಲ್ಲಿಯೂ ಗುಣಗಳು ಸಮಾನವಾಗಿರುವುದರಿಂದ ಯಾವುದಾದರೂ ಒಂದು ರೂಪದ ಉಪಾಸನೆಯಿಂದಲೂ ಎಲ್ಲರಿಗೂ ಮುಕ್ತಿಯು ಲಭಿಸುತ್ತದೆ ಎಂದು ಆಕ್ಷೇಪವನ್ನು ಮಾಡಬಾರದು. ಏಕೆಂದರೆ, 'ಹೇಗೆ ಎಲ್ಲ ಕರ್ಮಗಳು ಸಮಾನವಾಗಿದ್ದರೂ ತಾನು ಮಾಡಿದ ಕರ್ಮವು ಮಾತ್ರ ತನಗೆ ಫಲವನ್ನು ಕೊಡುತ್ತದೋ ಅದರಂತೆ ಭಗವಂತನು ಎಲ್ಲ ರೂಪಗಳಲ್ಲಿಯೂ ಗುಣಗಳು ಸಮಾನವಾಗಿದ್ದರೂ ಸಾಧಕನ ಬಿಂಬದರ್ಶನವು ಅವನಿಗೆ ಆದಾಗ ಮಾತ್ರ ಪರಮಾತ್ಮನು ಅವನನ್ನು ಸಂಸಾರದಿಂದ ಬಿಡಿಸುತ್ತಾನೆ (ಮುಕ್ತಿ ನೀಡುತ್ತಾನೆ)' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಕೃತಪ್ರಾಪ್ತಿಯ ದೃಷ್ಟಾಂತವು ಇರುವುದರಿಂದ.

**ವಿವರಣೆ**—ಎಲ್ಲ ಅಶ್ವಮೇಧಯಾಗಗಳು ಸಮನಾದರೂ ತಾನು ಮಾಡಿದ ಯಾಗಮಾತ್ರ ತನಗೆ ಫಲಪ್ರದ ಎಂಬ ದೃಷ್ಟಾಂತ ಶ್ರುತಿಯಲ್ಲಿರುವುದರಿಂದ ಎಲ್ಲ ರೂಪಗಳು ಸಮವಾಗಿದ್ದರೂ ತನ್ನ ಬಿಂಬರೂಪದ ದರ್ಶನ ಮಾತ್ರ ತನಗೆ ಫಲಪ್ರದ ಎಂದು ಶ್ರುತಿಯಲ್ಲಿ ಹೇಳಿದಂತೆ ತಿಳಿಯಬೇಕು. ಹಾಗಾಗಿ ತನ್ನ ಬಿಂಬರೂಪದ ಉಪಾಸನೆಯನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ**

ಸಾಮಾನ್ಯಾತ್=ಬ್ರಹ್ಮನ ರೂಪಗಳು ಸಮಾನವಾದ್ದರಿಂದ ಉಪಲಬ್ಧೇಃ ಸಾಮಾನ್ಯಾತ್=ಅಪರೋಕ್ಷಜ್ಞಾನವು ಸಮಾನವಾದ್ದರಿಂದ ಯಾವರೂಪದ ಅಪರೋಕ್ಷದಿಂದಲೂ ಮೋಕ್ಷವಾಗುತ್ತದೆ ಎಂದರೆ ನ=ಅಲ್ಲ ಬಿಂಬರೂಪದರ್ಶನ ದಿಂದಲೇ ಮುಕ್ತಿ. ಮೃತ್ಯುವತ್=ಮರಣ ಸಾಮಾನ್ಯಾನಂತರದಲ್ಲಿ ಮೋಕ್ಷವಲ್ಲ. ಚರಮಮರಣ ವಿಶೇಷಾನಂತರದಲ್ಲಿ ಹೇಗೋ ಹಾಗೆ. ಯಾವುದಾದರೂ ಒಂದು ರೂಪದ ದರ್ಶನದಿಂದ ಯಾವ ಫಲವೋ ಅದೇ ಮುಕ್ತಿ ಎಂದರೆ ನ ಲೋಕಾಪತ್ತಿಃ=ಮಹರ್ಲೋಕವೇ ಮುಂತಾದ ಲೋಕಗಳ ಪ್ರಾಪ್ತಿಯು ಮುಕ್ತಿ ಯಲ್ಲ. ಹಿ=ಪ್ರಮಾಣಗಳಿಂದ ಸಿದ್ಧವಾಗಿದೆ.

## ತಾದ್ವಿಧ್ಯಾಧಿಕರಣ (3-3-34)

ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ವನುಬಂಧಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಜ್ಞಾನವು ವಿಷಯ. ಕೃಷಿ ಮೊದಲಾದ ಕ್ರಿಯೆಗಳಲ್ಲಿ ರಾಜಪ್ರಸಾದವಿಲ್ಲದಿದ್ದರೂ ಫಲ ಕಂಡಿದೆ. ರಾಜಸೇವೆ ಮೊದಲಾದ ಕ್ರಿಯೆಗಳಲ್ಲಿ ರಾಜಪ್ರಸಾದದಿಂದಲೇ ಫಲ ಕಂಡಿದೆ. ಆದ್ದರಿಂದ ಇಲ್ಲಿಯೂ ಸಂಶಯ ಬರುತ್ತದೆ— ಭಕ್ತಿಯಿಂದ ಜ್ಞಾನವುಂಟಾಗುವುದೋ? ಪರಮಾತ್ಮನ ಪ್ರಸಾದದಿಂದಲೋ? ಎಂದು.

**ಪೂರ್ವಪಕ್ಷ**—'ಭಕ್ತಿರೇವೈನಂ ನಯತಿ ಭಕ್ತಿರೇವೈನಂ ದರ್ಶಯತಿ ಭಕ್ತಿವಶಃ ಪುರುಷೋ ಭಕ್ತಿರೇವ ಭೂಯಸೀ' (ಭಕ್ತಿಯೇ ಅಧಿಕಾರಿಯನ್ನು ಪರಮಾತ್ಮನ ಕಡೆಗೆ ಒಯ್ಯುತ್ತದೆ. ಭಕ್ತಿಯೇ ವಿಷ್ಣುವನ್ನು ತೋರಿಸುತ್ತದೆ. ಭಗವಂತನು ಭಕ್ತಿಯ ಅಧೀನ. ಭಕ್ತಿಯೇ ಶ್ರೇಷ್ಠವಾದದ್ದು) ಎಂದು ಶ್ರುತಿಯು, ಇತರ ಸಾಧನಗಳಿರುವಾಗ ಭಕ್ತಿಯನ್ನೇ ನಿರ್ದೇಶಿಸಿದ್ದರಿಂದ ಪರಮಾತ್ಮನ ಪ್ರಸಾದವಿಲ್ಲದೇ ಭಕ್ತಿಯು ಭಗವಂತನ ಅಪರೋಕ್ಷವನ್ನು ಕೊಡುತ್ತದೆ. ಆದ್ದರಿಂದ ಪ್ರಸಾದದ ಆವಶ್ಯಕತೆ ಯಿಲ್ಲ. ಪ್ರಸನ್ನನಾದ ಭಗವಂತನು ದರ್ಶನವನ್ನು ಕೊಡುತ್ತಾನೆ ಎಂದು ಹಿಂದೆ ಹೇಳಿದ್ದು ಸರಿಯಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪೃಥಗ್‌ದೃಷ್ಟಿ' (ಭಕ್ತಿಗೇ ಪ್ರತ್ಯೇಕವಾಗಿ ಮೋಚಕತ್ವ ಕಂಡಿರುವುದು) ಎಂಬುದು. ಇದನ್ನು ಮತ್ತು

**'ಅನಾದಿಗುಣವಿಸ್ತರಃ'** (ಅನಾದಿಯಾದ ಗುಣಸಮೂಹ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**'ಭಕ್ತಿರೇವೈನಮ್' ಇತಿ ಭಕ್ತೇರೇವ ಪೃಥಜ್ಮೋಚಕತ್ವದರ್ಶನಾನ್ನೇಶ-ಕೃತ್ಯಮಿತಿ ನ ಮಂತವ್ಯಮ್ ।**

**'ಅನಾದಿತೋ ಗುಣಾಃ ಸಂತೋ ಭಕ್ತ್ಯಾದ್ಯಾ ನ ಹ್ಯಮೂಮುಚನ್ ।**
**ಜೀವಂ ತದ್ಗುಣಸುವ್ಯಕ್ತಿಂ ಕೃತ್ವೈನಂ ಮೋಚಯೇದ್ಧರಿಃ ।**
**ಕಂಚಿನ್ನ ಮೋಚಯೇದ್ವಾಽಸೌ ಸ್ವಾತಂತ್ರ್ಯಂ ತಸ್ಯ ತೇನ ಹಿ ।**
**ಭಕ್ತಿವಾಕ್ಕರಣತ್ವೇನ ಸಾವಕಾಶೇಶವಾಗಥ ।**
**ಭಕ್ತ್ಯೈನಂ ಮೋಚಯೇದ್ ವಿಷ್ಣುರಿತಿ ಮಾನತ್ವಮೇಷ್ಯತಿ ॥'**

**ಇತಿ ಬ್ರಹ್ಮತರ್ಕವಚನಾದನಾದಿಗುಣವಿಸ್ತರೇ ಸತ್ಯಪ್ಯವ್ಯಕ್ತ್ಯಾದಿನಾ ತದಿಚ್ಛಾಂ ವಿನಾ ಮೋಕ್ಷಾಪ್ರಾಪ್ತೇಃ ॥ ೩೪ ॥**

**ಭಾವಾರ್ಥ—**'ಭಕ್ತಿರೇವೈನಂ' ಎಂಬ ಶ್ರುತಿಯಲ್ಲಿ ಭಕ್ತಿಗೇನೇ ಪ್ರತ್ಯೇಕವಾಗಿ ಮೋಚಕತ್ವವು ಕಂಡಿರುವುದರಿಂದ ಈಶ್ವರನ ಆವಶ್ಯಕತೆಯಿಲ್ಲ ಎಂದು ತಿಳಿಯಬಾರದು. 'ಭಕ್ತಿಯೇ ಮೊದಲಾದ ಗುಣಗಳು ಅನಾದಿಕಾಲದಿಂದ ಇದ್ದರೂ ಈ ಜೀವನನ್ನು ಸಂಸಾರದಿಂದ ಬಿಡಿಸಲಿಲ್ಲ. ಪರಮಾತ್ಮನು ಜೀವನಲ್ಲಿರುವ ಗುಣಗಳಿಗೆ ಅಭಿವ್ಯಕ್ತಿಯನ್ನುಂಟುಮಾಡಿ ಅವನನ್ನು ಮುಕ್ತನನ್ನಾಗಿಸುತ್ತಾನೆ. ಪರಮಾತ್ಮನಿಗೆ ಸ್ವಾತಂತ್ರ್ಯವಿರುವುದರಿಂದ ಕೆಲವರನ್ನು ಮುಕ್ತರನ್ನಾಗಿಸುವುದಿಲ್ಲ. ಮೋಚನಕ್ಕೆ ಭಕ್ತಿಯು ಕರಣವಾದ್ದರಿಂದ 'ಭಕ್ತಿರೇವೈನಂ' ಮಾತು ಸಾವಕಾಶವಾಗಿದೆ. ಭಕ್ತಿಯಿಂದಲೇ ವಿಷ್ಣು ಜೀವನಿಗೆ ಮುಕ್ತಿಯನ್ನು ಕೊಡುವುದರಿಂದ 'ವಿಷ್ಣು ಮೋಚಕ' ಎಂಬ ವಾಕ್ಯವೂ ಪ್ರಮಾಣವಾಗುತ್ತದೆ ಎಂದು ಬ್ರಹ್ಮತರ್ಕದ ವಾಕ್ಯವಿರುವುದರಿಂದ ಅನಾದಿಯಾದ ಗುಣಸಮೂಹವಿದಾಗ್ಯೂ ಅಭಿವ್ಯಕ್ತವಾಗದಿರುವುದರಿಂದ ಆ ಪರಮಾತ್ಮನ ಇಚ್ಛೆಯಿಲ್ಲದೆ ಮೋಕ್ಷವು ಲಭಿಸುವುದಿಲ್ಲವಾದ್ದರಿಂದ ಈಶ್ವರನ ಪ್ರಸಾದವು ಕಾರಣ ಎಂದು ಸಿದ್ಧವಾಗುತ್ತದೆ.

**ವಿವರಣೆ—**ಒಂದುವೇಳೆ ಭಕ್ತ್ಯಾದಿಗಳೇ ಮೋಕ್ಷಕ್ಕೆ ಸ್ವತಂತ್ರವಾಗಿ ಕಾರಣ

ವಾಗುವುದಾದರೆ ಅವುಗಳು ಅನಾದಿಕಾಲದಿಂದಲೂ ಇರುವುದರಿಂದ ಯಾಕೆ ಮೋಕ್ಷವಾಗಲಿಲ್ಲ? ಎಂಬ ಪ್ರಶ್ನೆ ಉಳಿಯುತ್ತದೆ. ಶ್ರೀಹರಿಯು ಸ್ವತಂತ್ರನಾದ್ದರಿಂದ ತನ್ನ ಪ್ರಸಾದಕ್ಕೆ ಸಾಧನಗಳಾದ ಶ್ರವಣಾದಿ ಸಹಕಾರಿಗಳು ಜೊತೆ ಸೇರಿದಾಗ ಜೀವನಿಗೆ ಮುಕ್ತಿಯನ್ನು ಕೊಡುತ್ತಾನೆ. ಇಲ್ಲವಾದರೆ ಮುಕ್ತಿ ಲಭಿಸುವುದಿಲ್ಲ ಎಂಬ ಯುಕ್ತಿಯಿಂದಲೂ ಈಶ್ವರನ ಪ್ರಸಾದವೇ ಮುಕ್ತಿಗೆ ಕಾರಣವೆಂದು ಸಿದ್ಧವಾಗುತ್ತದೆ. ಹಾಗಾದರೆ 'ಭಕ್ತಿರೇವೈನಂ' ಎಂಬ ವಾಕ್ಯಕ್ಕೆ ಏನರ್ಥ ಮಾಡಬೇಕು? ಎಂದರೆ, ಭಕ್ತಿಯಿಂದ ಪ್ರಸನ್ನನಾದ ಭಗವಂತನೇ ದರ್ಶನವನ್ನು ನೀಡುತ್ತಾನೆ. ಆದ್ದರಿಂದ ಭಕ್ತಿಯು ಕರಣವಾಗಿದೆ ಹೊರತು ಕರ್ತೃವಲ್ಲ. ಆದರೂ ಲೋಕದಲ್ಲಿ ಕರ್ತೃವನ್ನು ಕರಣವೆಂದು ಕರೆಯುವುದಿದೆ. ರಾಮನು ಬಾಣದಿಂದ ರಾವಣನನ್ನು ಕೊಂದಿದ್ದರೂ 'ಹಂತಾ ರಾಮಶರಃ' (ರಾಮಬಾಣವೇ ಕೊಂದಿತು) ಎಂದು ವ್ಯವಹರಿಸುತ್ತೇವೆ. ಅದರಂತೆ ಕರಣವಾದ ಭಕ್ತಿಯನ್ನು ಕರ್ತೃವೆಂದು 'ಭಕ್ತಿರೇವೈನಮ್' ಎಂದು ನಿರ್ದೇಶಿಸಲಾಗಿದೆ. ಆದ್ದರಿಂದ ಈ ವಾಕ್ಯವು ಸಾವಕಾಶವಾಗಿದೆ. ಈಶ್ವರನ ಪ್ರಸಾದವೇ ಅವನ ದರ್ಶನಕ್ಕೆ ಪ್ರಧಾನ ಕಾರಣ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ವನುಬಂಧಃ ಓಂ

ತು=ವಸ್ತುತಃ ಪರೇಣ ಚ=ಪರಮಾತ್ಮನಿಂದಲೇ ಬ್ರಹ್ಮಜ್ಞಾನ. ಹಾಗಿದ್ದರೂ ಶಬ್ದಸ್ಯ='ಭಕ್ತಿರೇವೈನಂ ನಯತಿ' ಎಂಬ ಶ್ರುತಿಗೆ ತಾದ್ವಿಧ್ಯಂ=ಸ್ವತಂತ್ರವಾಗಿ ಭಕ್ತಿಯು ಕಾರಣವಾಗಿದೆ ಎಂದು ಹೇಳುವಿಕೆಯು ಯುಕ್ತವೇ ಆಗಿದೆ. ಅನುಬಂಧಸ್ತು=ಭಕ್ತಿಯಾದರೂ ಭೂಯಸ್ತ್ವಾತ್=ಕರಣಗಳಲ್ಲಿ ಪ್ರಧಾನವಾದ್ದರಿಂದ ನಿರ್ದೇಶಿಸಲಾಗಿದೆ.

## ಏಕಾಧಿಕರಣ (3-3-35)

ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದ ವಿಷಯ ಉಪಾಸನೆ. ಅಯೋಗ್ಯವಾದ ಹಾಗೂ ಯೋಗ್ಯವಾದ ಕ್ರಿಯೆಗಳೂ ಲೋಕದಲ್ಲಿ ಕಂಡಿದ್ದರಿಂದ ಉಪಾಸನೆಯೆಂಬ ಕ್ರಿಯೆಗೆ ಯೋಗ್ಯತೆಯ ಅಪೇಕ್ಷೆ ಇದೆಯೋ? ಇಲ್ಲವೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ**—ಉಪಾಸನೆಗೆ ಯೋಗ್ಯತೆಯ ಅಪೇಕ್ಷೆಯಿಲ್ಲ. ಅಪೇಕ್ಷೆ ಇರುವುದಾದರೂ ಯೋಗ್ಯತೆಯು ಅನಾದಿಯಾಗಬೇಕು. ಆದರೆ ಅನಾದಿಯಾಗಲು ಸಾಧ್ಯವಿಲ್ಲ. ಇಂದ್ರಾರ್ಜುನರಲ್ಲಿ ಇಂದ್ರನು ಅಂಶಿ. ಅರ್ಜುನ ಅಂಶ. ಇಂದ್ರನಿಗೆ ಇರುವ ಜ್ಞಾನಸುಖಾದಿಗಳು ಅರ್ಜುನನಿಗಿಲ್ಲ. ಆದ್ದರಿಂದ ಅಂಶ–ಅಂಶಿಗಳಲ್ಲಿ ಭೇದವಿದೆ ಎಂದಾಯಿತು. ಇಂದ್ರನು ಅನಾದಿಯಾದರೂ ಅರ್ಜುನನಿಗೆ ಉತ್ಪತ್ತಿಯಿದೆ. ಅವರ ಯೋಗ್ಯತೆಯೂ ಸಾದಿಯಾಗಿದೆ. ಆದ್ದರಿಂದ ಉಪಾಸನೆಗೆ ಅನಾದಿಯೋಗ್ಯತೆಯೇ ಕಾರಣ ಎನ್ನುವುದು ಸರಿಯಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅಗಮ್ಯವರ್ತ್ಮ'** (ಅಂಶಿಯ ಮಾರ್ಗ ಅಂಶಕ್ಕೆ ತಿಳಿಯದಿರುವುದು) ಎಂಬುದು. ಇದನ್ನು ಮತ್ತು **'ಸಾಧನೋತ್ತಮತಾ'** (ಸಾಧನಗಳಲ್ಲಿ ಅದೃಷ್ಟಕ್ಕೆ ಉತ್ತಮತ್ವವಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾಂಶಿಮಾರ್ಗಸ್ಯಾಂಶೇನಾಗಮ್ಯತ್ವಾತ್ ತಯೋರ್ಭೇದಃ ।**
**ಸಾಧನೋತ್ತಮಸ್ಯಾದೃಷ್ಟಸ್ಯಾಂಶಿಕೃತಸ್ಯಾಂಶೇನ ಭುಜ್ಯಮಾನತ್ವಾತ್ ।**
**ಅನ್ಯಥಾಽದೃಷ್ಟಂ ವಿನಾ ಶರೀರಾದ್ಯನುಪಪತ್ತೇಃ ॥ ೩೫ ॥**

**ಭಾವಾರ್ಥ**—ಅಂಶಿಯ ಮಾರ್ಗವು ಅಂಶಕ್ಕೆ ತಿಳಿಯದಿರುವುದರಿಂದ (ಅಂಶಿಗೆ ಆಗುವ ಸುಖದುಃಖಗಳ ಅನುಭವ ಅಂಶಕ್ಕೆ ಆಗದಿರುವುದರಿಂದ) ಅವರಿಬ್ಬರಲ್ಲಿ ಭೇದವಿದೆ ಎಂದು ಪೂರ್ವಪಕ್ಷ ಮಾಡುವುದು ಸರಿಯಲ್ಲ. ಏಕೆಂದರೆ, ಅಂಶಿಯು ಮಾಡುವ ಸಾಧನೆಗಳಲ್ಲಿ ಉತ್ತಮವಾದ ಅದೃಷ್ಟವು ಅಂಶದ ಅನುಭವಕ್ಕೂ ಬರುವುದರಿಂದ. ಅದೃಷ್ಟವಿಲ್ಲದಿದ್ದರೆ ಶರೀರಾದಿಗಳೇ ಉತ್ಪತ್ತಿಯಾಗುತ್ತಿರಲಿಲ್ಲ.

**ವಿವರಣೆ**—ಅಂಶಿಯ ಅದೃಷ್ಟದಿಂದ ನಿರ್ಮಿತವಾದ ಶರೀರವನ್ನು ಅಂಶನು ಪಡೆಯುತ್ತಾನೆ. ಇಲ್ಲವಾದರೆ ಅಂಶನ ದೇಹಕ್ಕೆ ಕಾರಣವೇ ಇಲ್ಲವಾಗುತ್ತದೆ. ಈರೀತಿಯಲ್ಲಿ ಅಂಶ–ಅಂಶಿಗಳಿಗೆ ಅಭೇದ ವನ್ನು ಒಪ್ಪಲೇಬೇಕಾದ್ದರಿಂದ ಅವರ ಸ್ವರೂಪಭೂತಯೋಗ್ಯತೆಯೂ ಅನಾದಿನಿತ್ಯ ವೆಂದು ಸಿದ್ಧವಾಗುತ್ತದೆ.

ಅಂಶಿಗೆ ಉತ್ಪತ್ತಿಯಿರುವುದರಿಂದ ಯೋಗ್ಯತೆಯೂ ಉತ್ಪನ್ನವಾಗುತ್ತದೆ. ಅದು

ಅನಾದಿನಿತ್ಯವಲ್ಲ ಎಂದು ಪೂರ್ವಪಕ್ಷ ಮಾಡಲಾಗಿತ್ತು. ಆದರೆ ಚೇತನಕ್ಕೆ ಸ್ವರೂಪ ದಿಂದ ಉತ್ಪತ್ತಿ ಇಲ್ಲವಾದ್ದರಿಂದ ಉತ್ಪನ್ನವಾಗುವುದು ಅಂಶಿಯೆಂಬ ಚೇತನನಲ್ಲ. ಹೊರತು ಅವನ ಶರೀರವು ಮಾತ್ರ. ಮತ್ತು ಶರೀರನಾಶವಾದರೂ ಅಂಶಿಗೆ ನಾಶವಿಲ್ಲ. ಆದ್ದರಿಂದ ಅಂಶ-ಅಂಶಿಗಳಿಗೆ ಅಭೇದವಿದೆ. ಒಂದುವೇಳೆ ಅಭೇದ ವಿರುವುದಾದರೆ ಇಂದ್ರನ ಎಲ್ಲ ಸುಖದುಃಖಾದಿಗಳ ಅನುಭವ ಅರ್ಜುನನಿಗೆ ಬರಲಿ ಎಂದರೆ, ಬರುತ್ತವೆ; ಆದರೆ ಎಲ್ಲ ಅನುಭವ ಬರುವುದಿಲ್ಲ. ಅಚಿಂತ್ಯವಾದ ಈಶ್ವರನ ಶಕ್ತಿ ಮತ್ತು ಪಾರ್ಥಿವ ಶರೀರವು ಪ್ರತಿಬಂಧಕವಾಗಿರುವುದರಿಂದ ಬರುವುದಿಲ್ಲ. ಆದರೆ, ಅರ್ಜುನನಿಗೆ ಉಂಟಾಗುವ ಬಿಂಬಾಪರೋಕ್ಷ ಮುಂತಾದವು ಗಳು ಇಂದ್ರನಿಗೂ ಅನುಭವಕ್ಕೆ ಬರುತ್ತವೆ. ಭೇದವಿದ್ದರೆ ಇದು ಸಾಧ್ಯವಾಗುವು ದಿಲ್ಲ. ಆದ್ದರಿಂದ ಅವರಲ್ಲಿ ಅಭೇದವನ್ನು ಒಪ್ಪಬೇಕು. ಸ್ವರೂಪಯೋಗ್ಯತೆಯು ಅನಾದಿಯಾಗಿದೆ. ಅದು ಉಪಾಸನೆಗೆ ಕಾರಣವಾಗುತ್ತದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ

ಏಕಃ=ಅಂಶ ಅಂಶಿಗಳು ಅಭಿನ್ನವಾಗಿವೆ. ಏಕೆಂದರೆ ಆತ್ಮನಃ=ಅಂಶಿಯ ಕರ್ಮದಿಂದ ನಿರ್ಮಿತವಾದ ಶರೀರೇ=ಶರೀರದಲ್ಲಿ ಭಾವಾತ್=ಅಂಶವು ಇರುವುದ ರಿಂದ.

## ಅಂಗಾವಬದ್ಧಾಧಿಕರಣ (3-3-36)

ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಮ್ ಓಂ ಎಂಬ ಸೂತ್ರದಿಂದ ಆರಂಭಗೊಂಡ ಈ ಅಧಿಕರಣದಲ್ಲಿ ಉಪಾಸನೆಯೇ ವಿಷಯ. 'ತದ್‌ವಿಜಿಜ್ಞಾಸಸ್ವ' ಎಂಬ ವಿಧಿಯು ಸರ್ವದೇವತಾಸಾಧಾರಣವಾದ್ದರಿಂದ ಸಂಶಯ ಬರುತ್ತದೆ- ಇತರ ದೇವತೆಗಳ ಉಪಾಸನೆಯೊಂದಿಗೆ ಪರಮಾತ್ಮನನ್ನು ಉಪಾಸನೆ ಮಾಡಬೇಕೋ? ಅಥವಾ ಕೇವಲ ಪರಮಾತ್ಮನನ್ನು ಉಪಾಸನೆ ಮಾಡಬೇಕೋ? ಎಂದು. ಅನ್ಯದೇವತೆಗಳ ಉಪಾಸನೆಯನ್ನು ಮಾಡಬೇಕು ಎಂದಾದರೆ ಒಬ್ಬ ದೇವತೆಗೆ ಶ್ರುತಿಯಲ್ಲಿ ಹೇಳಲ್ಪಟ್ಟ ಗುಣಗಳನ್ನು ಉಳಿದ

ದೇವತೆಗಳಲ್ಲಿ ಉಪಸಂಹಾರ ಮಾಡಬೇಕೋ? ಬೇಡವೋ? ಎಂದು. ಲೋಕದಲ್ಲಿ ಒಬ್ಬನಿಗೆ ಮಾಡಿದ ಸತ್ಕಾರಾದಿಗಳನ್ನೇ ಮತ್ತೊಬ್ಬನಿಗೂ ಮಾಡುವುದು, ಬೇರೆ ರೀತಿಯಲ್ಲಿ ಮಾಡುವುದೂ ಕಂಡಿದೆಯಾದ್ದರಿಂದ ಸಂಶಯವು ಬರುತ್ತದೆ.

**ಪೂರ್ವಪಕ್ಷ**—ಭಗವಂತನನ್ನು ಪೂಜಿಸುವಾಗ ಉಳಿದ ಬ್ರಹ್ಮಾದಿದೇವತೆಗಳನ್ನು ಪರಿವಾರದವರೆಂದು ಉಪಾಸನೆ ಮಾಡಬೇಕೆಂದು ಹೇಳಿದರೆ, ಸಾಧಾರಣವಾದ ದೇವತ್ವಾದಿಗುಣಗಳನ್ನು ಎಲ್ಲರಲ್ಲೂ ಅನುಸಂಧಾನ ಮಾಡುತ್ತೇವೆ. ಅದರಂತೆ ಒಬ್ಬರ ಅಸಾಧಾರಣಗುಣಗಳನ್ನು ಮತ್ತೊಬ್ಬರಲ್ಲಿ ಅನುಸಂಧಾನ ಮಾಡುವ ಪ್ರಸಂಗವಿರುವುದರಿಂದ ವೇದದಲ್ಲಿ ಅವರವರ ಗುಣಗಳನ್ನು ಹೇಳಿದ್ದು ವ್ಯರ್ಥವಾಗುವುದು. ಆದ್ದರಿಂದ ಪರಿವಾರ ದೇವತೆಗಳನ್ನು ಉಪಾಸನೆ ಮಾಡುವುದು ಸರಿಯಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಂಧಾನ' (ಗುಣಗಳ ಅನುಸಂಧಾನ) ಎಂಬುದು ಇದನ್ನು ಮತ್ತು 'ನಾನಾದೃಷ್ಟಿ' (ನಾನಾಗುಣವುಳ್ಳವರೆಂದು ಶ್ರುತಿಗಳಲ್ಲಿ ಕಂಡಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಗುಣಾಂತರಸಂಧಾನಸ್ಯ ಕ್ವಚಿದ್ ದರ್ಶನಮಾತ್ರೇಣ ಸಮಾಧಿಕಾಂಗದೇವತಾಂತರಗುಣಾ ಅಪ್ಯಂಗದೇವತಾಂತರ ಉಪಸಂಹರ್ತವ್ಯಾಃ। ನಾನಾಗುಣತ್ವೇನ ತೇಷಾಂ ಶ್ರುತಿಷು ದೃಷ್ಟೇಃ। ಅನಿಷಿದ್ಧಗುಣಾನಾಂ ವಾಕ್ಯಾನ್ವಯನ್ಯಾಯೇನೋಪಸಂಹಾರಾನ್ನ ಶಾಖಾಸ್ವಿತ್ಯಾದಿವಿಶೇಷಃ। ಉತ್ತಮೇಷ್ವಧಮಗುಣಾಪೇಕ್ಷಯಾ ಮಂತ್ರಾದಿವದ್ವೇತಿ ॥ ೩೬ ॥**

**ಭಾವಾರ್ಥ**—ದೇವತ್ವ ಮೊದಲಾದ ಸಾಧಾರಣವಾದ ಗುಣಗಳನ್ನು ('ಅಸಾಧಾರಣಗುಣಾದ್ ವ್ಯತಿರಿಕ್ತೋ ಗುಣೋ ಗುಣಾಂತರಮ್' ಗುಣಾಂತರವೆಂದರೆ ಅಸಾಧಾರಣಗುಣಕ್ಕಿಂತ ಭಿನ್ನವಾದ್ದು. ಎಂದರೆ ಸಾಧಾರಣಗುಣವೆಂದೇ ಅರ್ಥ) ಕೆಲವು ದೇವತೆಗಳಲ್ಲಿ ಉಪಸಂಹಾರ ಮಾಡುವುದು ಕಂಡಿದೆ ಎಂಬ ಕಾರಣದಿಂದ ಸಮರಾದ ಮತ್ತು ಉತ್ತಮರಾದ ಅಂಗದೇವತೆಗಳಿಗೆ ಗುಣಗಳನ್ನೂ ಉಳಿದ ಅಂಗದೇವತೆಗಳಲ್ಲಿ (ಸಮರಾದ, ನೀಚರಾದ ದೇವತೆಗಳಲ್ಲಿ ಉದಾ:

ಒಂದೇ ಕಕ್ಷೆಯವರಾದ ಶೇಷನ ಸಹಸ್ರವದನತ್ವವೆಂಬ ಗುಣವನ್ನು ಗರುಡನಲ್ಲಿ ಉಪಸಂಹಾರ ಮಾಡುವುದು, ಉತ್ತಮನಾದ ಬ್ರಹ್ಮನ ಚತುರ್ಮುಖತ್ವ ಗುಣವನ್ನು ಅಧಮನಾದ ಶೇಷನಲ್ಲಿ) ಉಪಸಂಹಾರ ಮಾಡಬೇಕು ಎಂದು ಹೇಳುವುದು ಸರಿಯಲ್ಲ. ಏಕೆಂದರೆ, ಬೇರೆ ಬೇರೆ ಗುಣವುಳ್ಳವರಾಗಿ (ಬ್ರಹ್ಮನಿಗೆ ಚತುರ್ಮುಖತ್ವ ಶೇಷನಿಗೆ ಸಹಸ್ರಫಣತ್ವ, ಗರುಡನಿಗೆ ವಕ್ರತುಂಡತ್ವ, ಇಂದ್ರನಿಗೆ ಸಹಸ್ರಾಕ್ಷತ್ವ ಈರೀತಿ ಬೇರೆ ಬೇರೆ ಗುಣಗಳುಳ್ಳವರಾಗಿ) ದೇವತೆಗಳು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾರೆ. ನಿಷಿದ್ಧವಲ್ಲದ ಗುಣಗಳನ್ನು ವಾಕ್ಯಾನ್ವಯನ್ಯಾಯದಿಂದ ಉಪಸಂಹಾರ ಮಾಡ ಬೇಕೆಂಬ ವಿವಕ್ಷೆಯಿಂದ 'ನ ಶಾಖಾಸು' ಎಂಬುದಾಗಿ ಸೂತ್ರದಲ್ಲಿ ನಿಷೇಧರೂಪ ವಿಶೇಷವು ಹೇಳಲ್ಪಟ್ಟಿದೆ. ಉತ್ತಮರಲ್ಲಿ ಅಧಮರ ಗುಣಗಳನ್ನು ಉಪಸಂಹಾರ ಮಾಡಬೇಕೆಂಬ ಅಪೇಕ್ಷೆಯಿಂದ 'ಮಂತ್ರಾದಿವದ್ ವಾ' ಎಂಬುದಾಗಿ ಹೇಳ ಲಾಗಿದೆ.

**ವಿವರಣೆ—** ವೇದದಲ್ಲಿ ಪರಿವಾರದೇವತೆಗಳನ್ನು ವಿಭಿನ್ನಗುಣವುಳ್ಳವರೆಂದು ಪ್ರತಿಪಾದಿಸಿದ್ದ ರಿಂದ ಹಾಗೆಯೇ ಅವರ ಉಪಾಸನೆಯನ್ನು ಮಾಡಬೇಕು. ಆದರೆ ಉತ್ತಮ ದೇವತೆಗಳ ಅನಿಷಿದ್ಧವಾದ ಗುಣಗಳನ್ನು ಅಧಮದೇವತೆಗಳಲ್ಲಿ ವಾಕ್ಯಾನ್ವಯ ನ್ಯಾಯದಿಂದ ಉಪಸಂಹಾರ ಮಾಡಬೇಕು. ವಾಕ್ಯಾನ್ವಯನ್ಯಾಯ ವೆಂದರೆ ವಾಕ್ಯ ದಿಂದ ಪ್ರತಿಪಾದಿತಗುಣಗಳನ್ನು ಯೋಗ್ಯವಾದವರಲ್ಲಿ ಅನ್ವಯ ಮಾಡುವುದು. ಉದಾ: 'ಸಹಸ್ರಶೀರ್ಷಾ ಪುರುಷಃ' ಎಂಬ ವಾಕ್ಯದಿಂದ ಹೇಳಲ್ಪಟ್ಟ ಸಹಸ್ರಶೀರ್ಷತ್ವವೆಂಬ ಗುಣವನ್ನು ಪರಮಾತ್ಮನಲ್ಲಿ ಮಾತ್ರ ಅನ್ವಯಿಸಬಹುದೇ ಹೊರತು ಸಂಬಂಧವಿಲ್ಲದ ಚತುರ್ಮುಖನಲ್ಲಿ ಅಲ್ಲ. ಅದರಂತೆ 'ಇಂದ್ರೋ ವೈ ವೃತ್ರಂ ಹತ್ವಾ' ಎಂಬಲ್ಲಿ ಪ್ರತಿಪಾದಿತವಾದ ವೃತ್ರಹಂತೃತ್ವವನ್ನು ಇಂದ್ರನಲ್ಲಿಯೇ ಸಮನ್ವಯ ಮಾಡಬೇಕು ಹೊರತು ಇತರಲ್ಲಿ ಅಲ್ಲ. ಅಂದರೆ ವೇದೋಕ್ತವಾದ ಆಯಾ ಗುಣಗಳಿಂದ ಆಯಾ ದೇವತೆಗಳನ್ನು ಮಾತ್ರ ಉಪಾಸನೆ ಮಾಡಬೇಕು. ಆದರೆ ನಿಷಿದ್ಧವಲ್ಲದ ದೇವತ್ವ, ವೈಷ್ಣವತ್ವಾದಿಗಳನ್ನು ಸಕಲದೇವತೆಗಳಲ್ಲಿಯೂ ಉಪಾಸನೆ ಮಾಡಬೇಕು. ಇದನ್ನೇ 'ನ ಶಾಖಾಸು ಹಿ ಪ್ರತಿವೇದಮ್' ಎಂಬ ಸೂತ್ರಖಂಡದಿಂದ ಹೇಳಿದ್ದಾರೆ. 'ಎಲ್ಲಾ ವೇದಗಳಿಗೆ ಸಂಬಂಧಿಸಿದ ಶಾಖೆಗಳಲ್ಲಿ ಹೇಳಲ್ಪಟ್ಟ ಒಬ್ಬ ದೇವತೆಯ ಗುಣಗಳು ಇತರರಲ್ಲಿ ಉಪಸಂಹಾರ್ಯಗಳಲ್ಲ'

ಎಂದು. ಅಂದರೆ ಅಯೋಗ್ಯಗುಣಗಳಲ್ಲದೆ, ಯೋಗ್ಯವಾದ ಗುಣಗಳನ್ನು ಉಪಸಂಹಾರ ಮಾಡ ಬಹುದು ಎಂದರ್ಥ. ಇನ್ನು 'ಮಂತ್ರಾದಿವದ್ವಾವಿರೋಧಃ' ಎಂಬ ಸೂತ್ರದಲ್ಲಿ 'ಅಗ್ನ್ಯಾದಿದೇವತಾವಾಚಿಯಾದ ಮಂತ್ರಗಳು ಬ್ರಹ್ಮಾದಿ ದೇವತಾವಾಚಿಯೂ ಆಗುವಂತೆ ಯಾವ ವಿರೋಧವಿಲ್ಲ' ಎಂದು ಹೇಳಿದ್ದು ಅಧಮದೇವತೆಯ ಗುಣಗಳು ಉತ್ತಮದೇವತೆಯಲ್ಲಿ ಉಪಪನ್ನವಾಗುತ್ತವೆ ಎಂಬ ಅಭಿಪ್ರಾಯದಿಂದ ಉದಾ: ಬ್ರಹ್ಮದೇವರು ಲಕ್ಷ್ಮೀದೇವಿಯನ್ನು ಭಗವಂತನಲ್ಲಿ ಮಾತ್ರವಿರುವ ಗುಣಗಳನ್ನು ಬಿಟ್ಟು ಅವಳ ಬಗ್ಗೆ ಹೇಳಿದ ಗುಣಗಳಿಂದ ಆವಳಿಗಿಂತ ಅವರಾದ ದೇವದೇವತೆಗಳಲ್ಲಿ ಹೇಳಲ್ಪಟ್ಟ ಗುಣಗಳಿಂದಲೂ ಉಪಾಸನೆ ಮಾಡುತ್ತಾರೆ. ಆದ್ದರಿಂದ ಅಧಮರಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಿ ಉಪಾಸನೆ ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಅಂಗಾವಬದ್ಧಾಸ್ತು ನ ಶಾಖಾಸು ಪ್ರತಿವೇದಮ್ ಓಂ

ಅಂಗಾವಬದ್ಧಾಃ=ಪರಮಾತ್ಮನ ಅಂಗವನ್ನು ಆಶ್ರಯಿಸಿರುವ ದೇವತೆಗಳು ಉಪಾಸ್ಯಾಃ=ಅವನ ಪರಿವಾರವೆಂದು ಉಪಾಸ್ಯರಾಗಿದ್ದಾರೆ. ತು=ಉಪಾಸನೆಯಲ್ಲಿ ವಿಶೇಷವಿದೆ. ಏನೆಂದರೆ ಪ್ರತಿವೇದಂ=ಎಲ್ಲ ವೇದಗಳಿಗೂ ಸಂಬಂಧಿಸಿದ ಶಾಖಾಸು=ಶಾಖೆಗಳಲ್ಲಿ ಹೇಳಲ್ಪಟ್ಟ ಬ್ರಹ್ಮಾದಿ ದೇವತೆಗಳ ಗುಣಸಮೂಹವು ನ=ರುದ್ರಾದಿಗಳಲ್ಲಿ ಉಪಸಂಹಾರ್ಯವಲ್ಲ. ಯೋಗ್ಯವಾದದ್ದು ಮಾತ್ರ ಉಪಸಂಹಾರ್ಯ. ಹಿ=ಇದು ಸ್ಮೃತಿಯಲ್ಲಿಯೂ ಪ್ರತಿಪಾದಿತವಾಗಿದೆ.

## ಭೂಮಾಧಿಕರಣ (3-3-37)

ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ 'ಯೋ ವೈ ಭೂಮಾ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಭೂಮಗುಣವು ವಿಷಯ. ಸರ್ವರಿಂದಲೂ ಉಪಾಸ್ಯವಾದ ಗುಣಗಳು ಮತ್ತು ಉಪಾಸ್ಯವಲ್ಲದ ಗುಣಗಳೂ ಕಂಡಿರುವುದರಿಂದ ಸಂದೇಹ ಬರುತ್ತದೆ— ಭೂಮಗುಣವು ಸರ್ವರಿಂದಲೂ ಉಪಾಸ್ಯವೋ? ಅಲ್ಲವೋ? ಎಂದು.

**ಪೂರ್ವಪಕ್ಷ**—ಸರ್ವರಿಗೂ ಉಪಾಸ್ಯವಾದವುಗಳು ಸತ್, ಚಿತ್, ಆನಂದ, ಆತ್ಮಾ ಎಂಬ ನಾಲ್ಕು ಗುಣಗಳು. ಇವುಗಳಲ್ಲಿ ಭೂಮಗುಣವು ಸೇರಲಿಲ್ಲ. ಮತ್ತು ಆನಂದಾದಿಗುಣಗಳನ್ನು ಉಪಾಸನೆ ಮಾಡುವುದರಿಂದ ಮುಕ್ತಿಯಲ್ಲಿ ಆನಂದಪ್ರಾಪ್ತಿ ಎಂಬ ಪ್ರಯೋಜನವೂ ಇದೆ. ಆದರೆ ಭೂಮಗುಣವನ್ನು ಉಪಾಸನೆ ಮಾಡುವುದರಿಂದ ಯಾವುದೇ ಫಲವು ಶ್ರುತವಾಗಿಲ್ಲವಾದ್ದರಿಂದ ಭೂಮಗುಣವು ಉಪಾಸ್ಯವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಇಷ್ಟಫಲ'(ಭೂಮಾಗುಣವನ್ನು ಬಿಟ್ಟು ಇತರ ಗುಣಗಳ ಉಪಾಸನನೆಯಿಂದ ಇಷ್ಟಫಲ ಪ್ರಾಪ್ತಿ) ಎಂಬುದು ಇದನ್ನು ಅಂತೆಯೇ 'ಶಿಷ್ಟಿ' (ಭೂಮಗುಣದ ಉಪಾಸನೆಗೆ ಅನುಶಾಸನವಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಭೂಮಗುಣಸ್ಯೋಪಾಸಕಂ ಪ್ರತಿ ವಿಶೇಷಾಭಾವೇಽಪಿ ತತ್ತದಿಷ್ಟಗುಣಾನುಸಾರೇಣ ಫಲೋಪಪತ್ತಿರಿತ್ಯವಿಶೇಷಃ । 'ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ ನೈವಾಭೂಮಾ ಫಲಮೇಷಾಂ ವಿಧತ್ತೇ ।' ಇತ್ಯಾದಿಶಿಷ್ಟೇಃ ।। ೩೭ ।।**

**ಭಾವಾರ್ಥ**—ಉಪಾಸಕನಿಗೆ ಭೂಮ ಎಂಬ ಗುಣದಲ್ಲಿ ಯಾವ ವಿಶೇಷವೂ ಇಲ್ಲ. (ಸಂಭೃತ್ಯಾದಿಗುಣಗಳಂತೆ ಉಪಾಸ್ಯವಾಗಿಲ್ಲ) ಆದರೂ ಆಯಾಯಾ ಉಪಾಸಕರಿಗೆ ಇಷ್ಟವಾದ ಆನಂದಾದಿಗುಣಗಳ ಉಪಾಸನೆಯಿಂದ ಆನಂದಾದಿ ಪ್ರಾಪ್ತಿ ಎಂಬ ಫಲವಿದೆ. ಆದರೆ ಭೂಮಗುಣದಿಂದ ಯಾವ ಫಲವೂ ಇಲ್ಲ. ಆದ್ದರಿಂದ ಅದು ಉಪಾಸ್ಯವಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಗುಣಪೂರ್ಣನಾದ ಸರ್ವೋತ್ತಮನಾದ ದೇವನೇ ಎಲ್ಲರಿಂದಲೂ ಉಪಾಸ್ಯನಾಗಿದ್ದಾನೆ. ಅಪೂರ್ಣನಾದವನು ಸಾಧಕರಿಗೆ ಫಲವನ್ನು ಕೊಡಲಾರ' ಎಂದು ಶಿಷ್ಟರ ಅನುಶಾಸನವಿರುವುದರಿಂದ.

**ವಿವರಣೆ**—ಅನುಶಾನವಿರುವುದರಿಂದ ಭೂಮನೆಂದು ಉಪಾಸನೆ ಮಾಡಬೇಕು. ಭೂಮವೆಂಬ ಗುಣವನ್ನು ಉಪಾಸನೆ ಮಾಡಬೇಕೆಂದಾದರೆ ನಾಲ್ಕೇ ಗುಣಗಳನ್ನು ಉಪಾಸನೆ ಮಾಡಬೇಕು ಎಂಬ ನಿಯಮಕ್ಕೆ ಭಂಗ ಬರುತ್ತದೆ ಎಂದು

ಆಕ್ಷೇಪಿಸಬಾರದು. ತಾವು ಉಪಾಸನೆ ಮಾಡಬೇಕಾದ ಚತುರ್ಗುಣಗಳನ್ನೇ ಭೂಮತ್ವೇನ ಉಪಾಸನೆ ಮಾಡಬೇಕು. ಅಂದರೆ 'ಭೂಮಾ=ಪೂರ್ಣಃ ಆನಂದಃ' ಎಂದು ಉಪಾಸನೆ ಮಾಡಬೇಕು. ಆನಂದಾದಿಗಳಲ್ಲಿ ಪೂರ್ಣತ್ವವು ವಿಶೇಷಣ ವಾಗುವುದರಿಂದ ವಿರೋಧವಿಲ್ಲ ಎಂದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ

ಭೂಮ್ನಃ=ಭೂಮಗುಣಕ್ಕೆ ಜ್ಯಾಯಸ್ತ್ವಂ=ಶ್ರೇಷ್ಠತ್ವವು ಆದ್ದರಿಂದ ಆ ಗುಣವು ಎಲ್ಲರಿಂದ ಉಪಾಸ್ಯವಾಗಿದೆ. ಏಕೆ ಶ್ರೇಷ್ಠವೆಂದರೆ ಕ್ರತುವತ್=ದೀಕ್ಷಾಪ್ರಾಯಣೀ ಯಾಗಾದಿಗಳ ಸಮೂಹವು ಎಲ್ಲ ಯಾಗಗಳಲ್ಲಿಯೂ ಅನುವೃತ್ತವಾಗುವುದರಿಂದ ಪ್ರಧಾನವಾಗಿರುವಂತೆ, ಪ್ರಮಾಣವೇನೆಂದರೆ, ತಥಾ ಚ ದರ್ಶಯತಿ'='ಭೂಮ್ನೈವ ದೇವಃ' ಎಂಬ ಶ್ರುತಿಯು ಆರೀತಿ ಪ್ರತಿಪಾದಿಸುತ್ತಿದೆ.

# ನಾನಾಶಬ್ದಾಧಿಕರಣ (3-3-38)

ಓಂ ನಾನಾಶಬ್ದಾದಿಭೇದಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಭೂಮಗುಣವು ವಿಷಯ. ಘಟಾದಿಗಳು ಎಲ್ಲರಿಗೂ ಒಂದೇ ರೀತಿ ಕಂಡರೂ ಶಾಸ್ತ್ರಾರ್ಥವು ಅವರವರ ಶಕ್ತಿಗನುಗುಣವಾಗಿ ತಾರತಮ್ಯದಿಂದ ತೋರುತ್ತದೆ. ಆದ್ದರಿಂದ ಸಂಶಯ ಬರುತ್ತದೆ– ಭೂಮಗುಣವು ಅಧಿಕಾರಾನುಸಾರ ತಾರತಮ್ಯದಿಂದ ತೋರುತ್ತದೋ? . ಅಥವಾ ಎಲ್ಲರಿಗೂ ಏಕಪ್ರಕಾರವಾಗಿ ತೋರುತ್ತದೋ? ಎಂದು.

**ಪೂರ್ವಪಕ್ಷ—**ಬ್ರಹ್ಮದೇವರು ಯಾವ ಭೂಮತ್ವವನ್ನು ಉಪಾಸನೆ ಮಾಡುವರೋ ಬೇರೆಯವರೂ ಅದನ್ನೇ ಉಪಾಸನೆ ಮಾಡಬೇಕು. ಬೇರೆ ಬೇರೆ ಎಂಬುದಕ್ಕೆ ಯಾವುದೇ ಪ್ರಮಾಣಗಳಿಲ್ಲ. ಕೆಲವರಿಗೆ ಅಲ್ಪ ಪೂರ್ಣತ್ವವು ತೋರುತ್ತದೆ. ಕೆಲವರಿಗೆ ಅಧಿಕಪೂರ್ಣತ್ವವು ತೋರುತ್ತದೆ ಎಂದು ಹೇಳುವುದೂ ಮಿಥ್ಯೋಪಾಸನೆಯಾಗುವುದರಿಂದ ಸಮಂಜಸವಲ್ಲ. ಆದ್ದರಿಂದ ಭೂಮಗುಣ ದಲ್ಲಿ ತಾರತಮ್ಯವು ಯುಕ್ತವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅಕಲ್ಪನಾ' (ಕಲ್ಪಕ ಪ್ರಮಾಣ ವಿಲ್ಲದಿರುವುದು) ಎಂಬುದು. ಇದನ್ನು ಮತ್ತು 'ಅನೂನತಾ' (ಯೋಗ್ಯತೆಗನುಗುಣ ವಾಗಿ ಭೂಮತ್ವ ಗುಣದಲ್ಲಿಯೂ ತಾರತಮ್ಯ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಭೂಮಗುಣ ಉಪಾಸಕಾನಾಮೇಕಪ್ರಕಾರೇಣೈವ ಪ್ರತೀಯತ ಇತ್ಯಂಗೀಕಾರ್ಯಮ್, ವಿಶೇಷಸ್ಯ ಕಲ್ಪನೋಪಪತ್ತೇರಿತಿ ನ ಮಂತವ್ಯಮ್ ।**

**'ಯಾವಾನೇವಾಧಿಕಾರೇಷು ವಿಶೇಷೋಽನೂನ ಏವ ಹಿ ।**
**ತತೋ ಭೂಮತ್ವದೃಷ್ಟೌ ಚ ಬ್ರಹ್ಮಾದೀನಾಂ ಪೃಥಕ್ ಪೃಥಕ್ ॥'**
**ಇತಿ ವಿಶೇಷಸ್ಯಾನೂನತ್ವವಚನಾತ್ ॥ ೩೮ ॥**

**ಭಾವಾರ್ಥ**—ಉಪಾಸನೆ ಮಾಡುವವರಿಗೆ ಭೂಮಗುಣವು ಒಂದೇರೀತಿ ಯಲ್ಲಿ ತೋರುತ್ತದೆ ಎಂದು ಅಂಗೀಕರಿಸಬೇಕು. ಆದರಲ್ಲಿ ವಿಶೇಷವನ್ನು ಒಪ್ಪಲು ಕಲ್ಪಕಪ್ರಮಾಣವಿಲ್ಲದಿರುವುದರಿಂದ ಎಂದು ಪೂರ್ವಪಕ್ಷವನ್ನು ಮಾಡಬಾರದು. ಏಕೆಂದರೆ, 'ಬ್ರಹ್ಮಾದಿದೇವತೆಗಳ ಅಧಿಕಾರಗಳಲ್ಲಿ ತಾರತಮ್ಯವು ಯೋಗ್ಯತಾನು ಸಾರವಾಗಿ ಇರುವುದರಿಂದ ಭೂಮತ್ವವಿಷಯದಲ್ಲಿ ತಾರತಮ್ಯವು ಪ್ರತ್ಯೇಕ ಪ್ರತ್ಯೇಕವಾಗಿಯೇ ಇದೆ' ಎಂಬುದಾಗಿ ವಿಶೇಷವು ಅನೂನತ್ವವನ್ನು ಹೇಳುವ ವಾಕ್ಯದಿಂದ ಸಿದ್ಧವಾಗಿದೆ.

**ವಿವರಣೆ**—ಯೋಗ್ಯತಾನುಸಾರವಾಗಿ ಭೂಮತ್ವಗುಣದಲ್ಲಿಯೂ ತಾರತಮ್ಯ ವಿದೆ. ಇದಕ್ಕೆ ಕಲ್ಪಕವಾದದ್ದು ಉಪಾಸಕರ ಯೋಗ್ಯತೆ ಎಂದು ಒಪ್ಪಿಕೊಳ್ಳಬೇಕು. ಅತೀತಗಳಾದ ಸಂವತ್ಸರ ಮಾಸ, ದಿನ, ಕ್ಷಣ, ಲವಗಳಲ್ಲಿ ಆನಂತ್ಯವಿದ್ದರೂ ಸಂವತ್ಸರಗಳ ಅನಂತ್ಯಕ್ಕಿಂತ ಮಾಸಗಳ ಆನಂತ್ಯವು, ಮಾಸಗಳ ಆನಂತ್ಯಕ್ಕಿಂತ ದಿನಗಳ ಅನಂತ್ಯವು ಅಧಿಕವಾಗಿರುವುದರಿಂದ ತಾರತಮ್ಯ ವಿರುವಂತೆ ಭೂಮತ್ವದಲ್ಲಿಯೂ ತಾರತಮ್ಯವು ಯುಕ್ತವೇ ಆಗಿದೆ. ಪರಮಾತ್ಮನು ಅನಂತಕೋಟಿ ಸೂರ್ಯ ಪ್ರಕಾಶವುಳ್ಳವನಾದರೂ ಕೆಲವರು 'ಲಕ್ಷಸೂರ್ಯರ ಪ್ರಕಾಶವುಳ್ಳವ'ನೆಂದು ಇನ್ನು ಕೆಲವರು 'ಸಾವಿರ ಸೂರ್ಯ ಪ್ರಕಾಶವುಳ್ಳವನೆ'ಂದು ಉಪಾಸನೆ ಮಾಡುವಂತೆ ಸಾಧಕರು ತಮ್ಮ ಯೋಗ್ಯತಾನುಗುಣವಾಗಿ ಪೂರ್ಣತ್ವ

ವನ್ನು ಉಪಾಸನೆ ಮಾಡಬೇಕು ಎಂದು ಸಿದ್ಧವಾಗುತ್ತದೆ. ಹೀಗೆ ಉಪಾಸನೆ ಮಾಡುವುದು ಮಿಥ್ಯೋಪಾಸನೆಯಾಗುತ್ತದೆಯಲ್ಲವೇ? ಎಂದು ಪ್ರಶ್ನಿಸಬಾರದು. ಇಷ್ಟನ್ನೇ ಉಪಾಸನೆ ಮಾಡಬೇಕು. ಇದಕ್ಕಿಂತ ಅಧಿಕವಾದದ್ದನ್ನು ಉಪಾಸನೆ ಮಾಡ ಬಾರದು ಎಂದು ಎಲ್ಲಿಯೂ ನಿಷೇಧ ಮಾಡಿಲ್ಲವಾದ್ದರಿಂದ.

**ಸೂತ್ರಾರ್ಥ—**

### ಓಂ ನಾನಾಶಬ್ದಾದಿಭೇದಾತ್ ಓಂ

ಭೂಮಗುಣವು ಯೋಗ್ಯತಾನುಸಾರವಾಗಿ ನಾನಾ=ಅನೇಕ ಪ್ರಕಾರಗಳಿಂದ ಉಪಾಸ್ಯವಾಗಿದೆ. ಏಕೆಂದರೆ, ಶಬ್ದಭೇದಾತ್=ಆಗಮ, ಅನುಮಾನ, ಪ್ರತ್ಯಕ್ಷ ಪ್ರಮಾಣಗಳಿಂದ ಅನೇಕಪ್ರಕಾರವಾಗಿ ಭೂಮಗುಣವು ಪ್ರತೀತವಾಗುವುದರಿಂದ.

## ವಿಕಲ್ಪಾಧಿಕರಣ (3-3-39)

ಓಂ ವಿಕಲ್ಪೋ ವಿಶಿಷ್ಟಫಲವತ್ತ್ವಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಉಪಾಸನೆಯೇ ವಿಷಯ. 'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿ ಯಲ್ಲಿ ಅವಧಾರಣ (ಏವಕಾರ) ಇಲ್ಲದಿರುವುದರಿಂದ ವಿಧಿಯನ್ನು ಹೇಗೂ ಕೂಡಿಸ ಬಹುದಾದ್ದರಿಂದ ಸಂಶಯ ಬರುತ್ತದೆ– ಸಾಧಕನು ತನ್ನ ಬಿಂಬರೂಪಕ್ಕಿಂತಲೂ ಭಿನ್ನವಾದದ್ದನ್ನು ಉಪಾಸನೆ ಮಾಡಬೇಕೋ? ಮಾಡಬಾರದೋ? ಎಂದು.

**ಪೂರ್ವಪಕ್ಷ—**ಪ್ರತಿಯೊಬ್ಬ ವ್ಯಕ್ತಿಗೂ ಮೋಕ್ಷವನ್ನು ಪಡೆಯುವ ಇಚ್ಛೆಯೇ ಇರುವುದರಿಂದ ಬಿಂಬರೂಪದ ಉಪಾಸನೆಯನ್ನೇ ಮಾಡಬೇಕು ಬಿಂಬೋಪಾಸನೆ ಯಿಂದ ಮಾತ್ರ ಮೋಕ್ಷವು ಲಭಿಸುವುದರಿಂದ. ಬೇರೇ ರೂಪಗಳು ಬೇರೆ ಫಲಗಳನ್ನು ಕೊಡುತ್ತವೆ. ಮುಮುಕ್ಷುವಿಗೆ ಅವುಗಳ ಅಪೇಕ್ಷೆ ಇಲ್ಲದಿರುವುದರಿಂದ ಇತರ ರೂಪಗಳ ಅಪೇಕ್ಷೆ ಉಪಾಸನೆಯನ್ನು ಮಾಡಬಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಶುದ್ಧವೈರೂಪ್ಯ' (ಬಿಂಬರೂಪಕ್ಕಿಂತ ಇತರ ರೂಪ ಗಳಲ್ಲಿ ಶುದ್ಧ=ಮೋಕ್ಷ ಸಾಧನವಾಗಿ ವೈರೂಪ್ಯ=ಉಪಾಸನೆಯ ಆವಶ್ಯಕತೆಯಿಲ್ಲದಿರುವುದು) ಎಂಬುದು. ಇದನ್ನು ಮತ್ತು 'ಅವಿಘ್ನತಾ' (ಉಪಸನೆಗೆ ಪ್ರತಿಬಂಧಕವಾದ ದುರಿತಗಳ ಪರಿಹಾರ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಶುದ್ಧಮೋಕ್ಷಸಾಧನವ್ವೈರೂಪ್ಯಾನ್ಮೋಕ್ಷಸಾಧನತ್ವೇನೋಪದಿಷ್ಟಂ ವಿನಾ ವಿಷ್ಣೋರೇವೋಪಾಸನಾಂತರಸ್ಯಾಕರ್ತವ್ಯತಾ । ಅವಿಘ್ನತಾಸಾಧನ-ತ್ವಾತ್ ॥ ೩೯ ॥**

**ಭಾವಾರ್ಥ**—ಶುದ್ಧವಾದ ಮೋಕ್ಷಕ್ಕೆ ಸಾಧಕವಾದ ಬಿಂಬರೂಪದಂತೆ ಅವಶ್ಯ ಉಪಾಸ್ಯತ್ವವಿಲ್ಲದಿರುವುದರಿಂದ ಮೋಕ್ಷಸಾಧನವಾಗಿ ಹೇಳಲ್ಪಟ್ಟ ಬಿಂಬರೂಪಕ್ಕಿಂತ ಭಿನ್ನವಾದ ವಿಷ್ಣುವಿನ ಬೇರೆ ರೂಪಗಳನ್ನು ಉಪಾಸನೆ ಮಾಡಬಾರದು ಎಂಬುದು ಸರಿಯಲ್ಲ. ವಿಘ್ನ ಪರಿಹಾರಕ್ಕೆ ಸಾಧನವಾದ್ದರಿಂದ ಬೇರೆ ರೂಪಗಳ ಉಪಾಸನೆ ಯನ್ನು ಮಾಡಬೇಕು.

**ವಿವರಣೆ**— ಮೋಕ್ಷಕ್ಕಾಗಿ ಮಾಡುವ ಉಪಾಸನೆಗೆ ಪ್ರತಿಬಂಧಕವಾದ ದುರಿತಗಳ ಪರಿಹಾರವೆಂಬ ಪ್ರಯೋಜನವಿರುವುದರಿಂದ ನರಸಿಂಹ, ಹಯಗ್ರೀವ ಮೊದಲಾದ ವಿಷ್ಣುವಿನ ಬೇರೆ ರೂಪಗಳನ್ನು ಉಪಾಸನೆ ಮಾಡಬೇಕು ಎಂದು ಸಿದ್ಧಾಂತ. ಬಿಂಬರೂಪಕ್ಕಿಂತ ಅತಿರಿಕ್ತವಾದ ರೂಪಗಳ ಉಪಾಸನೆಯಲ್ಲಿ ವಿಕಲ್ಪವನ್ನು ಹೇಳಿದ್ದಾರೆ. ಯಾವನಿಗೆ ದುರಿತ ನಿವೃತ್ತಿಯ ಅಪೇಕ್ಷೆ ಇದೆಯೋ ಅವನು ಅತಿರಿಕ್ತರೂಪಗಳ ಉಪಾಸನೆ ಯನ್ನು ಮಾಡಬೇಕು. ಅಪೇಕ್ಷೆ ಇಲ್ಲದವನಿಗೂ ತೀವ್ರವಾದ ಬಿಂಬೋಪಾಸನೆ ಯಿಂದಲೇ ದುರಿತನಿವೃತ್ತಿಯಾಗುತ್ತದೆ.

**ಸೂತ್ರಾರ್ಥ**—

### ಓಂ ವಿಕಲ್ಪೋ ವಿಶಿಷ್ಟಫಲವತ್ತ್ವಾತ್ ಓಂ

ವಿಕಲ್ಪಃ=ಬಿಂಬವಲ್ಲದ ನರಸಿಂಹಾದಿ ರೂಪಗಳ ಉಪಾಸನೆಯನ್ನು ಮಾಡ ಬಹುದು, ಮಾಡದಿರಬಹುದು ಎಂದು ಎರಡು ಪ್ರಕಾರವೂ ಇದೆ. ಏಕೆಂದರೆ, ವಿಶಿಷ್ಟಫಲವತ್ತ್ವಾತ್=ದುರಿತನಿವೃತ್ತಿ ಎಂಬ ವಿಶೇಷ ಫಲಕ್ಕೆ ಕಾರಣವಾದ್ದರಿಂದ.

## ಕಾಮ್ಯಾಧಿಕರಣ (3-3-40)

ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವ-ಹೇತ್ವಭಾವಾತ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ

ಉಪಾಸನೆಯು ವಿಷಯ. ಹಿಂದಿನ ಅಧಿಕರಣದಲ್ಲಿ ಬಿಂಬೋಪಾಸನೆ ಅತ್ಯವಶ್ಯಕವೆಂದು ಹೇಳಿ, ಬಿಂಬೇತರವಾದ ಉಪಾಸನೆಯು ವೈಕಲ್ಪಿಕವೆಂದು ಹೇಳಿರುವುದರಿಂದ ಸಂದೇಹ ಬರುತ್ತದೆ– ಧನಕನಕಾದಿಗಳಿಗೆ ಸಾಧನವಾದ ಪರಮಾತ್ಮನ ಗುಣರೂಪಗಳ ಉಪಾಸನೆಯು ಆವಶ್ಯಕವೋ? ಅಥವಾ ವೈಕಲ್ಪಕವೋ? ಎಂದು.

**ಪೂರ್ವಪಕ್ಷ**—ಗುರುದಕ್ಷಿಣೆ, ಶಿಷ್ಯಸಂಪಾದನೆ ಮುಂತಾದವುಗಳು ಜ್ಞಾನ ಸಂಪಾದನೆಗೆ ಕಾರಣವಾಗಿವೆ. ಈ ಕಾರ್ಯಗಳಿಗೆ ಧನಕನಕಾದಿಗಳ ಆವಶ್ಯಕತೆ ಯಿದೆ. ಆದ್ದರಿಂದ ಕಾಮ್ಯಫಲದಾಯಕಗಳಾದ ಶ್ರೀಕರಾದಿರೂಪಗಳ ಉಪಾಸನೆ ಜ್ಞಾನಕ್ಕಾಗಿ ಅತ್ಯವಶ್ಯಕವಾಗಿರುವುದರಿಂದ ಬಿಂಬೇತರ ಭಗವದ್ರೂಪಗಳನ್ನು ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಅಂಗತ್ವ**' (ಕಾಮ್ಯಫಲಗಳು ಜ್ಞಾನಕ್ಕೆ ಅಂಗವಾಗಿರುವುದು) ಎಂಬುದು. ಇದನ್ನು ಹಾಗೂ '**ಅವಿರೋಧ**' (ಮೋಕ್ಷಕ್ಕೇನೂ ವಿರೋಧವಿಲ್ಲ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸು ತ್ತಿದ್ದಾರೆ—

**ನ ಚ ಕಾಮ್ಯಸಾಧನಾನಾಮಪಿ ಗುಣಾನಾಮಂಗತ್ವಾದೇವೋಪ- ಸಂಹರ್ತವ್ಯತಾನಿಯಮಃ। ಅನುಪಸಂಹಾರೇ ವಿರೋಧಾಭಾವಾತ್। ಕಾಮ್ಯಾನಾಮನಿಯತಾಂಗತ್ವಾಚ್ಚ।**

**'ಅರ್ಥಾದಿರ್ಧರ್ಮಸಿದ್ಧ್ಯೈ ಹಿ ನ ನಿಯತ್ಯಾಽಂಗಮಿಷ್ಯತೇ।'**

**ಇತಿ ಬ್ರಹ್ಮತರ್ಕೇ ॥ ೪೦ ॥**

**ಭಾವಾರ್ಥ**— ಕಾಮ್ಯಫಲಗಳಿಗೆ ಸಾಧನಗಳಾದ (ಶ್ರೀಕರಾದಿ ಭಗವದ್ರೂಪ ಗಳ) ಗುಣಗಳೂ ಜ್ಞಾನಕ್ಕೆ ಅಂಗವಾಗಿರುವುದರಿಂದ ಅವುಗಳನ್ನೂ ಉಪಸಂಹಾರ ಮಾಡಬೇಕೆಂದು ನಿಯಮವು ಸಿದ್ಧವಾಗುತ್ತದೆ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ ಬಿಂಬೇತರ ಭಗದ್ರೂಪಗಳ ಗುಣಗಳನ್ನು ಉಪಸಂಹಾರ ಮಾಡದಿದ್ದರೆ ವಿರೋಧವಿಲ್ಲ. (ಮೋಕ್ಷವೇ ಲಭಿಸುವುದಿಲ್ಲ ಎಂದೇನೂ ಆಗುವುದಿಲ್ಲ) ಮತ್ತು

ಕಾಮ್ಯಫಲಗಳು ನಿಯಮೇನ ಜ್ಞಾನಕ್ಕೆ ಅಂಗಗಳಲ್ಲ. 'ಧರ್ಮದ ಸಿದ್ಧಿಗಾಗಿ ಅರ್ಥವು ಬೇಕೆಂಬ ನಿಯಮವಿಲ್ಲದಿರುವುದರಿಂದ ಅರ್ಥವು ಅಂಗವಾಗುವುದಿಲ್ಲ' ಎಂದು ಬ್ರಹ್ಮತರ್ಕದಲ್ಲಿ ಹೇಳಲಾಗಿದೆ.

**ವಿವರಣೆ**—ಶ್ರೀಕರಾದಿಭಗವದ್ರೂಪಗಳ ಗುಣಗಳನ್ನು ಉಪಾಸನೆ ಮಾಡದಿದ್ದರೂ ಮೋಕ್ಷವು ಲಭಿಸುತ್ತದೆ. ಆದ್ದರಿಂದ ಇದು ವೈಕಲ್ಪಿಕ. ಜ್ಞಾನೋಪಾಯವಾದ ಗುರುದಕ್ಷಿಣೆ ಮುಂತಾದಕ್ಕೂ ಧನಾದಿಗಳ ಆವಶ್ಯಕತೆಯಿದೆಯಲ್ಲ? ಎಂದರೆ ಜ್ಞಾನಸಂಪಾದನೆಯನ್ನು ಧನಾಪೇಕ್ಷೆ ಇಲ್ಲದ ಗುರುಗಳಿಂದಲೂ ಮಾಡಬಹುದಾಗಿದೆ. ಹೀಗೆ ಧನಾದಿಗಳು ಜ್ಞಾನಕ್ಕೆ ನಿಯತವಾದ ಅಂಗವಲ್ಲದಿರುವುದರಿಂದ ಧನಾದಿಗಳಿಗಾಗಿ ಅಲ್ಲದ್ದಿದರೂ ಕೇವಲ ಭಗವತ್ಪ್ರೀತಿಗಾಗಿ ಬಿಂಬೇತರ ಭಗವದ್ರೂಪಗಳ ಉಪಾಸನೆ ಮಾಡಬಹುದಾದ್ದರಿಂದ ಇದು ವೈಕಲ್ಪಿಕವೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ**

ಕಾಮ್ಯಾಸ್ತು=ಮೋಕ್ಷಭಿನ್ನ ಕಾಮನೆಗಳಿಗೆ ಸಾಧನವಾದ ಈಶ್ವರನ ಗುಣಗಳನ್ನು ಯಥಾಕಾಮಂ=ಪರಮಾತ್ಮನ ಪ್ರಸಾದವನ್ನು ಅನುಸರಿಸಿ ಸಮುಚ್ಚೀಯೇರನ್= ಮುಮುಕ್ಷು ಗುಣೋಪಸಂಹಾರವನ್ನು ಮಾಡಬೇಕು. ನ ವಾ=ಇತರ ಕಾಮನೆಗಳನ್ನು ಉದ್ದೇಶಿಸಿ ಗುಣೋಪಸಂಹಾರವನ್ನು ಮಾಡಬಾರದು. ಏಕೆಂದರೆ, ಪೂರ್ವಹೇತ್ವಭಾವಾತ್=ಕಾಮನಾರೂಪ ಕಾರಣವಿಲ್ಲದಿರುವುದರಿಂದ.

## ಯಥಾಶ್ರಯಭಾವಾಧಿಕರಣ (3-3-41

ಓಂ ಅಂಗೇಷು ಯಥಾಶ್ರಯಭಾವಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಬ್ರಹ್ಮಾದಿದೇವತೆಗಳ ಉಪಾಸನೆಯು ವಿಷಯ. ಮುಮುಕ್ಷುವು ದೇವತೆಗಳನ್ನು ಭಗವಂತನ ಅಂಗಾಶ್ರಿತರೆಂದು ಉಪಾಸನೆ ಮಾಡಬೇಕೋ? ಬೇಡವೋ? ಎಂದು ಸಂಶಯ. 'ಯತೋ ಜನ್ಮ ತತ್ರೈವ ಸ್ಥಿತಿಃ'

(ಎಲ್ಲಿಂದ ಜನ್ಮವನ್ನು ಪಡೆದಿರುತ್ತಾರೋ ಅಲ್ಲಿಯೇ ಆಶ್ರಯಿಸಿರುತ್ತಾರೆ) ಎಂದಿರುವುದರಿಂದ 'ಚಕ್ಷೋಃ ಸೂರ್ಯೋ ಅಜಾಯತ' ಎಂಬ ಶ್ರುತಿಯನ್ನು ಎರಡು ರೀತಿಯಲ್ಲೂ ಅರ್ಥೈಸಲು ಬರುವುದರಿಂದ ಈ ಸಂಶಯ ಬರುತ್ತದೆ.

**ಪೂರ್ವಪಕ್ಷ**—ಮುಮುಕ್ಷುಗಳು ದೇವತೆಗಳನ್ನು ಭಗವಂತನ ಅಂಗಾಶ್ರಿತರೆಂದು ಉಪಾಸನೆ ಮಾಡಬೇಕು ಎಂದಾದರೆ ಸಕಲ ಮುಕ್ಷುಗಳೂ ಉಪಾಸನೆ ಮಾಡುವುದು ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಮನುಷ್ಯರಿಗೆ ಆನಂದಾದಿ ನಾಲ್ಕು ಗುಣಗಳನ್ನು ಮಾತ್ರ ಉಪಾಸನೆಯನ್ನು ವಿಧಾನಮಾಡಿ ಬೇರೆ ರೀತಿಯಾದ ಉಪಾಸನೆಯನ್ನು ನಿಷೇಧಮಾಡಿರುವುದರಿಂದ. ಇನ್ನು ದೇವತೆಗಳಿಗೆ ಈ ಉಪಾಸನೆಯೆಂದೇ ಒಪ್ಪಬೇಕು. ಆ ಉಪಾಸನಾ ವಿಧಾಯಕ ವಾಕ್ಯದಲ್ಲಿ ಅಧಿಕಾರಿ ವಿಶೇಷವನ್ನು ಹೇಳದಿರುವುದರಿಂದ ಅಂಗಾಶ್ರಿತರೆಂಬ ಉಪಾಸನೆ ಸರಿಯಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅವಿಶೇಷದೃಶಿ' (ವಿಶೇಷ ಅಧಿಕಾರಿಯನ್ನು ಹೇಳದಿರುವುದು) ಇದನ್ನು ಮತ್ತು 'ಗುಣವೈಶೇಷ್ಯ' (ಮುಕ್ತಿಯನ್ನು ಪರಮಾತ್ಮನ ಆಯಾ ಗುಣಗಳನ್ನು ಆಶ್ರಯಿಸುವುದು ದೇವತೆಗಳ ವಿಶೇಷಗುಣವಾಗಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ದೇವಾದೀನಾಮಿತಿ ತತ್ರೈವ ವಿಶೇಷವಚನಾಭಾವಾದ್ 'ಬ್ರಹ್ಮಾ ಶಿರಸಿ ಲಲಾಟೇ ರುದ್ರಃ' ಇತ್ಯಾದೀನಾಂ ನಾವಶ್ಯೋಪಾಸ್ಯತಾ ।**

**'ದೇವಾದೀನಾಮೇವ ಧ್ಯಾಯೇದಂಗೇಷ್ವಂಗದೇವತಾಃ ಪರಸ್ಯ**
**ವಿಶಿಷ್ಟಾ ಹಿ ಗುಣಾ**
**ಮುಕ್ತೌ ದೇವಾನಾಂ ಭವಂತಿ ತೇ ಹಿ ತಾದೃಶಾಸ್ತೇ ಹಿ**
**ಹರೇರನುರೂಪಾಃ'**
**ಇತಿ ಶ್ರುತೇರ್ಗುಣವೈಶೇಷ್ಯಾತ್ ॥೪೧॥**

**ಭಾವಾರ್ಥ**—ಉಪಾಸನೆಯನ್ನು ವಿಧಾನ ಮಾಡುವ 'ಬ್ರಹ್ಮಾ ಶಿರಸಿ ಲಲಾಟೇ ರುದ್ರಃ' ಎಂಬ ವಾಕ್ಯಗಳಲ್ಲಿ 'ದೇವತೆಗಳಿಗೆ ಈ ಉಪಾಸನೆ' ಎಂಬ

ವಿಶೇಷ ವಾಕ್ಯವಿಲ್ಲದಿರುವುದರಿಂದ ದೇವತೆಗಳು ಅಂಗಾಶ್ರಿತರಾಗಿದ್ದಾರೆ ಎಂಬ ಉಪಾಸನೆ ದೇವತೆಗಳಿಗೇ ಕೂಡುವುದಿಲ್ಲ. (ಮನುಷ್ಯರಿಗೆ ಈ ಉಪಾಸನೆ ಅಲ್ಲ ಎಂದು ಪ್ರತ್ಯೇಕ ಹೇಳಬೇಕಾಗಿಲ್ಲ ಎಂಬ ಅಭಿಪ್ರಾಯ) ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ದೇವತೆಗಳನ್ನು ಪರಮಾತ್ಮನ ಅಂಗಾಶ್ರಿತರೆಂದು ಉಪಾಸನೆ ಮಾಡಬೇಕು. ಏಕೆಂದರೆ ಮೋಕ್ಷದಲ್ಲಿ ದೇವತೆಗಳು ಭಗವಚ್ಚಕ್ಷುಃಸ್ಥಿತತ್ವ ಮೊದಲಾದ ವಿಶಿಷ್ಟಫಲಗಳನ್ನು ಹೊಂದುತ್ತಾರೆ. ಆ ದೇವತೆಗಳು ಪರಮಾತ್ಮರಿಗೆ ಅನುರೂಪ ವಾಗಿರುವವರಷ್ಟೇ!' ಎಂಬ ಶ್ರುತಿಯು ವಿಶೇಷಗುಣಪ್ರಾಪ್ತಿಯನ್ನು ಹೇಳುತ್ತಿರುವುದರಿಂದ.

ವಿವರಣೆ—ಮುಕ್ತಿಯಲ್ಲಿ ಪರಮಾತ್ಮನ ಆಯಾ ಅಂಗಗಳನ್ನು ಆಶ್ರಯಿಸಿರು ವುದು ಆಯಾ ದೇವತೆಗಳ ವಿಶೇಷ ಗುಣವಾಗಿದೆ. ಇದು ಉಪಾಸನೆಯ ಫಲವೂ ಆಗಿರುವುದರಿಂದ ದೇವತೆಗಳು ಮಾತ್ರ 'ಭಗವಚ್ಚಕ್ಷುಃಸ್ಥಿತೋಽಹಂ' (ನಾನು ಭಗವಂತನ ಕಣ್ಣಿನಲ್ಲಿದ್ದೇನೆ.) ಅಥವಾ 'ಮದಾಧಾರಚಕ್ಷುಷ್ಮಾನ್ ಭಗವಾನ್' (ನನಗೆ ಆಶ್ರಯವಾದ ಕಣ್ಣುಳ್ಳವನು ಭಗವಂತ) ಎಂದು ಉಪಾಸನೆ ಮಾಡಲು ಅರ್ಹರಾಗಿದ್ದಾರೆ ಎಂದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಅಂಗೇಷು ಯಥಾಶ್ರಯಭಾವಃ ಓಂ

ಯಥಾಶ್ರಯಭಾವಃ=ಸೂರ್ಯಾದಿದೇವತೆಗಳಿಗೆ ಹೇಗೆ ಆಶ್ರಿತತ್ವವು 'ಚಕ್ಷೋಃ ಸೂರ್ಯೋ ಅಜಾಯತ' ಮುಂತಾದ ಶ್ರುತಿಯಲ್ಲಿ ಹೇಳಲ್ಪಟ್ಟಿದೆಯೋ ಆದರಂತೆ ಅಂಗೇಷು=ಪರಮಾತ್ಮನ ಅಂಗಗಳಲ್ಲಿ ಆಶ್ರಿತರೆಂದು ಉಪಾಸನೆ ಮಾಡಬೇಕು.

## ನವಾಧಿಕರಣ (3-3-42)

ಓಂ ನವಾಽತತ್ಸಹಭಾವಾಶ್ರುತೇಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಅಂಗಾಶ್ರಿತತ್ವದ ಉಪಾಸನೆಯು ವಿಷಯ. ಕಾಮ್ಯ ಉಪಾಸನೆ ಗಳನ್ನು ಮಾಡದಿರುವುದು ಅಕಾಮ್ಯ ಉಪಾಸನೆಗಳನ್ನು ಮಾಡುವುದೂ

ಕಂಡಿರುವುದರಿಂದ ಸಂಶಯ ಬರುತ್ತದೆ— ದೇವತೆಗಳು ಭಗವಂತನ ಅಂಗಾಶ್ರಿತರೆಂದು ಉಪಾಸನೆ ಮಾಡಬೇಕೋ? ಬೇಡವೋ? ಎಂದು.

**ಪೂರ್ವಪಕ್ಷ**—'ಚಕ್ಷೋಃ ಸೂರ್ಯೋ ಅಜಾಯತ' ಮುಂತಾದ ಶ್ರುತಿಗಳು ಕಣ್ಣು ಮುಂತಾದ ಅಂಗಗಳಿಂದ ಜನಿಸಿದ ದೇವತೆಗಳು ಆಯಾ ಅಂಗಗಳನ್ನು ಆಶ್ರಯಿಸಿದ್ದಾರೆ ಎಂದು ಮಾತ್ರ ಹೇಳುತ್ತಿವೆ. ಹೊರತು 'ಸ್ವರ್ಗಕಾಮೋ ಯಜೇತ' ಮೊದಲಾದ ವಚನಗಳು ಯಾಗವನ್ನು ವಿಧಾನ ಮಾಡುವಂತೆ ಉಪಾಸನೆಯನ್ನು ವಿಧಾನಮಾಡುತ್ತಿಲ್ಲ. ಆದ್ದರಿಂದ ಅಂಗಾಶ್ರಿತರೆಂಬ ಉಪಾಸನೆಯನ್ನು ಮಾಡ ಬೇಕಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕ್ರಿಯಾ' (ಯಾಗಾದಿಗಳಂತೆ ಉಪಾಸನೆಯೂ ಒಂದು ಕ್ರಿಯೆಯಾಗಿದೆ) ಎಂಬುದು. ಇದನ್ನು ಮತ್ತು 'ಆಗಮ' (ಉಪಾಸನಾ ಪ್ರಭೇದಗಳನ್ನು ಅಧಿಕಾರಿಗಳನ್ನು ಆಗಮದಿಂದ ತಿಳಿಯುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಕ್ರಿಯಾತ್ವಾದುಪಾಸನಾಯಾ ಅಗ್ನಿಷ್ಟೋಮಾದಿವತ್ ಪ್ರತಿಶಾಖಂ ವಕ್ತವ್ಯತಾ ।**

**'ಉಪಾಸನಾ ಯಜನಂ ಚೇತಿ ಸಾಮ್ಯಂ ತತ್ತದ್ವಿಶೇಷಾನ್ ಸಂಹರೇತ್ ಸರ್ವತಶ್ಚ ।**

**ತಥಾಕರ್ತೃಣಾಂ ತತ್ಫಲಾನಾಂ ವಿಶೇಷಾದ್ ವ್ಯರ್ಥಾ ಹಿ ಶಾಖಾ ಅನ್ಯಥೈವಂ ಚ ಸಾರ್ಥಾಃ ॥'**

**ಇತ್ಯುಪಾಸನಾವಿಶೇಷಾಣಾಮಧಿಕಾರಿವಿಶೇಷಾಣಾಂ ಚಾಗಮೇಽವ-ಗಮಾತ್ ॥ ೪೨ ॥**

**ಭಾವಾರ್ಥ**—ಉಪಾಸನೆಯೂ ಕ್ರಿಯೆಯಾದ್ದರಿಂದ ಅಗ್ನಿಷ್ಟೋಮಾದಿ ಯಾಗಗಳನ್ನು ಪ್ರತಿಯೊಂದು ಶಾಖೆಯಲ್ಲೂ ವಿಧಾನ ಮಾಡಿರುವಂತೆ ಮಾಡಿ ಅಂಗಾಶ್ರಿತತ್ವ ಮೊದಲಾದ ಗುಣಗಳನ್ನು ಉಪಸಂಹಾರ ಮಾಡಿ ಉಪಾಸನೆ ಮಾಡಬೇಕು ಎಂದು ಹೇಳಿಲ್ಲವಾದ್ದರಿಂದ ದೇವತೆಗಳನ್ನು ಪರಮಾತ್ಮನ

ಅಂಗಾಶ್ರಿತರೆಂದು ಉಪಾಸನೆ ಮಾಡುವ ಆವಶ್ಯಕತೆಯಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಉಪಾಸನೆ ಮತ್ತು ಯಾಗಗಳು ಕ್ರಿಯೆಗಳಾದ್ದರಿಂದ ಸಾಮಾನ್ಯವಾಗಿ ಸಮಾನವೇ ಆಗಿವೆ. ಆದ್ದರಿಂದ ಉಪಾಸನೆಗೆ ಕರ್ತೃಗಳನ್ನೂ, ಉಪಾಸನೆಯ ಫಲಗಳನ್ನು ವಿಶೇಷವಾಗಿ ಹೇಳಿರುವುದರಿಂದ ಎಲ್ಲ ಶಾಖೆಗಳಿಂದಲೂ (ಚತುರ್ಮುಖಾಶ್ರಯಶಿರಸ್ತ್ವ ಮುಂತಾದ) ಗುಣಗಳನ್ನು ಉಪಸಂಹಾರ ಮಾಡಿ ಉಪಾಸನೆಯನ್ನು ಮಾಡಬೇಕು. ಹೀಗೆ ಉಪಾಸನೆ ಮಾಡದಿದ್ದರೆ ಎಲ್ಲಾ ಶಾಖೆಗಳೂ ವ್ಯರ್ಥವಾಗುತ್ತವೆ. ಉಪಾಸನೆ ಮಾಡಿದಾಗ ಮಾತ್ರ ಅವುಗಳು ಸಾರ್ಥಕವಾಗುತ್ತವೆ' ಎಂಬ ಆಗಮದಿಂದ ಉಪಾಸನಾ ವಿಶೇಷಗಳು ಅಧಿಕಾರಿವಿಶೇಷಗಳೂ ತಿಳಿದು ಬಂದಿರುವುದರಿಂದ.

ವಿವರಣೆ–ಉಪಾಸನೆ ಮಾಡುವ ಚತುರ್ಮುಖಾದಿ ಅಧಿಕಾರಿಗಳನ್ನು, ಚತುರ್ಮುಖಾಶ್ರಯಶಿರಸ್ತ್ವ ಮುಂತಾದ ಉಪಾಸನೆಯ ಪ್ರಭೇದಗಳನ್ನು, ಉಪಾಸನೆಯಿಂದ ದೇವತೆಗಳಿಗೆ ಲಭಿಸುವ ಫಲಗಳನ್ನು ಅನೇಕ ಶಾಖೆಗಳಲ್ಲಿ ಹೇಳಿದ್ದು ವ್ಯರ್ಥವಾಗುತ್ತದೆ ಎಂದು ಆಗಮವು ತಿಳಿಸುತ್ತಿರುವುದರಿಂದ ಆಯಾ ದೇವತೆಗಳು ಅಂಗಾಶ್ರಿತತ್ವಾದಿ ಗುಣಗಳನ್ನು ಉಪಾಸನೆ ಮಾಡಬೇಕೆಂದು ಸಿದ್ಧವಾಗುತ್ತದೆ. ಆದರೂ 'ಯಜೇತ' ಎಂದು ವಿಧಿ ಇರುವಂತೆ 'ಅಂಗಾಶ್ರಿತತ್ವಾದಿಗಳನ್ನು ಉಪಾಸನೆ ಮಾಡಬೇಕು' ಎಂದು ವಿಧಿಯು ವಿವಿಧ ಶಾಖೆಗಳಲ್ಲಿ ಸ್ಪಷ್ಟವಾಗಿ ಏಕೆ ಶ್ರುತವಾಗಿಲ್ಲ? ಎಂದರೆ, ಅಗ್ನಿಷ್ಟೋಮಾದಿ ಯಾಗಗಳಿಗೆ ಸರ್ವರೂ ಅಧಿಕಾರಿಗಳಾಗಿದ್ದಾರೆ. ಆದರೆ ಅಂಗಾಶ್ರಿತತ್ವಾದಿಗುಣಗಳನ್ನು ಉಪಾಸನೆ ಮಾಡಲು ಸರ್ವರಿಗೂ ಅಧಿಕಾರವಿಲ್ಲ. ಹೊರತು ದೇವತೆಗಳಿಗೆ ಮಾತ್ರ ಅಧಿಕಾರವಿರುವುದರಿಂದ ಸ್ಪಷ್ಟವಾಗಿ ಶ್ರುತವಾಗಿಲ್ಲ.

**ಸೂತ್ರಾರ್ಥ—**

## ಓಂ ನವಾಽತತ್ಸಹಭಾವಶ್ರುತೇಃ ಓಂ

ನವಾ=ದೇವತೆಗಳಿಗಿಂತ ಭಿನ್ನರಾದವರಿಗೆ ಅಂಗದೇವತಾ ಉಪಾಸನೆಯು ಕಾರ್ಯವಲ್ಲ. ಅತತ್ಸಹಭಾವಶ್ರುತೇಃ=ಸರ್ವಶಾಖೆಗಳಲ್ಲಿ ಹೇಳಲ್ಪಟ್ಟ ಗುಣೋಪಾಸನೆಯೊಂದಿಗೆ ಅಂಗದೇವತಾ ಉಪಾಸನೆಯು ಶ್ರುತವಾಗಿಲ್ಲವಾದ್ದರಿಂದ.

**ಇಲ್ಲಿಗೆ ತೃತೀಯಾಧ್ಯಾಯ ತೃತೀಯ ಪಾದ ಸಮಾಪ್ತವಾಯಿತು.**

# ಚತುರ್ಥಪಾದ

ಹಿಂದಿನ ಪಾದದಲ್ಲಿ ಭಗವಂತನ ಅಪರೋಕ್ಷಜ್ಞಾನವನ್ನು ಪಡೆಯಲು ಸಾಧನವಾದ ಉಪಾಸನೆಯನ್ನು ನಿರೂಪಿಸಿ ಈ ಪಾದದಲ್ಲಿ ಉಪಾಸನೆಯಿಂದ ಜನ್ಯವಾದ ಅಪರೋಕ್ಷಜ್ಞಾನದ ಮಹಿಮೆಯನ್ನು ನಿರೂಪಿಸುತ್ತಿದ್ದಾರೆ. ಈ ಪಾದದ ಅಧಿಕರಣಗಳ ಪೂರ್ವಪಕ್ಷ-ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ—

ಔದಾರ್ಯಮುಚ್ಚಾವಚಶಕ್ತಿರಾತ್ಮ
ಸ್ವರೂಪದಾರ್ಢ್ಯಂ ಚ ನಿಜಸ್ವಭಾವಃ ।
ಸ್ವಾತಂತ್ರ್ಯಮಾಪೂರ್ವವಿಶೇಷಯೋಗ್ಯತಾ
ವಿರೋಧಹಾನಿಶ್ಚ ಚತುರ್ಥಪಾದೇ ॥
ವ್ಯವಸ್ಥಿತಿಸ್ತ್ವವಿಶೇಷಸ್ಥಿತಿಶ್ಚ
ನಿಷೇಧಸಾಮಾನ್ಯವಿಧಿಕ್ರಿಯಾಣಾಮ್ ।
ವಿಭಕ್ತತಾ ಚಾತ್ವರಯೈವ ಸಿದ್ಧಿಃ
ವಿಪಕ್ಷಸಂಪ್ರಾಪ್ತಿ ವಿರೋಧಹೇತವಃ ॥

ಪುರುಷಾರ್ಥಾಧಿಕರಣ ಹಾಗೂ ಅಸಾರ್ವತ್ರಿಕಾಧಿಕರಣಗಳಲ್ಲಿ ಔದಾರ್ಯ, ವ್ಯವಸ್ಥಿತಿಗಳು ಕ್ರಮವಾಗಿ ಪೂರ್ವಪಕ್ಷಸಿದ್ಧಾಂತ ನ್ಯಾಯಗಳು, ಹಾಗೆಯೇ ವಿಶೇಷಾಧಿಕರಣದಲ್ಲಿ ಉಚ್ಚಾವಚಶಕ್ತಿ, ಅವಿಶೇಷಗಳು, ಕಾಮಚಾರಾಧಿಕರಣದಲ್ಲಿ ಆತ್ಮ ಸ್ವರೂಪದಾರ್ಢ್ಯ, ಸ್ಥಿತಿಗಳು, ಉಭಯಲಿಂಗಾಧಿಕರಣ ಮತ್ತು ಅಧಿಕಾರಿಕಾಧಿ ಕರಣಗಳಲ್ಲಿ ನಿಜಸ್ವಭಾವ, ನಿಷೇಧಸಾಮಾನ್ಯವಿಧಿಕ್ರಿಯಾಣಾಂ ವಿಭಕ್ತತಾಗಳು ಫಲಶ್ರುತ್ಯಧಿಕರಣದಲ್ಲಿ ಸ್ವಾತಂತ್ರ್ಯ, ಅತ್ವರಯೈವಸಿದ್ಧಿಗಳು, ಕೃತ್ಸ್ನಭಾವಾಧಿಕರಣ ಮತ್ತು ಅನಾವಿಷ್ಕಾರಾಧಿಕರಣಗಳಲ್ಲಿ ಅಪೂರ್ವವಿಶೇಷಯೋಗ್ಯತಾ, ಅತ್ವರಯೈವ ಸಿದ್ಧಿಗಳು. ಐಹಿಕಾಧಿಕರಣ ಮತ್ತು ಮುಕ್ತಿಫಲಾಧಿಕರಣಗಳಲ್ಲಿ ವಿರೋಧಹಾನಿ, ಅತ್ವರಯೈವ ಸಿದ್ಧಿಗಳು ಕ್ರಮವಾಗಿ ಪೂರ್ವಪಕ್ಷ, ಸಿದ್ಧಾಂತ ಸಾಧಕಯುಕ್ತಿ ಗಳಾಗಿವೆ.

# ಪುರುಷಾರ್ಥಾಧಿಕರಣ (3-4-1:

ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಅಪರೋಕ್ಷಜ್ಞಾನವು ವಿಷಯ. 'ದೃಷ್ಟ್ವೈವ' ಅಪರೋಕ್ಷಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ತಿಳಿಸುವ 'ತಮೇವಂ ವಿದ್ವಾನಮೃತ ಇಹ ಭವತಿ' ಮುಂತಾದ ಶ್ರುತಿಗಳು 'ಮೋಕ್ಷವನ್ನೇ ಪಡೆಯುತ್ತಾನೆ. ಇತರ ಫಲಗಳನ್ನು ಪಡೆಯುವುದಿಲ್ಲ' ಎಂದು ಹೇಳದಿರುವುದರಿಂದ ಸಂಶಯ ಬರುತ್ತದೆ— 'ಅಪರೋಕ್ಷಜ್ಞಾನವು ಕೇವಲ ಮೋಕ್ಷಸಾಧನವೋ? ಅಥವಾ ಇತರ ಫಲಗಳಿಗೂ ಸಾಧನವೋ? ಎಂದು.

**ಪೂರ್ವಪಕ್ಷ—** 'ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್' (ಬ್ರಹ್ಮಜ್ಞಾನಿಯು ಕರ್ಮದಿಂದ ಸಂಪಾದಿತವಾದ ಸ್ವರ್ಗಾದಿಲೋಕಗಳನ್ನು ಅಶಾಶ್ವತವೆಂದು ತಿಳಿದು ವೈರಾಗ್ಯವನ್ನು ತಾಳಬೇಕು) 'ಪ್ರಜಹಾತಿ ಯದಾ ಕಾಮಾನ್' (ಯಾವಾಗ ಮನೋಗತವಾದ ಕಾಮನೆಗಳನ್ನು ತೊರೆಯುವನೋ ಪರಮಾತ್ಮನಲ್ಲಿ ಏಕಾಗ್ರಚಿತ್ತದಿಂದ ಆನಂದಪಡುವನೋ ಆವಾಗ ಅವನನ್ನು ಸ್ಥಿತಪ್ರಜ್ಞನೆನ್ನುತ್ತಾರೆ.) ಮುಂತಾದ ಶ್ರುತಿಗಳು ಬ್ರಹ್ಮಜ್ಞಾನಿಗೆ ಮೋಕ್ಷೇತರ ಫಲಗಳಲ್ಲಿ ವೈರಾಗ್ಯವನ್ನು ತಿಳಿಸುತ್ತಿವೆ. ಜ್ಞಾನವು ಮೋಕ್ಷೇತರ ಫಲಗಳಿಗೂ ಸಾಧನವೆಂದು ತಿಳಿಸುವ ವಾಕ್ಯಗಳು ಜ್ಞಾನವನ್ನು ಪ್ರಶಂಸಿಸಲು ಹೊರಟವುಗಳೇ ಹೊರತು ಅವುಗಳಿಗೆ ಅದರಲ್ಲಿ ತಾತ್ಪರ್ಯವಿಲ್ಲ. ಆದ್ದರಿಂದ ಜ್ಞಾನವು ಮೋಕ್ಷಕ್ಕೆ ಮಾತ್ರ ಸಾಧನವೇ ಹೊರತು ಇತರ ಪುರುಷಾರ್ಥಗಳಿಗೆ ಸಾಧನವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಔದಾರ್ಯ'** (ವೈರಾಗ್ಯ) ಎಂಬುದು ಇದನ್ನು ಮತ್ತು 'ವ್ಯವಸ್ಥಿತಿ' (ವಿರುದ್ಧವಾಗಿ ಕಾಣುವ ವಾಕ್ಯಗಳಿಗೆ ಅರ್ಥವ್ಯವಸ್ಥೆಯನ್ನು ಮಾಡುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**॥ಹರಿಃ ಓಂ ॥ ನ ಚ ಜ್ಞಾನಿನ ಔದಾರ್ಯಾನ್ಮೋಕ್ಷಾದನ್ಯಫಲೇಚ್ಛಾಯಾ ಏವಾಸಂಭವಾತ್ ತದುಕ್ತಿಃ ಪ್ರಶಂಸಾಮಾತ್ರಮಿತಿ ವಾಚ್ಯಮ್ ।**

**ಪ್ರಾಯಶೋ ನ ಸಂಭವತ್ಯೇವ । ಕಸ್ಯಚಿತ್ ಸೌಭರಿವತ್ ಸಾ ಭವತಿ ಚೇತ್ ಜ್ಞಾನೇನೈವಾಶೇಷಮಭೀಪ್ಸಿತಂ ಭವತೀತಿ ವ್ಯವಸ್ಥೋಪಪತ್ತೇಃ ॥ ೧ ॥ ೨ ॥**

**ಭಾವಾರ್ಥ—**ಜ್ಞಾನಿಗೆ ವೈರಾಗ್ಯವಿರುವುದರಿಂದ ಮೋಕ್ಷಕ್ಕಿಂತ ಇತರ ಫಲದ ಬಯಕೆಯೇ ಹುಟ್ಟುವುದಿಲ್ಲವಾದ್ದರಿಂದ 'ಜ್ಞಾನದಿಂದ ಸ್ವರ್ಗ' ಎಂದು ಹೇಳುವ ವಾಕ್ಯಕ್ಕೆ ಜ್ಞಾನದ ಪ್ರಸಂಶೆಯಲ್ಲಿಯೇ ತಾತ್ಪರ್ಯವೆಂದು ಕಲ್ಪಿಸಬೇಕು. ಆದ್ದರಿಂದ ಜ್ಞಾನವು ಮೋಕ್ಷೇತರ ಫಲಗಳಿಗೆ ಸಾಧನವಲ್ಲ ಎಂದು ಆಕ್ಷೇಪಿಸುವುದು ಸರಿಯಲ್ಲ. ಏಕೆಂದರೆ, ಪ್ರಾಯಃ ಜ್ಞಾನಿಗೆ ಮೋಕ್ಷೇತರಫಲದಲ್ಲಿ ಇಚ್ಛೆಯೇ ಇರುವುದಿಲ್ಲ. ಕೆಲವರಿಗೆ ಸೌಭರ್ಯಾದಿ ಋಷಿಗಳಿಗಿರುವಂತೆ ಮೋಕ್ಷೇತರ ಫಲಗಳಲ್ಲಿಯೂ ಇಚ್ಛೆ ಬರುತ್ತದೆ. ಆ ಎಲ್ಲ ಫಲಗಳೂ ಜ್ಞಾನದಿಂದಲೇ ಈಡೇರುತ್ತವೆ ಎಂದು ವ್ಯವಸ್ಥೆಯನ್ನು ಮಾಡಬಹುದಾಗಿದೆ.

**ವಿವರಣೆ—** 'ಪರೀಕ್ಷ್ಯ ಲೋಕಾನ್' ಮುಂತಾದ ವೈರಾಗ್ಯವನ್ನು ಪ್ರತಿಪಾದಿಸುವ ಶ್ರುತಿಸ್ಮೃತಿಗಳಿಗೂ, 'ಜ್ಞಾನಾದೇವ ಸ್ವರ್ಗಃ' ಮೊದಲಾದ ವಾಕ್ಯಗಳಿಗೆ ವ್ಯವಸ್ಥೆಯನ್ನು ಮಾಡುವುದ ರಿಂದ ವಿರೋಧ ಪರಿಹಾರವನ್ನು ಮಾಡಬಹುದಾಗಿದೆ. ಸಾಧಾರಣವಾಗಿ ಜ್ಞಾನಿಗೆ ಮೋಕ್ಷೇತರಫಲಗಳಲ್ಲಿ ಅನಾಸಕ್ತಿ, ಕೆಲವರಿಗೆ ಇತರ ಫಲಗಳಲ್ಲಿ ಆಸಕ್ತಿಯೂ ಇರುವುದೇ ವ್ಯವಸ್ಥೆ. ಸೌಭರಿಋಷಿಯು ಸಂಸಾರಸುಖವನ್ನು ಅಪೇಕ್ಷಿಸಿ ಅನೇಕ ದೇಹಗಳನ್ನು ಸ್ವೀಕರಿಸುವುದು, ಕರ್ದಮಪ್ರಜಾಪತಿ ಗೃಹಸ್ಥಜೀವನವನ್ನು ಅನುಭವಿಸುವುದು ಪುರಾಣಗಳಲ್ಲಿ ಕಂಡಿರುವುದರಿಂದ ಜ್ಞಾನಿಗಳಿಗೂ ಇತರ ಕಾಮನೆಗಳು ಬರುವುದೆಂದು ಸಿದ್ಧವಾಗುತ್ತದೆ. ಆ ಕಾಮನೆಗಳೂ ಅಪರೋಕ್ಷ ಜ್ಞಾನದಿಂದಲೇ ಈಡೇರುತ್ತವೆ ಎಂಬುದು ವಿಶೇಷ. ಆದ್ದರಿಂದ 'ಜ್ಞಾನಾದೇವ ಸ್ವರ್ಗಃ' ಮೊದಲಾದ ವಾಕ್ಯಗಳಿಗೆ ಪ್ರಶಂಸೆಯಲ್ಲಿಯೇ ತಾತ್ಪರ್ಯವೆಂದು ಕಲ್ಪಿಸ ಬೇಕಿಲ್ಲ. ಜ್ಞಾನವು ಮೋಕ್ಷಕ್ಕೆ ಮಾತ್ರ ಸಾಧನವಲ್ಲ. ಇತರ ಫಲಗಳಿಗೂ ಸಾಧನ ವೆಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ॥**

ಅತಃ=ಪರಮಾತ್ಮನ ಅಪರೋಕ್ಷಜ್ಞಾನದಿಂದ ಪುರುಷಾರ್ಥಃ=ಎಲ್ಲ ತರಹದ

ಪುರುಷಾರ್ಥಗಳೂ ಕೈಗೂಡುತ್ತವೆ. ಏಕೆಂದರೆ, ಶಬ್ದಾತ್='ಯಂ ಯಂ ಲೋಕಂ ಮನಸಾ' ಎಂಬ ಶ್ರುತಿಯಿರುವುದರಿಂದ. ಇತಿ ಬಾದರಾಯಣಃ=ಈರೀತಿಯಾಗಿ ಬಾದರಾಯಣರು ತಿಳಿದಿದ್ದಾರೆ.

## ಅಸಾರ್ವತ್ರಿಕಾಧಿಕರಣ (3-4-2)

ಓಂ ಅಸಾರ್ವತ್ರಿಕೀ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಅಪರೋಕ್ಷಜ್ಞಾನವು ವಿಷಯ. ವಾಣಿಜ್ಯಾದಿಕ್ರಿಯೆಗಳಲ್ಲಿ ಕೆಲವರಿಗೆ ಮಾತ್ರ ಅಧಿಕಾರ ಕಂಡಿದೆ. ಭೋಜನಾದಿ ಕ್ರಿಯೆಗಳಲ್ಲಿ ಎಲ್ಲರಿಗೂ ಅಧಿಕಾರ ಕಂಡಿದೆ. ಹೀಗೆ ಎರಡು ವಿಧವಾದ ಕ್ರಿಯೆಗಳು ಕಂಡಿರುವುದರಿಂದ ಸಂಶಯ ಬರುತ್ತದೆ— ಅಪರೋಕ್ಷಜ್ಞಾನದಲ್ಲಿ ಎಲ್ಲರಿಗೂ ಅಧಿಕಾರಿವಿದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ—** ಮೋಕ್ಷವು ಉತ್ಕೃಷ್ಟವಾದ ಫಲವಾದ್ದರಿಂದ ಎಲ್ಲರಿಗೂ ಅದರಲ್ಲಿ ಅಪೇಕ್ಷೆ ಇರುತ್ತದೆ. 'ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ' (ಅಪೇಕ್ಷೆ, ಸಾಮರ್ಥ್ಯ, ಜ್ಞಾನವುಳ್ಳವನು ಅಧಿಕಾರಿಯಾಗುತ್ತಾನೆ) ಎಂಬ ನಿಯಮದ ಪ್ರಕಾರ ಎಲ್ಲರಿಗೂ ಮೋಕ್ಷಸಾಧನವಾದ ಜ್ಞಾನದಲ್ಲಿ ಅಧಿಕಾರವಿದೆ ಎಂದು ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ '**ಔದಾರ್ಯ**' (ಉತ್ಕೃಷ್ಟತ್ವ) ನಿರ್ದುಃಖಾನಂದರೂಪ ವಾದ್ದರಿಂದ ಮೋಕ್ಷವು ಉತ್ಕೃಷ್ಟವಾಗಿದೆ ಎಂಬುದು.

**ಸಿದ್ಧಾಂತ—** ಸಿದ್ಧಾಂತಸಾಧಕವಾದ ಯುಕ್ತಿ 'ವ್ಯವಸ್ಥಿತಿ' ಎಂಬುದು. ಎಲ್ಲ ಜೀವರಿಗೂ ಮೋಕ್ಷದ ಅಪೇಕ್ಷೆಯಿದ್ದರೂ ವೇದಾಧ್ಯಯನವಿರುವವರಿಗೆ ಮಾತ್ರ ಜ್ಞಾನದಲ್ಲಿ ಅಧಿಕಾರ ಬೇರೆಯವರಿಗಲ್ಲ ಎಂದು ವ್ಯವಸ್ಥೆ ಮಾಡಿರುವುದರಿಂದ. ಒಂಭತ್ತು ಕೋಟಿ ದೇವತೆಗಳಲ್ಲಿ ದೇವತ್ವವಿದ್ದರೂ ಸೋಮಪಾನವನ್ನು ಮಾಡುವ ಅಧಿಕಾರ ಮಾತ್ರ ವಿಷ್ಣು, ಬ್ರಹ್ಮರನ್ನೊಳಗೊಂಡ ನೂರು ಮಂದಿದೇವತೆಗಳಿಗೆ ಮಾತ್ರವಂತೆ, ವೇದಾಧ್ಯಯನದ ಅಧಿಕಾರವಾದರೂ 'ಅವೈಷ್ಣವಸ್ಯ ವೇದೇಽಪಿ ಹ್ಯಧಿಕಾರೋ ನ ವಿದ್ಯತೇ' ಗುರುಭಕ್ತಿವಿಹೀನಸ್ಯ ಶಮಾದಿರಹಿತಸ್ಯ ಚ ॥ ನ ಚ ವರ್ಣಾವರಸ್ಯಾಪಿ ತಸ್ಮಾದಧ್ಯಯನಾನ್ವಿತಃ । ಬ್ರಹ್ಮಜ್ಞಾನೇ ತು ವೇದೋಕ್ತೇಽಪ್ಯಧಿ

ಕಾರೀ ಸತಾಂ ಮತಃ ॥ (ವೈಷ್ಣವನಲ್ಲದವನಿಗೆ ವೇದಾಧ್ಯಯನದಲ್ಲಿ ಅಧಿಕಾರವಿರುವುದಿಲ್ಲ. ಗುರುಭಕ್ತಿ, ಶಮಾದಿಗಳು ಇಲ್ಲದವನಿಗೆ ಕೆಳವರ್ಣದವನಿಗೆ ವೇದಾಧಿಕಾರವಿರುವುದಿಲ್ಲ. ಆದ್ದರಿಂದ ವೇದಾಧ್ಯಯನ ಸಂಪನ್ನನೇ ಬ್ರಹ್ಮಜ್ಞಾನದಲ್ಲಿ ಅಧಿಕಾರಿ. ಇದು ಸಜ್ಜನರಿಗೆ ಸಮ್ಮತ.) ಎಂಬ ಪ್ರಮಾಣದಂತೆ ಎಲ್ಲರಿಗೂ ಇರುವುದಿಲ್ಲ. ಆದ್ದರಿಂದ ಸರ್ವರಿಗೂ ಜ್ಞಾನದಲ್ಲಿ ಅಧಿಕಾರವಿಲ್ಲ ಎಂಬುದೇ ಸಿದ್ಧಾಂತ.

ಯದ್ಯಪಿ ಈ ಅಧಿಕರಣದ ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ಶ್ರೀಮಧ್ವಾಚಾರ್ಯರು ವಿವರಿಸಿಲ್ಲ. ಶಿಷ್ಯರು ತಾವೇ ಊಹಿಸಿಕೊಳ್ಳಲಿ ಎಂದು ಬಿಟ್ಟಿದ್ದಾರೆ. ಆದರೂ ರಘೂತ್ತಮಸ್ವಾಮಿಗಳ ವ್ಯಾಖ್ಯಾನವನ್ನು ಅನುಸರಿಸಿ ಈ ಅಧಿಕರಣವನ್ನು ರಚಿಸಲಾಗಿದೆ.

**ಸೂತ್ರಾರ್ಥ—**

**ಓಂ ಅಸಾರ್ವತ್ರಿಕೀ ಓಂ ॥**

ಜ್ಞಾನವನ್ನು ಪಡೆಯುವ ಅಧಿಕಾರ ಎಲ್ಲರಿಗೂ ಇರುವುದಿಲ್ಲ.

## ಅವಿಶೇಷಾಧಿಕರಣ (3-4-3)

ಓಂ ನಾವಿಶೇಷಾತ್ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಜ್ಞಾನಾಧಿಕಾರವು ವಿಷಯ. ಲೌಕಿಕ ಸಾಧನೆಗಳು ಏಕಪ್ರಕಾರವಾಗಿ, ಅನೇಕ ಪ್ರಕಾರವಾಗಿಯೂ ಕಂಡಿವೆ. ಆದ್ದರಿಂದ ಸಂಶಯ ಬರುತ್ತದೆ– ಜ್ಞಾನಾಧಿಕಾರವು ದೇವತೆಗಳಿಗೆ ಏಕಪ್ರಕಾರವೋ? ಅನೇಕ ಪ್ರಕಾರವೋ? ಎಂದು.

**ಪೂರ್ವಪಕ್ಷ—** ಎಲ್ಲ ದೇವತೆಗಳಿಗೂ ಜ್ಞಾನಾಧಿಕಾರವು ಏಕಪ್ರಕಾರವೇ ಆಗಿದೆ. ಓಂ ಪ್ರಜ್ಞಾಂತರಪೃಥಕ್ತ್ವವೃಷ್ಟಿಃ ಓಂ ಎಂಬಲ್ಲಿ ಜ್ಞಾನದಲ್ಲಿ ತಾರತಮ್ಯವನ್ನು ಹೇಳಿದ್ದರಿಂದ ಜ್ಞಾನಾಧಿಕಾರದಲ್ಲಿಯೂ ತಾರತಮ್ಯವನ್ನು ಒಪ್ಪಲೇಬೇಕು ಎಂದು ಆಕ್ಷೇಪಿಸುವಂತಿಲ್ಲ. ಜ್ಞಾನತಾರತಮ್ಯವು ಉತ್ಕೃಷ್ಟ, ನಿಕೃಷ್ಟಶಕ್ತಿರೂಪ ತಾರತಮ್ಯದಿಂದ ಉಪಪನ್ನವಾಗುತ್ತದೆ. ಅದಕ್ಕಾಗಿ ಅಧಿಕಾರತಾರತಮ್ಯವನ್ನು ಕಲ್ಪಿಸಬೇಕಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಉಚ್ಚಾವಚಶಕ್ತಿ' (ಉತ್ಕೃಷ್ಟ

ನಿಕೃಷ್ಟಶಕ್ತಿ) ಎಂಬುದು. ಇದನ್ನು ಮತ್ತು 'ಅವಿಶೇಷ' (ಭಕ್ತ್ಯಾದಿ ತಾರತಮ್ಯವನ್ನು ಅನುಸರಿಸಿಯೇ ಜ್ಞಾನಪ್ರಾಪ್ತಿಯು ಎಲ್ಲರಿಗೂ ಸಮಾನವಾಗಿದೆ) ಎಂಬ ಸಿದ್ಧಾಂತ ವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾಧಿಕಾರೇ ಸಮೇಽಪಿ ತೇಷಾಮೇವೋಚ್ಚಾವ ಚಶಕ್ತಿಯೋಗಾತ್ ಫಲಭೇದೋಪಪತ್ತೇರಧಿಕಾರವಿಶೇಷಕಲ್ಪನಂ ವ್ಯರ್ಥಮ್ । ಭಕ್ತ್ಯಾದ್ಯಧಿ-ಕಾರತಾರತಮ್ಯೇನ ಶಾಸ್ತ್ರಾತ್ ಫಲಪ್ರಾಪ್ತೇಃ ಸರ್ವೇಷಾಮವಿಶೇಷಾತ್ । ದೃಶ್ಯಮಾನಾತ್ವಾಚ್ಚ ಭಕ್ತ್ಯಾದ್ಯಧಿಕಾರತಾರತಮ್ಯಸ್ಯ । ಉಚ್ಚಾವಚಶಕ್ತೇರಪಿ ತನ್ನಿಬಂಧನತ್ವಾತ್ ॥ ೩ ॥**

**ಭಾವಾರ್ಥ**—ದೇವತೆಗಳಲ್ಲಿ ಅಧಿಕಾರವು ಸಮಾನವಾಗಿದ್ದರೂ ಅವರಲ್ಲಿಯೇ ಉತ್ಕೃಷ್ಟ, ನಿಕೃಷ್ಟ ಶಕ್ತಿಯೆಂಬ ಉಪಾಯದಿಂದ (ಯೋಗ=ಉಪಾಯ) ಜ್ಞಾನದಲ್ಲಿ ತಾರತಮ್ಯವನ್ನು ಕೂಡಿಸಲು ಬರುವಾಗ ದೇವತ್ವ, ಋಷಿತ್ವ, ಮನುಷ್ಯೋತ್ತಮತ್ವ ರೂಪವಾದ ಅಧಿಕಾರ ತಾರತಮ್ಯವನ್ನು ಕಲ್ಪಿಸುವುದು ವ್ಯರ್ಥವೆಂದು ಆಕ್ಷೇಪಿಸು ವಂತಿಲ್ಲ. ಏಕೆಂದರೆ, ಭಕ್ತಿ ಮೊದಲಾದ ಅಧಿಕಾರವನ್ನು ಅನುಸರಿಸಿ ಶಾಸ್ತ್ರಾಧ್ಯಯನ ದಿಂದ ಜ್ಞಾನಪ್ರಾಪ್ತಿಯು ಎಲ್ಲರಿಗೂ ಸಮಾನವಾಗಿದೆ. ಭಕ್ತಿ ಮೊದಲಾದ ಅಧಿಕಾರ ತಾರತಮ್ಯವು ಪ್ರತ್ಯಕ್ಷಸಿದ್ಧವೇ ಆಗಿದೆ. ಮತ್ತು ಉತ್ಕೃಷ್ಟ, ನಿಕೃಷ್ಟಶಕ್ತಿಯೂ ಭಕ್ತಿತಾರತಮ್ಯದಿಂದಲೇ ಕೂಡುತ್ತದೆ.

**ವಿವರಣೆ**— ಭಕ್ತ್ಯಾದಿತಾರತಮ್ಯವನ್ನು ಅನುಸರಿಸಿಯೇ ಜ್ಞಾನಪ್ರಾಪ್ತಿಯು ಎಲ್ಲರಿಗೂ ಸಮಾನವಾಗಿದೆ. ಮತ್ತು ಪೂರ್ವಪಕ್ಷಿಯು ಹೇಳಿದಂತೆ ಶಕ್ತಿತಾರತಮ್ಯ ದಿಂದ ಜ್ಞಾನತಾರತಮ್ಯವನ್ನು ಕೂಡಿಸಲು ಬರುವುದಿಲ್ಲ. ಏಕೆಂದರೆ, ಒಬ್ಬರಿಗೆ ಉತ್ಕೃಷ್ಟಶಕ್ತಿ, ಮತ್ತೊಬ್ಬರಿಗೆ ನಿಕೃಷ್ಟಶಕ್ತಿಯಾದರೂ ಏಕೆ? ಎಂದು ಪ್ರಶ್ನಿಸಿದಾಗ ಭಕ್ತ್ಯಾದಿತಾರತಮ್ಯವಿರುವುದರಿಂದ ಎಂದೇ ಉತ್ತರಿಸಬೇಕು. ಆದರಿಂದಲೇ ಜ್ಞಾನತಾರತಮ್ಯವನ್ನು ಕೂಡಿಸಲು ಬರುವಾಗ ಶಕ್ತಿತಾರತಮ್ಯವನ್ನು ಹೇಳುವುದು ಸರಿಯಲ್ಲ. ಆದ್ದರಿಂದ ದೇವತೆಗಳಲ್ಲಿ ಅಧಿಕಾರತಾರತಮ್ಯವನ್ನು ಒಪ್ಪಲೇಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ :**

**ಓಂ ನಾವಿಶೇಷಾತ್ ಓಂ**

ಏಕರೂಪವಾದದ್ದಲ್ಲ. ಏಕೆಂದರೆ, ಅವಿಶೇಷಾತ್ ಜ್ಞಾನವೂ ಏಕರೂಪ ವಾಗುವ ಪ್ರಸಂಗವಿರುವುದರಿಂದ.

## ಸ್ತುತ್ಯಧಿಕರಣ (3-4-4)

ಓಂ ಸ್ತುತಯೇಽನುಮತಿರ್ವಾ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಜ್ಞಾನಾಧಿಕಾರಿಯು ವಿಷಯ. ಭೃತ್ಯಾದಿಗಳ ಸತ್‌ಪ್ರವೃತ್ತಿ, ಅಸತ್ಪ್ರ ವೃತ್ತಿಗಳಿಂದ ಫಲವಿಶೇಷ ಕಂಡಿದೆ. ಆದರೆ ಜ್ಞಾನಿಯ ಕರ್ಮಕರಣ ಅಕರಣಗಳು ಸಮಾನವೆಂದು 'ತುಲ್ಯಂ ತು ದರ್ಶನಮ್' ಎಂಬ ಸೂತ್ರದಲ್ಲಿ ಹೇಳಿರುವುದರಿಂದ ಸಂದೇಹವುಂಟಾಗುವುದು— ಜ್ಞಾನಿಯ ಸತ್‌ಪ್ರವೃತ್ತಿ ಅಸತ್‌ಪ್ರವೃತ್ತಿಗಳಲ್ಲಿ ವಿಶೇಷವಿದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ**— ಅಪರೋಕ್ಷಜ್ಞಾನಿಗೆ ಸ್ವರೂಪಾನಂದಾರ್ಭಾವ ರೂಪವಾದ ಮೋಕ್ಷವು ನಿಶ್ಚಿತವಾದ್ದರಿಂದ ಜ್ಞಾನಾಂತರ ಸತ್ಕರ್ಮ, ಮತ್ತು ದುಷ್ಕರ್ಮಗಳಿಂದ ಯಾವ ಪರಿಣಾಮವೂ ಆಗುವುದಿಲ್ಲವೆಂದು 'ಸ ಬ್ರಾಹ್ಮಣಃ ಕೇನ ಸ್ಯಾದ್ ಯೇನ ಸ್ಯಾತ್ ತೇನೇದೃಶ ಏವ' (ಬ್ರಹ್ಮಜ್ಞಾನಿಯು ಆಚಾರಶೀಲನಾಗಿರಲಿ, ಇಲ್ಲದಿರಲಿ ಅದರಿಂದ ಅವನು ಮೋಕ್ಷಾರ್ಹನಾಗಿಯೇ ಇರುತ್ತಾನೆ. ಅವನಿಗೆ ಯಾವ ಹಾನಿಯೂ ಇರುವುದಿಲ್ಲ.) ಎಂಬ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಜ್ಞಾನಿಯ ಸದಸತ್‌ಪ್ರವೃತ್ತಿಗಳಿಂದ ಯಾವ ವಿಶೇಷವೂ ಇಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಆತ್ಮಸ್ವರೂಪದಾರ್ಢ್ಯ' (ಮೋಕ್ಷದ ನಿಶ್ಚಯ) ಎಂಬುದು ಇದನ್ನು ಮತ್ತು 'ಸ್ಥಿತಿ' (ಆನಂದಪ್ರಾಪ್ತಿ ಎಂಬ ಸ್ಥಿತಿ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ–

**ನ ಚ ಜ್ಞಾನಿನಾಮಾತ್ಮಸ್ವರೂಪದಾರ್ಢ್ಯಾತ್ ಸತ್ಪ್ರವೃತ್ತಿವಿಪರೀತ-ಪ್ರವೃತ್ತ್ಯೋರವಿಶೇಷಃ।**

'ಏತಾವತೋಽಧಿಕಾ ನಾಸ್ತಿ ಪ್ರಾಪ್ತಿರಿತ್ಯಂತತಃ ಸ್ಥಿತಾ ।
ಯಾ ಸ್ಥಿತಿಸ್ತಾಂ ಸಮಾಪ್ನೋತಿ ಯಥಾಶಕ್ತಿ ಪ್ರಯತ್ನತಃ ।
ವಿಪರೀತಪ್ರವೃತ್ತೇಸ್ತು ತಸ್ಯ ಹ್ರಾಸೋಽಧಿಕಂ ಭವೇತ್ ॥'
ಇತಿ ವಚನಾತ್ ಸ್ಥಿತಿವಿಶೇಷೋಪಪತ್ತೇಃ ॥ ೪ ॥ ೫ ॥

**ಭಾವಾರ್ಥ**—ಜ್ಞಾನಿಗಳಿಗೆ ಆತ್ಮಸ್ವರೂಪವು (ಮೋಕ್ಷವು) ನಿಶ್ಚಿತವಾದ್ದರಿಂದ ಸತ್‌ಪ್ರವೃತ್ತಿ, ಅಸತ್‌ಪ್ರವೃತ್ತಿಗಳಲ್ಲಿ ವಿಶೇಷವಿಲ್ಲ ಎಂದು ಪೂರ್ವಪಕ್ಷವು ಸರಿಯಲ್ಲ. 'ಇದಕ್ಕಿಂತ ಹೆಚ್ಚಿನ ಪ್ರಾಪ್ತಿ ಇಲ್ಲ. ಇದೇ ಕೊನೆಯ ಸ್ಥಿತಿ ಎಂಬ ಯಾವ ಸ್ಥಿತಿಯಿದೆಯೋ ಅದನ್ನು ಜ್ಞಾನೋತ್ತರದಲ್ಲಿ ಮಾಡಿದ ಭಕ್ತಿಗನುಗುಣವಾದ ಪ್ರಯತ್ನದಿಂದ ಪಡೆಯುತ್ತಾನೆ. ಅಸತ್‌ಪ್ರವೃತ್ತಿಯಿಂದ ಆ ಸ್ಥಿತಿಗೆ ಹ್ರಾಸವೂ ಉಂಟಾಗುತ್ತದೆ' ಎಂಬ ವಚನದಿಂದ ಸ್ಥಿತಿವಿಶೇಷವು ಉಪಪನ್ನವಾಗುತ್ತದೆ.

**ವಿವರಣೆ**— ದೇವತೆಗಳಿಗೆ ಜ್ಞಾನಾಂತರದ ಸತ್ಕರ್ಮದಿಂದ ವಿಶೇಷ ಆನಂದಪ್ರಾಪ್ತಿ ಎಂಬ ಸ್ಥಿತಿಯನ್ನು, ಅಸತ್‌ಕರ್ಮದಿಂದ ಸ್ವರೂಪಯೋಗ್ಯತೆಗಿಂತ ಅಧಿಕವಾಗಿ ಪಡೆಯಬಹುದಾದ ಆನಂದದ ಹ್ರಾಸವೆಂಬ ಸ್ಥಿತಿವಿಶೇಷವನ್ನು ಹೇಳಿರುವುದರಿಂದ ಸದಸತ್‌ಪ್ರವೃತ್ತಿ ಗಳಲ್ಲಿ ವಿಶೇಷವಿದೆ ಎಂದು ತಿಳಿಯುತ್ತದೆ. ಇದರಿಂದ ಅಸುರರಿಗೆ ತಮ್ಮ ಸ್ವರೂಪ ಕ್ಕಿಂತ ಅಧಿಕವಾಗಿ ಸೇವಾದಿಗಳಿಂದ ಪ್ರಾಪ್ತವಾದ ಆನಂದವನ್ನು ಅನುಭವಿಸ ದಿರುವುದು ಎಂಬ ಸ್ಥಿತಿವಿಶೇಷವನ್ನು, ಮನುಷ್ಯರಿಗೆ ಅಸತ್‌ಪ್ರವೃತ್ತಿಯಿಂದ ನಿರ್ದಿಷ್ಟವಾದ ಸ್ವರೂಪಾನಂದ ಆವಿರ್ಭಾವವಾಗದಿರುವುದು ಎಂಬ ಸ್ಥಿತಿವಿಶೇಷ ವನ್ನೂ ಹೇಳಿದಂತಾಗುವುದು.

ಹಾಗಾದರೆ, 'ಸ ಬ್ರಾಹ್ಮಣಃ ಕೇನ ಸ್ಯಾದ್' ಎಂದು ಯಥೇಷ್ಟವಾದ ಆಚರಣೆ ಯನ್ನು ವಿಧಾನ ಮಾಡುತ್ತಿರುವ ಶ್ರುತಿಗೆ ಏನರ್ಥವೆಂದರೆ, ಅದು ಆಚಾರಹೀನ ನಾಗಿರಬೇಕು ಎಂದು ವಿಧಿಸುತ್ತಿಲ್ಲ. ಜ್ಞಾನಿಯು ಯಥೇಷ್ಟ ಆಚರಣೆವುಳ್ಳವ ನಾದರೂ ಮುಕ್ತನಾಗುತ್ತಾನೆ ಎಂದು ಜ್ಞಾನಿಯ ಸಾಮರ್ಥ್ಯವನ್ನು ಪ್ರಕಟಿಸಲು ಪ್ರಶಂಸೆ ಮಾಡುತ್ತಿದೆ. ಅಥವಾ ಯಥೇಷ್ಟ ಆಚರಣೆಗೆ ಅನುಮೋದನೆ ಮಾತ್ರ. ಅವನಿಗೆ ದುರಾಚಾರದಿಂದ ಹಾನಿಯೂ ಇದೆ. ಆದ್ದರಿಂದ ಸದಸತ್‌ಪ್ರವೃತ್ತಿಗಳಲ್ಲಿ ವಿಶೇಷವಿದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಸ್ತುತಯೇಽನುಮತಿರ್ವಾ ಓಂ

'ಸ ಬ್ರಾಹ್ಮಣಃ ಕೇನ ಸ್ಯಾದ್' ಮುಂತಾದ ಶ್ರುತಿಯಲ್ಲಿ ಜ್ಞಾನಿಯ ಯಥೇಷ್ಟ ಆಚರಣೆಯ ವಿಧಿಯಲ್ಲ. ಆದರೆ ಸ್ತುತಯೇ=ಜ್ಞಾನಿಯ ಸ್ತೋತ್ರಕ್ಕಾಗಿ ಪ್ರವೃತ್ತವಾಗಿದೆ. ವಾ=ಅಥವಾ ಅನುಮತಿಃ=ಜ್ಞಾನಿಯ ಯಥೇಷ್ಟ ಆಚರಣೆಗೆ ಅನುಮತಿ ಮಾತ್ರ.

## ಉಭಯಲಿಂಗಾಧಿಕರಣ, ಆಧಿಕಾರಿಕಾಧಿಕರಣ(3-4-5,6)

ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಜ್ಞಾನವು ವಿಷಯ. ಲೋಕದಲ್ಲಿ ಹಣ ಮೊದಲಾದದ್ದನ್ನು ಅರ್ಹರು ಅನರ್ಹರೂ ಇಬ್ಬರೂ ಪಡೆದುಕೊಂಡಿರುವುದು ಕಂಡದ್ದರಿಂದ ಸಂಶಯ ಬರುತ್ತದೆ- ಭಗವಂತನ ಅಪರೋಕ್ಷಜ್ಞಾನವನ್ನು ಅಧಿಕಾರಿಗಳು ಮಾತ್ರ ಪಡೆಯುವರೋ? ಅಥವಾ ಅನಧಿಕಾರಿಗಳೂ ಪಡೆಯುವರೋ? ಎಂದು.

ಓಂ ನಚಾಽಧಿಕಾರಿಕಮಪಿ ಪತಿನಾನುಮಾನಾತ್ ತದಯೋಗಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಆಧಿಕಾರಿಕಾಧಿಕರಣದಲ್ಲಿ ದೇವತೆಗಳ ಪದವಿಯು ವಿಷಯ. ಲೋಕದಲ್ಲಿ ರಾಜಾದಿಗಳ ಪದವಿಯನ್ನು, ಮಂತ್ರಿ ಮೊದಲಾದವರು ಪ್ರಯತ್ನದಿಂದ ಪಡೆಯುವುದು ಕಂಡಿದ್ದರಿಂದ ಸಂದೇಹ ಬರುತ್ತದೆ- ದೇವತೆಗಳ ಪದವಿಯು ದೇವತೆಗಳಿಗಿಂತ ಇತರರು ಹೊಂದಲು ಸಾಧ್ಯವಾಗುವುದೋ? ಇಲ್ಲವೋ? ಎಂದು.

**ಪೂರ್ವಪಕ್ಷ—** ಜ್ಞಾನ ಮತ್ತು ದೇವತೆಗಳ ಪದವಿಯು ಅಧಿಕಾರಿಗಳಿಗೇ ಲಭ್ಯವಾಗಬೇಕು ಎಂಬ ನಿಯಮವೇನೂ ಇಲ್ಲ. ಜೀವರ ಸ್ವಭಾವವು ಭಿನ್ನಭಿನ್ನವಾಗಿರುತ್ತದೆ. ಆಯಾ ಜೀವರು ತಮ್ಮ ತಮ್ಮ ಸ್ವಭಾವಕ್ಕನುಗುಣವಾಗಿ ಜ್ಞಾನ ಮೋಕ್ಷಗಳನ್ನು ಪಡೆಯುತ್ತಾರೆ ಎನ್ನುವುದು ಸರಿಯಲ್ಲ. ಎಲ್ಲ ಜೀವರ ಸ್ವಭಾವವು ಒಂದೇ ವಿಧವಾಗಿರುತ್ತದೆ. ಪ್ರಯತ್ನಶೀಲರಿಗೆ ಜ್ಞಾನ ಮೋಕ್ಷಗಳು,

ದೇವತಾಪದವಿಗಳು ದೊರೆಯುತ್ತವೆ. ವೇದಾನಧಿಕಾರಿಗಳೂ ಪ್ರಯತ್ನಪೂರ್ವಕವಾಗಿ ವೇದಾಧ್ಯಯನ ಮಾಡಿದ್ದು ಕಂಡಿದೆ. ವಿಶ್ವಾಮಿತ್ರನು ಮಹಾಪ್ರಯತ್ನದಿಂದ ಬ್ರಾಹ್ಮಣತ್ವವನ್ನು ಪಡೆದಿದ್ದಾನೆ. 'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಮ್' (ತನ್ನ ಧರ್ಮದಲ್ಲಿ ಆಸಕ್ತನಾದ ಪುರುಷನು ನೂರುಜನ್ಮಗಳಲ್ಲಿ ಆದರೂ ಬ್ರಹ್ಮಪದವಿಯನ್ನು ಪಡೆಯುತ್ತಾನೆ. ಅನಂತರ ಲಕ್ಷ್ಮಿಯನ್ನು, ವಿಷ್ಣುಪದವಿಯನ್ನು ಹೊಂದುತ್ತಾನೆ.) ಮುಂತಾದ ಪ್ರಮಾಣ ಗಳಿಂದ ದೇವತಾ ಪದವಿಯು ಪ್ರಯತ್ನಸಾಧ್ಯವೆಂದು ತಿಳಿಯುತ್ತದೆ. ಆದ್ದರಿಂದ ಅಧಿಕಾರಿಗಳಿಗೆ ಮಾತ್ರ ಜ್ಞಾನಪದವಿಗಳು ಲಭಿಸುತ್ತವೆ ಎಂಬುದು ಸರಿಯಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ನಿಜಸ್ವಭಾವ' (ಜೀವರ ಸ್ವಭಾವ= ಚೇತನತ್ವ) ಎಂಬುದು. ಇದನ್ನು ಮತ್ತು 'ನಿಷೇಧ ಸಾಮಾನ್ಯ ವಿಧಿಕ್ರಿಯಾಣಾಂ ವಿಭಕ್ತತಾ' (ನಿಷೇಧವಿಭಾಗ, ಸಾಮಾನ್ಯವಿಭಾಗ, ವಿಧಿವಿಭಾಗ, ಕ್ರಿಯಾವಿಭಾಗ ಗಳು ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಸರ್ವಜೀವಾನಾಮೇಕಪ್ರಕಾರ ಏವ ನಿಜಸ್ವಭಾವಶ್ಚೈತನ್ಯಮಿತಿ ಫಲೇಽಪ್ಯವಿಶೇಷಃ । ನಿಷೇಧಸಾಮಾನ್ಯವಿಧಿಕ್ರಿಯಾಣಾಂ ವಿಭಕ್ತತ್ವಾತ್ ।**

''ನಾದೇವೋ ದೇವಪದಮನ್ವಿಚ್ಛೇದನ್ವಿಚ್ಛನ್ ಯಾತ್ಯಧರಂ ತಮಃ । ನ ದೇವಃ ಸ್ವೀಯಂ ಪದಮನ್ವಿಚ್ಛನ್ ವಿದುಷ್ಯತಿ । ತದೇವ ಹ್ಯಸ್ಯ ಸ್ವಮ್'' ಇತಿ ನಿಷೇಧವಿಭಾಗಃ ।

''ಸ್ಥಿರಂ ಜ್ಞಾನಂ ಸ್ಥಿರೋ ಹರಾವಭಿಷಂಗಃ ಸ್ಥಿರಮೋಜೋ ಬಲಂ ಧಿರಾಗ ಏತದ್ಧಿ ಸಾಮಾನ್ಯಂ ದೇವಾನಾಮ್। ಅಥಾನ್ಯೇಷಾಮ-ಸ್ಥಿರಾಣ್ಯೇತಾನಿ ಸರ್ವಾಣ್ಯಥಾಪಿ ಯಥಾಯೋಗಂ ವಿನೇಯಾನಿ'' ಇತಿ ಸಾಮಾನ್ಯವಿಭಾಗಃ ।

'ಜ್ಞಾನದಾನಮೇವ ದೇವಾನಾಂ ವಿಹಿತಂ ತಪ ಏವರ್ಷೀಣಾಮಾಚಾರ

ಏವ ಮನುಷ್ಯಾಣಾಂ ತದವಿರೋಧೇನಾನ್ಯಾನಿ ಕರಣೀಯಾನಿ'' ಇತಿ ವಿಧಿವಿಭಾಗಃ ।

ಚರಂತಿ ದೇವಾ ವಿಹಿತಂ ಸಮಸ್ತಮರ್ಧಮೇವ ಮುನಯೋ ದಶಾಂಶತೋ ಮನುಷ್ಯಾಃ ।'

ಇತಿ ಕ್ರಿಯಾವಿಭಾಗಃ ॥ ೬ ॥

**ಭಾವಾರ್ಥ**—ಎಲ್ಲ ಜೀವರ ನಿಜಸ್ವಭಾವವಾದ ಚೇತನತ್ವವು ಒಂದೇ ವಿಧ ವಾಗಿರುವುದರಿಂದ ಫಲದಲ್ಲಿ (ಜ್ಞಾನ, ಪದವಿಗಳಲ್ಲಿ) ಯಾವುದೇ ವಿಶೇಷವಿಲ್ಲ. (ಅಧಿಕಾರಿಗಳಿಗೆ ಮಾತ್ರ ಲಭ್ಯವಾಗುತ್ತದೆ ಎಂಬ ವಿಶೇಷವಿಲ್ಲ) ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, ನಿಷೇಧವಿಭಾಗ, ಸಾಮಾನ್ಯವಿಭಾಗ, ವಿಧಿ ವಿಭಾಗ, ಕ್ರಿಯಾವಿಭಾಗಗಳು ಇರುವುದರಿಂದ. 'ದೇವತೆಯಲ್ಲದವನು ದೇವತಾ ಪದವಿಯನ್ನು ಅಪೇಕ್ಷಿಪಟ್ಟರೆ ಅಂಧಂತಮಸ್ಸನ್ನು ಹೊಂದುತ್ತಾನೆ. ದೇವತೆಯು ದೇವತಾಪದವಿಯನ್ನು ಇಚ್ಛಿಸಿದರೆ ದೋಷವಿಲ್ಲ. ಏಕೆಂದರೆ ದೇವತಾಪದವಿಯು ಅವನಿಗೆ ಸ್ವಾಭಾವಿಕ' ಎಂದು ನಿಷೇಧವಿಭಾಗವಿದೆ. 'ದೇವತೆಗಳ ಜ್ಞಾನವು ಸ್ಥಿರ. ಶ್ರೀಹರಿಯಲ್ಲಿ ಆಸಕ್ತಿಯು ಸ್ಥಿರ, ಕಾಂತಿ, ಬಲಗಳು ಸ್ಥಿರ, ವೈರಾಗ್ಯವೂ ಸ್ಥಿರ. ಇದು ದೇವತೆಗಳಿಗೆ ಸಾಮಾನ್ಯ. ದೇವತೆಗಳಿಗಿಂತ ಇತರರಿಗೆ ಇವುಗಳು ಬೇರೆ ರೀತಿಯೇ ಆಗಿವೆ. ಅಂದರೆ ಅಸ್ಥಿರಗಳೇ ಆಗಿವೆ. ಹಾಗಿದ್ದರೂ ಯೋಗ್ಯತಾನುಸಾರ ಹೊಂದಲ್ಪಡುವವುಗಳಾಗಿವೆ.'' (ವಿನೇಯಾನಿ=ಆಪಾದ್ಯಾನಿ) ಎಂಬುದಾಗಿ ಸಾಮಾನ್ಯವಿಭಾಗವಿದೆ. 'ದೇವತೆಗಳಿಗೆ ಜ್ಞಾನೋಪದೇಶವೇ ವಿಹಿತವಾಗಿದೆ. ತಪಸ್ಸೇ ಋಷಿಗಳಿಗೆ, ಆಚರಣೆಯೇ ಮನುಷ್ಯರಿಗೆ ವಿಹಿತವಾಗಿವೆ. ಇವುಗಳಿಗೆ ವಿರೋಧ ಬಾರದಂತೆ ಉಳಿದವುಗಳೂ ಮಾಡಲ್ಪಡಬೇಕು' ಎಂದು ವಿಧಿವಿಭಾಗವಿದೆ. 'ವಿಹಿತವಾದ ಕರ್ಮವನ್ನು ದೇವತೆಗಳೇ ಪೂರ್ಣಮಾಡುತ್ತಾರೆ. ಋಷಿಗಳು ಅದರ ಅರ್ಧವನ್ನು, ಮನುಷ್ಯರು ಹತ್ತರ ಒಂದಂಶವನ್ನು ಮಾಡುತ್ತಾರೆ' ಎಂದು ಕ್ರಿಯಾವಿಭಾಗವೂ ಉಕ್ತವಾಗಿದೆ.

ವಿವರಣೆ— ನಿಷೇಧವಿಭಾಗ, ಸಾಮಾನ್ಯ ವಿಭಾಗ, ವಿಧಿವಿಭಾಗ, ಕ್ರಿಯಾ ವಿಭಾಗಗಳು ಇರುವುದರಿಂದ ಅಪರೋಕ್ಷಜ್ಞಾನ ಮತ್ತುದೇವತೆಗಳ ಪದವಿಗಳನ್ನು

ಅಧಿಕಾರಿಗಳು ಮಾತ್ರ ಹೊಂದುತ್ತಾರೆ ಎಂಬ ನಿಯಮವು ಸಿದ್ಧವಾಗುತ್ತದೆ. ಜ್ಞಾನ ಮತ್ತು ಪದವಿಗಳನ್ನು ಪಡೆಯಲು ಪ್ರಯೋಜಕವಾದದ್ದು ಚೈತನ್ಯವಲ್ಲ. ದೇವತ್ವ ಋಷಿತ್ವ ಮನುಷ್ಯತ್ವ ಮುಂತಾದ ಸ್ವಾಭಾವಿಕ ಧರ್ಮಗಳೇ. ಪ್ರಯತ್ನಪೂರ್ವಕವಾಗಿ ಸಾಧನೆ ಮಾಡಿದರೆ ವಿಶ್ವಾಮಿತ್ರನು ವೇದಾಧ್ಯಯನವನ್ನು ಬ್ರಾಹ್ಮಣ್ಯವನ್ನೂ ಪಡೆದಿರುವಂತೆ ಸ್ವಾಭಾವಿಕ ಧರ್ಮವನ್ನೂ ಹತ್ತಿಕ್ಕಬಹುದು ಎಂದು ಹೇಳುವುದು ಸರಿಯಲ್ಲ. 'ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾ-ಸುರೀಮೇವ ಚಾಸುರಾ ನೈತಯೋರಭಿಭವಃ ಕದಾಚಿತ್ ಸ್ವಭಾವ ಏವ ಹ್ಯವತಿಷ್ಠತೇ' (ದೇವತೆಗಳು ದೈವೀಸಂಪತ್ತನ್ನೇ ಹೊಂದುತ್ತಾರೆ. ಅಸುರರು ಅಸುರೀ ಸಂಪತ್ತನ್ನೇ ಹೊಂದುವರು. ಈ ಸ್ವಭಾವಗಳನ್ನು ಹತ್ತಿಕ್ಕಲು ಸಾಧ್ಯವಿಲ್ಲ. ಸ್ವಭಾವವು ಸ್ವಾಭಾವಿಕವಾಗಿಯೇ ಉಳಿಯುತ್ತದೆ) ಎಂಬ ಶ್ರುತಿಯ ವಿರೋಧವು ಬರುತ್ತದೆ.

ಅಯೋಗ್ಯರು ಪ್ರಯತ್ನವನ್ನು ಮಾಡಿದರೂ ಅದರಿಂದ ಅನರ್ಥವೇ ಪ್ರಾಪ್ತವಾಗುತ್ತದೆ ಎಂಬುದಕ್ಕೆ ವಿರೋಚನನು ಸಾಕ್ಷಿ. ಮೂವತ್ತೆರಡುಸಾವಿರ ವರ್ಷಗಳ ಕಾಲ ಶುಶ್ರೂಷೆಯನ್ನು ಮಾಡಿದ ಇಂದ್ರ, ವಿರೋಚನರಿಗೆ ಬ್ರಹ್ಮದೇವರು ಒಟ್ಟಿಗೇ ಉಪದೇಶಿಸಿದರು. 'ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮಾಽಪಹತಪಾಪ್ಮಾ' ಎಂದು. ಇದರಿಂದ ಇಂದ್ರನು 'ಕಣ್ಣಿನಲ್ಲಿರುವ ಪಾಪರಹಿತನಾದ ಶ್ರೀಹರಿಯೇ ಆತ್ಮ'ನೆಂದು ತಿಳಿದ. ಆದರೆ ವಿರೋಚನನು 'ಮತ್ತೊಬ್ಬರ ಕಣ್ಣಿನಲ್ಲಿರುವ ಪ್ರತಿಬಿಂಬವು ಆತ್ಮವಾದರೆ ಬಿಂಬ-ಪ್ರತಿಬಿಂಬಗಳಿಗೆ ಐಕ್ಯವಿರುವುದರಿಂದ ಬಿಂಬನಾದ ತಾನೂ ಬ್ರಹ್ಮ'ನೆಂದು ತಿಳಿದ. ಹೀಗೆ ವಿಪರೀತಜ್ಞಾನವನ್ನು ಪಡೆದ. ಎಲ್ಲ ವಿಧವಾದ ಪ್ರಯತ್ನಮಾಡಿದರೂ ಜ್ಞಾನಯೋಗ್ಯರೇ ಜ್ಞಾನವನ್ನು ಪಡೆಯುತ್ತಾರೆ. ವಿಶ್ವಾಮಿತ್ರರಿಗೆ ಕ್ಷತ್ರಿಯತ್ವವು ಸ್ವಾಭಾವಿಕವಲ್ಲ. ಆದ್ದರಿಂದಲೇ ಬ್ರಾಹ್ಮಣತ್ವವು ಪ್ರಾಪ್ತವಾಯಿತು.

'ನೂರು ಜನ್ಮಗಳ ಸಾಧನೆಯಿಂದ ಬ್ರಹ್ಮಪದವಿಯನ್ನಾದರೂ ಸಾಧಕನು ಪಡೆಯಬಹುದು' ಎಂಬ ಮಾತಿಗೆ ಏನರ್ಥ? ಎಂದರೆ, ಆ ಶ್ಲೋಕ ಪೂರ್ಣವಾಗಿ ಹೀಗೆ ಇದೆ–

'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ ತತಃ ಪರಂ ಹಿ ಮಾಮ್ ।

ಅವ್ಯಾಕೃತಂ ಭಾಗವತೋಽಥ ವೈಷ್ಣವಂ ಪದಂ ಯಥಾರ್ಹಂ ವಿಬುಧೈಃ ಕಲಾತ್ಮಯೇ ॥

ಬ್ರಹ್ಮ ಪದವಿಗೆ ಯೋಗ್ಯರಾದ ಋಜುಗಳು ನೂರುಜನ್ಮಗಳಲ್ಲಿ ಶ್ರೀಹರಿಯ ವಿಶೇಷೋಪಾಸನೆಯನ್ನು ಮಾಡಿ, ಬ್ರಹ್ಮಪದವಿಯನ್ನು ಪಡೆಯುತ್ತಾರೆ. ಅನಂತರ ಲಕ್ಷ್ಮೀದೇವಿಯನ್ನು ಸಮೀಪಿಸಿ ಅವಳ ಅನುಮತಿಯನ್ನು ಪಡೆದು ಶ್ರೀಹರಿಯ ಸಮೀಪದಲ್ಲಿ ವೈಕುಂಠಲೋಕದಲ್ಲಿ ವಾಸಮಾಡುತ್ತಾರೆ' ಎಂದು. ಎಲ್ಲರಿಗೂ ನೂರು ಜನ್ಮಗಳ ಸಾಧನೆಯಿಂದ ಬ್ರಹ್ಮಪದವಿಯನ್ನು ಹೇಳಿಲ್ಲ. ಬ್ರಹ್ಮಪದವಿಗೆ ಯೋಗ್ಯ ರಾದ ಋಜುಗಳಿಗೆ ಮಾತ್ರವೆಂದು ತಿಳಿಯಬೇಕು.

ಅಯೋಗ್ಯವಾದ ಸ್ಥಾನವನ್ನು ಬಯಸುವುದರಿಂದ ಅನರ್ಥವನ್ನು ಪಡೆಯು ತ್ತಾನೆ ಎಂದು 'ನ ದೇವಪದಮನ್ವಿಚ್ಛೇತ್ ಕುತ ಏವ ಹರೇರ್ಗುಣಾನ್ । ಇಚ್ಛನ್ ಪತತಿ ಪೂರ್ವಸ್ಮಾದಧಸ್ತಾದ್ ಯತ್ರ ನೋತ್ಥಿತಿಃ ॥' (ದೇವತೆಗಳ ಪದವಿಯನ್ನು ಬಯಸಬಾರದು. ಎಂದಮೇಲೆ ಶ್ರೀಹರಿಯ ಗುಣಗಳನ್ನು ಬಯಸಲೇಬಾರದು. ಒಂದೊಮ್ಮೆ ಬಯಸಿದಲ್ಲಿ ಮೊದಲಿರುವ ಸ್ಥಾನದಿಂದ ಕೆಳಗೆ ಬೀಳುತ್ತಾನೆ. ಅಲ್ಲಿ ಬಿದ್ದರೆ ಮೇಲೆ ಏಳುವಂತೆಯೇ ಇಲ್ಲ.) ಎಂಬ ವಾಕ್ಯವು ತಿಳಿಸುತ್ತಿದೆ.

ಅಪರೋಕ್ಷಜ್ಞಾನದ ವಿಷಯದಲ್ಲಿ ಉದಾಹರಿಸಿರುವ ನ್ಯಾಯವಿವರಣ ದಲ್ಲಿರುವ ಪ್ರಮಾಣವಾಕ್ಯಗಳು ಉಪಲಕ್ಷಣವಾಗಿವೆ. ಅವುಗಳೊಂದಿಗೆ, 'ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾಃ...', 'ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ...' ಮುಂತಾದ ನಿಷೇಧವಿಭಾಗವನ್ನು ತಿಳಿಸುವ ವಾಕ್ಯಗಳನ್ನು ಗ್ರಹಿಸಬೇಕು. ಅದರಂತೆ, 'ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್', 'ತತಃ ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ', 'ಅಸುರಾನ್ ದಮಯನ್ ವಿಷ್ಣುಃ...' 'ಅಸುರಾ ಅಸುರೇಣೈವ ಸ್ವಭಾವೇನ ಚ ಕರ್ಮಣಾ...' ಮೊದಲಾದ ಸಾಮಾನ್ಯವಿಭಾಗವನ್ನು ಪ್ರತಿಪಾದಿಸುವ ವಾಕ್ಯಗಳನ್ನು, 'ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ...' ಮುಂತಾದ ಕ್ರಿಯಾವಿಭಾಗವನ್ನು ತಿಳಿಸುವ ಭಾಷ್ಯೋದಾಹೃತವಾಕ್ಯಗಳನ್ನು ಪರಿಗ್ರಹಿಸಬೇಕು.

ಉಭಯಲಿಂಗಾಧಿಕರಣಕ್ಕೂ ಅಧಿಕಾರಿಕಾಧಿಕರಣಕ್ಕೂ ಪರಸ್ಪರ ಸಂಬಂಧವಿದೆ

ಎಂದು ತಿಳಿಸುವುದಕ್ಕಾಗಿಯೇ ಶ್ರೀಮದಾಚಾರ್ಯರು ಎರಡು ಅಧಿಕರಣಗಳಿಗೆ ಅನುಗತವಾದ ನ್ಯಾಯಗಳಿಂದ ವಿವರಣೆಯನ್ನು ಮಾಡಿದ್ದಾರೆ. ಈ ಎರಡೂ ಅಧಿಕರಣಗಳಲ್ಲಿ ನ್ಯಾಯ ಒಂದೇ ಇರುವುದರಿಂದ ಎರಡನೆಯ ಅಧಿಕಾರಿಕಾಧಿಕರಣದ ಆವಶ್ಯಕತೆಯಾದರೂ ಏನು? ಎಂದರೆ, ಉಭಯಲಿಂಗಾಧಿ ಕರಣದಲ್ಲಿ ಅಪರೋಕ್ಷಜ್ಞಾನವು ಯೋಗ್ಯರಿಗೆ ಲಭ್ಯವಾಗಿದೆ ಎಂಬುದನ್ನು ಮಾತ್ರ ಸಮರ್ಥಿಸಿದ್ದಾರೆ. ಇನ್ನು ಆಧಿಕಾರಿಕಾಧಿಕರಣದಲ್ಲಿಯಾದರೂ ಅಪರೋಕ್ಷಜ್ಞಾನದ ಬಗ್ಗೆಯೂ ಅಪೇಕ್ಷಿಸಿಕೊಂಡು 'ಸ್ವಧರ್ಮನಿಷ್ಠಃ...' ಮುಂತಾದ ವಾಕ್ಯದ ಬಲದಿಂದ ಪ್ರಯತ್ನ ಮಾಡಿದರೆ ದೇವಪದವಿಯನ್ನು ಪಡೆಯಬಹುದು ಎಂದು ಆಕ್ಷೇಪ ಬಂದಾಗ ಉತ್ತರರೂಪವಾಗಿ ಅಧಿಕಾರಿಕಾಧಿಕರಣವು ಹೊರಟಿದೆ. ಈ ವಿಷಯದಲ್ಲಿ ತತ್ವಪ್ರಕಾಶಿಕೆಯ 'ಜ್ಞಾನಮಪ್ಯಯೋಗ್ಯಪ್ರಾಪ್ಯಫಲಮ್' ಎಂಬ ವಾಕ್ಯವು ಆಧಾರ ವಾಗಿದೆ. ಆದ್ದರಿಂದ ಎರಡನೆ ಅಧಿಕರಣ ವ್ಯರ್ಥವೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಅಂತೂ ಅಪರೋಕ್ಷಜ್ಞಾನ, ದೇವತಾಪದವಿಗಳು ಅಧಿಕಾರಿಗಳಿಗೆ ಮಾತ್ರ ಪಡೆಯಲು ಯೋಗ್ಯವಾಗಿವೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಸರ್ವಥಾಽಪಿ ತು ತ ಏವೋಭಯಂಲಿಂಗಾತ್ ಓಂ

ಸರ್ವಥಾ ಅಪಿ=ದೇಶ, ಕಾಲ, ಗುರುಸೇವೆ, ಶ್ರವಣ ಇವೇ ಮೊದಲಾದ ಸಾಧನಗಳಿದ್ದರೂ ತ ಏವ=ಜ್ಞಾನಯೋಗ್ಯರೇ ಜ್ಞಾನವನ್ನು ಹೊಂದುವರು. ತು= ಅಯೋಗ್ಯರು ವಿಪರೀತ ಜ್ಞಾನವನ್ನೇ ಹೊಂದುವರು. ಏಕೆಂದರೆ ಉಭಯ ಲಿಂಗಾತ್=ಇಂದ್ರ, ವಿರೋಚನರ ಉದಾಹರಣೆಯಲ್ಲಿ ಯೋಗ್ಯರಿಗೆ ಜ್ಞಾನಪ್ರಾಪ್ತಿ, ಅಯೋಗ್ಯರಿಗೆ ಜ್ಞಾನಪ್ರಾಪ್ತಿಯಾಗದಿರುವುದು ಈ ಎರಡು ವಿಷಯಗಳಲ್ಲಿಯೂ ಜ್ಞಾಪಕಗಳು ಕಂಡಿರುವುದರಿಂದ.

### ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ ತದಯೋಗಾತ್ ಓಂ

ಆಧಿಕಾರಿಕಮಪಿ=ಬ್ರಹ್ಮಾದಿದೇವತೆಗಳ ಪದವಿಯೂ ಕೂಡ ನಚ= ಬ್ರಹ್ಮ ಜ್ಞಾನಿಗಳಿಂದ ಅಪೇಕ್ಷಿಸಲ್ಪಡತಕ್ಕದ್ದಲ್ಲ. ಏಕೆಂದರೆ ತದಯೋಗಾತ್= ಅಪೇಕ್ಷೆಯೇ

ಯೋಗ್ಯವಲ್ಲದ್ದರಿಂದ ಏಕೆಂದರೆ, ಪತನಾನುಮಾನಾತ್=ತನಗೆ ಅಸಾಧ್ಯವಾದದ್ದನ್ನು ಮಾಡಲು ಪ್ರಯತ್ನಿಸುವವನು ವಿಫಲನಾಗುವುದು ಯುಕ್ತಿಸಿದ್ಧವಾದ್ದರಿಂದ.

## ಫಲಶ್ರುತ್ಯಧಿಕರಣ (4-3-7)

ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಜ್ಞಾನವು ವಿಷಯ. ಲೋಕದಲ್ಲಿ ಒಂದು ಕಾರ್ಯವಾಗುವಾಗ ಪ್ರೇರಣೆ ಕೊಡುವವರಿಗೂ ಫಲ ಬಂದಿರುವುದು ಕಂಡಿದೆ. ಕರ್ತೃಗಳಿಗೂ ಫಲಬಂದಿರುವುದು ಕಂಡಿದೆ. ಇದರಿಂದ ಸಂಶಯ ಬರುತ್ತದೆ- ಜ್ಞಾನವು ಪ್ರೇರಕರಾದ ದೇವತೆಗಳಿಗೆ ಮಾತ್ರ ಫಲವನ್ನು ಕೊಡುವುದೋ? ಅಥವಾ ಕರ್ತೃಗಳಾದ ಜನರಿಗೂ ಫಲವನ್ನು ಕೊಡುವುದೋ? ಎಂದು.

**ಪೂರ್ವಪಕ್ಷ—** 'ಬ್ರಹ್ಮವಿದಾಪ್ನೋತಿ ಪರಮ್' ಎಂಬ ಶ್ರುತಿಯಲ್ಲಿ ಜ್ಞಾನದ ಫಲವಾಗಿ ಹೇಳಲ್ಪಟ್ಟ ಪರಬ್ರಹ್ಮಪ್ರಾಪ್ತಿ ಎಂಬುದು ದೇವತೆಗಳಿಗೇ ಹೊರತು ಕರ್ತೃಗಳಾದ ಜನರಿಗಲ್ಲ. ಏಕೆಂದರೆ ದೇವಗಳೇ ಇಂದ್ರಿಯಪ್ರೇರಕರಾಗಿ ಜ್ಞಾನಕ್ಕೆ ಸ್ವಾಮಿಗಳಾಗಿದ್ದಾರೆ. ಲೋಕದಲ್ಲಿಯೂ ಪ್ರೇರಕನಾದ ಯಜಮಾನನಿಗೇ ಫಲ ಹೊರತು ಕೆಲಸ ಮಾಡುವ ಭೃತ್ಯನಿಗಲ್ಲ. ಭೃತ್ಯನಿಗೆ ವೇತನವೆಂಬ ಫಲವಿರುವಂತೆ ಕರ್ತೃಗಳಿಗೂ ಅನ್ನ, ವಸ್ತ್ರ, ಆಯುಷ್ಯ ಮೊದಲಾದ ಅವಾಂತರ ಫಲಗಳೇ ಲಭಿಸುವುವು. ಪ್ರಧಾನಫಲವಾದ ಮೋಕ್ಷವು ಮಾತ್ರ ದೇವತೆಗಳಿಗೇ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸ್ವಾತಂತ್ರ್ಯ' (ಸ್ವಾಮಿತ್ವ) ಎಂಬುದು. ಇದನ್ನು ಮತ್ತು 'ಅತ್ವರಯೈವ ಸಿದ್ಧಿಃ' (ವಿಲಂಬದಿಂದ ಸಿದ್ಧಿ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ-

**ಸ್ವಾತಂತ್ರ್ಯಾದ್ ದೇವಾನಾಮೇವ ಜ್ಞಾನಾದಿಫಲಮ್, ನ ಕಿಂಚಿದನ್ಯೇಷಾಮಿತಿ ವಾಚ್ಯಮ್ ।**

**'ತ್ವರಯೈವ ಮನುಷ್ಯಾಣಾಂ ಸಿದ್ಧಿರತ್ವರಯೈವ ತು ।**
**ದೇವಾನಾಂ ತತ್ಪ್ರಸಾದೇನ ಮುಕ್ತ್ಯಾ ಏವ ಸತಾಂ ನೃಣಾಮ್ ॥'**

## ಇತಿ ಮಾನುಷಮುಖ್ಯಾರ್ಥಮೇವ ದೇವಾನಾಮುತ್ತರಯಾ ಸಿದ್ಧಿಶ್ರುತೇಃ

॥ ೭ ॥

**ಭಾವಾರ್ಥ**—ದೇವತೆಗಳಿಗೇ (ಇಂದ್ರಿಯಪ್ರೇರಕರಾದ್ದರಿಂದ) ಸ್ವಾಮಿತ್ವ ವಿರುವುದರಿಂದ ಅವರಿಗೇ ಜ್ಞಾನಾದಿಗಳ ಫಲವು ಲಭಿಸುವುದು ಕರ್ತೃಗಳಾದ ಜನರಿಗಲ್ಲ ಎಂದು ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಮನುಷ್ಯರಿಗೆ ಶೀಘ್ರವಾಗಿ ಜ್ಞಾನದ ಫಲವು ಲಭಿಸುತ್ತದೆ. ಸಜ್ಜನರಾದ ಮನುಷ್ಯರಿಗೆ ದೇವತೆಗಳ ಅನುಗ್ರಹ ದಿಂದಲೇ ಮುಕ್ತಿಯಾಗುವುದರಿಂದ ದೇವತೆಗಳಿಗೆ ವಿಳಂಬವಾಗಿ ಜ್ಞಾನದ ಫಲವು ಲಭಿಸುವುದು' ಎಂದು ಮನುಷ್ಯರ ಮೋಕ್ಷಕ್ಕಾಗಿಯೇ ದೇವತೆಗಳಿಗೆ ವಿಳಂಬವಾಗಿ ಮುಕ್ತಿಯು ಶ್ರುತವಾಗಿರುವುದರಿಂದ.

**ವಿವರಣೆ**— ದೇವತೆಗಳಿಗೆ ಮನುಷ್ಯರಿಗಿಂತ ವಿಲಂಬವಾಗಿ ಮುಕ್ತಿಯು ಸಿಗುತ್ತದೆ. ಮನುಷ್ಯರಿಗೆ ಜ್ಞಾನಾದಿಗಳು ಉಂಟಾಗಿ ಆದರಿಂದ ಮುಕ್ತಿಯಾಗಬೇಕು ಎಂಬ ಉದ್ದೇಶದಿಂದಲೇ ದೇವತೆಗಳು ನಿಧಾನವಾಗಿ ಪ್ರಾರಬ್ಧವನ್ನು ಭೋಗಿಸುತ್ತಾ ಜೀವರ ದೇಹೇಂದ್ರಿಯಾದಿಗಳನ್ನು ಪ್ರೇರೇಪಿಸು ತ್ತಾರೆ. ಆದ್ದರಿಂದಲೇ ಅವರಿಗೆ ವಿಲಂಬವಾಗಿ ಮುಕ್ತಿ. ಜೀವರಿಗೆ ಮುಕ್ತಿರೂಪ ಫಲವೇ ಇಲ್ಲವೆಂದಾದಲ್ಲಿ ದೇವತೆಗಳು ಶೀಘ್ರವಾಗಿಯೇ ಮುಕ್ತಿಯನ್ನು ಪಡೆಯು ತ್ತಿದ್ದರು. ವಿಲಂಬವನ್ನು ಏಕೆ ಮಾಡುತ್ತಿದ್ದರು? ಆದ್ದರಿಂದ ಜೀವರಿಗೆ ಮುಕ್ತಿಯಿದೆ ಎಂದು ಸಿದ್ಧವಾಗುತ್ತದೆ. ಅಲ್ಪಾಧಿಕಾರಿಗಳಾದ ಮನುಷ್ಯರಿಗೆ ಬ್ರಹ್ಮದೇವರ ಚರಮದಿನದ ಕೊನೆಯಲ್ಲಿ ಅಪರೋಕ್ಷವಾಗಿ ಆ ಜನ್ಮದಲ್ಲಿಯೇ ದೇಹಪಾತಾ ನಂತರದಲ್ಲಿ ಮುಕ್ತಿಯಾಗುತ್ತದೆ. ಅಲ್ಲಿಯವರಿಗೂ ದೇವತೆಗಳು ಜೀವರ ಪ್ರೇರಣೆಗಾಗಿ ಇರುತ್ತಾರೆ. ಆದ್ದರಿಂದ ಕರ್ತೃಗಳಾದ ಜೀವರಿಗೂ ಫಲವಿದೆ ಎಂದು ಸಿದ್ಧಾಂತ.

**ಸೂತ್ರಾರ್ಥ**—

## ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ

ಸ್ವಾಮಿನಃ=ದೇವತೆಗಳಿಗೇ ಜ್ಞಾನದ ಫಲವು ಏಕೆಂದರೆ ಫಲಶ್ರುತೇಃ= 'ಸ್ವಾಮೀ ಹಿ ಫಲಮಶ್ನುತೇ' ಎಂಬ ಶ್ರುತಿಯಲ್ಲಿ ದೇವತೆಗಳಿಗೇ ಫಲವು ಶ್ರುತವಾಗಿರುವುದರಿಂದ ಇತಿ=ಎಂದು ಆತ್ರೇಯಃ=ಆತ್ರೇಯಾಚಾರ್ಯರು

ಅಭಿಪ್ರಾಯ ಪಡುತ್ತಾರೆ. ಹೀಗೆ ಆತ್ರೇಯಾಚಾರ್ಯರ ಮತವನ್ನು ತಿಳಿಸಿ ಈ ಅಧಿಕರಣದ ಮೂರನೇ ಸೂತ್ರದಲ್ಲಿ ಜೀವರಿಗೂ ದೇವತೆಗಳಿಬ್ಬರಿಗೂ ಫಲವಿದೆ ಎಂದು ಬಾದಾರಾಯಣರ ಮತವನ್ನು ತಿಳಿಸಿದ್ದಾರೆ. ಆದ್ದರಿಂದ 'ಸ್ವಾಮೀ ಹಿ ಫಲಮಶ್ನುತೇ' ಎಂಬ ಶ್ರುತಿಗೆ ಪೂರ್ಣಫಲ ದೇವತೆಗಳಿಗೇನೇ ಹೊರತು ಜೀವರಿಗಲ್ಲ ಎಂದು ಅಭಿಪ್ರಾಯ.

## ಕೃತ್ಸ್ನಭಾವಾಧಿಕರಣ (3-4-8)

ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದ ವಿಷಯ ವಿಭಿನ್ನಾಶ್ರಮಿಗಳಾದ ಮನುಷ್ಯರು. ಲೋಕದಲ್ಲಿ ಕೆಲವರು ಸಮಾನರು ಕೆಲವರು ತಾರತಮ್ಯವುಳ್ಳವರನ್ನು ಕಂಡಿರುವುದರಿಂದ ಸಂಶಯ ಬರುತ್ತದೆ— ಮೋಕ್ಷದಲ್ಲಿ ಎಲ್ಲರೂ ಸಮಾನರೋ? ಅಥವಾ ತಾರತಮ್ಯವಿದೆಯೋ? ಎಂದು.

**ಪೂರ್ವಪಕ್ಷ—** ಎಲ್ಲ ಆಶ್ರಮಿಗಳ ಪೈಕಿ ಗೃಹಸ್ಥನಿಗೇ ಆಧಿಕ್ಯವಿದೆ. ಯಾಗಾದಿ ಸಕಲ ಸತ್ಕರ್ಮಗಳಲ್ಲಿ ಗೃಹಸ್ಥನಿಗೇ ಅಧಿಕಾರವಿದೆ. ಉಳಿದ ಯತಿ, ಬ್ರಹ್ಮಚಾರಿ ಗಳಿಗೆ ಅಧಿಕಾರವಿಲ್ಲ. ಆದ್ದರಿಂದಲೇ ಛಾಂದೋಗ್ಯದಲ್ಲಿ 'ಕುಡುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧತ್... ನ ಚ ಪುನರಾವರ್ತತೇ ನ ಚ ಪುನರಾವರ್ತತೇ' (ಗುರುಕುಲ ಅಧ್ಯಯನವನ್ನು ಮುಗಿಸಿ ಗೃಹಸ್ಥನಾಗಿ ಸತ್ಕರ್ಮವನ್ನು ಆಚರಿಸುವನು ಮೋಕ್ಷವನ್ನು ಪಡೆಯುತ್ತಾನೆ.) ಎಂದು ಉಪಸಂಹಾರವನ್ನು ಮಾಡಿದ್ದಾರೆ. ಆದ್ದರಿಂದ ಕರ್ಮಮಾಡುವ ಗೃಹಸ್ಥರಿಗೇ ಶ್ರೇಷ್ಠತ್ವವಿರುವುದರಿಂದ ಜ್ಞಾನವು ಶ್ರೇಷ್ಠವೆನ್ನುವುದು ಸರಿಯಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅಪೂರ್ಣವಿಶೇಷಯೋಗ್ಯತಾ' (ಸಕಲಕರ್ಮ ವಿಶೇಷಗಳಲ್ಲಿ ಯೋಗ್ಯತೆ) ಎಂಬುದು. ಇದನ್ನು ಮತ್ತು 'ಅತ್ವರಮೈಪಸಿದ್ಧಿ' (ವಿಲಂಬವಾಗಿ ಮೋಕ್ಷವಾಗುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

ನ ಚ ಗೃಹಸ್ಥಾನಾಮಶೇಷಕರ್ಮವಿಶೇಷಯೋಗ್ಯತ್ವಾದಾಧಿಕ್ಯಂ ಮುಕ್ತೌ । ತ್ವರಯೈವ ಗೃಹಿಣಃ ಸಾಧಯಂತಿ ಮುಕ್ತಿಮತ್ವರಯೈವ ಯತಯಸ್ತೇಭ್ಯಸ್ತಾತ್ವರಯಾ ದೇವಾಸ್ತೇಷು ಚ ಬ್ರಹ್ಮಾ । ತದೇಷ ಶ್ಲೋಕಃ ।

'ಶತಂ ಪರಾನಭಿಪಶ್ಯೈವ ದೇವಂ ಬ್ರಹ್ಮಾಽಚರದ್ ದುಶ್ಚರಂ ಯತ್ತಪೋಽಗ್ರ್ಯಮ್ ।

ವಿಹಾಯ ರಾಗಂ ಮನಸಶ್ಚೋಪರಿಷ್ಠಂ ತತೋಽಭವತ್ ಪರಮೇಷ್ಠೀ ಸ ಮುಕ್ತೌ ॥' ಇತಿ ।

'ಯೋ ಹಿ ತ್ವರಯಾ ಸಾಧಯೇತ್ ಸ ಮಂದಂ ಸುಖಮಾಪ್ನುಯಾತ್ ।

ಯೋ ಹ್ಯತ್ವರಯಾ ಸ ಮಹತ್ ॥'

ಇತಿ ಶ್ರುತೇರ್ಗೃಹಿಭ್ಯೋ ಯತೀನಾಂ ತೇಭ್ಯೋ ದೇವಾನಾಮತ್ವರಯಾ ಸಿದ್ಧೇಃ । ಬಹುಕಾಲಸಾಧನಾದ್ ಬಹುಕರ್ಮಾಧಿಕಾರಮಾತ್ರಸ್ಯ ದುರ್ಬಲತ್ವಾತ್ ॥ ೮ ॥

**ಭಾವಾರ್ಥ**—ಗೃಹಸ್ಥರಿಗೇ ಸಕಲ ಕರ್ಮವಿಶೇಷಗಳಲ್ಲಿ ಅಧಿಕಾರವಿರುವುದರಿಂದ ಮೋಕ್ಷದಲ್ಲಿ ಉತ್ತಮತ್ವವು ಪ್ರಾಪ್ತವಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ, ಗೃಹಸ್ಥರು ಶೀಘ್ರದಲ್ಲಿ ಮುಕ್ತಿಯನ್ನು ಪಡೆಯುತ್ತಾರೆ. ಅವರಿಗಿಂತ ವಿಲಂಬವಾಗಿ ಯತಿಗಳು, ಅವರಿಗಿಂತ ವಿಲಂಬವಾಗಿ ದೇವತೆಗಳು ಮುಕ್ತಿಯನ್ನು ಹೊಂದುವರು. ಅವರಿಗಿಂತ ವಿಲಂಬವಾಗಿ ಚತುರ್ಮುಖನು ಮುಕ್ತಿಯನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಪ್ರಶಂಸಾವಾಕ್ಯವು ಹೀಗಿದೆ– 'ಚತುರ್ಮುಖನು ಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಂಡೇ ನೂರು ಬ್ರಹ್ಮಕಲ್ಪಗಳ ವರೆಗೆ ಮನಸ್ಸಿನ ವಿಷಯಾಭಿಲಾಷೆಗಳನ್ನು ತೆರೆದು ವಿಘ್ನಗಳನ್ನು ಕಳೆದುಕೊಂಡು ಯಾವ ಕಾರಣದಿಂದ ಇತರರಿಂದ ಮಾಡಲು ಅಸಾಧ್ಯವಾದ ತಪಸ್ಸನ್ನು ಮಾಡಿರುವನೋ ಆದ್ದರಿಂದ ಅವನು ಮುಕ್ತಿಯಲ್ಲಿ ಪರಮೇಷ್ಠೀ (ಸಾಯುಜ್ಯವೇ ಮೊದಲಾದ ಅತಿಶಯವಾದ ಫಲವುಳ್ಳವನು) ಆಗಿದ್ದಾನೆ. 'ಯಾವನು ಶೀಘ್ರವಾಗಿ ಮುಕ್ತಿಯನ್ನು ಹೊಂದುವನೋ ಅವನು ಕಡಿಮೆ ಸುಖವನ್ನು ಪಡೆಯುವನು. ಯಾವಾತನು

ವಿಲಂಬವಾಗಿ ಮುಕ್ತಿಯನ್ನು ಹೊಂದುವವನೋ ಅವನು ಬಹಳ ಸುಖವನ್ನು ಅನುಭವಿಸುವನು' ಎಂದು ಶ್ರುತಿಯಿರುವುದರಿಂದ ಗೃಹಸ್ಥರಿಗಿಂತ ಯತಿಗಳಿಗೆ, ಯತಿಗಳಿಗಿಂತ ದೇವತೆಗಳಿಗೆ ವಿಲಂಬವಾಗಿ ಮೋಕ್ಷವು ಲಭಿಸುತ್ತದೆ. ಯತಿಗಳ ಬಹುಕಾಲ ಮಾಡಿದ ತಪಸ್ಸಾಧನೆಗಿಂತ ಗೃಹಸ್ಥರ ಬಹುಕಾಲದ ಕರ್ಮಾಧಿಕಾರವು ದುರ್ಬಲವಾಗುತ್ತದೆ.

**ವಿವರಣೆ—** ಗೃಹಸ್ಥರಿಗಿಂತ ಯತಿಗಳಿಗೆ ವಿಲಂಬವಾಗಿ ಮೋಕ್ಷವಾಗುತ್ತದೆ. ಯಾರಿಗೆ ವಿಲಂಬವಾಗಿ ಮೋಕ್ಷವೋ ಅವರಿಗೆ ಅಧಿಕವಾದ ಆನಂದವಿರುವುದರಿಂದ ಗೃಹಸ್ಥರಿಗಿಂತ ಯತಿಗಳಿಗೇ ಮೋಕ್ಷದಲ್ಲಿ ಆಧಿಕ್ಯವು ಸಿದ್ಧವಾಗುತ್ತದೆ.

ಹಾಗಾದರೆ ಛಾಂದೋಗ್ಯದಲ್ಲಿ ಗೃಹಸ್ಥರಿಗೇ ಆಧಿಕ್ಯವನ್ನು ಹೇಳಿರುವುದು ಹೇಗೆ ಕೂಡುತ್ತದೆ? ಎಂದರೆ ಅಲ್ಲಿ ಹೇಳಿರುವುದು ಮಾನುಷಗೃಹಸ್ಥರನ್ನಲ್ಲ, ದೇವಗೃಹಸ್ಥರನ್ನು, ಅವರೇ ಪೂರ್ಣಗೃಹಸ್ಥರು. ಮಾನುಷಗೃಹಸ್ಥರಿಗೆ ಸಕಲ ಕರ್ಮಗಳಲ್ಲಿ ಅಧಿಕಾರವಿದ್ದರೂ ಅವೆಲ್ಲವನ್ನೂ ಮಾಡುವ ಸಾಮರ್ಥ್ಯವು ಅವರಿಗಿರುವುದಿಲ್ಲ, ದೇವತೆಗಳಾದರೂ 'ಚರಂತಿ ದೇವಾ ವಿಹಿತಂ ಸಮಸ್ತಮ್' ಎಂದು ಹೇಳಿದಂತೆ ಎಲ್ಲವನ್ನೂ ಮಾಡುವ ಅಧಿಕಾರ, ಶಕ್ತಿ ಎರಡೂ ಇದೆ. ಆದ್ದರಿಂದ ಮಾನುಷ ಗೃಹಸ್ಥರಿಗಿಂತ ಯತಿಗಳು ಅವರಿಗಿಂತ ದೇವತೆಗಳು, ಅವರಿಗಿಂತ ಚತುರ್ಮುಖನಿಗೆ ಮುಕ್ತಿಯಲ್ಲಿ ಆಧಿಕ್ಯವಿದೆ ಎಂದು ಒಪ್ಪಬೇಕು.

ಯತಿಗಳಿಗೆ ಬಹಳ ಕಾಲ ತಪಸ್ಸಾಧನೆಯಿದೆ. ಗೃಹಸ್ಥರಿಗೆ ಬಹುಕರ್ಮಸಿದ್ಧಿಯಿದೆ. ಹೀಗೆ ಇವರ ಸಾಧನೆ ಸಮಾನವಾಗಿರುವಾಗ ಯತಿಗಳಿಗೆ ಆಧಿಕ್ಯವು ಹೇಗೆ ಸಿದ್ಧವಾಗುತ್ತದೆ? ಎಂಬ ಆಕ್ಷೇಪಕ್ಕೆ ಉತ್ತರವನ್ನು ನ್ಯಾಯವಿವರಣೆಯಲ್ಲಿ ಹೇಳಿದ್ದು 'ಬಹುಕಾಲಸಾಧನಾದ್ ಬಹುಕರ್ಮಾಧಿಕಾರಮಾತ್ರಸ್ಯ ದುರ್ಬಲತ್ವಾತ್' ಎಂದು. ಗೃಹಸ್ಥರಿಗೆ ಬಹಳ ಕರ್ಮಗಳ ಅಧಿಕಾರವಿದೆ. ಆದರೆ ಅವುಗಳನ್ನು ಆಚರಿಸುವ ಶಕ್ತಿಯಿಲ್ಲ. ಯತಿಗಳು ಬಹಳಕಾಲದ ವರೆಗೆ ತಪಸ್ಸನ್ನು ಆಚರಿಸುತ್ತಾರೆ. ಇದು ಕೇವಲ ಕರ್ಮಾಧಿಕಾರಕ್ಕಿಂತ ಪ್ರಬಲವಾಗುತ್ತದೆ. ಆದ್ದರಿಂದ ಗೃಹಸ್ಥರಿಗಿಂತ ಯತಿಗಳಿಗೇ ಮುಕ್ತಿಯಲ್ಲಿ ಆಧಿಕ್ಯವು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ**

ಉಪಸಂಹಾರಸ್ತು=ಛಾಂದೋಗ್ಯದಲ್ಲಿ ಗೃಹಸ್ಥಾಶ್ರಮಗಳಲ್ಲಿಯೇ ಮೋಕ್ಷವನ್ನು ಉಪಸಂಹಾರ ಮಾಡಿರುವುದು ಕೃತ್ಸ್ನಭಾವಾತ್=ಸಂಪೂರ್ಣವಾದ ಗೃಹಸ್ಥ ಧರ್ಮವು ದೇವತೆಗಳಿಗೆ ಇರುವುದರಿಂದ ದೇವತಾಪರವಾಗಿರುವುದು.

## ಅನಾವಿಷ್ಕಾರಾಧಿಕರಣ (3-4-9)

ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಅಪರೋಕ್ಷಜ್ಞಾನಕ್ಕೆ ಸಂಗತವಾದ ಪರೋಕ್ಷಜ್ಞಾನವು ವಿಷಯ. ಉಪದೇಶವು ಎರಡು ರೀತಿಯಾಗಿಯೂ ಸಂಭವಿಸುವುದರಿಂದ ಬಹಿರಂಗಸ್ಥಳದಲ್ಲಿ ಉಪದೇಶಿಸಬೇಕೊ? ಉಪದೇಶಿಸಬಾರದೋ? ಎಂದು ಸಂಶಯ.

**ಪೂರ್ವಪಕ್ಷ—** 'ಯಥಾ ಯಥಾ ಹ ವೈ ಬ್ರೂಯಾತ್ ತಥಾ ತಥಾ ಅಧಿಕೋ ಭವತಿ' (ವಿದ್ಯಾದಾನವನ್ನು ಹೆಚ್ಚು ಮಾಡಿದಂತೆ ಫಲವೂ ಹೆಚ್ಚು ಸಿಗುತ್ತದೆ) ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಸಭೆ ಮೊದಲಾದ ಬಹಿರಂಗಸ್ಥಳಗಳಲ್ಲಿ ಉಪದೇಶಿಸಿದಾಗ ಬಹಳ ಜನ ಶ್ರವಣ ಮಾಡುತ್ತಾರೆ. ಆದ್ದರಿಂದ ಜ್ಞಾನವನ್ನು ಪ್ರಕಾಶಗೊಳಿಸಿಯೇ ಉಪದೇಶಿಸಬೇಕು. ರಹಸ್ಯವಾಗಿರಿಸಬಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಅಪೂರ್ಣವಿಶೇಷಯೋಗ್ಯತಾ' (ಅಪೂರ್ಣ=ಎಲ್ಲರಿಗೂ ವಿಶೇಷಯೋಗ್ಯತಾ=ಜ್ಞಾನಯೋಗ್ಯತಾ ಬರುವುದರಿಂದ ಬಹಿರಂಗ ಉಪದೇಶವೇ ಯುಕ್ತ) ಎಂಬುದು. ಇದನ್ನು ಮತ್ತು 'ಅತ್ವರಯೈವ ಸಿದ್ಧಿ' (ಅವಸರ ಮಾಡದೆ ಯೋಗ್ಯರಿಗೇ ಉಪದೇಶ ಮಾಡಿದರೇನೇ ಸಿದ್ಧಿ) ಎಂಬ ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚಾವಿಷ್ಕಾರೇಣ ಕಥನಾದಶೇಷತೋಽಪಿ ಯೋಗ್ಯಾ ಜ್ಞಾನಿನೋ ಭವಂತೀತ್ಯಾಸ್ಥಾನಚತ್ವರಾದಿಷು ಸ್ಥಿತ್ವೈವ ಪ್ರಕಥನೀಯಮ್ । ನ ಹ್ಯೇವಂ ತ್ವರಮಾಣೇ ಸಿದ್ಧಿರ್ಭವತಿ । ಯೋಗ್ಯಾನಾಮಪಿ ಗ್ರಹಣಪ್ರಸಂಗಾತ್ । ತಸ್ಮಾದ್ ವಿಚಾರ್ಯ ಯೋಗ್ಯಾನಾಮೇವಾತ್ವರಯೈವ ಕಥಯಿತ್ವಾ ಸಿದ್ಧಿರ್ಭವತಿ ।**

**'ತ್ಯಕ್ತ್ವಾ ತ್ವರಾಂ ಬ್ರಹ್ಮವಿದ್ಯಾಂ ವದೇತ ಜನಾಯ ಯೋಗ್ಯಾಯ ಸದೈವ ವಿದ್ವಾನ್ ।' ಇತಿ ಶ್ರುತೇಃ ।**

**'ಮಾ ನಃ ಸ್ತೇನೇಭ್ಯಃ' ಇತ್ಯಾದೇಶ್ಚ ॥ ೯ ॥**

**ಭಾವಾರ್ಥ—**ಪ್ರಕಾಶವಾಗಿ ಉಪದೇಶ ಮಾಡುವುದರಿಂದ ಯೋಗ್ಯರೆಲ್ಲರೂ ಜ್ಞಾನಿಗಳಾಗುತ್ತಾರೆ. ಆದ್ದರಿಂದ ಆಸ್ಥಾನ ಚತ್ವರಾದಿಗಳಲ್ಲಿ ಇದ್ದೇ ಉಪದೇಶ ಮಾಡಬೇಕು ಎಂದು ಹೇಳುವುದು ಸರಿಯಲ್ಲ, ಏಕೆಂದರೆ, ಈ ರೀತಿ ತ್ವರೆಯಿಂದ ಉಪದೇಶ ಸಿದ್ಧಿಯಾಗುವುದಿಲ್ಲ. ಅಯೋಗ್ಯರಿಗೂ ಶ್ರವಣವಾಗುವುದರಿಂದ. ಆದ್ದರಿಂದ ಅಧಿಕಾರಿ, ದೇಶ, ಕಾಲಗಳನ್ನು ಸರಿಯಾಗಿ ವಿಚಾರ ಮಾಡಿ ಯೋಗ್ಯರಿಗೇ ತ್ವರೆಯನ್ನು ಮಾಡದೇ ಉಪದೇಶವನ್ನು ಮಾಡಿದರೇ ಸಿದ್ಧಿಯಾಗುತ್ತದೆ. 'ಜ್ಞಾನಿಯು ತ್ವರೆಯನ್ನು ಬಿಟ್ಟು ಯೋಗ್ಯರಾದ ಜನರಿಗೇನೇ ಯಾವಾಗಲೂ ಉಪದೇಶ ಮಾಡಬೇಕು' ಎಂದು ಶ್ರುತಿಯಿರುವುದರಿಂದ ಮತ್ತು 'ಮಾನಸ್ತೇನೇಭ್ಯಃ' ಎಂಬಿವೇ ಮೊದಲಾದ ಶ್ರುತಿಗಳೂ ಇದನ್ನೇ ತಿಳಿಸುತ್ತಿವೆ.

**ವಿವರಣೆ—** ಅವಸರ ಮಾಡದೆ ಯೋಗ್ಯರಿಗೇ ಉಪದೇಶ ಮಾಡಿದರೇ ಸಿದ್ಧಿ ಎಂಬ ವಿಷಯದಲ್ಲಿ ಶ್ರುತಿಗಳು ಆಧಾರವಾಗಿವೆ.

ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ । ಯೇಷಾಂ ನೈತನ್ನಾಪರಂ ಕಿಂಚ ನೈಕಂ ಬ್ರಹ್ಮಣಸ್ಪತೇ ಬ್ರೂಹಿ ತೇಭ್ಯಃ ಕದಾಚಿತ್ । ಅಥೋ ಶಮೇನೋಪರತಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಃ ಸದಾ ನಃ । ಅದೇವಾನಾಮೋಹತೇ ವಿಪ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋ ವಿದುಃ ।

ಎಲೈ ವಾಯುದೇವನೇ! ಭಗವನ್ನಿಷ್ಠೆಯಿಂದ ಭಗವಂತನ ಸಮೀಪದಲ್ಲಿಯೇ ಆಸಕ್ತರಾದ ಯಾರು ನಿಷ್ಕಾಮಕರ್ಮಿಗಳೋ ಯಾರು ಸರ್ವದೇವತೆಗಳಿಗೆ ವರತಮನಾದ ಬ್ರಹ್ಮನನ್ನು ಮನಸ್ಸಿನಲ್ಲಿ ಚೆನ್ನಾಗಿ ಧರಿಸಿರುವರೋ ಸರ್ವತ್ರ ಸಮನಾದ್ದರಿಂದ ಸಾಮಪದವಾಚ್ಯನಾದ ವಿಷ್ಣುವಿನಿಂದ ಉತ್ತಮನಾದವನನ್ನು ತಿಳಿದಿಲ್ಲವೋ ಅರ್ಥಾತ್ ವಿಷ್ಣುವೇ ಸರ್ವೋತ್ತಮನೆಂದು ಯಾರು ತಿಳಿದಿರುವರೋ ಅವರಿಗೆ ನಮ್ಮನ್ನು ಹೇಳು. ವಿದ್ಯಾಭಿಮಾನಿದೇವತೆಗಳು ವಾಯುದೇವರನ್ನು ಪ್ರಾರ್ಥಿಸು

ತ್ತಾರೆ– ಹೇ ವಾಯುದೇವನೇ! ಆನಂದರೂಪನಾದ ವಿಷ್ಣುವಿಗೆ ಜೀವಾಭೇದವನ್ನು ತಿಳಿಯುವವರಾದ್ದರಿಂದಲೇ ಶತ್ರುಗಳಾದವರು ಭೋಗ್ಯವಸ್ತುಗಳಲ್ಲಿ ಅಪೇಕ್ಷೆಯನ್ನು ಪಡುತ್ತಾರೆ. ಅವರು ಸರ್ವವಿಧದಲ್ಲಿ ವಿಷ್ಣು-ವೈಷ್ಣವ ದ್ವೇಷದ ಫಲವಾದ ತಮಸ್ಸಿಗೆ ಯೋಗ್ಯರು. ಆದ್ದರಿಂದ ಇವರು ಕಳ್ಳರಿಗೆ ಸಮನಾದವರು. ಇವರಿಗೆ ನಮ್ಮನ್ನು ಹೇಳಬೇಡ. ಇವರಿಗೆ ಪರಬ್ರಹ್ಮನೂ ಇಲ್ಲ. ಜಗತ್ತೂ ಇಲ್ಲ. ನಿರ್ಗುಣನಾದ ಬ್ರಹ್ಮ, ಸದಸದ್ವಿಲಕ್ಷಣವಾದಜಗತ್ತು ಇವರಿಗೆ ಅಭಿಮತವಾಗಿದೆ' ಎಂದು ಶ್ರುತಿಯೂ ಅಯೋಗ್ಯರಿಗೆ ಉಪದೇಶವನ್ನು ನಿಷೇಧಿಸಿದೆ. ಮೂಲದಲ್ಲಿರುವ ಆದಿಶಬ್ದದಿಂದ 'ವಿದ್ಯಾ ಹ ವೈ ಬ್ರಹ್ಮಾಣಮಾಜಗಾಮ' ಎಂಬ ಶ್ರುತಿಯನ್ನು ಸ್ವೀಕರಿಸಬೇಕು. ಆದ್ದರಿಂದ ಯೋಗ್ಯರಿಗೆ ರಹಸ್ಯವಾಗಿ ಉಪದೇಶ ಮಾಡಬೇಕೇ ಹೊರತು ಅಯೋಗ್ಯರಿಗೆ ಬಹಿರಂಗವಾಗಿ ಉಪದೇಶ ಮಾಡಬಾರದು ಎಂದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ

ಅನಾವಿಷ್ಕುರ್ವನ್=ಸಭೆ ಮೊದಲಾದದ ಬಹಿರಂಗಸ್ಥಳಗಳಲ್ಲಿ ಪ್ರಕಾಶಗೊಳಿಸದೇ ಉಪದೇಶಿಸಬೇಕು. ಅನ್ವಯಾತ್=ಯುಕ್ತಿಯಿರುವುದರಿಂದ.

## ಐಹಿಕಾಧಿಕರಣ, ಮುಕ್ತಿಫಲಾಧಿಕರಣ (3-4-10,11)

ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಜ್ಞಾನವು ವಿಷಯ. ಕೃಷ್ಯಾದಿಗಳಿಂದ ಫಲವು ಆಗಲೇ ಕಂಡಿದೆ. ಯಾಗಾದಿಗಳಿಂದ ಫಲವು ಜನ್ಮಾಂತರದಲ್ಲಿ ಕಂಡಿದೆ. ಹೀಗೆ ಎರಡು ರೀತಿಯಲ್ಲೂ ಕಂಡಿರುವುದರಿಂದ ಸಂಶಯ ಬರುತ್ತದೆ– ಸಾಧನೆಯು ಪೂರ್ಣಗೊಂಡ ಜನ್ಮದಲ್ಲಿಯೇ ಅಪರೋಕ್ಷಜ್ಞಾನವು ಉಂಟಾಗುವುದೋ? ಅಥವಾ ಜನ್ಮಾಂತರದಲ್ಲಿ ಆಗುವುದೋ? ಎಂದು.

ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಜ್ಞಾನದಿಂದ ಲಭಿಸುವ ಮೋಕ್ಷವು

ವಿಷಯ. ಅದೃಷ್ಟರೂಪವಾದ ಫಲವು ಸಾಧನೆಯನ್ನು ಮಾಡಿದ ಜನ್ಮದಲ್ಲಿಯೇ ಲಭಿಸುತ್ತದೆ. ಜನ್ಮಾಂತರದಲ್ಲಿಯೂ ಲಭಿಸುವುದು ಕಂಡಿರುವುದರಿಂದ ಸಂಶಯ ಬರುತ್ತದೆ– ಮೋಕ್ಷವು ಜ್ಞಾನಲಭಿಸಿದ ಶರೀರ ನಾಶವಾದ ನಂತರದಲ್ಲಿ ಲಭಿಸುವುದೋ? ಇಲ್ಲವೋ? ಎಂದು.

**ಪೂರ್ವಪಕ್ಷ—** 'ಏತಾಂ ವಿದ್ಯಾಮಧೀತ್ಯ ಬ್ರಹ್ಮದರ್ಶೀ ವಾವ ಭವತಿ' (ಈ ವಿದ್ಯೆಯನ್ನು ಪಡೆದವನು ಪರಬ್ರಹ್ಮನನ್ನು ಕಾಣುತ್ತಾನೆ) ಎಂದು ಶ್ರುತಿಯು ಸಾರುತ್ತಿದೆ. ಅಂದರೆ ಅಪರೋಕ್ಷಜ್ಞಾನಕ್ಕೆ ಸಾಧನವಾದ ಶ್ರವಣಾದಿಗಳು ಪೂರ್ಣವಾಗಿವೆ ಎಂದ ಮೇಲೆ, ಕೂಡಲೆ ಆ ಜನ್ಮದಲ್ಲಿಯೇ ಅಪರೋಕ್ಷವಾಗುತ್ತದೆ. ಸ್ವರ್ಗಸುಖವನ್ನು ಈ ಶರೀರದಿಂದಲೇ ಹೊಂದಲು ಸಾಧ್ಯವಿಲ್ಲವಾದ್ದರಿಂದ ಶರೀರಪಾತವಾಗಲೇಬೇಕು. ಆದರೆ ಅಪರೋಕ್ಷಜ್ಞಾನವನ್ನು ಈ ಜನ್ಮದಲ್ಲಿಯೇ ಪಡೆಯಬಹುದಾದ್ದರಿಂದ ಈ ಜನ್ಮದಲ್ಲಿಯೇ ಅಪರೋಕ್ಷಜ್ಞಾನವಾಗುತ್ತದೆ.

ಅದರಂತೆ ಅಪರೋಕ್ಷಜ್ಞಾನವನ್ನು ಪಡೆದ ಶರೀರವು ಪಾತವಾದ ಕೂಡಲೇ ಮೋಕ್ಷವಾಗಲೇಬೇಕು. ಇಲ್ಲವಾದರೆ ಅಪರೋಕ್ಷಜ್ಞಾನವು ಮೋಕ್ಷಕ್ಕೆ ಕಾರಣವೇ ಆಗಲಾರದು. ಅಥವಾ ಕಾರಣವಿದ್ದಾಗಲೂ ಕಾರ್ಯವಾಗಿಲ್ಲವೆಂದರೆ ಇನ್ನು ಎಂದಿಗೂ ಕಾರ್ಯವಾಗಲು ಸಾಧ್ಯವಿಲ್ಲ. ಆದ್ದರಿಂದ ಮುಕ್ತಿಯೇ ಸಿದ್ಧಿಯಾಗದಿರಬೇಕು. ಆದ್ದರಿಂದ ಅಪರೋಕ್ಷಜ್ಞಾನವಾದ ಕೂಡಲೇ ಮುಕ್ತಿಯಾಗಬೇಕು.

ಈ ಎರಡು ಪೂರ್ವಪಕ್ಷಗಳಿಗೂ ಸಾಧಕವಾದ ಯುಕ್ತಿ 'ವಿರೋಧಿಹಾನಿ' ಎಂಬುದೇ. ಈ ಜನ್ಮದಲ್ಲಿಯೇ ಅಪರೋಕ್ಷಜ್ಞಾನವಾಗುವುದಕ್ಕೂ ಮೋಕ್ಷವಾಗುವುದಕ್ಕೂ ಯಾವುದೇ ವಿರೋಧವಿಲ್ಲದಿರುವುದು ಎಂದರ್ಥ. ಇದನ್ನು ಮತ್ತು 'ಅತ್ವರಯೈವ ಸಿದ್ಧಿ' (ವಿಲಂಬವಾಗಿ ಅಪರೋಕ್ಷಜ್ಞಾನ, ಮುಕ್ತಿಗಳು ಲಭಿಸುವವು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ವಿರೋಧಾಭಾವಾತ್ ಸಾಧನಾನುಷ್ಠಾನಜನ್ಮನ್ಯೇವಾಪರೋಕ್ಷ-ಜ್ಞಾನಂ ಮುಕ್ತಿಶ್ಚೇತಿ ನಿಯಮಃ । ಪ್ರತಿಬಂಧೇ ಸತಿ ತನ್ನಿರಾಸೇನಾತ್ವರಯೈವ ಸಿದ್ಧ್ಯುಪಪತ್ತೇಃ ।**

'ಯದಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ ಪ್ರೇತ್ಯೈವ ಪಶ್ಯೇದ್ ಯೋಗಮೇವಾನ್ವವೇಕ್ಷ್ಯ।' ಇತ್ಯಾದಿಶ್ರುತೇಃ।

'ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್।' ಇತಿ ಭಗವದ್ವಚನಮ್ ॥ ೧೦ ॥ ೧೧ ॥

**ಭಾವಾರ್ಥ**—ಯಾವ ವಿರೋಧವೂ ಇಲ್ಲದಿರುವುದರಿಂದ ಅಪರೋಕ್ಷ ಜ್ಞಾನಕ್ಕೆ ಸಾಧನವಾದ ಶ್ರವಣಾದಿಗಳನ್ನು, ಮುಕ್ತಿಗೆ ಸಾಧನವಾದ ಅಪರೋಕ್ಷ ಜ್ಞಾನವನ್ನು ಹೊಂದಿದ ಜನ್ಮದಲ್ಲಿಯೇ ಅಪರೋಕ್ಷಜ್ಞಾನ ಮತ್ತು ಮುಕ್ತಿ ಆಗುತ್ತದೆ ಎಂಬ ನಿಯಮವಿಲ್ಲ. ಏಕೆಂದರೆ, ಪ್ರತಿಬಂಧಕವಿದ್ದಾಗ ಅದು ನಿರಾಸವಾದಾಗ ವಿಲಂಬವಾಗಿಯೇ ಅಪರೋಕ್ಷಜ್ಞಾನ, ಮುಕ್ತಿಗಳು ಲಭಿಸುತ್ತವೆ. 'ಒಂದುವೇಳೆ ಪ್ರಾರಬ್ಧಕರ್ಮವು ಪ್ರತಿಬಂಧಕವಾಗಿದ್ದರೆ ಜನ್ಮಾಂತರವನ್ನು ಪಡೆದು ಶ್ರವಣಾದಿ ಸಾಧನವನ್ನು ಅನುಷ್ಠಾನ ಮಾಡಿಯೋ (ಯೋಗಂ=ಶ್ರವಣಾದಿ ಉಪಾಯವನ್ನು ಅನ್ವವೇಕ್ಷ್ಯ= ಅನುಷ್ಠಾನಮಾಡಿ) ಭಗವಂತನನ್ನು ಕಾಣುತ್ತಾನೆ' ಎಂಬಿವೇ ಮೊದಲಾದ ಶ್ರುತಿಗಳಿರುವುದರಿಂದ. 'ಅನೇಕ ಜನ್ಮಗಳಲ್ಲಿ ಅಪರೋಕ್ಷಜ್ಞಾನವನ್ನು ಪಡೆದು ಆಮೇಲೆ ಮುಕ್ತಿಯನ್ನು ಪಡೆಯುತ್ತಾನೆ' ಎಂಬ ಶ್ರೀಕೃಷ್ಣನ ಮಾತೂ ಈ ವಿಷಯದಲ್ಲಿ ಪ್ರಮಾಣವಾಗುತ್ತದೆ.

**ವಿವರಣೆ**— ವಿಲಂಬವಾಗಿ ಅಪರೋಕ್ಷಜ್ಞಾನ, ಮುಕ್ತಿಗಳು ಲಭಿಸುವುವು. ಅಪರೋಕ್ಷಜ್ಞಾನ, ಮುಕ್ತಿಯನ್ನು ಪಡೆಯಲು ಪ್ರಾರಬ್ಧಕರ್ಮವು ಪ್ರತಿಬಂಧಕ ವಾಗಿದ್ದರೆ ಬೇರೆ ಜನ್ಮವನ್ನು ಪಡೆದು ಸಾಧನೆಯನ್ನು ಮಾಡಿ ಅಪರೋಕ್ಷಜ್ಞಾನ, ಮುಕ್ತಿಗಳನ್ನು ಹೊಂದಬೇಕು. ಇದೇ ಜನ್ಮದಲ್ಲಿಯೇ ಎಂಬ ನಿಯಮವಿಲ್ಲ ಎಂದು ಸಿದ್ಧಾಂತ.

'ಯೋಗಮನ್ವವೇಕ್ಷ್ಯ' ಎಂಬ ಶ್ರುತಿಯಲ್ಲಿರುವ ಯೋಗಶಬ್ದಕ್ಕೆ ಉಪಾಯ ಎಂದರ್ಥ. ಇದಕ್ಕೆ-

ಜ್ಞಾನಂ ತು ಯೋಗ ಉದ್ದಿಷ್ಟಂ ಯುಜ್ಯತೇ ತೇನ ಯತ್ಸುಖಮ್ ।
ಕ್ವಚಿದ್ ಯೋಗ ಉಪಾಯಃ ಸ್ಯಾತ್ ಕ್ವಚಿಚ್ಚಿತ್ತನಿರೋಧನಮ್ ॥

ಎಂಬ ಸ್ಮೃತಿಯೇ ಪ್ರಮಾಣ.

ಐಹಿಕಾಧಿಕರಣದ ಅತಿದೇಶರೂಪವಾಗಿ ಮುಕ್ತಿಫಲಾಧಿಕರಣವು ಹೊರಟಿರುವುದರಿಂದ ಎರಡು ಅಧಿಕರಣಗಳಿಗೂ ಪರಸ್ಪರ ಸಂಬಂಧವಿರುವುದ ರಿಂದ ಒಂದೇ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ವಿವರಿಸಿದ್ದಾರೆ. ಮೊದಲನೇ ಅಧಿಕರಣದಲ್ಲಿ ಹೇಳಿದ ಯುಕ್ತಿಯಿಂದಲೇ ಎರಡನೆಯ ಅಧಿಕರಣವೂ ಗತಾರ್ಥವಾಗುವುದರಿಂದ ಎರಡನೆಯ ಅಧಿಕರಣವು ವ್ಯರ್ಥವಾಗುವುದಿಲ್ಲವೇ? ಎಂದರೆ, ಅಪರೋಕ್ಷಜ್ಞಾನಕ್ಕೆ ಪ್ರತಿಬಂಧಕವು ಇರುವುದರಿಂದ ಅದರ ನಿವಾರಣೆಗಾಗಿ ಮತ್ತೊಂದು ಜನ್ಮದಲ್ಲಿ ಸಾಧನೆಯನ್ನು ಮಾಡಬೇಕು ಎಂದು ಪ್ರಥಮಾಧಿಕರಣದಲ್ಲಿ ಸಿದ್ಧಾಂತವನ್ನು ಮಾಡಲಾಗಿದೆ. ಎರಡನೆ ಅಧಿಕರಣದಲ್ಲಿ, ಮುಕ್ತಿಗೆ ಪ್ರತಿಬಂಧಕವಾದದ್ದು ಇಲ್ಲವೆಂಬುದು ನಿಶ್ಚಯವಿರುವುದರಿಂದ ಅಪರೋಕ್ಷಜ್ಞಾನವಾದಾಗ ಶರೀರಪಾತವಾದ ಕೂಡಲೆ ಮುಕ್ತಿಯಾಗಲೇಬೇಕು ಎಂಬ ಪೂರ್ವಪಕ್ಷವು ಪ್ರತಿಬಂಧಕಾಭಾವ ನಿಶ್ಚಯ ಮೂಲಕವಾಗಿ ಹೊರಟಿರುವುದ ರಿಂದ ಎರಡನೆಯ ಅಧಿಕರಣವೂ ಸಾರ್ಥಕವಾಗಿದೆ.

**ಸೂತ್ರಾರ್ಥ—**

## ಓಂ ಐಹಿಕಮಪ್ರಸ್ತುತ ಪ್ರತಿಬಂಧೇ ತದ್ದರ್ಶನಾತ್ ಓಂ

ಅಪ್ರಸ್ತುತಪ್ರತಿಬಂಧೇ=ಪ್ರಾರಬ್ಧಕರ್ಮವು ಇಲ್ಲದಿದ್ದಲ್ಲಿ ಐಹಿಕಂ=ಈ ಜನ್ಮದಲ್ಲಿಯೇ ಅಪರೋಕ್ಷಜ್ಞಾನವು ಲಭಿಸುವುದು. ಏಕೆಂದರೆ, ತದ್ದರ್ಶನಾತ್= ಶ್ರುತಿಯಲ್ಲಿ ಆರೀತಿ ಪ್ರತಿಪಾದಿಸಿರುವುದರಿಂದ

## ಓಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ

ಏವಂ=ಜ್ಞಾನದಲ್ಲಿ ನಿಯಮವಿಲ್ಲದಿರುವಂತೆಯೇ ಮುಕ್ತಿಫಲಾನಿಯಮಃ= ಮೋಕ್ಷರೂಪಫಲದ ವಿಷಯದಲ್ಲಿಯೂ ನಿಯಮವಿಲ್ಲ. ಇದಕ್ಕೆ ಪ್ರಮಾಣ ವೇನೆಂದರೆ, ತದವಸ್ಥಾವಧೃತೇಃ ತದವಸ್ಥಾವಧೃತೇಃ='ಬ್ರಹ್ಮಸಂಸ್ಥೋಽಮೃತತ್ವ- ಮೇತ್ಯೇವ' ಶ್ರುತಿಯಲ್ಲಿ ಬ್ರಹ್ಮಜ್ಞಾನಿಗೆ ಮೋಕ್ಷವು ಆಗಿಯೇ ಆಗುತ್ತದೆ ಎಂದು ನಿಶ್ಚಯವಾಗಿ ಹೇಳಿರುವುದರಿಂದ.

# ಚತುರ್ಥಾಧ್ಯಾಯ

## ಪ್ರಥಮಪಾದ

ನಾಲ್ಕನೆಯ ಅಧ್ಯಾಯಕ್ಕೆ ಫಲಾಧ್ಯಾಯವೆಂದು ಹೆಸರು. ಫಲವೆಂದರೆ ಮೋಕ್ಷ. ಅದನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತಿದ್ದಾರೆ. ಮೋಕ್ಷವು ನಾಲ್ಕು ಬಗೆಯಾಗಿದೆ. ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂಬುದಾಗಿ. ಮೊದಲನೆಯದ್ದಾದ ಕರ್ಮಕ್ಷಯವನ್ನು ಮೊದಲನೆಯ ಪಾದದಲ್ಲಿ ನಿರೂಪಣೆ ಮಾಡುತ್ತಾರೆ. ಸಂಚಿತವಾದ ಅನಿಷ್ಟಪುಣ್ಯ ಮತ್ತು ಪಾಪಗಳೇ ಕರ್ಮಗಳು. ಅವುಗಳ ಕ್ಷಯ=ನಾಶವು ಈ ಪಾದದ ವಿಷಯ. ಈ ಪಾದದ ಅಧಿಕರಣಗಳಲ್ಲಿರುವ ಪೂರ್ವಪಕ್ಷ-ಸಿದ್ಧಾಂತನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಹೀಗೆ ಸಂಗ್ರಹಿಸಿದ್ದಾರೆ-

ಸುಶಕ್ಯತಾ ಶಶ್ವದತಿಪ್ರಸಿದ್ಧಿಃ ವಿವೇಕವಿನ್ಯಾಸವಿಚಾರಸಂಜ್ಞಾಃ ।
ನಾನಾಪ್ರವೃತ್ತಿಃ ಕೃತಕೃತ್ಯತಾ ಚ ವಿಪಕ್ಷತರ್ಕಾಃ ಸಮತೀತಪಾದೇ ॥
ಮಹಾಫಲತ್ವಂ ಪ್ರವಿವಿಕ್ತತಾ ಚ ಸಂಧಿಗ್ರಹಃ ಸಾಧನಮಾಪ್ತಕೃತ್ಯಮ್ ।
ವಿಶೇಷಕಾರ್ಯಂ ಕೃತಸಂಸ್ಥಿತಿಶ್ಚ ಸುಯುಕ್ತಯೋ ನಿರ್ಣಯಗಾಃ ಸ್ವಪಕ್ಷೇ ॥

ಆವೃತ್ತ್ಯಧಿಕರಣದಲ್ಲಿ ಸುಶಕ್ಯತಾ, ಮಹಾಫಲತ್ವಗಳು ಪೂರ್ವಪಕ್ಷ ಸಿದ್ಧಾಂತ ಯುಕ್ತಿಗಳಾಗಿವೆ. ಆತ್ಮಾಧಿಕರಣದಲ್ಲಿ ಶಶ್ವದತಿಪ್ರಸಿದ್ಧಿ, ಪ್ರವಿವಿಕ್ತತಾಗಳು, ನಪ್ರತೀಕಾಧಿಕರಣದಲ್ಲಿ ವಿವೇಕ, ಸಂಧಿಗ್ರಹಗಳು, ಬ್ರಹ್ಮದೃಷ್ಟ್ಯಧಿಕರಣದಲ್ಲಿ ವಿನ್ಯಾಸ, ಸಾಧನಗಳು ಆದಿತ್ಯಾದಿಮತ್ಯಧಿಕರಣದಲ್ಲಿ ವಿಚಾರ, ಆಪ್ತಕೃತ್ಯಗಳು, ಆಸೀನಾಧಿಕರಣದಲ್ಲಿ ಸಂಜ್ಞಾ, ವಿಶೇಷಕಾರ್ಯಗಳು, ಆಪ್ರಾಯಣಾಧಿಕರಣದಲ್ಲಿ ನಾನಾಪ್ರವೃತ್ತಿ, ವಿಶೇಷಕಾರ್ಯಗಳು, ತದಧಿಗಮಾಧಿಕರಣದಲ್ಲಿ ಕೃತಕೃತ್ಯತಾ, ಕೃತಸಂಸ್ಥಿತಿಗಳು ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತನ್ಯಾಯಗಳಾಗಿವೆ.

## ಆವೃತ್ತ್ಯಧಿಕರಣ (4-1-1)

ಓಂ ಆವೃತ್ತಿರಸಕೃದುಪದೇಶಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಶ್ರವಣಾದಿಗಳು ವಿಷಯ. ಅಗ್ನಿಷ್ಟೋಮಾದಿಗಳನ್ನು ಒಮ್ಮೆ

ಆಚರಿಸಿದರೂ ಫಲಪ್ರಾಪ್ತಿಯಾಗುವುದು ಕಂಡಿದೆ. ಅವಘಾತಾದಿಗಳನ್ನು ಪುನಃ ಪುನಃ ಮಾಡುವುದರಿಂದಲೇ ತುಷವಿಮೋಕವಾಗುವುದು ಕಂಡಿದೆ. (ಕೊಯ್ಲಿನ ಕಟ್ಟನ್ನು ಪದೇ ಪದೇ ಘಟಿಸುವುದರಿಂದ ನೆಲ್ಲಿನ ಹೂ ಕಳಚುವುದು.) ಹೀಗೆ ಎರಡು ರೀತಿಯಲ್ಲೂ ಕಂಡಿರುವುದರಿಂದ ಸಂಶಯ ಬರುತ್ತದೆ. ಶ್ರವಣಾದಿಗಳನ್ನು ಒಮ್ಮೆ ಮಾಡಿದರೆ ಸಾಕೋ? ಪುನಃ ಪುನಃ ಮಾಡಬೇಕೋ? ಎಂದು.

**ಪೂರ್ವಪಕ್ಷ**— ಒಮ್ಮೆ ಆಚರಿಸಿದ ಅಗ್ನಿಷ್ಟೋಮಾದಿಯಾಗದಿಂದ ಸ್ವರ್ಗ ವೆಂಬ ಫಲವು ಸಿಕ್ಕುವುದು ಕಂಡಿದೆ. ಅದರಂತೆ ಒಮ್ಮೆ ಶ್ರವಣಾದಿಗಳನ್ನು ಮಾಡದರೂ ಫಲ ಬರುತ್ತದೆ. ಪುನಃ ಪುನಃ ಮಾಡಿದ ಅವಘಾತಾದಿಗಳಿಂದ ತುಷವಿಮೋಕಾದಿಗಳು ಆಗಿರುವುದು ಕಂಡಿದ್ದರೂ ಶ್ರವಣಾದಿಗಳ ಆವೃತ್ತಿಯನ್ನು ಒಪ್ಪಬಾರದು. ಏಕೆಂದರೆ ಆವೃತ್ತಿಮಾಡದೆ ಇರುವುದರಿಂದ ಎಲ್ಲರಿಗೂ ಜ್ಞಾನಪಡೆಯಲು ಅನುಕೂಲ ವಾಗುವುದು ಎಂಬ ಗುಣವೂ ಲಭಿಸುತ್ತದೆ. ಒಂದು ಬಾರಿ ಶ್ರವಣಾದಿಗಳನ್ನು ಒಪ್ಪಿದರೂ 'ಶ್ರೋತವ್ಯೋ ಮಂತವ್ಯಃ' ಎಂಬ ವಿಧಿ ಯನ್ನೂ ಕೂಡಿಸಿದಂತಾಗುವುದು. ಆದ್ದರಿಂದ ಒಂದು ಬಾರಿ ಮಾಡಿದ ಶ್ರವಣಾದಿಗಳಿಂದಲೂ ಅಪರೋಕ್ಷ ಜ್ಞಾನವಾಗುವುದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸುಶಕ್ಯತಾ' (ಎಲ್ಲರಿಗೂ ಸುಲಭಸಾಧ್ಯವಾಗುವುದು) ಎಂಬುದು. ಇದನ್ನು ಮತ್ತು 'ಮಹಾಫಲತ್ವ' (ಫಲವು ಮಹತ್ತಾದರೆ ಸಾಧನವು ದುರ್ಲಭವಾದರೂ ಬಾಧಕವಿಲ್ಲ) ಎಂಬ ಸಿದ್ಧಾಂತ ಸಾಧಕವಾದದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**॥ ಹರಿಃ ಓಂ ॥ ನ ಚ ಶ್ರವಣಾದ್ಯನಾವೃತ್ತ್ಯಾಽಪರೋಕ್ಷ-ಜ್ಞಾನೋದಯೇ ಸರ್ವೇಷಾಂ ಸುಶಕ್ಯತ್ವಮಿತಿ ಗುಣಃ । ಮಹಾಫಲತ್ವಾತ್ ಸರ್ವೇಷಾಮಶಕ್ಯತಾಯಾ ಏವೋಪಪನ್ನತ್ವಾತ್ । ಅನ್ಯಥಾ ಸರ್ವಸುಶಕ್ಯ-ಸ್ಯೈವ ಸಾಧನತಯಾ ಸರ್ವೇಷಾಂ ಮೋಕ್ಷಾಪತ್ತೇಃ ॥ ೧ ॥**

**ಭಾವಾರ್ಥ**—ಶ್ರವಣಾದಿಗಳನ್ನು ಆವೃತ್ತಿಮಾಡದೆ ಅಪರೋಕ್ಷಜ್ಞಾನ ಉಂಟಾಗುತ್ತದೆ ಎಂದು ಒಪ್ಪಿದರೆ ಎಲ್ಲರಿಗೂ ಶ್ರವಣಾದಿಗಳನ್ನು ಮಾಡಲು

ಅನುಕೂಲವಾಗುವುದು ಎಂಬ ಗುಣವೂ ಲಭಿಸುವುದು ಎಂದು ಆಕ್ಷೇಪ ಮಾಡುವುದು ಸರಿಯಲ್ಲ. ಮೋಕ್ಷವು ಮಹಾಫಲವಾದ್ದರಿಂದ ಸರ್ವರಿಗೂ ಅದು ಅಶಕ್ಯವೆಂಬುವುದು ಯುಕ್ತವೇ ಆಗಿದೆ. ಇಲ್ಲದಿದ್ದರೆ (ಶ್ರವಣಾದಿಗಳ ಆವೃತ್ತಿಯನ್ನು ಒಪ್ಪದಿದ್ದರೆ) ಎಲ್ಲರಿಗೂ ಸುಲಭಸಾಧ್ಯವಾಗುವುದೇ ಸಾಧನವಾಗುವುದರಿಂದ ಎಲ್ಲರಿಗೂ ಮೋಕ್ಷವು ಆಗಬೇಕಾಗುತ್ತದೆ.

**ವಿವರಣೆ—** ಪ್ರಕೃತ ಮೋಕ್ಷವು ಮಹಾಫಲ. ಅದರ ಸಾಧನವಾದ ಶ್ರವಣಾದಿಗಳು ದುರ್ಲಭವಾದರೆ ಭಾದಕವಿಲ್ಲ. ಹೊರತಾಗಿ ಗುಣವೇ ಆಗುವುದು. ಆದ್ದರಿಂದ ಶ್ರವಣಾದಿಗಳ ಆವೃತ್ತಿಯಿಂದಲೇ ಮೋಕ್ಷವು ಲಭಿಸುತ್ತದೆ ಎಂದು ಸಿದ್ಧಾಂತ.

ಅಗ್ನಿಷ್ಟೋಮಾದಿಗಳಂತೆ ಒಮ್ಮೆ ಮಾಡಿದರೂ 'ಶ್ರೋತವ್ಯೋ ಮಂತವ್ಯಃ' ಎಂಬ ವಿಧಿಯು ಪೂರ್ಣವಾಗುತ್ತದೆ ಎಂದು ಹೇಳುವುದು ಸರಿಯಲ್ಲ. ಅಗ್ನಿಷ್ಟೋಮಾದಿಗಳ ಫಲ ಅದೃಷ್ಟ. ಅವುಗಳನ್ನು ಒಮ್ಮೆ ಮಾಡಿದರೂ ಸಾಕು. ಆದರೆ ಶ್ರವಣಾದಿಗಳಿಗೆ ಅಜ್ಞಾನನಿವೃತ್ತಿಯೆಂಬ ದೃಷ್ಟಫಲವಿದೆ. ಅದು ಲಭಿಸುವವರಿಗೂ ಶ್ರವಣಾದಿಗಳನ್ನು ತುಷವಿಮೋಕವಾಗುವವರೆಗೂ ಅವಘಾತಾದಿಗಳನ್ನು ಮಾಡುವಂತೆ ಪುನಃಪುನಃ ಮಾಡಲೇಬೇಕೆಂದರ್ಥ. ಆದ್ದರಿಂದ ಶ್ರವಣಾದಿಗಳ ಆವೃತ್ತಿಯನ್ನು ಒಪ್ಪಲೇಬೇಕು.

**ಸೂತ್ರಾರ್ಥ—**

## ಓಂ ಆವೃತ್ತಿರಸಕೃದುಪದೇಶಾತ್ ಓಂ

ಆವೃತ್ತಿಃ=ಬ್ರಹ್ಮಜ್ಞಾನಕ್ಕೋಸ್ಕರ ಶ್ರವಣ ಮನನಾದಿಗಳನ್ನು ಪುನಃ ಪುನಃ ಮಾಡಬೇಕು. ಏಕೆಂದರೆ, ಅಸಕೃದುಪದೇಶಾತ್=ಶ್ವೇತಕೇತುವನ್ನು ಕುರಿತು ಉದ್ದಾಲಕರು ಪುನಃ ಪುನಃ ಉಪದೇಶ ಮಾಡಿದ್ದರಿಂದ.

## ಆತ್ಮೋಪಗಮಾಧಿಕರಣ (4-1-2)

ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ಎಂಬ ಒಂದು

ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಆತ್ಮವು ವಿಷಯ. ಆತ್ಮತ್ವದ ಉಪಾಸನೆಯನ್ನು ನಿತ್ಯದಲ್ಲೂ ಮಾಡಬೇಕು, ಇದನ್ನು ಮಾಡುವುದಾದರೆ ಜ್ಞಾನಾನಂದಾದಿಗಳನ್ನು ಉಪಾಸನೆ ಮಾಡಬೇಕಾಗುವುದರಿಂದ ಸಂಶಯ ಬರುತ್ತದೆ– ಆತ್ಮತ್ವವನ್ನು ನಿತ್ಯದಲ್ಲಿಯೂ ಉಪಾಸನೆ ಮಾಡಬೇಕೋ? ಬೇಡವೋ? ಎಂದು.

**ಪೂರ್ವಪಕ್ಷ—** ಆತ್ಮತ್ವವೆಂದರೆ ಸ್ವಾಮಿತ್ವ. ಶ್ರೀಹರಿಯ ಜಗತ್‌ಸ್ವಾಮಿತ್ವವು ಬಹಳ ಪ್ರಸಿದ್ಧವಾಗಿದೆ. ಯಾವುದು ಪ್ರಸಿದ್ಧವೋ ಅದು ನಿರಂತರ ಮನಸ್ಸಿನಲ್ಲಿ ಇರುವುದರಿಂದ ಅದರ ಉಪಾಸನೆಯನ್ನು ಮಾಡುವುದು ವ್ಯರ್ಥ. ಆದ್ದರಿಂದ ಆತ್ಮತ್ವಗುಣವು ಸರ್ವದಾ ಉಪಾಸ್ಯವಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಶಶ್ವದತಿಪ್ರಸಿದ್ಧಿ' (ಯಾವಾಗಲೂ ಬಹಳ ಪ್ರಸಿದ್ಧವಾಗಿರುವುದು) ಎಂಬುದು ಇದನ್ನು ಮತ್ತು 'ಪ್ರವಿವಿಕ್ತತಾ' (ವಿಶೇಷ) ಎಂಬ ಸಿದ್ಧಾಂತಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಶಶ್ವದತಿಪ್ರಸಿದ್ಧತ್ವಾದಾತ್ಮಶಬ್ದೋದಿತಂ ಸ್ವಾಮಿತ್ವಂ ನ ನಿತ್ಯಶ ಉಪಾಸ್ಯಮ್ । ಅನ್ಯೇಭ್ಯೋಽಧಿಕಫಲತ್ವೇನ ಸವಿಶೇಷತ್ವಾದಾತ್ಮತ್ವಸ್ಯ ॥ ೨ ॥**

**ಭಾವಾರ್ಥ—**ಯಾವಾಗಲೂ ಬಹಳ ಪ್ರಸಿದ್ಧವಾದ ಆತ್ಮಶಬ್ದದಿಂದ ಉಕ್ತವಾದ ಸ್ವಾಮಿತ್ವವನ್ನು ಯಾವಾಗಲೂ ಉಪಾಸನೆ ಮಾಡಬಾರದು ಎಂಬ ಪೂರ್ವಪಕ್ಷ ಸರಿಯಲ್ಲ. ಬೇರೆ ಗುಣಗಳಿಗಿಂತ ಅಧಿಕಫಲಉಳ್ಳದ್ದರಿಂದ ಆತ್ಮತ್ವವು ವಿಶೇಷವಾಗಿದೆ.

**ವಿವರಣೆ—** ಬೇರೆ ಆನಂದಾದಗುಣಗಳಿಗಿಂತ ಆತ್ಮವು ಪ್ರಸಿದ್ಧವಾಗಿದ್ದರೂ ಇದರಲ್ಲಿ ವಿಶೇಷವಿದೆ. ಆತ್ಮತ್ವ (ಸ್ವಾಮಿತ್ವ)ವನ್ನು ಉಪಾಸನೆ ಮಾಡುವುದರಿಂದ ಮುಕ್ತಿಯಲ್ಲಿ ಎಲ್ಲರಿಂದಲೂ ಅಪೇಕ್ಷಿತವಾದ ಸ್ವಾವರನಿಯಮಕತ್ವವು ಪ್ರಾಪ್ತವಾಗುತ್ತದೆ. ಅಂದರೆ, ತನಗಿಂತಲೂ ಕೆಳಗಿನವರ ನಿಯಂತ್ರಿಸುವಿಕೆ ಸಿದ್ಧಿಸುತ್ತವೆ. ಪ್ರಸಿದ್ಧಿ, ಅಪ್ರಸಿದ್ಧಿಗಳು ಅಪ್ರಯೋಜಕ. ಫಲವಿಶೇಷವಿರುವುದರಿಂದ ಆತ್ಮತ್ವವನ್ನು ಯಾವಾಗಲೂ ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

ಸೂತ್ರಾರ್ಥ—

### ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ

ವಿಷ್ಣುವು ಆತ್ಮಾ ಇತಿ=ಸ್ವಾಮಿ ಎಂಬುದಾಗಿ ಉಪಗಚ್ಛಂತಿ ಜ್ಞಾನಿಗಳು ಉಪಾಸನೆ ಮಾಡುತ್ತಾರೆ. ಗ್ರಾಹಯಂತಿ ಚ=ಶಿಷ್ಯರಿಗೂ ಉಪದೇಶಿಸುತ್ತಾರೆ.

## ನ ಪ್ರತೀಕಾಧಿಕರಣ (4-1-3)

ಓಂ ನ ಪ್ರತೀಕೇ ನ ಹಿ ಸಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಭಗವಂತನ ಪ್ರತಿಮಾರೂಪವಾದ ನಾಮವಾಗಾದಿಗಳು ವಿಷಯ. 'ನಾಮ ಬ್ರಹ್ಮೇತ್ಯುಪಾಸೀತ' (ನಾಮಾಭಿಮಾನಿಯಾದ ಉಷಾದೇವಿಯೇ ಮೊದಲಾದ ಪ್ರತಿಮೆಯನ್ನೇ ಬ್ರಹ್ಮನೆಂದು ಉಪಾಸನೆ ಮಾಡಬೇಕು.) ಎಂಬ ಶ್ರುತಿಯಿದೆ. 'ಪೃಥಗುಪದೇಶಾತ್' ಎಂಬಲ್ಲಿ ಭೇದವನ್ನೂ ಹೇಳಲಾಗಿದೆ. ಆದ್ದರಿಂದ ಸಂಶಯ ಬರುತ್ತದೆ– ನಾಮವಾಗಾದಿಗಳನ್ನು ಪರಬ್ರಹ್ಮನೆಂದು ಉಪಾಸನೆ ಮಾಡಬೇಕೋ? ಬೇಡವೋ? ಎಂದು.

ಪೂರ್ವಪಕ್ಷ— 'ನಾಮ ಬ್ರಹ್ಮೇತ್ಯುಪಾಸೀತ' ಎಂಬ ಶ್ರುತಿಯು ಪ್ರತಿಪಾದಿಸುತ್ತಿರುವುದರಿಂದ ನಾಮವಾಗಾದಿಗಳನ್ನು ಬ್ರಹ್ಮನೆಂದು ಉಪಾಸನೆ ಮಾಡಬೇಕು. ಪೃಥಗುಪದೇಶಾಧಿಕರಣದಲ್ಲಿ ಭೇದವನ್ನು ಹೇಳಿದ್ದರಿಂದ ಹೀಗೆ ಅಭೇದವನ್ನು ಉಪಾಸನೆ ಮಾಡುವುದು ಸರಿಯಲ್ಲ ಎಂದು ಹೇಳಬಾರದು. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಪ್ರಸಿದ್ಧಿ–ಅಪ್ರಸಿದ್ಧಿಗಳು ಅಪ್ರಯೋಜಕ. ಉಪಾಸನೆಗೆ ಮುಖ್ಯವಾದದ್ದು ಫಲವಿಶೇಷ ಎಂದು ಸಮರ್ಥಿಸಲಾಗಿದೆ. ಹಾಗಾದರೆ ಇಲ್ಲಿಯೂ 'ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋ ಗತಂ ತತ್ರಾಸ್ಯ ಕಾಮಚಾರೋ ಭವತಿ' ಎಂಬ ಶ್ರುತಿಯಲ್ಲಿ ಕಾಮಚಾರ (ಯಥೇಚ್ಛವಾಗಿ ವರ್ತಿಸುವುದು) ಎಂಬ ಫಲವಿಶೇಷವನ್ನು ಹೇಳಿದ್ದರಿಂದ ನಾಮವಾಗಾದಿ ಪ್ರತಿಮೆಗಳನ್ನು ಬ್ರಹ್ಮನೆಂದು ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ 'ಯುಕ್ತಿವಿವೇಕ' (ಪೂರ್ವಾಧಿಕರಣ ನ್ಯಾಯದಿಂದ ವಿಚಾರಮಾಡುವುದು) ಎಂಬುದು. ಇದನ್ನು ಮತ್ತು 'ಸಂಧಿಗ್ರಹ' (ಸಂಧಿನಾ=ಉಪಪತ್ತ್ಯಾ ಗ್ರಹಃ=ಅಂಗೀಕಾರಃ=ಅಂದರೆ ಯಾವುದು ಯುಕ್ತಿ

ಯುಕ್ತವೋ ಅದನ್ನು ಒಪ್ಪಿಕೊಳ್ಳಬೇಕು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ತರ್ಹಿ ವಿಶೇಷವತ್ತ್ವಾದೇವ ಪ್ರತೀಕಮಪೀಶ್ವರ ಇತ್ಯುಪಾಸ್ಯಮಿತಿ ನಾಸ್ತಿ । ಯತ್ರ ಸಂಧಿರುಪಪತ್ತಿರ್ವಿದ್ಯತೇ ತಸ್ಯೈವ ಗ್ರಾಹ್ಯತ್ವಾತ್ । ಅನ್ಯಸ್ಯೇಶತ್ವಗ್ರಹಣಸ್ಯ ಮಿಥ್ಯಾಜ್ಞಾನತ್ವಾದೇವಾನುಪಪತ್ತೇಃ ॥ ೩ ॥**

**ಭಾವಾರ್ಥ**—ಫಲವಿಶೇಷವಿರುವುದರಿಂದ ಆತ್ಮತ್ವವನ್ನು ಉಪಾಸನೆ ಮಾಡುವುದಾದರೆ ಕಾಮಚಾರವೆಂಬ ಫಲವಿಶೇಷವಿರುವುದರಿಂದ ನಾಮವಾಗಾದಿ ಪ್ರತೀಕವನ್ನೂ ಬ್ರಹ್ಮನೆಂದು ಉಪಾಸನೆ ಮಾಡಬೇಕು ಎಂದೇನೂ ಇಲ್ಲ. ಯಾವ ವಿಷಯದಲ್ಲಿ ಸಂಧಿ=ಉಪಪತ್ತಿ ಇದೆಯೋ ಅದನ್ನೇ ಸ್ವೀಕರಿಸಬೇಕು. ಪ್ರತೀಕಕ್ಕಿಂತ ಭಿನ್ನನಾದ ಈಶ್ವರನನ್ನು ಪ್ರತೀಕವೆಂದು ಉಪಾಸನೆಮಾಡುವುದು ಮಿಥ್ಯಾಜ್ಞಾನವಾದ್ದರಿಂದಲೇ ಅನುಪಪನ್ನವಾಗಿದೆ.

**ವಿವರಣೆ**— ಯಾವುದು ಯುಕ್ತಿಯುಕ್ತವೋ ಅದನ್ನು ಒಪ್ಪಿಕೊಳ್ಳಬೇಕು. ನಾಮಾಭಿಮಾನಿನಿಯಾದ ಉಷಾ ಮೊದಲಾದ ದೇವತೆಗಳು ಪ್ರತಿಮಾ ಸ್ಥಾನೀಯರು. ಅವರನ್ನು ಬ್ರಹ್ಮನೆಂದು ಉಪಾಸನೆ ಮಾಡುವುದು ಮಿಥ್ಯಾಜ್ಞಾನವಾಗುತ್ತದೆ. ಅದು ಯುಕ್ತಿಯುಕ್ತವಲ್ಲ. ಆದ್ದರಿಂದ ಪ್ರತೀಕವನ್ನೂ ಬ್ರಹ್ಮನೆಂದು ಉಪಾಸನೆ ಮಾಡಬಾರದು.

'ನಾಮ ಬ್ರಹ್ಮೇತ್ಯುಪಾಸೀತ' ಎಂಬ ಶ್ರುತಿಗೆ ನಾಮಾಭಿಮಾನಿನಿಯಾದ ಉಷೆಯಲ್ಲಿ ಬ್ರಹ್ಮನ ಉಪಾಸನೆಯನ್ನು ಮಾಡಬೇಕು ಎಂದು ಅರ್ಥವನ್ನು ಮಾಡಬೇಕು. ಏಕೆಂದರೆ ಪೃಥಗುಪದೇಶಾಧಿಕರಣದಲ್ಲಿ ಭೇದವನ್ನು ಹೇಳಿದ್ದರಿಂದ. 'ನಾಮ' ಎಂದು ಪ್ರಥಮಾವಿಭಕ್ತಿಯು ಶ್ರುತವಾಗಿದೆ. ಅದಕ್ಕೆ 'ನಾಮ್ನಿ' ಎಂದು ಸಪ್ತಮೀವಿಭಕ್ತಿಯ ಅರ್ಥವನ್ನು ಹೇಗೆ ಮಾಡುವುದು? ಎಂದರೆ, 'ಸಪ್ತಸು ಪ್ರಥಮಾ' ಎಂಬ ಸೂತ್ರವು ಏಳು ವಿಭಕ್ತಿಗಳ ಅರ್ಥಗಳಲ್ಲಿಯೂ ಪ್ರಥಮ ವಿಭಕ್ತಿಯನ್ನು ವಿಧಾನಮಾಡುತ್ತದೆ. ಅದಕ್ಕನುಸಾರವಾಗಿ 'ನಾಮ್ನಿ' ಎಂದರ್ಥ ಮಾಡಿದರೆ ಯಾವ ಅನುಪಪತ್ತಿಯೂ ಇಲ್ಲ.

**ಸೂತ್ರಾರ್ಥ—**

**ಓಂ ನ ಪ್ರತೀಕೇ ನ ಹಿ ಸಃ ಓಂ**

ಪ್ರತೀಕೇ=ನಾಮಾದಿಪ್ರತೀಕದ ವಿಷಯದಲ್ಲಿ ನ=ಆತ್ಮನೆಂದು ಉಪಾಸನೆ ಮಾಡಬಾರದು. ಏಕೆಂದರೆ, ಹಿ=ಯಾವ ಕಾರಣದಿಂದ ಸಃ=ಪ್ರಸ್ತುತನಾದ ವಿಷ್ಣು ನ=ಪ್ರತೀಕನಲ್ಲ.

## ಬ್ರಹ್ಮದೃಷ್ಟ್ಯಧಿಕರಣ (4-1-4)

ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ಎಂಬ ಏಕಸೂತ್ರಾತ್ಮಕವಾದ ಈ ಅಧಿಕರಣದಲ್ಲಿ ಬ್ರಹ್ಮತ್ವವು ವಿಷಯ. ಹಿಂದಿನ ಅಧಿಕರಣಗಳಲ್ಲಿ ಆತ್ಮತ್ವದ ಉಪಾಸನೆಯು ಅತ್ಯವಶ್ಯಕ, ಗುಣಾಂತರಗಳ ಉಪಾಸನೆಯು ಅನಾವಶ್ಯಕ ಎಂದು ಪ್ರತಿಪಾದಿಸಿರುವುದರಿಂದ ಸಂಶಯ ಬರುತ್ತದೆ– ಬ್ರಹ್ಮತ್ವವನ್ನು ಸದಾ ಉಪಾಸನೆ ಮಾಡಬೇಕೋ? ಬೇಡವೋ? ಎಂದು.

**ಪೂರ್ವಪಕ್ಷ—** ಬ್ರಹ್ಮತ್ವದ ಉಪಾಸನೆಯನ್ನು ಮಾಡುವುದಾದರೂ ವಿಷ್ಣುವಿನ ಅನುಗ್ರಹಕ್ಕಾಗಿ. ಅವನ ಅನುಗ್ರಹವು ಪ್ರತಿನಿತ್ಯ ಬೇರೆ ಬೇರೆ ಗುಣಗಳನ್ನು ಉಪಾಸನೆ ಮಾಡಿದರೇ ಆಗುತ್ತದೆಯೇ ಹೊರತು ನಿತ್ಯವೂ ಬ್ರಹ್ಮತ್ವದ ಉಪಾಸನೆಯಿಂದಲ್ಲ. ಆತ್ಮೋಪಗಮಾಧಿಕರಣದಲ್ಲಿ ಫಲವಿಶೇಷವಿರುವುದರಿಂದ ಸರ್ವದಾ ಆತ್ಮತ್ವದ ಉಪಾಸನೆಯನ್ನು ಮಾಡಬೇಕೆಂದು ಸಮರ್ಥಿಸಲಾಗಿತ್ತು. ಆದರೆ ಯಾವಾಗಲೂ ಬ್ರಹ್ಮತ್ವದ ಉಪಾಸನೆಯನ್ನು ಮಾಡುವುದರಿಂದ ಫಲವಿಶೇಷವು ಕಾಣುತ್ತಿಲ್ಲ. ಆದ್ದರಿಂದ ಸದಾ ಬ್ರಹ್ಮತ್ವದ ಉಪಾಸನೆಯನ್ನು ಮಾಡಬಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿನ್ಯಾಸ' (ವಿ=ವಿವಿಧವಾದ ಗುಣಗಳ ನ್ಯಾಸ=ಧ್ಯಾನ) ಎಂಬುದು. ಇದನ್ನು ಮತ್ತು 'ಸಾಧನ' (ಬ್ರಹ್ಮತ್ವದ ಉಪಾಸನೆಯೇ ಸಾಧನೆಗಳಲ್ಲಿ ಅಧಿಕಸಾಧನವಾಗಿದೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪ್ರತಿದಿನಂ ವಿವಿಧಗುಣನ್ಯಾಸೇನ ಭಗವತ್ಪ್ರೀತ್ಯುಪಪತ್ತೇರ್ನ ಬ್ರಹ್ಮತಾದೃಷ್ಟಿನಿಯಮ ಇತಿ ವಾಚ್ಯಮ್ । ಅಶೇಷಗುಣಾಂತರ್ಭಾವೇಣ ತಸ್ಯೈವಾಧಿಕಸಾಧನತ್ವಾತ್ ॥ ೪ ॥**

**ಭಾವಾರ್ಥ—**ಪ್ರತಿನಿತ್ಯವು ಬೇರೆಬೇರೆ ಗುಣಗಳನ್ನು ಧ್ಯಾನಮಾಡುವುದರಿಂದ ಭಗವಂತನ ಅನುಗ್ರಹವು ಆಗುವುದರಿಂದ ಬ್ರಹ್ಮತ್ವದ ಉಪಾಸನೆಯನ್ನು ಮಾಡಬೇಕು ಎಂಬ ನಿಯಮವು ಕೂಡುವುದಿಲ್ಲ ಎಂಬ ಪೂರ್ವಪಕ್ಷವು ಸರಿಯಲ್ಲ. ಬ್ರಹ್ಮತ್ವದಲ್ಲಿಯೇ ಎಲ್ಲ ಗುಣಗಳು ಸೇರಿರುವುದರಿಂದ ಅದರ ಉಪಾಸನೆಯೇ ಹೆಚ್ಚು ಭಗವಂತನ ಅನುಗ್ರಹಕ್ಕೆ ಸಾಧನವಾಗಿದೆ.

**ವಿವರಣೆ—** ಬೇರೇ ಬೇರೆ ಗುಣಗಳನ್ನು ಉಪಾಸನೆ ಮಾಡುವುದರಿಂದ ಯಾವ ಪ್ರೀತಿ ಉಂಟಾಗುವುದೋ ಅದಕ್ಕಿಂತ ಅಧಿಕವಾದ ಪ್ರೀತಿ ಬ್ರಹ್ಮತ್ವದ ಉಪಾಸನೆಯಿಂದಾಗುತ್ತದೆ. ಏಕೆಂದರೆ ಎಲ್ಲ ಗುಣಗಳು ಬ್ರಹ್ಮತ್ವದಲ್ಲಿ ಅಂತರ್ಗತವಾದ್ದರಿಂದ. ಆದ್ದರಿಂದ ಸರ್ವದಾ ಬ್ರಹ್ಮತ್ವದ ಉಪಾಸನೆಯನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

**ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ**

ಬ್ರಹ್ಮದೃಷ್ಟಿಃ=ಪರಮಾತ್ಮನಲ್ಲಿ ಬ್ರಹ್ಮತ್ವದ ಉಪಾಸನೆಯನ್ನು ಸರ್ವದಾ ಮಾಡಬೇಕು. ಏಕೆಂದರೆ ಉತ್ಕರ್ಷಾತ್=ಗುಣಪೂರ್ಣತ್ವರೂಪವಾದ ಉತ್ಕರ್ಷವು ಬ್ರಹ್ಮಪದಪ್ರವೃತ್ತಿಗೆ ನಿಮಿತ್ತವಾದ್ದರಿಂದ, ಅಥವಾ ಉತ್ಕರ್ಷಾತ್=ಇತರ ಉಪಾಸನೆಗಳಿಗಿಂತಲೂ ಈ ಉಪಾಸನೆ ಉತ್ಕೃಷ್ಟವಾದ್ದರಿಂದ.

## ಆದಿತ್ಯಾದಿಮತ್ಯಧಿಕರಣ (4-1-5)

ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ತಮ್ಮ ಹುಟ್ಟಿಗೆ ಕಾರಣವಾದ ಭಗವಂತನ

ಅಂಗದಲ್ಲಿ ಆಶ್ರಿತರಾಗಿದ್ದೇವೆ ಎಂಬ ದೇವತೆಗಳ ಉಪಾಸನೆಯು ವಿಷಯ. ಕೆಲವುಗಳ ಉಪಾಸನೆಯನ್ನು ಮಾಡುವುದು ಮಾಡದೆ ಇರುವುದು ಕಂಡಿರುವುದರಿಂದ ಸಂಶಯ ಬರುತ್ತದೆ- ದೇವತೆಗಳು ಭಗವಂತನ ಅಂಗದಲ್ಲಿ ಆಶ್ರಿತರಾಗಿದ್ದೇವೆ ಎಂಬ ಉಪಾಸನೆಯನ್ನು ಮಾಡಬೇಕೋ? ಬೇಡವೋ? ಎಂಬುದು ಸಂಶಯ.

**ಪೂರ್ವಪಕ್ಷ—** ಸೂರ್ಯಾದಿದೇವತೆಗಳು ಯಾವಾಗಲೂ ಭಗವಂತನ ಅಂಗಗಳಲ್ಲಿ ಇರುವುದಾಗಿದ್ದರೆ ಆರೀತಿ ಉಪಾಸನೆಯು ಯೋಗ್ಯವಾಗುತ್ತಿತ್ತು. ಆದರೆ ಅವರು ಬೇರೆ ಕಡೆಗಳಲ್ಲಿಯೂ ಸಂಚರಿಸುತ್ತಿರುತ್ತಾರೆ. ಆದ್ದರಿಂದ ಆ ರೀತಿಯ ಉಪಾಸನೆ ಮಿಥ್ಯೋಪಾಸನೆ ಆಗುವುದರಿಂದ ಮಾಡಬಾರದು. ದೇವತೆಗಳಿಗೂ ಪರಮಾತ್ಮನ ಅವಯವಗಳಿಗೂ ಆಶ್ರಯಆಶ್ರಯಿಭಾವ ಸಂಬಂಧವಿದ್ದರೂ ಅಂಗಾಶ್ರಿತತ್ವೇನ ಉಪಾಸನೆ ಮಾಡಬಾರದು ಎಂದಮೇಲೆ ಪರಮಾತ್ಮನು ದೇವತೆಗಳಿಗೆ ಸ್ವಾಮಿಯಾಗಿದ್ದರೂ ಸ್ವಾಮಿತ್ವೇನ(ಆತ್ಮತ್ವೇನ)ನೂ ಉಪಾಸನೆಯನ್ನು ಮಾಡಬಾರದು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಚಾರ' (ವಿ=ವಿವಿಧ ಸ್ಥಳಗಳಲ್ಲಿ ಚಾರ=ಸಂಚಾರ) ಎಂಬುದು. ಇದನ್ನು ಮತ್ತು 'ಆಪ್ತಕೃತ್ಯ' (ಅಭೀಷ್ಟವಾದ ಮೋಕ್ಷ ಸಿದ್ಧಿ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ವಿವಿಧಸ್ಥಾನೇಷ್ವಾದಿತ್ಯಾದೀನಾಂ ಚರಣಾದ್ ವಿಷ್ಣ್ವಂಗೇಷ್ವಾದಿತ್ಯಾದಿಮತಿನಿಯಮೋ ನಾಸ್ತೀತಿ ವಾಚ್ಯಮ್ । ತತ್ಕೃತಾವೇವ ಕೃತ್ಯಸ್ಯಾಪ್ತತ್ವಾದಾದಿತ್ಯಾದೀನಾಮ್ ॥ ೫ ॥**

**ಭಾವಾರ್ಥ—**ಆದಿತ್ಯನೇ ಮೊದಲಾದ ದೇವತೆಗಳು ಬೇರೆಬೇರೆ ಸ್ಥಳಗಳಲ್ಲಿ ಸಂಚಾರ ಮಾಡುತ್ತಾರೆ. ಆದ್ದರಿಂದ 'ಭಗವಂತನ ಅಂಗಾಶ್ರಿತರಾಗಿದ್ದೇವೆ' ಎಂದು ಉಪಾಸನೆಯನ್ನು ಮಾಡಲೇಬೇಕೆಂಬ ನಿಯಮವಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಆದಿತ್ಯಾದಿದೇವತೆಗಳಿಗೆ ಆರೀತಿಯ ಉಪಾಸನೆಯಿಂದಲೇ ಮೋಕ್ಷವನ್ನು ಪಡೆಯಲು ಸಾಧ್ಯವಾಗುತ್ತದೆ.

**ವಿವರಣೆ—**ಆದಿತ್ಯಾದಿದೇವತೆಗಳು ಭಗವಂತನನ್ನು ಉಪಾಸನೆ ಮಾಡುವಾಗ

ತಮಗೆ ಆಶ್ರಯವಾದ ಚಕ್ಷುರಾದಿ ಅಂಗಗಳುಳ್ಳವನು ಎಂದು (ಭಗವಂತನ ಅಂಗಗಳಲ್ಲಿ ಆಶ್ರಿತರಾಗಿದ್ದೇವೆ) ಎಂದು ಉಪಾಸನೆಯನ್ನು ಮಾಡಬೇಕು. ಆಗ ಮಾತ್ರ ಆ ದೇವತೆಗಳು ತಮ್ಮ ಕರ್ತವ್ಯವನ್ನು ಪೂರ್ಣಗೊಳಿಸಿದಂತಾಗುವುದು. ಚಕ್ಷುರಾದಿಗಳಿಂದ ಹುಟ್ಟಿದ ದೇವತೆಗಳಿಗೆ ಅಲ್ಲಿಯೇ ಲಯವಾಗುತ್ತದೆ. ಅದೇ ಮುಕ್ತಿ. ಆದ್ದರಿಂದ ಹಾಗೆಯೇ ಉಪಾಸನೆಯನ್ನು ಮಾಡಬೇಕು. ದೇವತೆಗಳಿಗೆ ಬೇರೇ ಕಡೆಗಳಲ್ಲಿ ಸಂಚಾರವಿದ್ದರೂ ಒಂದು ರೂಪದಿಂದ ಭಗವಂತನ ಅವಯವ ಗಳಲ್ಲಿಯೂ ಇರುವುದರಿಂದ ಮಿಥ್ಯೋಪಾಸನೆ ಯಾಗವುದಿಲ್ಲ. ಅದರಂತೆ ಆತ್ಮತ್ವೇನ ಉಪಾಸನೆಯನ್ನೂ ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ

ಅಂಗೇ=ಪರಮಾತ್ಮನ ಅಂಗದಲ್ಲಿ ಸ್ವೋತ್ಪತ್ತ್ಯಂಗದಲ್ಲಿ ತಾವು ಆಶ್ರಿತರೆಂದು ಆದಿತ್ಯಾದಿಮತಯಃ ಚ=ಆದಿತ್ಯನೇ ಮೊದಲಾದ ದೇವತೆಗಳಿಂದ ಉಪಾಸನೆಯು ಮಾಡಲ್ಪಡಬೇಕು. ಏಕೆಂದರೆ, ಉಪಪತ್ತೇಃ=ಮಿಥ್ಯೋಪಾಸನೆ ಆಗುವುದಿಲ್ಲ ಮತ್ತು ಅವರು ಹುಟ್ಟಿದ ಅಂಗಗಳಲ್ಲಿಯೇ ಮೋಕ್ಷವನ್ನು ಹೊಂದುತ್ತಾರೆ ಎಂದು ಯುಕ್ತಿ ಇರುವುದರಿಂದ.

## ಆಸೀನಾಧಿಕರಣ (4-1-6)

ಓಂ ಆಸೀನಃ ಸಂಭವಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಆಸನವು ವಿಷಯ. ಆತ್ಮತ್ವಾದಿಗುಣಗಳನ್ನು ಸರ್ವಥಾ ಉಪಾಸನೆ ಮಾಡುವುದು ಕಂಡಿದೆ. ಬೇರೆ ಗುಣಗಳನ್ನು ಉಪಾಸನೆ ಮಾಡದಿರುವುದೂ ಕಂಡಿದೆ. ಆದ್ದರಿಂದ ಸಂಶಯ ಬರುತ್ತದೆ– ಆಸನವು ಸರ್ವಥಾ ಅಪೇಕ್ಷಿತವೋ? ಅಲ್ಲವೋ?

**ಪೂರ್ವಪಕ್ಷ—** ಎಲ್ಲ ಉಪಾಸನೆಗಳೂ ಭಗವಂತನ ಅಪರೋಕ್ಷಕ್ಕಾಗಿಯೇ ಹೇಳಲ್ಪಟ್ಟಿವೆ. ಮನಸ್ಸನ್ನು ಏಕಾಗ್ರವಾಗಿ ಭಗವಂತನಲ್ಲಿ ನೆಲೆಗೊಳಿಸುವುದರಿಂದಲೂ ಅಪರೋಕ್ಷವಾಗುವಾಗ ಆಸನಾದಿಗಳಿಂದ ಯಾವ ಪ್ರಯೋಜನವೂ ಇಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಂಜ್ಞಾ' (ಸಂ=ಸಮೀಚೀನವಾದ ಜ್ಞಾ=ಜ್ಞಾನ) ಎಂಬುದು. ಇದನ್ನು ಮತ್ತು 'ವಿಶೇಷಕಾರ್ಯ' (ಮನಸ್ಸಿಗೆ ನಿಶ್ಚಲತ್ವ ಸಂಪಾದನೆ ಎಂಬ ವಿಶೇಷಕಾರ್ಯ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಜ್ಞಾನಸ್ಯ ಸಮ್ಯಕ್ ತದ್ವಿಷಯತ್ವಮಾತ್ರೇಣ ಪೂರ್ತೇರಾಸನಾದಿನಾ ನ ಕಾರ್ಯಮಿತಿ ವಾಚ್ಯಮ್ । ಆಸನಾದಿನಾ ನಿಶ್ಚಲತ್ವಾದಿವಿಶೇಷಕಾರ್ಯೋ-ಪಪತ್ತೇಃ ।। ೬ ।।**

**ಭಾವಾರ್ಥ**—ಮನಸ್ಸು ಭಗವಂತನನ್ನು ವಿಷಯೀಕರಿಸುವುದರಿಂದಲೇ ಜ್ಞಾನವು ಲಭಿಸುವಾಗ ಆಸನಾದಿಗಳಿಂದ ಯಾವ ಪ್ರಯೋಜನವೂ ಇಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ ಮನಸ್ಸಿಗೆ ನಿಶ್ಚಲತ್ವವೇ ಮೊದಲಾದ ವಿಶೇಷಕಾರ್ಯವುಂಟಾಗುವುದರಿಂದ ಆಸನದ ಆವಶ್ಯಕತೆ ಇದೆ.

**ವಿವರಣೆ**— ಶರೀರದಲ್ಲಿ ಚಲನೆಯಾದರೆ ಮನಸ್ಸಿನಲ್ಲಿಯೂ ಚಲನೆಯಾಗುತ್ತದೆ. ಶರೀರವು ನಿಶ್ಚಲವಾದರೆ ಮನಸ್ಸು ನಿಶ್ಚಲವಾಗುತ್ತದೆ. ಆ ಶರೀರದ ನಿಶ್ಚಲತ್ವವು ಆಸನದಿಂದಲೇ ಸಾಧ್ಯ ವಾಗುವುದರಿಂದ ಆಸನಾದಿಗಳನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ**—

**ಓಂ ಆಸೀನಃ ಸಂಭವಾತ್ ಓಂ**

ಆಸೀನಃ=ಜಿಜ್ಞಾಸು ಆಸನದಲ್ಲಿ ಕುಳಿತೇ ಉಪಾಸನೆಯನ್ನು ಮಾಡಬೇಕು. ಏಕೆಂದರೆ, ಸಂಭವಾತ್=ಕುಳಿತಾಗಲೇ ಧ್ಯಾನವು ಸಾಧ್ಯವಾಗುವುದರಿಂದ.

## ಆಪ್ರಾಯಣಾಧಿಕರಣ (4-1-7)

ಓಂ ಆಪ್ರಾಯಣಾತ್ ತತ್ರಾಪಿ ದೃಷ್ಟಮ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಪ್ರಕೃತವಾದ ಧ್ಯಾನವೇ ವಿಷಯ. ಧ್ಯಾನವು ಜ್ಞಾನಸಾಧನ ಎಂದು ಹೇಳಿರುವುದು, ಅಪರೋಕ್ಷ ಜ್ಞಾನಿಗಳೂ

ಧ್ಯಾನವನ್ನು ಮಾಡುತ್ತಿದ್ದಾರೆ ಎಂದು 'ವಿಶ್ವೇದೇವಾ ಉಪಾಸತೇ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿರುವುದು. ಇವುಗಳಿಂದ ಸಂಶಯ ಬರುತ್ತದೆ– ಧ್ಯಾನವನ್ನು ಅಪರೋಕ್ಷಜ್ಞಾನ ಪಡೆಯುವ ವರೆಗೆ ಮಾಡಬೇಕೋ? ಅಥವಾ ಮುಕ್ತಿಪರ್ಯಂತ ಮಾಡಬೇಕೋ? ಎಂದು.

**ಪೂರ್ವಪಕ್ಷ—** 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯು ಅಪರೋಕ್ಷಜ್ಞಾನಕ್ಕಾಗಿ ಶ್ರವಣ, ಮನನ, ಧ್ಯಾನಗಳನ್ನು ಮಾಡಬೇಕೆಂದು ವಿಧಿಸುತ್ತಿದೆ. ಅಪರೋಕ್ಷಜ್ಞಾನಕ್ಕಾಗಿ ವಿಧಾನ ಮಾಡಿದ ಧ್ಯಾನವನ್ನು ಮುಕ್ತಿಯ ವರೆಗೂ ಮಾಡಬೇಕೆಂಬ ನಿಯಮವಿಲ್ಲ. ಮೋಕ್ಷದಲ್ಲಿ ಆನಂದಾತಿಶಯ ಪ್ರಾಪ್ತಿಗಾಗಿ ಧ್ಯಾನವನ್ನು ನಿಯಮೇನ ಮಾಡಬೇಕೆಂಬುದೂ ಸರಿಯಲ್ಲ. ಶ್ರವಣ, ಮನನಗಳಿಂದಲೂ ಆನಂದಾತಿಶಯ ಲಾಭವಾಗುತ್ತದೆ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ನಾನಾಪ್ರವೃತ್ತಿ' (ಶ್ರವಣಾದಿ ನಾನಾ ಸಾಧನಗಳ ಪ್ರಸಕ್ತಿ ಇರುವುದು) ಎಂಬುದು. ಇದನ್ನು ಮತ್ತು **'ವಿಶೇಷಕಾರ್ಯ'** (ಧ್ಯಾನವಿಲ್ಲದೆ ಅಪರೋಕ್ಷಜ್ಞಾನವೆಂಬ ವಿಶೇಷಕಾರ್ಯವುಂಟಾಗುವುದಿಲ್ಲ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾನ್ಯಸ್ಯಾಪಿ ಸಾಧನಸ್ಯ ಕರ್ತುಂ ಶಕ್ಯತ್ವಾನ್ನ ಯಾವನ್ಮುಕ್ತಿ ಧ್ಯಾನಂ ಕಾರ್ಯಮಿತಿ ವಾಚ್ಯಮ್ । ಧ್ಯಾನಂ ವಿನಾಽಪರೋಕ್ಷಜ್ಞಾನಾಖ್ಯವಿಶೇಷ-ಕಾರ್ಯಾನುಪಪತ್ತೇಃ ।**

**ಭಾವಾರ್ಥ—**ಆನಂದಾತಿಶಯಕ್ಕಾಗಿ ಧ್ಯಾನಕ್ಕಿಂತಲೂ ಬೇರೆಯಾದ ಶ್ರವಣ, ಮನನಗಳನ್ನು ಮಾಡಲು ಸಾಧ್ಯವಿರುವಾಗ ಮುಕ್ತಿಯವರೆಗೂ ಧ್ಯಾನವನ್ನು ಮಾಡಬೇಕೆಂಬುದು ಸರಿಯಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಧ್ಯಾನವಿಲ್ಲದೆ ಅಪರೋಕ್ಷಜ್ಞಾನವೆಂಬ ವಿಶೇಷಕಾರ್ಯವು ಕೂಡುವುದಿಲ್ಲವಾದ್ದರಿಂದ.

**ವಿವರಣೆ—** ಧ್ಯಾನವಿಲ್ಲದೆ ಅಪರೋಕ್ಷಜ್ಞಾನವೆಂಬ ವಿಶೇಷಕಾರ್ಯ ವುಂಟಾಗುವುದಿಲ್ಲ ಎಂಬುದು ನಿರ್ವಿವಾದಿತ ವಿಷಯ. ಹಾಗಾದರೆ ಅಪರೋಕ್ಷ ವಾಗುವ ವರೆಗೂ ಧ್ಯಾನ ಮಾಡಬೇಕೆಂದು ಸಿದ್ಧವಾಗುವುದೇ ಹೊರತು ಮುಕ್ತಿಯವರೆಗೆ ಎಂದು ಹೇಗೆ ಸಿದ್ಧವಾಗುತ್ತದೆ? ಎಂದರೆ ಮೂಲದಲ್ಲಿ 'ಧ್ಯಾನಂ

ವಿನಾऽऽನಂದಾತಿಶಯಾಖ್ಯ ವಿಶೇಷಕಾರ್ಯಾನುಪಪತ್ತೇಃ' ಎಂಬುದನ್ನು ಸೇರಿಸಿಕೊಳ್ಳಬೇಕು. ಧ್ಯಾನವಿಲ್ಲದೇ ಮುಕ್ತಿಯಲ್ಲಿ ಆನಂದಾತಿಶಯವೆಂಬ ವಿಶೇಷಕಾರ್ಯ ಉಂಟಾಗುವುದಿಲ್ಲ. ಆದ್ದರಿಂದಲೇ ಅಪರೋಕ್ಷಜ್ಞಾನವಾದ ಮೇಲೆಯೂ ಶುಕಾದಿಜ್ಞಾನಿಗಳು ಧ್ಯಾನವನ್ನು ಮಾಡುತ್ತಿದ್ದಾರೆ. ಹಾಗಾಗಿ ಮೋಕ್ಷದವರೆಗೂ ಧ್ಯಾನವನ್ನು ಮಾಡಬೇಕೆಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

### ಓಂ ಆಪ್ರಾಯಣಾತ್ ತತ್ರಾಪಿ ಹಿ ದೃಷ್ಟಮ್ ಓಂ

ಆಪ್ರಾಯಣಾತ್=ಸಾಧಕನು ಮೋಕ್ಷದವರೆಗೂ ಧ್ಯಾನವನ್ನು ಮಾಡಬೇಕು. ಹಿ=ಏಕೆಂದರೆ ತತ್ರಾಪಿ=ಮೋಕ್ಷದಲ್ಲಿಯೂ ಧ್ಯಾನವಿದೆ ಎಂದು ದೃಷ್ಟಂ=ಶ್ರುತಿ, ಸ್ಮೃತಿಗಳಲ್ಲಿ ಸಿದ್ಧವಾಗಿದೆ.

## ತದಧಿಗಮಾಧಿಕರಣ (4-1-8)

ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಜ್ಞಾನವು ವಿಷಯ. ಮೊಂಡಾದ ಕೊಡಲಿಯಿಂದ ಛೇದನಕ್ರಿಯೆ ಆಗದಿರುವುದು, ಹರಿತವಾದ ಕೊಡಲಿಯಿಂದ ಛೇದನಕ್ರಿಯೆ ಆಗುವುದೂ ಕಂಡಿರುವುದರಿಂದ ಸಂಶಯ ಬರುತ್ತದೆ– ಜ್ಞಾನವು ಮೋಕ್ಷಕ್ಕೆ ಸಾಧನವೋ? ಅಲ್ಲವೋ? ಎಂದು.

**ಪೂರ್ವಪಕ್ಷ—** ಜ್ಞಾನದಿಂದ ಮೋಕ್ಷವು ಲಭಿಸುವುದಿಲ್ಲ. ಜ್ಞಾನ ಬಂದ ನಂತರ ಕರ್ಮಗಳು ಇರುವುದರಿಂದ. ಪ್ರಾಯಶ್ಚಿತ್ತದಿಂದ ಕರ್ಮನಾಶವಾಗು ವಂತೆ ಜ್ಞಾನದಿಂದಲೇ ಕರ್ಮನಾಶವೂ ಆಗುವುದು ಎಂದು ಹೇಳಲು ಬರುವುದಿಲ್ಲ. 'ನಾಭುಕ್ತಂ ಕ್ಷೀಯತೇ ಕರ್ಮ' (ಭೋಗವಿಲ್ಲದೇ ಕರ್ಮನಾಶ ಆಗುವುದಿಲ್ಲ) ಎಂಬ ಸ್ಮೃತಿವಿರೋಧವು ಬರುತ್ತದೆ. ಒಂದು ವೇಳೆ ಜ್ಞಾನದಿಂದಲೇ ಕರ್ಮಕ್ಷಯ ವಾಗುವುದಾದರೆ ಆ ಕೂಡಲೆ ಮೋಕ್ಷವೂ ಲಭಿಸಬೇಕಾಗುವುದು. ಜ್ಞಾನವು ಹುಟ್ಟಿದ ಕೂಡಲೆ ಕರ್ಮವನ್ನು ನಾಶಪಡಿಸುವುದಿಲ್ಲ. ಆದ್ದರಿಂದ ಮೋಕ್ಷವಾಗುವುದಿಲ್ಲ ಎಂದು ಹೇಳುವುದಾದರೆ ಯಾವತ್ತಿಗೂ ಕರ್ಮಕ್ಷಯವೇ ಆಗಲು ಸಾಧ್ಯವಿಲ್ಲ.

ಏಕೆಂದರೆ ಜ್ಞಾನಕ್ಕೆ ಮನುಷ್ಯರಿಗೆ ಇರುವಂತೆ ವಿರಮ್ಯವ್ಯಾಪಾರವು (ಸ್ವಲ್ಪ ಕೆಲಸ ಮಾಡಿ ವಿಶ್ರಾಂತಿಪಡೆದು ಪುನಃ ಕೆಲಸ ಮಾಡುವುದು) ಕೂಡುವುದಿಲ್ಲ. ಆದ್ದರಿಂದ ಜ್ಞಾನವು ಮೋಕ್ಷಸಾಧನವಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕೃತಕೃತ್ಯತಾ' (ಜ್ಞಾನಬಂದ ಕೂಡಲೆ ಕರ್ಮಕ್ಷಯವಾಗುವುದು) ಎಂಬುದು. ಇದನ್ನು ಮತ್ತು 'ಕೃತಸಂಸ್ಥಿತಿ' (ಪಾರಬ್ಧ ಕರ್ಮವು ಜ್ಞಾನದಿಂದ ನಾಶವಾಗದೆ ಉಳಿಯುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಜ್ಞಾನೋದಯೇಽಶೇಷಕರ್ಮಕ್ಷಯೇ ಕೃತಕೃತ್ಯತ್ವಾತ್ ತದೈವ ಮುಕ್ತಿಃ, ನ ಚೇತ್ ಕರ್ಮಕ್ಷಯ ಇತಿ ವಾಚ್ಯಮ್ । ಪ್ರಾರಬ್ಧಸ್ಯೈವ ಕೃತಸ್ಯ ಯಾವದ್ಭೋಗಂ ಸಂಸ್ಥಿತೇಃ ।**

**'ಕರ್ಮಾಣಿ ಕ್ಷಪಯೇದ್ ವಿಷ್ಣುರಪ್ರಾರಬ್ಧಾನಿ ವಿದ್ಯಯಾ ।**
**ಪ್ರಾರಬ್ಧಾನಿ ತು ಭೋಗೇನ ಕ್ಷಪಯನ್ ಸ್ವಗತಿಂ ನಯೇತ್ ॥'**

**ಇತಿ ವಚನಾತ್ ॥ ೮ ॥**

**ಭಾವಾರ್ಥ**—ಜ್ಞಾನ ಪುಟ್ಟಿದ ಕೂಡಲೆ ಸಕಲಕರ್ಮಗಳೂ ನಾಶವಾದಾಗ ಕೃತಕೃತ್ಯನಾದ್ದರಿಂದ ಮುಕ್ತಿಯು ಲಭಿಸುವುದು. ಒಂದುವೇಳೆ ಜ್ಞಾನ ಬಂದ ಕೂಡಲೆ ಕರ್ಮಕ್ಷಯವಾಗುವುದಿಲ್ಲವೆಂದರೆ ಎಂದಿಗೂ ಕರ್ಮನಾಶವಾಗಲು ಸಾಧ್ಯವಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಪ್ರಾರಬ್ಧಕರ್ಮವು ಮಾತ್ರ ಭೋಗವಾಗುವವರೆಗೆ ಇರುತ್ತದೆ. 'ವಿಷ್ಣು ಅಪ್ರಾರಬ್ಧಕರ್ಮಗಳನ್ನು ಮಾತ್ರ ಜ್ಞಾನದಿಂದ ನಾಶಪಡಿಸುತ್ತಾನೆ. ಪ್ರಾರಬ್ಧಕರ್ಮಗಳನ್ನು ಭೋಗದಿಂದ ನಾಶಪಡಿಸುವವನಾಗಿ ತನ್ನ ಸ್ಥಾನವನ್ನು (ಮುಕ್ತಿಯನ್ನು) ಹೊಂದಿಸುತ್ತಾನೆ' ಎಂಬ ವಾಕ್ಯವು ಇದೆ.

**ವಿವರಣೆ**— ಜ್ಞಾನ ಬಂದಕೂಡಲೆ ಅಪ್ರಾರಬ್ಧವಾದ ಸಂಚಿತ, ಆಗಾಮಿ ಕರ್ಮಗಳು ನಾಶವಾಗುತ್ತವೆ. ಪ್ರಾರಬ್ಧಕರ್ಮವು ನಾಶವಾಗುವುದಿಲ್ಲ. ಅದು ಪ್ರತಿಬಂಧಕವಾಗಿರುವುದರಿಂದ ಕೂಡಲೆ ಮೋಕ್ಷವಾಗಲಿ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ, 'ನಾಭುಕ್ತಂ ಕ್ಷೀಯತೇ ಕರ್ಮ'. ಜ್ಞಾನವು ಮೋಕ್ಷಸಾಧನವಾಗಿದೆ ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

## ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ

ತದಧಿಗಮೇ=ಬ್ರಹ್ಮನ ಸಾಕ್ಷಾತ್ಕಾರವಾದಾಗ ಉತ್ತರಾಘಸ್ಯ=ಅಪರೋಕ್ಷ ಜ್ಞಾನ ಬಂದ ನಂತರ ಮಾಡಿದ ಪಾಪದ ಅಶ್ಲೇಷಃ=ಅಲೇಪವು ಪೂರ್ವಾಘಸ್ಯ= ಅಪರೋಕ್ಷಜ್ಞಾನ ಪೂರ್ವದ ಪಾಪದ ವಿನಾಶಃ=ನಾಶವು ಆಗುತ್ತದೆ. ಪ್ರಮಾಣ ವೇನೆಂದರೆ ತದ್ವ್ಯಪದೇಶಾತ್='ಕರ್ಮಾಣಿ ಕ್ಷಪಯೇದ್ ವಿಷ್ಣುಃ' ಮುಂತಾದ ವಚನಗಳಲ್ಲಿ ಹೇಳಿರುವುದರಿಂದ.

**ಇಲ್ಲಿಗೆ ನಾಲ್ಕನೆ ಅಧ್ಯಾಯದ ಮೊದಲನೆ ಪಾದ ಮುಗಿಯಿತು.**

# ಎರಡನೆಯ ಪಾದ

ಈ ಪಾದದಲ್ಲಿ ದೇವತೆಗಳಿಗೆ ತಮಗಿಂತ ಉತ್ತಮದೇವತೆಗಳಲ್ಲಿ ಲಯರೂಪವಾದ ಮೋಕ್ಷವನ್ನು, ಮನುಷ್ಯರಿಗೆ ಬ್ರಹ್ಮನಾಡಿಯ ಮೂಲಕ ಉತ್ಕ್ರಾಂತಿಯನ್ನೂ ನಿರೂಪಣೆ ಮಾಡುತ್ತಿದ್ದಾರೆ. ಆದ್ದರಿಂದಲೇ ಈ ಪಾದಕ್ಕೆ ಉತ್ಕ್ರಾಂತಿಪಾದ ಎಂದು ಹೆಸರು. ಈ ಪಾದದ ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ಹೀಗೆ ಸಂಗ್ರಹಿಸಿದ್ದಾರೆ.

**ವ್ಯಾಮಿಶ್ರತಾ ಕಾರ್ಯಕರತ್ವಮರ್ಥಕ್ಲೃಪ್ತಿಃ ಸುಧಾರ್ಢ್ಯಂ ಪರತಂತ್ರತಾ ಚ ।**
**ಸಮಾನಧರ್ಮಾಃ ಕೃತಶೇಷತಾ ಚ ಲೋಕೋಪಮಾ**
**ಪೂರ್ವಮತಾನುಸಾರಾಃ ॥**
**ವಿಶೇಷಸಾಮ್ಯಶ್ರುತಿರಾಢ್ಯತಾ ಚ ಸಮಾನಲೋಪೋ ಮಹಿಮಾವಿಶೇಷಃ ।**
**ಕೃತಾರ್ಥತಾ ಶಬ್ದನುಪ್ರವೃತ್ತಿಃ ಸಿದ್ಧಾಂತನಿರ್ಣೀತಿವಿಶೇಷಹೇತವಃ ॥**

ಭಾವಾರ್ಥ : ವಾಙ್ಮನಸ್ಯಧಿಕರಣದಲ್ಲಿ ವ್ಯಾಮಿಶ್ರತಾ, ವಿಶೇಷಸಾಮ್ಯಗಳು ಪೂರ್ವ ಪಕ್ಷ, ಸಿದ್ಧಾಂತಯುಕ್ತಿಗಳು. ಮನೋಧಿಕರಣ ಮತ್ತು ಆಧ್ಯಕ್ಷಾಧಿಕರಣಗಳಲ್ಲಿ ಕಾರ್ಯಕರತ್ವ ಆಢ್ಯತಾಗಳು, ಭೂತಾಧಿಕರಣ ಮತ್ತು ಅನೇಕಲಯಾಧಿಕರಣಗಳಲ್ಲಿ ಅರ್ಥಕ್ಲೃಪ್ತಿ, ಸಮಾನಲೋಪಗಳು, ಸಮನೇತ್ಯಧಿಕರಣದಲ್ಲಿ ಸುದೃಢತ್ವ, ಮಹಿಮಾಗಳು, ಪರಲಯಾಧಿಕರಣದಲ್ಲಿ ಪರತಂತ್ರತಾ, ವಿಶೇಷಗಳು, ಅವಿಭಾಗಾಧಿಕರಣದಲ್ಲಿ ಸಮಾನಧರ್ಮಾ, ಕೃತಾರ್ಥತಾಗಳು, ತದೋಕೋಧಿಕರಣದಲ್ಲಿ ಕೃತಶೇಷತಾ, ಶಬ್ದನುಪ್ರವೃತ್ತಿಗಳು ಯೋಗಿನೋಽಧಿಕರಣದಲ್ಲಿ ಲೋಕೋಪಮಾ, ಶಬ್ದನುಪ್ರವೃತ್ತಿಗಳು ಕ್ರಮವಾಗಿ ಪೂರ್ವಪಕ್ಷ ಸಿದ್ಧಾಂತಸಾಧಕ ಯುಕ್ತಿಗಳು.

## ವಾಙ್ಮನಸ್ಯಧಿಕರಣ (4-2-1).

ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ವಾಗಭಿಮಾನಿದೇವತೆಯು ವಿಷಯ. ವಾಗಭಿಮಾನಿದೇವತೆಗೆ ಮನೋಽಭಿಮಾನಿದೇವತೆಯಲ್ಲಿ ಲಯವನ್ನು ಹೇಳಿದ್ದರೂ

ವಿಶೇಷಪ್ರಮಾಣ ಕಾಣದಿರುವುದರಿಂದ ಸಂಶಯ ಬರುತ್ತದೆ– ವಾಗಭಿಮಾನಿ ದೇವತೆಗೆ ಮನೋಽಭಿಮಾನಿದೇವತೆಯಲ್ಲಿ ಲಯವಿದೆಯೋ? ಇಲ್ಲವೋ? ಎಂದು.

ಪೂರ್ವಪಕ್ಷ— 'ವಾಕ್ ಪೂರ್ವರೂಪಂ ಮನ ಉತ್ತರರೂಪಂ' ಎಂಬ ಶ್ರುತಿಯು ವಾಗಭಿಮಾನಿಗೆ ಪೂರ್ವರೂಪತ್ವವನ್ನು ಹೇಳಿ ಮನೋಽಭಿಮಾನಿಗೆ ಉತ್ತರರೂಪತ್ವವನ್ನು ಹೇಳುತ್ತಿದೆ. ಮತ್ತೊಂದು ಶ್ರುತಿಯಲ್ಲಿ ಮನೋಽಭಿಮಾನಿಗೆ ಪೂರ್ವರೂಪತ್ವವನ್ನು ಹೇಳಿ ವಾಗಭಿಮಾನಿಗೆ ಉತ್ತರರೂಪತ್ವವನ್ನು ಹೇಳಲಾಗಿದೆ. ಹೀಗೆ ವಾಕ್ಯಗಳಲ್ಲಿ ಪರಸ್ಪರ ಗೊಂದಲವಿರುವುದರಿಂದ ಯಾರು ಯಾರ ಅಧೀನ ವೆಂದು ನಿರ್ಣಯವಿಲ್ಲ. ಅಧೀನದೇವತೆಗೆ ಉತ್ತಮದೇವತೆಯಲ್ಲಿ ಲಯವೆಂಬ ನಿಯಮವಿರುವುದರಿಂದ ಯಾರಿಗೆ ಯಾರಲ್ಲಿ ಲಯವೆಂಬುದೂ ನಿರ್ಣಯ ವಾಗುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವ್ಯಾಮಿಶ್ರತಾ' (ವಾಕ್ಯಗಳಲ್ಲಿ ಗೊಂದಲ) ಎಂಬುದು. ಇದನ್ನು ಮತ್ತು 'ವಿಶೇಷಸಾಮ್ಯಶ್ರುತಿ' (ಪ್ರಾಧಾನ್ಯವನ್ನು ಸಾಮ್ಯವನ್ನು ಶ್ರುತಿಸಾರುತ್ತಿದೆ) ಎಂಬ ಸಿದ್ಧಾಂತಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**॥ ಹರಿಃ ಓಂ ॥ ನ ಚ 'ವಾಕ್ ಪೂರ್ವರೂಪಂ ಮನ ಉತ್ತರರೂಪಮ್' 'ಮನಃ ಪೂರ್ವರೂಪಂ ವಾಗುತ್ತರರೂಪಮ್' ಇತ್ಯುಕ್ತೇರ್ವ್ಯಾಮಿಶ್ರತ್ವಾದ- ನಿರ್ಣೀತಿರೇವ । 'ವಾಕ್ ಪೂರ್ವರೂಪಂ ಮನ ಉತ್ತರರೂಪಮ್' ಇತಿ ವಾಚಃ ಪೂರ್ವವರ್ಣದೇವತಾತ್ವನಿರ್ದೇಶ ಮಾತ್ರೇಣ 'ಮನಃ ಪೂರ್ವರೂಪಮ್' ಇತ್ಯನೇನ ಸಾಮ್ಯಮ್ । 'ಮನಸಾ ವಾ ಅಗ್ರೇ ಸಂಕಲ್ಪಯತ್ಯಥ ವಾಚಾ ವ್ಯಾಹರತಿ' ಇತಿ ಯುಕ್ತಿತೋ ವಿಶೇಷೋ ಮನಃ ಪೂರ್ವಕತ್ವಸ್ಯೈವ ಶ್ರುತ ಇತಿ ಪ್ರಾಧಾನ್ಯಂ ಮನಸ ಏವ ಹಿ ಜ್ಞಾಯತೇ ।**

**'ಸೃಷ್ಟೌ ಚ ವಿಲಯೇ ಚೈವ ಸದಾ ಪೂರ್ವಪ್ರವರ್ತನೇ ।**

**ನಿಯಂತೃತ್ವೇ ಚ ವಚಸೋ ಮನೋಽಧೀಶಂ ಶಿವೋ ಹಿ ತತ್ ॥'**

**ಇತಿ ಶ್ರುತೇಶ್ಚ ॥೧ ॥**

**ಭಾವಾರ್ಥ**—'ವಾಕ್ಕು ಪೂರ್ವರೂಪ, ಮನಸ್ಸು ಉತ್ತರರೂಪ', 'ಮನಸ್ಸು ಪೂರ್ವರೂಪ, ವಾಕ್ಕು ಉತ್ತರರೂಪ' ಎಂಬ ಶ್ರುತಿಗಳಲ್ಲಿ ಗೊಂದಲವಿರುವುದರಿಂದ (ನಿಯಮ್ಯ ನಿಯಾಮಕಭಾವವು ಸಿದ್ಧವಾಗುವುದಿಲ್ಲವಾದ್ದರಿಂದ ಯಾರಿಗೆ ಯಾರಲ್ಲಿ ಲಯ ಎಂಬುದು) ನಿರ್ಣಯವಾಗುವುದಿಲ್ಲ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, 'ವಾಕ್ ಪೂರ್ವರೂಪಂ ಮನ ಉತ್ತರರೂಪಮ್' ಎಂಬ ಶ್ರುತಿಯು ವಾಗಭಿಮಾನಿ ಭಗವದ್ರೂಪವನ್ನು ಪೂರ್ವದೇವತೆಯೆಂದು ನಿರ್ದೇಶ ಮಾಡಿದ್ದರಿಂದ ಮನೋಽಭಿಮಾನಿಯಾದ ಭಗವದ್ರೂಪಕ್ಕೆ ಪೂರ್ವರೂಪತ್ವವನ್ನು ಹೇಳುವ ಶ್ರುತಿಯೊಂದಿಗೆ ಸಮಾನವಾಗಿದೆ. 'ಮೊದಲು ಮನಸ್ಸಿನಿಂದ ಸಂಕಲ್ಪ ಮಾಡುತ್ತಾನೆ. ಅನಂತರ ಮಾತನಾಡುತ್ತಾನೆ' ಎಂದು ಯುಕ್ತಿ ಮೂಲಕವಾಗಿ ಮನಸ್ಸಿಗೆ ಪೂರ್ವರೂಪತ್ವವೆಂಬ ವಿಶೇಷವು ಶ್ರುತಿಯಲ್ಲಿ ಹೇಳಲ್ಪಟ್ಟಿರುವುದರಿಂದ ಮನಸ್ಸಿಗೆ ಪ್ರಾಧಾನ್ಯವಿದೆ ಎಂದು ತಿಳಿಯಲ್ಪಡುತ್ತದೆ. 'ಸೃಷ್ಟಿಯಲ್ಲಿ, ಲಯದಲ್ಲಿ, ತಮ್ಮ ಅವರರಿಗಿಂತ ಮೊದಲು ತಾವು ಪ್ರವೃತ್ತಿ ಮಾಡುವುದರಲ್ಲಿ ಇತರರನ್ನು ನಿಯಂತ್ರಿಸುವಿಕೆಯಲ್ಲಿ ವಾಗಭಿಮಾನಿಯು (ಉಮಾದೇವಿಯು) ಮನೋಽಭಿ ಮಾನಿಯ ಅಧೀನವೇ. ಏಕೆಂದರೆ ಮನೋಽಭಿಮಾನಿಯು ರುದ್ರದೇವನಲ್ಲವೇ!' ಎಂಬ ಶ್ರುತಿಯೂ ಇರುವುದರಿಂದ.

**ವಿವರಣೆ**—ಐತರೇಯ ಉಪನಿಷತ್ತಿನಲ್ಲಿ ವಿರುದ್ಧಗಳಂತೆ ಕಾಣುವ ಈ ಎರಡು ಮಾತುಗಳು ಹೇಗೆ ಪ್ರಸಕ್ತವಾಗಿವೆ— ವಿಷ್ಣುನಾಮದಲ್ಲಿ ಷಕಾರ ಣಕಾರಗಳು ಸಂಹಿತಾಕ್ಷರಗಳಾಗಿವೆ. ಅವುಗಳಲ್ಲಿ 'ವಾಕ್ ಪೂರ್ವರೂಪಂ, ಮನ ಉತ್ತರೂಪಂ' ಎಂದು ವಾಕ್‌ನಾಮಕ ವಾಮರೂಪವು ಪೂರ್ವವರ್ಣಪ್ರತಿಪಾದ್ಯ ವಾಗಿದೆ. ಮನೋನಾಮಕವಾದ ವರಾಪರೂಪವು ಉತ್ತರ ವರ್ಣಪ್ರತಿಪಾದ್ಯ ವಾಗಿದೆ ಎಂದು ಶೂರವೀರ ಮಾಂಡೂಕೇಯ ಎಂಬುವವನು ಹೇಳುತ್ತಾನೆ. ಆದರೆ ಅವನ ಹಿರಿಯ ಮಗನು 'ಮನಃ ಪೂರ್ವರೂಪಂ, ವಾಗುತ್ತರರೂಪಂ' ಎಂದು ಹೇಳುತ್ತಾನೆ. ಅಂದರೆ, ಮನೋನಾಮಕವಾದ ವರಾಹರೂಪವು ಪೂರ್ವವರ್ಣ ಪ್ರತಿಪಾದ್ಯವಾಗಿದೆ. ವಾಕ್‌ನಾಮಕ ವಾಮನರೂಪವು ಉತ್ತರವರ್ಣಪ್ರತಿಪಾದ್ಯ

ವಾಗಿದೆ ಎಂದರ್ಥ. ಹೀಗೆ ತಂದೆ ಮಕ್ಕಳಿಬ್ಬರೂ ಭಗವದ್ರೂಪಗಳನ್ನೇ ಪ್ರತಿಪಾದ್ಯಗಳೆಂದು ಹೇಳುತ್ತಿರುವುದರಿಂದ ಇವೆರಡೂ ಸಮಾನವೇ ಆಗಿವೆ. ಇಲ್ಲಿ ವಾಕ್, ಮನಸ್ಸು ಎಂಬ ಶಬ್ದಗಳು ಭಗವಂತನ ರೂಪಗಳನ್ನೇ ಹೇಳುತ್ತಿವೆ. ಏಕೆಂದರೆ 'ವಕ್ತೃತ್ವಾಚ್ಚೈವ ವಾಙ್ನಾಮಾ ಮನೋ ಮಂತೃತ್ವಹೇತುತಃ' (ಸರಿಯಾಗಿ ಉಪದೇಶ ಮಾಡಬಲ್ಲವನಾದ್ದರಿಂದ ಭಗವಂತನು ವಾಕ್ ಎನಿಸಿದ್ದಾನೆ. ಅವನೇ ಎಲ್ಲವನ್ನೂ ತಿಳಿದವನಾದ್ದರಿಂದ ಮನಸ್ ಎನಿಸಿದ್ದಾನೆ) ಎಂದು ಸ್ಮೃತಿಯಿರುವುದರಿಂದ.

ವಾಕ್, ಮನಸ್ ಶಬ್ದಗಳಿಗೆ ಅಭಿಮಾನಿದೇವತೆಗಳು ಎಂಬ ಅರ್ಥವನ್ನೂ ಸ್ವೀಕರಿಸಬಹುದು. ಆವಾಗ ವಾಕ್‌ಗಿಂತ ಮನಸ್ಸಿಗೆ ಪ್ರಾಧಾನ್ಯವು ಸಿದ್ಧಿಸುತ್ತದೆ. ಏಕೆಂದರೆ 'ಮೊದಲು ಮನಸ್ಸಿನಿಂದ ಯೋಚನೆ ಮಾಡಿ ಅನಂತರ ಮಾತನಾಡುತ್ತಾನೆ' ಎಂದು ಶ್ರುತಿಯು ಯುಕ್ತಿ ಮೂಲಕವೇ ಪ್ರತಿಪಾದಿಸುತ್ತಿರುವುದರಿಂದ. ಮತ್ತು ವಾಗಭಿಮಾನಿ ಉಮೆ ಎಲ್ಲ ವಿಷಯದಲ್ಲಿಯೂ ಮನೋಭಿಮಾನಿ ರುದ್ರನ ಅಧೀನಳಾಗಿ ಪ್ರಸಿದ್ಧವೇ ಆಗಿರುವುದರಿಂದ ಮನಸ್ಸಿಗೆ ವಾಕ್‌ಗಿಂತ ಪ್ರಾಧಾನ್ಯವು ಸಿದ್ಧಿಸುತ್ತದೆ ಎಂದು ಸಿದ್ಧಾಂತ.

**ಸೂತ್ರಾರ್ಥ**

### ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ

ವಾಕ್=ವಾಗಭಿಮಾನಿಯಾದ ಉಮೆಯು ಮನಸಿ=ಮನೋಭಿಮಾನಿಯಾದ ರುದ್ರನಲ್ಲಿ ಲಯ ಹೊಂದುವಳು. ಏಕೆಂದರೆ, ದರ್ಶನಾತ್=ಮನೋನುಸಾರವಾಗಿ ವಾಕ್‌ಪ್ರವೃತ್ತಿಯು ಪ್ರತ್ಯಕ್ಷ ಸಿದ್ಧವಾದ್ದರಿಂದ, ಶಬ್ದಾಚ್ಚ=ಶ್ರುತಿಯೂ ಇರುವುದರಿಂದ.

## ಮನೋಧಿಕರಣ (4-2-2)

ಓಂ ತನ್ಮನಃ ಪ್ರಾಣ ಉತ್ತರಾತ್ ಓಂ ಎಂಬ ಒಂದುಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಮನಸ್ಸು ವಿಷಯ. ಪ್ರಾಣನಿಂದ ಮನಸ್ಸು ಹುಟ್ಟಿರುವುದು, ಪ್ರಾಣನಲ್ಲಿ ಲಯವನ್ನು ಹೇಳುವ ವಿಶೇಷಶ್ರುತಿ ಇಲ್ಲದಿರುವುದರಿಂದ ಸಂಶಯ ಬರುತ್ತದೆ– ಮನಸ್ಸು ಪ್ರಾಣನಲ್ಲಿ ಲಯವನ್ನು ಹೊಂದುವುದೋ? ಇಲ್ಲವೋ? ಎಂದು.

**ಪೂರ್ವಪಕ್ಷ—** ಅಧಿಕಬಲವುಳ್ಳವನಲ್ಲಿ ಕಡಿಮೆ ಬಲವುಳ್ಳವರಿಗೆ ಲಯವನ್ನು ಹೇಳುವುದು ನಿಯಮ. ಹೇಗೆ ಪ್ರಾಣನು ಸರ್ವಪ್ರವೃತ್ತಿಗಳಿಗೆ ಕಾರಣನೋ ಅದರಂತೆ ಮನಸ್ಸೂ ಸರ್ವಪ್ರವೃತ್ತಿಗಳಿಗೆ ಕಾರಣವಾಗಿದೆ, ಎಂದು ಅನ್ವಯವ್ಯತಿರೇಕ ಗಳಿಂದ (ಮನಸ್ಸಿದ್ದರೆ ಪ್ರವೃತ್ತಿ, ಮನಸ್ಸಿಲ್ಲವಾದರೆ ಪ್ರವೃತ್ತಿ ಇಲ್ಲ) ಸಿದ್ಧವಾಗಿದೆ. ಆದ್ದರಿಂದ ಪ್ರಾಣನಲ್ಲಿ ಮನಸ್ಸಿಗೆ ಲಯವಿಲ್ಲ ಎದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕಾರ್ಯಕರತ್ವ' (ಸಕಲಕಾರ್ಯಗಳು ಮನಸ್ಸಿನಿಂದ ನಡೆಯುವುದು) ಎಂಬುದು. ಇದನ್ನು ಮತ್ತು 'ಆಢ್ಯತಾ' (ಶ್ರೇಷ್ಠತ್ವ) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಮನಃಪೂರ್ವಕತ್ವನಿಯಮಾದಶೇಷದೃಷ್ಟಾದೃಷ್ಟವ್ಯಾಪಾರಾಣಾಂ ತಸ್ಯ ಪ್ರಾಣಾದನೂನತಾ—**

**'ಇಂದ್ರಿಯಸ್ಥೈಃ ಸ್ವರೂಪೈಸ್ತು ಜ್ಞಾನಾನಿ ಜನಯತ್ಯಸೌ ।**
**ಮನಃಸ್ಥೇನ ವಿಶೇಷೇಣ ಕಾಮ್ಯೈಃ ಕರ್ಮಕೃದೇವ ಚ ।**
**ಪೃಥಕ್‌ಸ್ಥಿತೇನ ರೂಪೇಣ ಜೀವಂ ಧಾರಯತಿ ಪ್ರಭುಃ ।**
**ಜೀವಸ್ಥಿತೇನ ರೂಪೇಣ ವೇದಯತ್ಯಹಮಿತ್ಯಪಿ ।**
**ಪ್ರಾಣ ಏಕೋ ವಶೀ ನಿತ್ಯಂ ಬಾಹ್ಯಾಂತಃಕರಣೇಶ್ವರಃ ।**
**ತಾನ್ಯೇತಾನ್ಯವಶಾನ್ಯೇವ ತಥಾಽಪಿ ಕೃಪಯೈವ ಸಃ ।**
**ಪೃಥಕ್ ಶಕ್ತೋಽಪಿ ತದ್ಗೈಸ್ತು ಸ್ವರೂಪೈಸ್ತದ್ಗಕಾರ್ಯಕೃತ್ ।**
**ತಸ್ಯೇಶೋ ಭಗವಾನ್ ವಿಷ್ಣುರೇವಮೇಷ ಯಥಾಽನ್ಯಗಃ ॥'**
**ಇತ್ಯಾದಿಶ್ರುತೇಃ ಪ್ರಾಣಸ್ಯೈವಾಢ್ಯತಾವಗಮಾತ್ ॥ ೨ ॥**

**ಭಾವಾರ್ಥ—**ದೃಷ್ಟ, ಅದೃಷ್ಟವಾದ ಸಕಲಕಾರ್ಯಗಳೂ ನಿಯಮೇನ ಮನಃಪೂರ್ವಕವಾಗಿಯೇ ಆಗುವುದರಿಂದ ಮನಸ್ಸು ಪ್ರಾಣನಂತೆ ಸಕಲ ಕಾರ್ಯಕರವಾದ್ದರಿಂದ ಮನೋಽಭಿಮಾನಿಗೆ ಪ್ರಾಣನಲ್ಲಿ ಲಯವು ಕೂಡುವುದಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಈ ಪ್ರಾಣನು ಎಲ್ಲ ಇಂದ್ರಿಯ ಗಳಲ್ಲಿರುವ ತನ್ನ ಸ್ವರೂಪಗಳಿಂದ ಜ್ಞಾನಗಳನ್ನು ಹುಟ್ಟಿಸುತ್ತಾನೆ. ಮನಸ್ಸಿನಲ್ಲಿರುವ

ವಿಶೇಷ ರೂಪದಿಂದ ಕಾಮನೆಗಳನ್ನು ಹುಟ್ಟಿಸಿ ಕಾರ್ಯಗಳನ್ನು ಮಾಡಿಸುತ್ತಾನೆ. ಪ್ರತ್ಯೇಕ ವಾದ ಮತ್ತೊಂದು ರೂಪದಿಂದ ಸಮರ್ಥನಾದ ವಾಯು ಜೀವನನ್ನು ಧರಿಸಿದ್ದಾನೆ. ಜೀವನಲ್ಲಿರುವ ರೂಪದಿಂದ 'ಅಹಂ' ಎಂಬ ಜ್ಞಾನವನ್ನು ಹುಟ್ಟಿಸುತ್ತಾನೆ. ಪ್ರಾಣನೊಬ್ಬನೇ ಹೊರಗಿನ ಮತ್ತು ಒಳಗಿನ ಎಲ್ಲ ಇಂದ್ರಿಯ ಗಳಿಗೂ ಸ್ವಾಮಿಯಾಗಿದ್ದಾನೆ. ಈ ಇಂದ್ರಿಯಗಳು ದ್ವಾರವಲ್ಲದಿದ್ದರೂ ಅವನು ಜ್ಞಾನವನ್ನು ಹುಟ್ಟಿಸಲು ಸಮರ್ಥನು. ಹಾಗಿದ್ದರೂ ಪರತಂತ್ರಗಳಾದ ಇಂದ್ರಿಯ ಗಳಲ್ಲಿದ್ದು ಕಾರ್ಯವನ್ನು ಮಾಡಿಸುವುದರಿಂದ ಇಂದ್ರಿಯಾಭಿಮಾನಿದೇವತೆಗಳಿಗೆ ಮೋಕ್ಷದಲ್ಲಿ ಆನಂದಾತಿಶಯ ಉಂಟುಮಾಡುವುದಕ್ಕೆ ಅವನು ಕೃಪೆಯಿಂದ ಈ ಕೆಲಸವನ್ನು ಮಾಡುತ್ತಾನೆ. ಈ ಪ್ರಾಣನಿಗೆ ವಿಷ್ಣುವು ಒಡೆಯನಾಗಿದ್ದಾನೆ. ಪ್ರಾಣನು ಹೇಗೆ ಎಲ್ಲ ಇಂದ್ರಿಯಗಳಲ್ಲಿದ್ದು ಕಾರ್ಯವನ್ನು ಮಾಡಿಸುವನೋ ಅದರಂತೆ ವಿಷ್ಣುವೂ ಪ್ರಾಣನಲ್ಲಿದ್ದು ಸಕಲಕಾರ್ಯಗಳನ್ನು ಮಾಡಿಸುತ್ತಾನೆ' ಎಂಬಿವೇ ಮೊದಲಾದ ಶ್ರುತಿಗಳಿಂದ ಪ್ರಾಣನಿಗೇ ಸ್ವಾಮಿತ್ವವು ಶ್ರುತವಾಗಿದೆ.

**ವಿವರಣೆ—** ಮನಸ್ಸು ಸಕಲಕಾರ್ಯಗಳಿಗೂ ಕಾರಣವಾಗಿದೆ. ಆದ್ದರಿಂದ ಪ್ರಾಣನಿಗಿಂತ ಅವರತ್ವವಿಲ್ಲ ಎಂಬುದು ಪೂರ್ವಪಕ್ಷಿಯ ಅಭಿಪ್ರಾಯವಾಗಿತ್ತು. ಆದರೆ ಮನಸ್ಸು ಮತ್ತು ಇತರ ಇಂದ್ರಿಯಗಳ ಒಳಗಿದ್ದು ಪ್ರಾಣನು ಪ್ರೇರಣೆ ಮಾಡುವುದರಿಂದ ಅವುಗಳು ಎಲ್ಲ ಕೆಲಸಗಳನ್ನು ಮಾಡುತ್ತವೆ. ಹೊರತು ಸ್ವತಂತ್ರವಾಗಿ ಅಲ್ಲ. ಆದ್ದರಿಂದ ಎಲ್ಲ ಇಂದ್ರಿಯಗಳಿಗೂ ಪ್ರಾಣನೇ ಶ್ರೇಷ್ಠನೆಂದು ಸಿದ್ಧವಾದ್ದರಿಂದ ಪ್ರಾಣನಲ್ಲಿ ಮನೋಽಭಿಮಾನಿಯಾದ ರುದ್ರನಿಗೆ ಲಯವು ಉಪಪನ್ನವಾಗುತ್ತದೆ ಎಂದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ತನ್ಮನಃ ಪ್ರಾಣ ಉತ್ತರಾತ್ ಓಂ

ತತ್=ವಾಗಭಿಮಾನಿಗಿಂತ ಶ್ರೇಷ್ಠನೆಂದು ಹಿಂದಿನ ಸೂತ್ರದಲ್ಲಿ ಹೇಳಲ್ಪಟ್ಟ ಮನಃ=ಮನೋಽಭಿಮಾನಿದೇವತೆಯು ಪ್ರಾಣೇ=ಪ್ರಾಣಶಬ್ದವಾಚ್ಯನಾದ ಚತುರ್ಮುಖನಲ್ಲಿ ಲಯವನ್ನು ಹೊಂದುವನು. ಏಕೆಂದರೆ ಉತ್ತರಾತ್= 'ವಾಚ್ ಮನಸಿ' ಎಂಬ ಶ್ರುತಿಯ ಮುಂದಿನ ಭಾಗದಲ್ಲಿ 'ಮನಃ ಪ್ರಾಣೇ' ಎಂದು ಹೇಳಿರುವುದರಿಂದ.

# ಅಧ್ಯಕ್ಷಾಧಿಕರಣ (4-2-3)

ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ಚತುರ್ಮುಖನು. 'ಶ್ರೇಷ್ಠಶ್ಚ' ಎಂಬ ಸೂತ್ರದಲ್ಲಿ ಚತುರ್ಮುಖನು ಪರಮಾತ್ಮನಿಂದ ಹುಟ್ಟಿದ್ದಾನೆ ಎಂದು ಹೇಳಲಾಗಿದೆ. ಆದರೆ ಪರಮಾತ್ಮನಲ್ಲಿ ಲಯವನ್ನು ಹೇಳುವ ವಿಶೇಷ ಪ್ರಮಾಣವಿಲ್ಲದಿರುವುದರಿಂದ ಸಂಶಯ ಬರುತ್ತದೆ– ಚತುರ್ಮುಖನಿಗೆ ಪರಮಾತ್ಮನಲ್ಲಿ ಲಯವಿದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ—** ಕಡಿಮೆ ಬಲವುಳ್ಳವನಿಗೆ ಅಧಿಕಬಲವುಳ್ಳವನಲ್ಲಿ ಲಯವನ್ನು ಹೇಳಬಹುದು. ಆದರೆ ಪರಮಾತ್ಮನು ಹೇಗೆ ಸಕಲಕಾರ್ಯಗಳಿಗೆ ಕರ್ತೃವೋ ಅದರಂತೆ ಪ್ರಾಣನೂ ಸಕಲಕಾರ್ಯಗಳಿಗೆ ಕಾರಣನಾಗಿದ್ದಾನೆ. 'ಪ್ರಾಣಾದಿದಮಾವಿರಾಸೀತ್' (ಪ್ರಾಣನಿಂದಲೇ ಎಲ್ಲವೂ ಪ್ರಾದುರ್ಭವಿಸಿತು) ಎಂದು ಶ್ರುತಿಯ ಹೇಳುತ್ತದೆ. ಪ್ರಾಣ(ಚತುರ್ಮುಖ) ಮತ್ತು ಪರಮಾತ್ಮರು ಸಮಾನಬಲವುಳ್ಳವರಾದ್ದರಿಂದ ಪ್ರಾಣನಿಗೆ ಪರಮಾತ್ಮನಲ್ಲಿ ಲಯವನ್ನು ಹೇಳಲು ಸಾಧ್ಯವಿಲ್ಲ ಎಂದು ಹಿಂದಿನ ಅಧಿಕರಣದಲ್ಲಿ ಮಾಡಿದ ಪೂರ್ವಪಕ್ಷವೇ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಕಾರ್ಯಕರತ್ವ'** (ಸಕಲಕಾರ್ಯಗಳೂ ಚತುರ್ಮುಖನಿಂದಲೇ ಆಗುತ್ತವೆ) ಎಂಬುದೇ ಆಗಿದೆ. ಇದನ್ನು ಮತ್ತು **'ಆಢ್ಯತಾ'** (ಶ್ರೇಷ್ಠತ್ವ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**'ಸೋಽಧ್ಯಕ್ಷೇ' ಇತ್ಯಸ್ಯಾಪ್ಯೇವಮೇವಾಶಂಕಾ ಪರಿಹಾರಶ್ಚ । ಶ್ರುತಿಬಾಹುಲ್ಯಮೇವಾಶಂಕಾಯಾಂ ಪರಿಹಾರೇ ಚ ವಿಶೇಷಹೇತುಃ ।। ೩ ।।**

**ಭಾವಾರ್ಥ—**'ಸೋಧ್ಯಕ್ಷೇ ತದುಪಗಮಾದಿಭ್ಯಃ' ಎಂಬ ಸೂತ್ರದಲ್ಲಿಯೂ ಹಿಂದಿನ ಅಧಿಕರಣದಲ್ಲಿ ಮಾಡಿದಂತೆಯೇ ಆಶಂಕೆ ಮತ್ತು ಪರಿಹಾರಗಳು, ಶ್ರುತಿಬಾಹುಲ್ಯವೇ ಆಶಂಕೆಗೂ ಪರಿಹಾರಕ್ಕೂ ವಿಶೇಷಕಾರಣವಾಗಿದೆ.

**ವಿವರಣೆ—** ಪರಮಾತ್ಮನು ಪ್ರಾಣನಿಗಿಂತಲೂ ಸ್ವತಂತ್ರನಾಗಿ ಜಗಜ್ಜನ್ಮಾದಿ

ಬಹುತರವಾದ ಕಾರ್ಯಗಳನ್ನು ಮಾಡುವುದರಿಂದ ಪ್ರಾಣನಿಗಿಂತಲೂ ಶ್ರೇಷ್ಠನಾಗಿದ್ದಾನೆ. ಆದ್ದರಿಂದ ಪರಮಾತ್ಮನಿಗೂ ಪ್ರಾಣನಿಗೂ ಸಾಮ್ಯ ವಿಲ್ಲ. ಪರಮಾತ್ಮನಲ್ಲಿ ಪ್ರಾಣನಿಗೆ (ಚತುರ್ಮುಖನಿಗೆ) ಲಯವನ್ನು ಒಪ್ಪಬೇಕು ಎಂಬುದು ಸಿದ್ಧಾಂತ.

ಹಿಂದಿನ ಅಧಿಕರಣಕ್ಕೂ ಈ ಅಧಿಕರಣಕ್ಕೂ ಪೂರ್ವಪಕ್ಷ ಸಿದ್ಧಾಂತನ್ಯಾಯಗಳು ಒಂದೇ ಆಗಿರುವುದರಿಂದ ಈ ಅಧ್ಯಕ್ಷಾಧಿಕರಣವು ಪ್ರತ್ಯೇಕ ಏಕೆ ಬೇಕು? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ಹೇಳಲಾಗಿದೆ—

ಹಿಂದಿನ ಮನೋಽಧಿಕರಣದಲ್ಲಿ ಪ್ರತ್ಯಕ್ಷದ ಸಹಾಯವಿರುವ ಅನ್ವಯವ್ಯತಿರೇಕಗಳಿಂದ ಸಿದ್ಧವಾದ ಕಾರ್ಯಕರತ್ವವೆಂಬುದು ಪೂರ್ವಪಕ್ಷ ಸಾಧಕವಾದ ಯುಕ್ತಿಯಾಗಿತ್ತು. ಈಗಲೂ ಕಾರ್ಯಕರತ್ವವೆಂಬುದೇ ಪೂರ್ವಪಕ್ಷ ಯುಕ್ತಿಯಾಗಿದ್ದರೂ ಇದಕ್ಕೆ ಶ್ರುತಿಬಾಹುಲ್ಯದ ಸಹಕಾರವಿದೆ. ಅಂದರೆ ಈ ಅಧಿಕರಣಕ್ಕೆ ಅಭ್ಯಧಿಕಾಶಂಕೆ ಇರುವುದರಿಂದ ಈ ಅಧಿಕರಣವು ಹೊರಟಿದೆ.

ಪೂರ್ವಪಕ್ಷಕ್ಕೆ ಸಾಧಕವಾದ ಶ್ರುತಿಗಳು— 'ನ ಪ್ರಾಣಃ ಕಿಂಚಿದಾಶ್ರಿತಃ' (ಪ್ರಾಣನು ಯಾರ ಅಧೀನನೂ ಅಲ್ಲ) 'ಮಹಾಂತಮಸ್ಯ ಮಹಿಮಾನ-ಮಾಹುರನದ್ಯಮಾನೋ ಯದನ್ನಮತ್ತಿ' (ವಾಯುದೇವನ ಮಹಿಮೆಯನ್ನು ಜ್ಞಾನಿಗಳು ಹೀಗೆ ಹೇಳುತ್ತಾರೆ–'ಈ ಮುಖ್ಯಪ್ರಾಣನಿಗೆ ವಿಷ್ಣುವನ್ನು ಬಿಟ್ಟು ಬೇರೆ ಯಾರಿಂದಲೂ ಸಂಹಾರವಿಲ್ಲ. ಇವನು ಇತರ ದೇವತೆಗಳನ್ನು ಸಂಹರಿಸುವನು) ಎಂಬಿವೇ ಮೊದಲಾದವುಗಳು. ಸಿದ್ಧಾಂತಸಾಧಕವಾದ ಶ್ರುತಿಗಳಾದರೂ– 'ಸರ್ವೇ ಪ್ರಾಣಮುಪಗಚ್ಛಂತಿ ಪ್ರಾಣಃ ಪರಮುಪಗಚ್ಛತಿ', (ಎಲ್ಲ ದೇವತೆಗಳು ಪ್ರಾಣನನ್ನು (ಚತುರ್ಮುಖನನ್ನು) ಪ್ರವೇಶಿಸುತ್ತಾರೆ. ಚತುರ್ಮುಖನು ಪರಮಾತ್ಮನನ್ನು ಪ್ರವೇಶಿಸುತ್ತಾನೆ) 'ಪ್ರಾಣಃ ಪರಸ್ಯಾಂ ದೇವತಾಯಾಮ್' (ಚತುರ್ಮುಖನು ಪರ ದೇವತೆಯಾದ ವಿಷ್ಣುವಿನಲ್ಲಿ ಲಯವನ್ನು ಹೊಂದುತ್ತಾನೆ.) ಮುಂತಾದವುಗಳು.

'ಶ್ರುತಿಬಾಹುಲ್ಯಮೇವ ಶಂಕಾಯಾಂ ಪರಿಹಾರೇ ಚ ವಿಶೇಷಹೇತುಃ' ಎಂಬುದಾಗಿ ಮೂಲದಲ್ಲಿ ಹೇಳಲಾಗಿದೆ. ಆಕ್ಷೇಪಕ್ಕೂ ಪರಿಹಾರಕ್ಕೂ ಶ್ರುತಿ ಬಾಹುಲ್ಯವೇ ಕಾರಣವೆಂದಾದರೆ ನಿರ್ಣಯ ಮಾಡುವುದಾದರೂ ಹೇಗೆ? ಎಂಬ

ಪ್ರಶ್ನೆ ಬಂದಾಗ ಪರಿಹಾರದ ವಿಷಯದಲ್ಲಿರುವ ಶ್ರುತಿಬಾಹುಲ್ಯವು ನಿರವಕಾಶವಾಗಿದೆ ಎಂದು ಉತ್ತರವನ್ನು ತಿಳಿಯಬೇಕು.

ಪ್ರಾಣನಿಗೆ ಪರದೇವತೆಯಾದ ವಿಷ್ಣುವಿನಲ್ಲಿ ಲಯವನ್ನು ಹೇಳುವ 'ಪ್ರಾಣಃ ಪರಸ್ಯಾಂ ದೇವತಾಯಾಮ್' ಎಂಬ ಶ್ರುತಿಗೆ ತೇಜಶ್ಶಬ್ದವಾಚ್ಯಳಾದ ಲಕ್ಷ್ಮಿಯಲ್ಲಿ ಲಯವನ್ನು ಹೇಳುವ 'ಪ್ರಾಣಸ್ಯ ತೇಜಸಿ ಲಯಃ' ಎಂಬ ಶ್ರುತಿಯ ವಿರೋಧವು ಬರುತ್ತದೆ ಎಂದರೆ, ಪ್ರಾಣಶಬ್ದಕ್ಕೆ ಚತುರ್ಮುಖ, ವಾಯು ಎಂಬ ಎರಡರ್ಥಗಳಿವೆ. ಚತುರ್ಮುಖ ಎಂಬ ಅರ್ಥವನ್ನು ಇಟ್ಟುಕೊಂಡರೆ, ಅವನಿಗೆ ಪರಮಾತ್ಮನಲ್ಲಿಯೇ ಲಯ ಇರುವುದರಿಂದ ಲಕ್ಷ್ಮಿಯನ್ನು ಹೊಂದಿ ಲಕ್ಷ್ಮೀದ್ವಾರಾ ಪರಮಾತ್ಮನಲ್ಲಿ ದೇಹ ಲಯವೆಂದರ್ಥ ಮಾಡಬೇಕು. ಮುಖ್ಯಪ್ರಾಣನೆಂಬ ಅರ್ಥವನ್ನಿಟ್ಟುಕೊಂಡರೆ ಅವನಿಗೆ ಲಕ್ಷ್ಮೀದೇವಿಯಲ್ಲಿಯೇ ದೇಹಲಯವಿದೆ ಎಂದರ್ಥ. ಅಥವಾ ಚತುರ್ಮುಖನೇ ಮುಖ್ಯಪ್ರಾಣನಾಗಿದ್ದಾಗ ಲಕ್ಷ್ಮೀದೇವಿಯಲ್ಲಿ ದೇಹಲಯವನ್ನು ಹೊಂದಿ ಪುನಃ ಪರಮಾತ್ಮನಿಂದ ಜನ್ಮವನ್ನು ಪಡೆದು ಪರಮಾತ್ಮನಲ್ಲಿಯೇ ಲಯವನ್ನು ಹೊಂದುವುದರಿಂದ ಯಾವ ವಿರೋಧವೂ ಇಲ್ಲ.

**ಸೂತ್ರಾರ್ಥ—**

### ಓಂ ಸೋಽಧ್ಯಕ್ಷೇ ತದುಪಗಮಾದಿಭ್ಯಃ ಓಂ

ಸಃ=ಆ ಚತುರ್ಮುಖನು ಅಧ್ಯಕ್ಷೇ=ಅಧಿಪತಿಯಾದ ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾನೆ. ಏಕೆಂದರೆ, ತದುಪಗಮಾದಿಭ್ಯಃ=ಪರಮಾತ್ಮನ ವ್ಯಾಪ್ತ್ಯಾದಿಗಳನ್ನು ಪ್ರತಿಪಾದಿಸುವ ಶ್ರುತಿಸ್ಮೃತಿಗಳಿರುವುದರಿಂದ.

## ಭೂತಾಧಿಕರಣ (4-2-4)

ಓಂ ಭೂತೇಷು ತಚ್ಛ್ರುತೇಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ದೇವತೆಗಳು ವಿಷಯ. 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಯು ಎಲ್ಲ ದೇವತೆಗಳಿಗೆ ಅಗ್ನಿಯಲ್ಲಿ ಲಯವನ್ನು ಹೇಳುತ್ತದೆ. ಆದರೆ ದೇವತೆಗಳು ಇತರ ದೇವತೆಗಳ ಅಧೀನರೂ ಆಗಿದ್ದಾರೆ ಎಂಬ ಈ ಎರಡು

ಕಾರಣಗಳಿಂದ ಸಂಶಯ ಬರುತ್ತದೆ– ದೇವತೆಗಳು ಒಬ್ಬನೇ ಅಗ್ನಿಯಲ್ಲಿ ಲಯವನ್ನು ಹೊಂದುವರೊ? ಅಥವಾ ಇತರ ಭೂತಗಳಲ್ಲಿಯೂ ಲಯವನ್ನು ಹೊಂದುವರೋ? ಎಂದು.

**ಪೂರ್ವಪಕ್ಷ**— 'ಅಗ್ನೌ ದೇವಾ ವಿಲೀಯಂತೇ' ಎಂದು ಶ್ರುತಿಯಿರುವುದರಿಂದ ಅಗ್ನಿಯಲ್ಲಿಯೇ ಎಲ್ಲ ದೇವತೆಗಳಿಗೂ ಲಯವನ್ನು ಹೇಳಬೇಕು. ಬೇರೆ ದೇವತೆಯಲ್ಲಿ ಲಯವನ್ನು ಹೇಳುವ ಪ್ರಮಾಣವೂ ಇಲ್ಲ. ಅವರವರಿಗೆ ನಿಯಾಮಕರಾದ ದೇವತೆಗಳಲ್ಲಿ ಲಯವನ್ನು ಹೇಳಬಹುದು ಎನ್ನಬಾರದು. ಏಕೆಂದರೆ ಒಬ್ಬ ದೇವತೆಗೇ ಅನೇಕ ಮಂದಿ ನಿಯಾಮಕರಿರುತ್ತಾರೆ. ಆದ್ದರಿಂದ ಯಾರಲ್ಲಿ ಲಯವನ್ನು ಹೇಳಬೇಕೆಂದು ನಿರ್ಣಯಮಾಡಲು ಸಾಧ್ಯವಿಲ್ಲ. ಆದ್ದರಿಂದ ಎಲ್ಲ ದೇವತೆಗಳಿಗೂ ಅಗ್ನಿಯಲ್ಲಿಯೇ ಲಯವನ್ನು ಹೇಳಬೇಕೆಂದು ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ **'ಅರ್ಥಕ್ಲೃಪ್ತಿ'** (ಅಗ್ನಿಯಲ್ಲಿಯೇ ಲಯವೆಂದು ಸಿದ್ಧವಾಗಿರುವುದು) ಎಂಬುದು.

**ಸಿದ್ಧಾಂತ**— ಸಿದ್ಧಾಂತಸಾಧಕವಾದ ಯುಕ್ತಿ **'ಸಮಾನಲೋಪ'** ಎಂಬುದು. ಸಮಾನ=ಶ್ರುತಿಪ್ರಮಾಣಸಹಿತವಾದ ಲೋಪ=ಲಯ ಎಂದರ್ಥ. 'ಭೂತೇಷು ದೇವಾ ವಿಲೀಯಂತೇ' (ಭೂತಾಭಿಮಾನಿಗಳಲ್ಲಿ ದೇವತೆಗಳು ಲಯವನ್ನು ಹೊಂದುತ್ತಾರೆ.) ಎಂಬ ಪ್ರಮಾಣವಿರುವುದರಿಂದ ದೇವತೆಗಳಲ್ಲಿ ಅಗ್ನಿಯಲ್ಲಿಯೂ ಲಯ, ಇತರ ಭೂತಾಭಿಮಾನಿಗಳಲ್ಲಿಯೂ ಯಥಾಯೋಗ್ಯವಾಗಿ ಲಯವನ್ನು ಹೇಳಬೇಕು. ಹೊರತು ಎಲ್ಲರಿಗೂ ಅಗ್ನಿಯಲ್ಲಿಯೇ ಅಲ್ಲ. ಈ ಭೂತಾಭಿಮಾನಿ ದೇವತೆಗಳೂ 'ಭೂತಾನಿ ಪರೇ' (ಭೂತಾಭಿಮಾನಿದೇವತೆಗಳು ಪರಮಾತ್ಮನಲ್ಲಿ ಲಯ ಹೊಂದುತ್ತಾರೆ) ಎಂದು ಇದ್ದರೂ ಸಾಕ್ಷಾತ್ತಾಗಿ ಹೊಂದುವುದಿಲ್ಲ. ಆಕಾಶ ಭೂಮಿ ಅಭಿಮಾನಿದೇವತೆಗಳಿಗೆ ಬೃಹಸ್ಪತಿದ್ವಾರಾ, ಭೂತವಾಯು ಪ್ರವಹನಿಗೆ ಇಂದ್ರನ ದ್ವಾರಾ ಜಲಾಭಿಮಾನಿ ದೇವತೆಗೆ ಚಂದ್ರದ್ವಾರಾ ಪರಮಾತ್ಮನಲ್ಲಿ ಲಯವನ್ನು ಹೇಳಬೇಕು.

**ಸೂತ್ರಾರ್ಥ**—

**ಓಂ ಭೂತೇಷು ತಚ್ಛ್ರುತೇಃ ಓಂ**

ಹಿಂದೆ ವಿಶೇಷ ನಿರ್ದೇಶಮಾಡಿ ಹೇಳಿದ ದೇವತೆಗಳಿಗಿಂತ ಇತರ ದೇವತೆಗಳು ಭೂತೇಷು=ಭೂತಾಭಿಮಾನಿಗಳಲ್ಲಿ ಲಯವನ್ನು ಹೊಂದುವರು. ತಚ್ಛ್ರುತೇಃ= 'ಭೂತೇಷು ದೇವಾ ವಿಲೀಯಂತೇ' ಎಂದು ಶ್ರುತವಾಗಿರುವುದರಿಂದ.

## ನೈಕಸ್ಮಿನ್ನಧಿಕರಣ (4-2-5)

ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ದೇವತೆಗಳೇ. ದೇವತೆಗಳು ಇತರರ ಅಧೀನ ರಾಗಿರುವುದರಿಂದ ಮತ್ತು 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಯಿರುವುದರಿಂದ ಸಂಶಯ ಬರುತ್ತದೆ— ದೇವತೆಗಳು ಎಲ್ಲ ಭೂತಗಳಲ್ಲಿ ಲಯವನ್ನು ಹೊಂದುವರೋ? ಅಥವಾ ಅಗ್ನಿಯಲ್ಲಿ ಲಯವನ್ನು ಹೊಂದುವರೋ? ಎಂದು.

**ಪೂರ್ವಪಕ್ಷ—** 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂದು ಶ್ರುತಿಯಿರುವುದರಿಂದ ದೇವತೆಗಳಿಗೆ ಅಗ್ನಿಯಲ್ಲಿಯೇ ಲಯವನ್ನು ಅಂಗೀಕರಿಸಬೇಕು. ಹಿಂದಿನ ಅಧಿಕರಣದಲ್ಲಿ ಉದಾಹರಿಸಲಾಗಿರುವ 'ಭೂತೇಷು ದೇವಾ ವಿಲೀಯಂತೇ' ಎಂದು ಶ್ರುತಿಯ ವಿರೋಧವು ಬರುತ್ತದೆ ಎಂದು ಆಕ್ಷೇಪಿಸುವಂತಿಲ್ಲ. ಈ ಶ್ರುತಿಯ ವಿರೋಧವನ್ನು ಪರಿಹರಿಸಬಹುದು. ಹೇಗೆಂದರೆ– ಭೂತಗಳಿಗೆ ಉತ್ಪತ್ತಿಕ್ರಮಕ್ಕಿಂತ ವಿಪರೀತ ಕ್ರಮದಲ್ಲಿ ಲಯವು ಶ್ರುತಿಯಲ್ಲಿ ಪ್ರಸಿದ್ಧವಾಗಿದೆ. ಲಯಕ್ಕೂ ಮೋಕ್ಷಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ ಈ ಕ್ರಮದಿಂದ ಉತ್ಪತ್ತಿ. ಲಯವನ್ನು ಅಗ್ನಿಗೆ ವಾಯುವಿನಲ್ಲಿ, ವಾಯುವಿಗೆ ಆಕಾಶದಲ್ಲಿ ಒಪ್ಪುವುದರಿಂದಲೂ ಭೂತಗಳಲ್ಲಿಯೇ ಲಯವನ್ನು ಹೇಳಿದಂತಾಗುವುದು. ಪರಂಪರಯಾ ಲಯವನ್ನು ಹೇಳಿದ್ದರಿಂದ. ಹೀಗೆ ಹೇಳದಿದ್ದರೆ 'ಅಗ್ನೌ ದೇವಾ ವಿಲೀಯಂತೇ' ಎಂಬುದು ಉಪಪನ್ನವಾಗಲಾರದು. ಆದ್ದರಿಂದ 'ಅಗ್ನೌ ದೇವಾ' ಇತ್ಯಾದಿ ಶ್ರುತ್ಯನ್ಯಥಾನುಪಪತ್ತಿರೂಪ ಪ್ರಮಾಣದಿಂದ ಅಗ್ನಿಯಲ್ಲಿಯೇ ಲಯ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅರ್ಥಕ್ಲೃಪ್ತಿ'** (ಅನ್ಯಥಾನುಪಪತ್ತಿ) ಎಂಬುದು. ಇದನ್ನು ಮತ್ತು **'ಸಮಾನಲೋಪ'** ಲೋಪ ಎಂದರೆ ಲಯ ಎಂದರ್ಥ.

ಸಮಾನಲೋಪ ಎಂದರೆ ಸಮಾನ=ವಿಶೇಷ ಶ್ರುತಿಸಹಿತ ವಾದ (ವಿಶೇಷ ಶ್ರುತಿಗೆ ಅನುಗುಣವಾದ) ಲಯ ಎಂದರ್ಥ. ಅಥವಾ ಸಮಾನಕಕ್ಷೆಯವರಿಗೆ ಸಮಾನಸ್ಥಾನ ದಲ್ಲಿ ಲಯ ಎಂದರ್ಥ. ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸು ತ್ತಿದ್ದಾರೆ–

**ನ ಚ ಭೂತಾನಾಮುತ್ಪತ್ತಿಕ್ರಮವೈಪರೀತ್ಯೇನ ಲಯೋಕ್ತೇರ್ಮುಕ್ತಿ-ಲಯಯೋರ್ವಿಶೇಷಾಭಾವಾಚ್ಚೈಕಸ್ಮಿನ್ನೇವ ಭೂತೇ ಸರ್ವೇಷಾಂ ಲಯೋऽರ್ಥತಃ ಕ್ಲೃಪ್ತ ಇತಿ ವಾಚ್ಯಮ್ । ತತ್ತದ್ಭೂತೋದ್ಭವತ್ವಾತ್ ತತ್ತದ್ದೇವಾನಾಂ ತತ್ಸಮಾನಾನಾಂ ಚ ವಿಶೇಷವಚನಾಭಾವೇ ಸ್ವಸಮಾನಲಯಸ್ಥಾನ ಏವ ಲಯೋಪಪತ್ತೇಃ । ವಿಶೇಷಶ್ರುತೇಶ್ಚ ॥ ೪-೫ ॥**

**ಭಾವಾರ್ಥ**—ಭೂತಗಳಿಗೆ ಉತ್ಪತ್ತಿಕ್ರಮಕ್ಕಿಂತ ವಿಪರೀತವಾಗಿ ಲಯವನ್ನು ಹೇಳಿರುವುದರಿಂದ, ಮುಕ್ತಿಲಯಗಳಲ್ಲಿ ಯಾವ ವೈಲಕ್ಷಣ್ಯವೂ ಇಲ್ಲದಿರುವುದ ರಿಂದ ಒಂದೇ ಭೂತದಲ್ಲಿ (ಅಗ್ನಿಯಲ್ಲಿ) ಲಯವನ್ನು ಹೇಳಿದರೆ ಎಲ್ಲ ಭೂತಗಳಲ್ಲಿ ಲಯವು ಅರ್ಥಾತ್ ಸಿದ್ಧವಾಗುತ್ತದೆ ಎಂದು ಆಕ್ಷೇಪಿಸಬಾರದು. ಏಕೆಂದರೆ ಆಯಾ ಭೂತಗಳಿಂದ ಜನ್ಯರಾದವರಿಗೆ ಆಯಾ ಭೂತಗಳಲ್ಲಿಯೇ ಲಯ, ಸಮಾನ ಕಕ್ಷೆಯಲ್ಲಿರುವ ದೇವತೆಗಳಿಗೆ ವಿಶೇಷವಚನವಿಲ್ಲದಿರುವಾಗ ಸಮಾನ ಕಕ್ಷೆಯ ದೇವತೆಗಳು ಲಯಹೊಂದುವ ದೇವತೆಗಳಲ್ಲಿಯೇ ಲಯವನ್ನು ಹೇಳಬೇಕು. ಮತ್ತು ಈ ವಿಷಯದಲ್ಲಿ 'ಪೃಥಿವ್ಯಾಮೃಭವಃ' ಎಂಬ ವಿಶೇಷಶ್ರುತಿಯೂ ಇದೆ.

**ವಿವರಣೆ**— ಮೂಲದಲ್ಲಿ ಹೇಳಿದ ವಿಶೇಷಶ್ರುತಿ ಹೀಗಿದೆ- 'ಪೃಥಿವ್ಯಾ-ಮೃಭವೋ ವಿಲೀಯಂತೇ, ವರುಣೇऽಶ್ವಿನಾವಗ್ನಾವಗ್ನಯೋ ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ' ಎಂದು. ಇದರ ಅರ್ಥ- ಪೃಥಿವೀ ಅಭಿಮಾನಿ ಧರಾದೇವಿಯಲ್ಲಿ ಋಭುನಾಮಕ ದೇವತೆಗಳಿಗೆ ಲಯ. ಜಲಾಭಿಮಾನಿ ವರುಣನಲ್ಲಿ ಅಶ್ವಿನೀದೇವತೆಗಳು ಲಯ ಹೊಂದುತ್ತಾರೆ. ಅಗ್ನಿಪುತ್ರರು ಅಗ್ನಿಯಲ್ಲಿ, ಪ್ರಧಾನವಾಯುವಿನಲ್ಲಿ ಇಂದ್ರ, ಚಂದ್ರ, ಸೂರ್ಯ, ಬೃಹಸ್ಪತಿಗಳು ಲಯ ಹೊಂದುತ್ತಾರೆ. ಸಾಧ್ಯರು ಆಕಾಶಾಭಿಮಾನಿ ಗಣಪತಿಯಲ್ಲಿ ಲಯಹೊಂದುತ್ತಾರೆ' ಎಂದು.

ಹೀಗೆ ವಿಶೇಷ ಶ್ರುತಿಯಿರುವುದರಿಂದ ಮತ್ತು ಆಯಾ ಭೂತಗಳಿಂದ ಉತ್ಪನ್ನವಾದವುಗಳಿಗೆ ಆಯಾ ಭೂತಗಳಲ್ಲಿ ಲಯವನ್ನು ಹೇಳುವುದು ಯುಕ್ತಿಯುಕ್ತವಾದ್ದರಿಂದ ಆಯಾ ಭೂತಗಳಲ್ಲಿಯೇ ಲಯವನ್ನು ಹೇಳಬೇಕು. 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂಬ ಶ್ರುತಿಗೆ ಅಗ್ನಿಯಿಂದ ಹುಟ್ಟಿದ ಎಲ್ಲ ದೇವತೆಗಳು ಅಗ್ನಿಯಲ್ಲಿಯೇ ಲಯವನ್ನು ಹೊಂದುತ್ತಾರೆ ಎಂದರ್ಥವನ್ನು ಮಾಡಿದಾಗ ಯಾವ ವಿರೋಧವೂ ಇರುವುದಿಲ್ಲ.

ವರುಣನಿಂದ ಉತ್ಪನ್ನರಾಗದ ಅಶ್ವಿನೀದೇವತೆಗಳಿಗೆ ವರುಣನಲ್ಲಿ ಹೇಗೆ ಲಯವನ್ನು ಹೇಳುವುದು? ಎಂದರೆ ಅದಕ್ಕೆ ಮೂಲದಲ್ಲಿ 'ತತ್ಸಮಾನಾನಾಂ ಚ ಸ್ವಸಮಾನಸ್ಥಾನೇ ಲಯಃ' ಎಂದು ಉತ್ತರಿಸಲಾಗಿದೆ. ಅಶ್ವಿನೀದೇವತೆಗಳು ವರುಣ ನಿಂದ ಉತ್ಪನ್ನರಾಗದಿದ್ದರೂ ವರುಣನಿಂದ ಉತ್ಪನ್ನರಾದ ಜಲಾಭಿಮಾನಿ ದೇವತೆಗಳ ಕಕ್ಷೆಯಲ್ಲಿದ್ದಾರೆ. ಆದ್ದರಿಂದ ಜಲಾಭಿಮಾನಿದೇವತೆಗಳಿಗೆ ಎಲ್ಲಿ ಲಯವೋ ಅಶ್ವಿನೀದೇವತೆಗಳಿಗೂ ಅಲ್ಲಿಯೇ ಲಯವೂ ಸಿದ್ಧವಾಗುತ್ತದೆ.

ಕೆಲವೊಮ್ಮೆ ಸಮಾನಕಕ್ಷೆಯಲ್ಲಿರುವವರಿಗೂ ಬೇರೆಬೇರೆ ಕಡೆಯಲ್ಲಿಯೂ ಲಯ ಕಂಡಿದೆಯಲ್ಲ? ಎಂದರೆ ಅದಕ್ಕೆ 'ವಿಶೇಷವಚನಾಭಾವೇ' ಎಂದು ಉತ್ತರಿಸಿದ್ದು. ವಿಶೇಷ ವಚನವಿದ್ದರೆ ಬೇರೆ ಕಡೆ ಲಯ ಹೇಳಬಹುದು. ವಚನವಿಲ್ಲದಿದ್ದರೆ ಪೂರ್ವೋಕ್ತನಿಯಮವೇ ಅನ್ವಯವಾಗುವುದು ಎಂದರ್ಥ.

**ಸೂತ್ರಾರ್ಥ—**

### ಓಂ ನೈಕಸ್ಮಿನ್ ದರ್ಶಯತೋ ಹಿ ಓಂ

ಏಕಸ್ಮಿನ್=ಭೂತಾಭಿಮಾನಿಯಾದ ಅಗ್ನಿಯಲ್ಲಿಯೇ ಎಲ್ಲ ದೇವತೆಗಳಿಗೂ ಲಯ ಎಂಬುದು ನ=ಯುಕ್ತವಲ್ಲ. ಹಿ=ಏಕೆಂದರೆ, ದರ್ಶಯತಃ= 'ಪೃಥಿವ್ಯಾಮೃಭವಃ', 'ಋಭವಃಪೃಥಿವ್ಯಾಮ್' ಎಂಬ ಎರಡು ಶ್ರುತಿಗಳು ಭೂತಾಭಿಮಾನಿಗಳಲ್ಲಿಯೇ ಯಥಾಯೋಗ್ಯವಾಗಿ ಲಯವನ್ನು ಹೇಳುತ್ತಿವೆ.

## ಸಮನಾಧಿಕರಣ (4-2-6)

ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ಎಂಬ

ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಲಕ್ಷ್ಮೀದೇವಿ ವಿಷಯ. ಅವಳು ಭಗವಂತನ ಅಧೀನಳೂ ನಿತ್ಯಮುಕ್ತಳೂ ಆದ್ದರಿಂದ ಸಂಶಯ ಬರುತ್ತದೆ– ಲಕ್ಷ್ಮೀದೇವಿಗೆ ಪರಮಾತ್ಮನಲ್ಲಿ ಲಯವಿದೆಯೋ? ಇಲ್ಲವೋ? ಎಂದು.

ಪೂರ್ವಪಕ್ಷ— ಲಕ್ಷ್ಮೀದೇವಿಯು ಭಗವಂತನ ಅಧೀನಳಾದ್ದರಿಂದ ಅವನಲ್ಲಿ ಲಯವನ್ನು ಹೇಳಬೇಕು. 'ತೇಜಃ ಪರಸ್ಯಾಂ ದೇವತಾಯಾಂ' (ತೇಜಶ್ಶಬ್ದವಾಚ್ಯ ಳಾದ ಲಕ್ಷ್ಮಿಯು ಪರಮಾತ್ಮನಲ್ಲಿ ಲಯ ಹೊಂದುವಳು) ಎಂಬ ಶ್ರುತಿಯೂ ಇದೇ ವಿಷಯವನ್ನು ಪ್ರತಿಪಾದಿಸುತ್ತಿದೆ. ಲಯವು ಸಂಸಾರಿಗಳಿಗೆ ಮಾತ್ರ. ಲಕ್ಷ್ಮಿದೇವಿಗೆ ಸಂಸಾರವೇ ಇಲ್ಲದಿರುವುದರಿಂದ ಲಯವನ್ನು ಹೇಳಲು ಬರುವುದಿಲ್ಲ. ಎಂದರೆ, ಸಂಸಾರವಿಲ್ಲದಿದ್ದರೆ ಪರಮಾತ್ಮನೊಂದಿಗೆ ಅವಳಿಗೆ ಸಾಮ್ಯವು ಬರಬೇಕಾಗುತ್ತದೆ. ಸ್ವಾತಂತ್ರ್ಯಾದಿಗುಣಗಳು ಲಕ್ಷ್ಮಿಯಲ್ಲಿ ಇಲ್ಲದಿರುವುದರಿಂದ ಪರಮಾತ್ಮನ ಸಾಮ್ಯವು ಬರುವುದಿಲ್ಲ ಎಂದು ಹೇಳಬಾರದು. ನಿತ್ಯದಲ್ಲಿ ಸಂಸಾರರಹಿತಳು ಎಂದಾಗ ಪರಮಾತ್ಮನಂತೆ ಸರ್ವಗುಣಗಳೂ ಲಕ್ಷ್ಮಿಯಲ್ಲಿ ಸಂಭವಿಸುತ್ತವೆ. ಆದ್ದರಿಂದ ಲಕ್ಷ್ಮಿಗೆ ಸಂಸಾರವನ್ನು ಒಪ್ಪಬೇಕು. ಆವಾಗ ಪರಮಾತ್ಮನಲ್ಲಿ ಲಯವನ್ನು ಒಪ್ಪಲೇಬೇಕು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸುದಾರ್ಢ್ಯ' (ಸಂಸಾರಾಭಾವ ವನ್ನು ಒಪ್ಪಿದರೆ ಪರಮಾತ್ಮನ ಸಾಮ್ಯವು ಸುದೃಢ) ಎಂಬುದು. ಇದನ್ನು ಮತ್ತು 'ಮಹಿಮಾ' (ನಿತ್ಯ ಪದಾರ್ಥಗಳನ್ನೂ ಸೃಷ್ಟಿಮಾಡುವುದು ಭಗವಂತನ ಮಹಿಮೆ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ–

**ನ ಚ ಪ್ರಕೃತೇಃ ಸಂಸಾರಾಭಾವಾದಿನೇಶೇನಾಪ್ಯನ್ಯಥಾಕರ್ತು-ಮಶಕ್ಯತ್ವೇನ ಸುದೃಢತ್ವಾತ್ ಸರ್ವಸಾಮ್ಯಮೇವೇಶ್ವರೇಣ, ನ ಚೇತ್ ಸಂಸಾರಿತ್ವಮಿತಿ ಯುಕ್ತಮ್ । ಈಶ್ವರಸ್ಯ ಮಹಾಮಹಿಮತ್ವಾತ್ । ನಿತ್ಯಮಸಂಸಾರಿತ್ವಸ್ಯ ನಿತ್ಯಂ ತದನುಗ್ರಹೇಣೈವೋಪಪತ್ತೇಃ ।**

'ಸದಾಽನಿತ್ಯತಯಾಽನಿತ್ಯಂ ನಿತ್ಯಂ ನಿತ್ಯಾತ್ಮನಾ ಯತಃ ।
ನಿತ್ಯಯೈವ ಸ್ವಶಕ್ತ್ಯೇಶೋ ನಿಯಾಮಯತಿ ನಿತ್ಯದಾ ।

'ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವಶ್ಚೇತನಾ ಧೃತಿಃ ।
ಪ್ರಕೃತಿಃ ಪುರುಷಶ್ಚೈವ ನ ಸಂತಿ ಯದುಪೇಕ್ಷಯಾ॥'

ಇತ್ಯಾದಿಶ್ರುತೇಶ್ಚ ॥ ೬ ॥

**ಭಾವಾರ್ಥ**—ಲಕ್ಷ್ಮೀದೇವಿಗೆ ಸಂಸಾರವಿಲ್ಲವೆಂದಾದರೆ ಪರಮಾತ್ಮನಿಂದ ವ್ಯತ್ಯಾಸಮಾಡಲು ಸಾಧ್ಯವಿಲ್ಲದಿರುವುದರಿಂದ ಪರಮಾತ್ಮನ ವಿಷಯದಲ್ಲಿ ಸರ್ವಸಾಮ್ಯವು ಬರಬೇಕಾಗುವುದು. ಸರ್ವಸಾಮ್ಯವು ಬರಬಾರದೆಂದರೆ ಸಂಸಾರ ವನ್ನು ಒಪ್ಪಲೇಬೇಕು. ಆವಾಗ ಪರಮಾತ್ಮನಲ್ಲಿ ಲಯವನ್ನು ಅಂಗೀಕರಿಸಬೇಕು ಎಂಬ ಪೂರ್ವಪಕ್ಷವು ಸರಿಯಲ್ಲ. ಲಕ್ಷ್ಮೀದೇವಿಗೆ ನಿತ್ಯ ಸಂಸಾರಾಭಾವವೂ ಪರಮಾತ್ಮನ ನಿತ್ಯಅನುಗ್ರಹದಿಂದಲೇ ಉಪಪನ್ನವಾಗುತ್ತದೆ. ''ಶ್ರೀಹರಿಯು ಅನಿತ್ಯವಸ್ತುಗಳನ್ನು ಅನಿತ್ಯತ್ವವಿರುವಂತೆಯೇ (ಅನಿತ್ಯವಾದ ಪಟಾದಿಗಳನ್ನು ಎಂದೂ ನಿತ್ಯಗಳನ್ನಾಗಿ ಮಾಡುವುದಿಲ್ಲ ಎಂದರ್ಥ) ನಿತ್ಯವಸ್ತುಗಳನ್ನು ನಿತ್ಯತ್ವವಿರುವಂತೆಯೇ (ನಿತ್ಯಗಳನ್ನು ಎಂದಿಗೂ ಅನಿತ್ಯಗಳನ್ನಾಗಿ ಮಾಡುವುದಿಲ್ಲ ಎಂದರ್ಥ) ಯಾವಾಗಲೂ ತನ್ನ ನಿತ್ಯಶಕ್ತಿಯಿಂದ ನಿಯಮನ ಮಾಡುತ್ತಾನೆ, ದ್ರವ್ಯ, ಕರ್ಮ ಕಾಲ, ಪ್ರಕೃತ್ಯಾದಿಗಳ ಪರಿಣಾಮಗಳು, ಜ್ಞಾನ, ಧೈರ್ಯ, ಪ್ರಕೃತಿ, ಜೀವ ಇವೆಲ್ಲವೂ ಪರಮಾತ್ಮನ ಉಪೇಕ್ಷೆಯಿಂದ ಇಲ್ಲವಾಗುತ್ತವೆ' ಎಂಬಿವೇ ಮೊದಲಾದ ಶ್ರುತಿಯಿರುವುದರಿಂದ.

**ವಿವರಣೆ**— ನಿತ್ಯವಾದ ಪದಾರ್ಥಗಳನ್ನೂ ನಿಯಮನ ಮಾಡುವುದು ಭಗವಂತನ ಮಹಿಮೆ. ಎಂದಿಗೂ ಸಂಸಾರಾದಿ ಸಂಬಂಧವಿಲ್ಲದಿರುವುದರಿಂದ ಪರಮಾತ್ಮನಂತೆ ಸರ್ವಗತಳಾದ ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿದ್ದಾಳೆ. ಅವಳ ನಿತ್ಯಮುಕ್ತತ್ವ ವನ್ನು ತನ್ನ ನಿತ್ಯಶಕ್ತಿಯಿಂದ ಪರಮಾತ್ಮನು ನಿಯಮಿಸುತ್ತಾನೆ. ಆದ್ದರಿಂದ ಲಕ್ಷ್ಮೀದೇವಿಯ ನಿತ್ಯಮುಕ್ತಿಯು ದೃಢವಾದರೂ ಈಶ್ವರನಿಂದ ಸರ್ವಸಾಮ್ಯ ಬರುವ ಪ್ರಸಂಗವಿಲ್ಲ. ಸಂಸಾರಿತ್ವವನ್ನು ಹೇಳಬೇಕಿಲ್ಲ. ಆದ್ದರಿಂದ ಲಯವೂ ಇಲ್ಲ. ಲಯವನ್ನು ಹೇಳುವ 'ತೇಜಃ ಪರಸ್ಯಾಂ ದೇವತಾಯಾಮ್' ಎಂಬ ಶ್ರುತಿಗೆ 'ಗುರೌ ವಸತಿ' ಎಂಬ ವಾಕ್ಯಕ್ಕೆ ಗುರುಗಳ ಸಮೀಪದಲ್ಲಿ ಶಿಷ್ಯನು ವಾಸಮಾಡುತ್ತಾನೆ ಎಂದು ಅರ್ಥಮಾಡುವಂತೆ, ತೇಜಶ್ಶಬ್ದವಾಚ್ಯಳಾದ ಲಕ್ಷ್ಮಿಯು ಪರಮಾತ್ಮನ ಅತಿಸಾಮೀಪ್ಯವನ್ನು ಪಡೆಯುತ್ತಾಳೆ ಎಂದರ್ಥವನ್ನು

ಮಾಡುವುದರಿಂದ ಯಾವ ವಿರೋಧವೂ ಇಲ್ಲ. ಆದ್ದರಿಂದ ಲಕ್ಷ್ಮೀದೇವಿಗೆ ಶ್ರೀಹರಿಯಲ್ಲಿ ಲಯವಿಲ್ಲ ಎಂಬುದು ಸಿದ್ಧಾಂತ.

ಮೂಲದಲ್ಲಿರುವ ಶ್ಲೋಕವನ್ನು ಹೋಲುವ ಅನುವ್ಯಾಖ್ಯಾನದಲ್ಲಿ ಉಕ್ತವಾದ ಮತ್ತೊಂದು ಶ್ಲೋಕ ಹೀಗಿದೆ—

ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।
ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥ ಎಂದು.

**ಸೂತ್ರಾರ್ಥ—**

**ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ ॥**

ಚ=ಲಕ್ಷ್ಮೀದೇವಿಯು ಲಯ ಹೊಂದುವುದಿಲ್ಲ. ಏಕೆಂದರೆ ಅನುಪೋಷ್ಯ= ಉಪಾಸನೆ ಇಲ್ಲದೆ ಚ=ಸ್ವಾಭಾವಿಕವಾಗಿಯೇ ಅಮೃತತ್ವಂ=ನಿತ್ಯಮುಕ್ತತ್ವವನ್ನು ಹೊಂದಿರುವಳು. ಏಕೆಂದರೆ, ಆಸೃತ್ಯುಪಕ್ರಮಾತ್=ಎಂದಿಗೂ ಸಂಸಾರವೇ ಇಲ್ಲವಾದ್ದರಿಂದ. ಅದೂ ಏಕೆಂದರೆ ಸಮನಾ=ದೇಶಕಾಲವ್ಯಾಪ್ತಿಯಿಂದ ಭಗವಂತ ನಿಗೆ ಸಮಳಾಗಿದ್ದಾಳೆ.

## ಪರಲಯಾಧಿಕರಣ (4-2-7)

ಓಂ ತಾನಿ ಪರೇ ತಥಾ ಹ್ಯಾಹ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿ ಕರಣಕ್ಕೆ 'ಸರ್ವೇ ದೇವಾ ಭೂತೇಷು ವಿಶಂತಿ' ಎಂಬಲ್ಲಿ ಹೇಳಲ್ಪಟ್ಟ ದೇವತೆಗಳು ವಿಷಯ. ತಮಗಿಂತ ಉತ್ತಮರಲ್ಲಿ ಲಯವು ಪರಂಪರಯಾ ಹರಿಯಲ್ಲಿ ಪ್ರವೇಶ ಮಾಡುವುದರಿಂದ, ಮಾಡದಿರುವುದರಿಂದಲೂ ಕೂಡುವುದರಿಂದ ಸಂಶಯ ಬರುತ್ತದೆ– ದೇವತೆಗಳಿಗೆ ಶ್ರೀಹರಿಯಲ್ಲಿ ಲಯವಿದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ—** 'ಪ್ರತಿಬಿಂಬೋ ಹರೇಃ ಪ್ರಾಣಃ ಪ್ರಾಣಸ್ಯಾನ್ಯಾಃ ಕಲಾಃ ಕ್ರಮಾತ್' ಎಂಬ ವಾಕ್ಯವು ಪ್ರಾಣನು=ಚತುರ್ಮುಖನು ಶ್ರೀಹರಿಯ ಪ್ರತಿಬಿಂಬನು. ಉಳಿದ ದೇವತೆಗಳು ಕ್ರಮವಾಗಿ ಚತುರ್ಮುಖನ ಪ್ರತಿಬಿಂಬಗಳು ಎಂದು ತಿಳಿಸುತ್ತಿದೆ. ಬಿಂಬದಲ್ಲಿ ಪ್ರತಿಬಿಂಬಕ್ಕೆ ಲಯ ಎಂಬುದು ನಿಯಮ.

ಆದ್ದರಿಂದ ಚತುರ್ಮುಖನಿಗೆ ಶ್ರೀಹರಿಯಲ್ಲಿ ಲಯ. ಉಳಿದ ದೇವತೆಗಳಿಗೆ ಚತುರ್ಮುಖನಲ್ಲಿಯೇ ಲಯ ಹೊರತು ಶ್ರೀಹರಿಯಲ್ಲಿ ಅಲ್ಲ. ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪರತಂತ್ರತಾ' (ಎಲ್ಲ ದೇವತೆಗಳು ಚತುರ್ಮುಖನ ಅಧೀನವಾಗಿರುವುದು) ಎಂಬುದು. ಇದನ್ನು ಮತ್ತು 'ವಿಶೇಷ' (ವಿಶೇಷಶ್ರುತಿ) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾನ್ಯದೇವಾದೀನಾಂ ಪ್ರಾಣಾಧೀನತ್ವಾತ್ ತತ್ಪ್ರಾಪ್ತಿನಿಯಮಾತ್ ಪರಪ್ರಾಪ್ತಿರ್ನಾಸ್ತ್ಯೇವ ।**

**'ಪ್ರಾಣಂ ಪ್ರಾಪ್ಯ ಪರಂ ದೇವಾಸ್ತದನ್ಯೇ ಚೈವ ತದ್ಗತಾಃ ।**
**ಪ್ರಾಪ್ನುವಂತಿ ಪರಂ ದೇವಂ ವಸಂತಿ ಚ ಯಥಾಸುಖಮ್ ॥'**

**ಇತಿ ವಿಶೇಷಶ್ರುತೇಃ ॥ ೭ ॥**

**ಭಾವಾರ್ಥ**—ಇತರ ದೇವತೆಗಳು ಚತುರ್ಮುಖನ ಅಧೀನರಾದ್ದರಿಂದ (ಬಿಂಬದಲ್ಲಿಯೇ ಪ್ರತಿಬಿಂಬದ ಲಯ) ಚತುರ್ಮುಖನಲ್ಲಿಯೇ ದೇವತೆಗಳ ಲಯ ಎಂಬ ನಿಯಮವಿರುವುದರಿಂದ ಪರಮಾತ್ಮನ ಪ್ರಾಪ್ತಿಯೇ ಇಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. 'ದೇವತೆಗಳು ಚತುರ್ಮುಖನನ್ನು ಹೊಂದಿ ಪರಮಾತ್ಮನನ್ನು ಹೊಂದುತ್ತಾರೆ. ಋಷಿಗಳೇ ಮೊದಲಾದವರು ದೇವತೆಗಳನ್ನು ಹೊಂದಿ ಪರಮಾತ್ಮನನ್ನು ಹೊಂದುತ್ತಾರೆ. ಪರಮಾತ್ಮನೊಂದಿಗೆ ಸುಖವಾಗಿ ವಾಸಮಾಡುತ್ತಾರೆ' ಎಂಬ ವಿಶೇಷಶ್ರುತಿಯಿಂದ.

**ವಿವರಣೆ**— ವಿಶೇಷಶ್ರುತಿ ಇರುವುದರಿಂದ ದೇವತೆಗಳಿಗೆ ಪರಮಾತ್ಮನಲ್ಲಿ ಲಯ ಸಿದ್ಧವಾಗುತ್ತದೆ. ಎಲ್ಲ ದೇವತೆಗಳೂ ಸಾಮಾನ್ಯವಾಗಿ ಪರಮಾತ್ಮನ ಪ್ರತಿಬಿಂಬರೂ ಆಗಿಯೇ ಇದ್ದಾರೆ. ಆದ್ದರಿಂದ ಲಯವು ಯುಕ್ತವಾಗಿದೆ. ದೇವತೆಗಳಿಗೆ ಪ್ರಾಣನಲ್ಲಿ ಲಯವಾದರೂ ಆ ಪ್ರಾಣನಿಗೆ ಪರಮಾತ್ಮನಲ್ಲಿ ಲಯವಿರುವುದರಿಂದ ಪ್ರಾಣನ ಒಳಗೆ ಪ್ರವೇಶಿಸಿದ ದೇವತೆಗಳಿಗೂ ಪರಮಾತ್ಮನಲ್ಲಿ ಲಯ ತಪ್ಪುವುದಿಲ್ಲ. ಆದರೂ ವಿಶೇಷಶ್ರುತಿಯಿಂದಲೂ ಪರಮಾತ್ಮನಲ್ಲಿ ಲಯ ಸಿದ್ಧವಾಗುತ್ತದೆ.

**ಸೂತ್ರಾರ್ಥ—**

## ಓಂ ತಾನಿ ಪರೇ ತಥಾ ಹ್ಯಾಹ ಓಂ

ತಾನಿ='ಭೂತೇಷು ವಿಲೀಯಂತೇ' ಎಂಬಲ್ಲಿ ಹೇಳಲ್ಪಟ್ಟ ಎಲ್ಲ ದೇವತೆಗಳೂ ಚತುರ್ಮುಖನ ಮೂಲಕ ಪರೇ=ಪರಮಾತ್ಮನಲ್ಲಿ ಲಯ ಹೊಂದುವರು. ಹಿ=ಏಕೆಂದರೆ 'ಪ್ರಾಣಂ ಪ್ರಾಪ್ಯ ಪರಂ ದೇವಾಃ ತದನ್ಯೇ ಚೈವ ತದ್ಗತಾಃ' ಎಂಬ ವಾಕ್ಯವು ತಥಾ=ಹಾಗೆ ಆಹ=ಹೇಳಿದೆ.

## ಅವಿಭಾಗಾಧಿಕರಣ (4-2-8)

ಓಂ ಅವಿಭಾಗೋ ವಚನಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ದೇವತೆಗಳೇ. ಮುಕ್ತತ್ವವಿರುವುದರಿಂದ, ಸ್ವಾತಂತ್ರ್ಯವು ಭಗವಂತನ ಧರ್ಮವಾಗಿರುವುದರಿಂದ ಸಂಶಯ ಬರುತ್ತದೆ– ದೇವತೆಗಳು ಮುಕ್ತಿಯಲ್ಲಿ ಸ್ವತಂತ್ರರೋ? ಅಸ್ವತಂತ್ರರೋ? ಎಂಬುದಾಗಿ.

**ಪೂರ್ವಪಕ್ಷ—** ದೇವತೆಗಳು ಮುಕ್ತರಾದ್ದರಿಂದಲೇ ಮುಕ್ತಿಯಲ್ಲಿ ಸ್ವತಂತ್ರ ವಾಗಿಯೇ ಇರುತ್ತಾರೆ. ಒಂದುವೇಳೆ ಅಸ್ವತಂತ್ರರಾದರೆ ಸಂಸಾರಿಗಿರುವಂತೆ ದುಃಖಾದಿಗಳೂ ಬರಬೇಕಾದೀತು. 'ಏತೇ ದೇವಾ ಏತಮಾತ್ಮಾನಮನುವಿಶ್ಯ ಸತ್ಯಾಃ ಸತ್ಯಕಾಮಾಃ ಸತ್ಯಸಂಕಲ್ಪಾ ಯಥಾನಿಕಾಮಮಂತರ್ಬಹಿಃ ಪರಿಚರಂತಿ' (ಈ ದೇವತೆಗಳು ಪರಮಾತ್ಮನನ್ನು ಪ್ರವೇಶಿಸಿ ನಿತ್ಯರಾಗಿ ಸಫಲಕಾಮರೂ ಸತ್ಯಸಂಕಲ್ಪರೂ ಆಗಿ ಪರಮಾತ್ಮನ ದೇಹದ ಒಳಗೆ ಹೊರಗೆ ಸಂಚರಿಸುತ್ತಾರೆ.) ಎಂಬ ಶ್ರುತಿಯು ಮುಕ್ತರಿಗೆ ಸತ್ಯಕಾಮತ್ವವನ್ನು ಹೇಳುತ್ತಿದೆ. ಮತ್ತೊಬ್ಬರ ಅಧೀನರಾದರೆ ಸತ್ಯಕಾಮತ್ವವು ಕೂಡುವುದಿಲ್ಲ. ಆದ್ದರಿಂದ ಮುಕ್ತರು ಸ್ವತಂತ್ರರು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಮಾನಧರ್ಮ' (ಸಂಸಾರಿಯ ಸಮಾನ ಧರ್ಮಗಳು=ದುಃಖಾದಿಗಳು ಬರಬೇಕಾಗುತ್ತವೆ) ಎಂಬುದು ಇದನ್ನು ಮತ್ತು 'ಕೃತಾರ್ಥತಾ' (ಪರಮಾತ್ಮನ ಅಧೀನರಾದರೂ ಮುಕ್ತರಾದ್ದರಿಂದ ದುಃಖ ವಿರುವುದಿಲ್ಲ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸು ತ್ತಿದ್ದಾರೆ—

**ನ ಚ ಸತ್ಯಸಂಕಲ್ಪತ್ವಾದೇರೀಶ್ವರಸಂಕಲ್ಪಾದ್ಯನುಸಾರಿತ್ವನಿಯಮೇ ಸಂಸಾರಸಮಾನಧರ್ಮತ್ವಂ ಮುಕ್ತೇರಿತಿ ವಾಚ್ಯಮ್ । ಕೃತಾರ್ಥತ್ವೇನೈವ ವಿಶೇಷೋಪಪತ್ತೇಃ ।**

**'ಅಪೂರ್ಣತಾದಿಭಾವೋ ವಾ ದುಃಖಂ ವಾ ನಾಸ್ತಿ ಕಿಂಚನ ।**
**ಮುಕ್ತಸ್ಯ ಪಾರತಂತ್ರ್ಯೇಽಪಿ ತಾರತಮ್ಯೇಽಪ್ಯತಃ ಸುಖೀ ॥'**

**ಇತಿ ಚ ಶ್ರುತಿಃ ॥ ೮ ॥**

**ಭಾವಾರ್ಥ**—ಮುಕ್ತರ ಸತ್ಯಸಂಕಲ್ಪತ್ವ, ಈಶ್ವರ ಸಂಕಲ್ಪಾನುಸಾರಿಯಾಗಿದೆ ಎಂದು ನಿಯಮ ಒಪ್ಪಿಕೊಂಡರೆ ಮುಕ್ತಿಯಲ್ಲಿ ಸಂಸಾರದ ಸಮಾನಧರ್ಮಗಳು (ದುಃಖಾದಿಗಳು) ಬರಬೇಕಾದೀತು ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ (ಕೃತಾರ್ಥತ್ವೇನ=ಮುಕ್ತತ್ವೇನ) ಮುಕ್ತನಾದ್ದರಿಂದಲೇ ದುಃಖಾಭಾವ ಮತ್ತು ಸತ್ಯಸಂಕಲ್ಪತ್ವಗಳನ್ನು ಕೂಡಿಸಬಹುದು. 'ಮುಕ್ತನಿಗೆ ಅಪೂರ್ಣತ್ವವೆಂಬ ಧರ್ಮ ವಾಗಲೀ, ಯಾವುದೇ ವಿಧವಾದ ದುಃಖವಾಗಲೀ ಇರುವುದಿಲ್ಲ. ಪರಾಧೀನತೆ ಇದ್ದರೂ ತಾರತಮ್ಯವು ಇದ್ದರೂ ಮುಕ್ತನಾದ್ದರಿಂದಲೇ ಸುಖಿಯಾಗುತ್ತಾನೆ' ಎಂದು ಶ್ರುತಿಯು ತಿಳಿಸುತ್ತದೆ.

**ವಿವರಣೆ**— ಮುಕ್ತನಾದ್ದರಿಂದ ಪರಮಾತ್ಮನ ಅಧೀನನಾದರೂ ಅವನಿಗೆ ದುಃಖವಿರುವುದಿಲ್ಲ ಎಂದರ್ಥ. ಸಂಸಾರದಲ್ಲಿ ನಮ್ಮ ಇಚ್ಛೆಗೂ ಪರಮಾತ್ಮನ ಇಚ್ಛೆಗೂ ಹೊಂದಾಣಿಕೆ ಇರುವುದಿಲ್ಲ. ನಾವು ಸುಖವನ್ನು ಬಯಸಿದರೆ ಪರಮಾತ್ಮ ಪೂರ್ವಕರ್ಮವನ್ನು ಅನುಸರಿಸಿ ದುಃಖವನ್ನು ಬಯಸುತ್ತಾನೆ. ಆದರೆ ಮೋಕ್ಷದಲ್ಲಿ ಮುಕ್ತರ ಇಚ್ಛೆಗೂ ಪರಮಾತ್ಮನ ಇಚ್ಛೆಗೂ ವಿರೋಧವಿರುವುದಿಲ್ಲ. ಆದ್ದರಿಂದ ಅವರು ಸತ್ಯಕಾಮರು ಆಗಿರುತ್ತಾರೆ. ಬಯಸಿದ ವಿಷಯ ಲಭಿಸುವುದು ಸತ್ಯಕಾಮತ್ವ. ಇದೂ ಪರಮಾತ್ಮನ ಸಂಕಲ್ಪದಿಂದಲೇ ಮುಕ್ತರಿಗೆ ಬರುವುದರಿಂದ ಸಂಸಾರ ಸಮಾನಧರ್ಮ ಮುಕ್ತಿಗೆ ಬರಬೇಕಾಗುತ್ತದೆ ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಎಲ್ಲ ಮುಕ್ತರೂ ಪರಮಾತ್ಮನ ಅಧೀನರಾದರೆ ಎಲ್ಲರಿಗೂ ಸಾಮ್ಯವು ಬರುತ್ತದೆ. ಸಾಮ್ಯವು ಶ್ರುತಿವಿರುದ್ಧ ವಾದ್ದರಿಂದ ತಾರತಮ್ಯವನ್ನು ಅಂಗೀಕರಿಸಬೇಕು. ಆವಾಗ ಪರಸ್ಪರ ದ್ವೇಷಾದಿಗಳು, ಅವುಗಳಿಂದ ದುಃಖ

ಬರಬೇಕಾಗುತ್ತದೆ. ಆದ್ದರಿಂದ ದುಃಖವಿಲ್ಲ ಎಂದು ಹೇಗೆ ಹೇಳುವುದು? ಎಂಬ ಆಕ್ಷೇಪಕ್ಕೆ ಉತ್ತರ ಮೂಲದಲ್ಲಿದೆ– 'ತಾರತಮ್ಯೇಽಪ್ಯ ಪೂರ್ಣತಾಭಾವೋ ನಾಸ್ತಿ' ಎಂದು. ತಾರತಮ್ಯವಿದ್ದರೂ ಎಲ್ಲರೂ ತಮ್ಮ ಯೋಗ್ಯತಾನುಸಾರ ಪೂರ್ಣರೇ ಆಗಿದ್ದಾರೆ. ಅಪೂರ್ಣರಾಗಿದ್ದರೆ ಸಂಸಾರಿಗಳಂತೆ ಇಲ್ಲದ ಪದಾರ್ಥಗಳಲ್ಲಿ ಕಾಮನೆ, ಅದು ತಮಗೆ ದೊರೆತಿಲ್ಲ ಬೇರೆಯವರಿಗೆ ಲಭಿಸಿದೆ ಎಂದು ಅವರಲ್ಲಿ ದ್ವೇಷ, ಅದರಿಂದ ದುಃಖಾದಿಗಳು ಬರುತ್ತವೆ. ಆದರೆ ತಾರತಮ್ಯವಿದ್ದರೂ ಪರಾಧೀನರೇ ಆಗಿದ್ದರೂ ಪೂರ್ಣರಾದ್ದರಿಂದ ಪಡೆಯ ಬೇಕಾದದ್ದನ್ನು ಪಡೆದುಕೊಂಡಿರುವುದ ರಿಂದ ಯಾವ ಅನುಪಪತ್ತಿಯೂ ಇಲ್ಲ.

**ಸೂತ್ರಾರ್ಥ—**

**ಓಂ ಅವಿಭಾಗೋ ವಚನಾತ್ ಓಂ**

ಅವಿಭಾಗಃ=ದೇವತೆಗಳ ಇಚ್ಛೆಗೂ ಭಗವಂತನ ಇಚ್ಛೆಗೂ ತಾದಾತ್ಮ್ಯವಿದೆ. ವಚನಾತ್='ಕಾಮೇನ ಮೇ ಕಾಮ ಆಗಾತ್' ಎಂಬ ಶ್ರುತಿಯಿರುವುದರಿಂದ.

## ತದೋಕೋಧಿಕರಣ (4-2-9)

ಓಂ ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ತ-ಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಜ್ಞಾನಿಗಳ ಉತ್ಕ್ರಮಣವು ವಿಷಯ. ಜ್ಞಾನಿ ಮತ್ತು ಅಜ್ಞಾನಿಗಳಿಗೆ ಮರಣ ಸಮಾನವಾಗಿದೆ. ಆದರೂ ಜ್ಞಾನಿಗಳಲ್ಲಿ ಜ್ಞಾನಿತ್ವವೆಂಬ ವಿಶೇಷವಿದೆ. ಆದ್ದರಿಂದ ಸಂಶಯ ಬರುತ್ತದೆ– ಅಜ್ಞಜನರ ಮರಣದಂತೆಯೇ ಜ್ಞಾನಿಗಳ ಮರಣವೋ? ಅಥವಾ ವಿಲಕ್ಷಣವೋ? ಎಂದು.

**ಪೂರ್ವಪಕ್ಷ—** ಪಾಮರರಿಗೆ ಪ್ರಾರಬ್ಧಕರ್ಮವಿರುವಂತೆ ಜ್ಞಾನಿಗಳಿಗೂ ಪ್ರಾರಬ್ಧಕರ್ಮವು ಇದೆ. ದೇಹತ್ಯಾಗದ ವರೆಗೂ ಅದು ಇರುತ್ತದೆ. ಮರಣಕ್ಕೆ ಕಾರಣವೂ ಆಗಿದೆ. ಇಬ್ಬರ ಮರಣದಲ್ಲಿಯೂ ವಿಶೇಷವಿಲ್ಲದಿರುವುದರಿಂದ ಜ್ಞಾನಕ್ಕೆ ಏನೂ ಅತಿಶಯಸಾಮರ್ಥ್ಯವಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕೃತಶೇಷತಾ' (ಕೃತಸ್ಯ=ಪ್ರಾರಬ್ಧ

ಕರ್ಮಣಃ ಶೇಷಃ=ಯಸ್ಯಸಃ। ತಸ್ಯ ಭಾವಃ) (ಜ್ಞಾನಿಗೆ ಅಜ್ಞಾನಿಗಳಿಗಿರುವಂತೆ ಪ್ರಾರಬ್ಧಕರ್ಮವಿರುವುದು) ಎಂಬುದು. ಇದನ್ನು ಮತ್ತು 'ಶಶ್ವದನುಪ್ರವೃತ್ತಿ' (ಯಾವಾಗಲೂ ಜ್ಞಾನದ ಫಲ ಅನುವೃತ್ತವಾಗುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪ್ರಾರಬ್ಧಕರ್ಮಶೇಷತ್ವಾದುತ್ಕ್ರಾಂತಾವವಿಶೇಷೋ ಜ್ಞಾನಿನಃ। ಜ್ಞಾನೋದಯಾನಂತರಂ ಸರ್ವದಾ ಜ್ಞಾನಫಲಸ್ಯಾನುವೃತ್ತೇಃ।**

**'ಪ್ರಾರಬ್ಧಕರ್ಮಶೇಷಸ್ತು ವಿರಜಾತರಣಾವಧಿಃ।**
**ಸ್ವೋದಯಾತ್ ಫಲದಂ ಜ್ಞಾನಮಾದೇಹಂ ಕರ್ಮ ವಾಽಽರವೇಃ।**
**ತಥಾಽಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ ॥'**

**ಇತಿ ಹಿ ಶ್ರುತಿಃ।**

**'ಶರೀರೇ ಪಾಪ್ಮನೋ ಹಿತ್ವಾ ಸರ್ವಾನ್ ಕಾಮಾನ್ ಸಮಶ್ನುತೇ। ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹೈವ ಸ ಪಾಪ್ಮನಾ ನಿರ್ಮುಕ್ತಃ ಸ ಸಂಪ್ರಾಪ್ನೋತಿ ವಿರಜಾಂ ನದೀಂ ತತ್ಸುಕೃತದುಷ್ಕೃತೇ ವಿಧೂನುತೇ'**

**'ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾನ್ಮತಾತ್ ಪರಿಮುಚ್ಯಂತಿ ಸರ್ವೇ' ಇತಿ ಚ।**

**'ಅನ್ಯಥಾಭಾವನಿಯಮೋಽನೃತತಾ ಕಾರ್ಯಕಾರಣೇ' ಇತಿ ಚ ॥೯॥**

**ಭಾವಾರ್ಥ**–ಜ್ಞಾನಿಯು ಪ್ರಾರಬ್ಧಕರ್ಮದ ಶೇಷವುಳ್ಳವನಾದ್ದರಿಂದ ಜ್ಞಾನಿ, ಅಜ್ಞಾನಿಗಳ ಮರಣದಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, ಜ್ಞಾನವು ಹುಟ್ಟಿದ ಅನಂತರ ಜ್ಞಾನದ ಫಲವೂ ಪ್ರವೃತ್ತವಾಗುತ್ತದೆ. 'ಪ್ರಾರಬ್ಧಕರ್ಮದ ಶೇಷವು ವಿರಜಾನದಿಯ ವರೆಗೆ ಇರುತ್ತದೆ. ಜ್ಞಾನವು ತನ್ನ ಹುಟ್ಟಿನಿಂದಾರಂಭಿಸಿ ದೇಹವಿರುವ ವರೆಗೆ, ಸೂರ್ಯನಿರುವ ವರೆಗೆ ಫಲವನ್ನು ಕೊಡುತ್ತದೆ. ಹಾಗಿದ್ದರೂ ಪ್ರಕೃತಿಯ ಬಂಧವು ಬ್ರಹ್ಮನೊಂದಿಗೇ

ನಾಶಹೊಂದುತ್ತದೆ' ಎಂಬ ಶ್ರುತಿಯು ಪ್ರಮಾಣವಾಗಿದೆ. 'ಶರೀರದಲ್ಲಿಯೇ ಪ್ರಾರಬ್ಧಕರ್ಮಗಳನ್ನು ಕಳೆದುಕೊಂಡು ಎಲ್ಲ ಕಾಮನೆಗಳನ್ನೂ ಅನುಭವಿಸುತ್ತಾನೆ. 'ಜ್ಞಾನಿಯು ಆ ಸೂರ್ಯನೆಂಬ ತೇಜಸ್ಸನ್ನು ಹೊಂದಿದವನಾಗಿ ಹಾವು ಹೇಗೆ ತನ್ನ ಪೊರೆಯನ್ನು ಬಿಡುತ್ತದೋ ಹಾಗೆ ಪಾಪದಿಂದ ಮುಕ್ತನಾಗುತ್ತಾನೆ' 'ವಿರಜಾನದಿ ಯನ್ನು ಹೊಂದಿದವನಾಗಿ ಅನಿಷ್ಟಪುಣ್ಯ, ಪಾಪಗಳನ್ನು ಕಳೆದುಕೊಳ್ಳುತ್ತಾನೆ'. ಸತ್ಯಲೋಕದಲ್ಲಿರುವ ಜ್ಞಾನಿಗಳೆಲ್ಲರೂ ಬ್ರಹ್ಮದೇವರ ಆಯುಷ್ಯವು ಸಮಾಪ್ತ ವಾದಾಗ ಪರಾನ್ನತವೆನಿಸಿದ ಪ್ರಕೃತಿಯಿಂದ ಮುಕ್ತರಾಗುತ್ತಾರೆ.' ಕಾರ್ಯ ವಾದ ಮಹತ್ತತ್ತ್ವಾದಿಗಳೂ, ಕಾರಣವಾದ ಪ್ರಕೃತಿ ಇವೆರಡಕ್ಕೂ ಪರಿಣಾಮವು ನಿಯಮೇನ ಇರುವುದರಿಂದ ಅನ್ಯತವೆನಿಸಿವೆ.

ವಿವರಣೆ— ಪ್ರಾರಬ್ಧಕರ್ಮವು ಜ್ಞಾನಿ-ಅಜ್ಞಾನಿಗಳಿಬ್ಬರಿಗೂ ಸಮಾನ ವಾಗಿದ್ದರೂ ಭಗವಂತನ ಸಾಕ್ಷಾತ್ಕಾರಕ್ಕೆ ಅತಿಶಯ ಸಾಮರ್ಥ್ಯವಿರುವುದರಿಂದ ಜ್ಞಾನಿಯ ಮರಣದಲ್ಲಿ ವಿಶೇಷವಿದೆ. ಅದೇನೆಂದರೆ, ಜ್ಞಾನಿಯಾದ ಜೀವನ ದೇಹೋತ್ಕ್ರಮಣಕಾಲದಲ್ಲಿ ಭಗವದಾಶ್ರಯ ವಾದ ಅವನ ಹೃದಯದ ಅಗ್ರಭಾಗದಲ್ಲಿ ಭಗವಂತನ ಪ್ರಕಾಶವು ಬೆಳಗುತ್ತದೆ. ಆಗ ಜ್ಞಾನಿಯು ಪ್ರಕಾಶಗೊಂಡ ನಾಡೀದ್ವಾರದ ಮೂಲಕ ನಾಡಿಯಲ್ಲಿ ಸಂಚರಿಸಿ ದೇಹದಿಂದ ಹೊರಗೆ ಬೀಳುತ್ತಾನೆ. ಅಜ್ಞಾನಿಗಳ ಮರಣ ಈರೀತಿಯಾಗುವುದಿಲ್ಲ ವಾದ್ದರಿಂದ ಜ್ಞಾನಿ-ಅಜ್ಞಾನಿಗಳ ಮರಣದಲ್ಲಿ ವೈಲಕ್ಷಣ್ಯವಿದೆ.

ಜ್ಞಾನದ ಫಲ ಅಜ್ಞಾನವೇ ಹೊರತು ಉತ್ಕ್ರಾಂತಿ ಅಲ್ಲ. ಆದ್ದರಿಂದ ಉತ್ಕ್ರಾಂತಿಯಿಂದ ಹೇಗೆ ವೈಲಕ್ಷಣ್ಯವನ್ನು ಹೇಳುತ್ತೀರಿ ಎಂದರೆ ಜ್ಞಾನಕ್ಕೆ ಅಜ್ಞಾನನಾಶವು ಮಂತ್ರಫಲವಲ್ಲ. ಹುಟ್ಟಿದಾಗಲಿಂದ ಜ್ಞಾನವು ಅನೇಕ ಫಲಗಳನ್ನು ಕೊಡುತ್ತದೆ. ಉತ್ಕ್ರಾಂತಿಯೂ ಅದರ ಫಲವೇ. ಆದ್ದರಿಂದ ವೈಲಕ್ಕಷಣ್ಯವು ಕೂಡುತ್ತದೆ.

ಪ್ರಾರಬ್ಧಕರ್ಮವನ್ನು ಅಂಗೀಕರಿಸಿ ಜ್ಞಾನದ ಸಮರ್ಥ್ಯದಿಂದ ವಿಶಿಷ್ಟಮರಣ ವನ್ನು ಜ್ಞಾನಿಗೆ ಸಮರ್ಥಿಸುವ ಬದಲಾಗಿ ಅಪರೋಕ್ಷಜ್ಞಾನ ಹುಟ್ಟಿದ ಕೂಡಲೆ ಸಂಚಿತ, ಆಗಾಮಿಕರ್ಮಗಳು ನಾಶಹೊಂದುವಂತೆ ಪ್ರಾರಬ್ಧಕರ್ಮಕ್ಕೂ ನಾಶವನ್ನು ಒಪ್ಪಿ ಜ್ಞಾನಿ-ಅಜ್ಞಾನಿಗಳ ಮರಣದಲ್ಲಿ ವೈಲಕ್ಷಣ್ಯವನ್ನು ಸಮರ್ಥಿಸಬಹುದಲ್ಲ?

ಎಂದರೆ ಪ್ರಾರಬ್ಧಕರ್ಮವು ಜ್ಞಾನದಿಂದ ನಾಶವಾಗುವುದಿಲ್ಲ. ಹೊರತಾಗಿ ವಿರಜಾನದಿಯ ಸ್ನಾನದವರೆಗೂ ಇರುತ್ತದೆ ಎಂದು ಶ್ರುತಿಯು ಸಾರುತ್ತದೆ 'ವಿರಜಾತರಣಾವಧಿಃ' ಎಂದು.

'ತೇ ಬ್ರಹ್ಮಲೋಕೇ' ಎಂಬ ಶ್ರುತಿಯಲ್ಲಿ 'ಪರಾನ್ಯತಾತ್' ಎಂದರೆ ಪ್ರಕೃತಿ ಎಂದರ್ಥ. ಪ್ರಾಕೃತವೂ ಅನ್ಯತವಾಗಿದೆ. ಪ್ರಕೃತಿಯನ್ನು ಮಾತ್ರ ಸ್ವೀಕರಿಸುವ ಉದ್ದೇಶದಿಂದ 'ಪರ' ಎಂಬ ವಿಶೇಷಣವನ್ನು ಶ್ರುತಿಯಲ್ಲಿ ನೀಡಲಾಗಿದೆ. ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು. ಪ್ರಕೃತಿ–ಪ್ರಾಕೃತಗಳು ಸತ್ಯವಾಗಿವೆ. ಅವುಗಳನ್ನು ಅನ್ಯತ (ಮಿಥ್ಯೆ) ಎಂಬುದಾಗಿ ಹೇಗೆ ಹೇಳುವುದು? ಎಂದರೆ, ಅದಕ್ಕೆ ಉತ್ತರಿಸುವರು– 'ಅನ್ಯಥಾಭಾವನಿಯಮೋಽನೃತತಾ ಕಾರ್ಯಕಾರಣೇ' ಎಂದು. (ಕಾರ್ಯಂ ಚ ಕಾರಣಂ ಚ ಏತಯೋಃ ಸಮಾಹಾರಃ ಕಾರ್ಯಕಾರಣಂ। ತಸ್ಮಿನ್॥ ಎಂದು ಸಮಾಸ ಮಾಡಬೇಕು.) ಋತ ಎಂದರೆ ಪರಿಣಾಮ ಇಲ್ಲದ್ದು ಎಂದರ್ಥ. ಆದ್ದರಿಂದಲೇ ವೇದವು ಪರಮಾತ್ಮನನ್ನು 'ಬ್ರಹ್ಮೈವರ್ತಮ್' ಎಂದು ಕರೆದಿದೆ. ಅನ್ಯತ ಎಂದರೆ ಪರಿಣಾಮವನ್ನು ಹೊಂದುವುದು ಎಂದರ್ಥ. ಕಾರಣವಾದ ಪ್ರಕೃತಿಯು, ಕಾರ್ಯವಾದ ಮಹತ್ತತ್ವಾದಿಗಳು ಪರಿಣಾಮವನ್ನು ಹೊಂದುವುದರಿಂದ ಅವುಗಳನ್ನು ಅನ್ಯತ ಎಂದು ಕರೆಯಲಾಗಿದೆ.

**ಸೂತ್ರಾರ್ಥ—**

### ಓಂ ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ

ತದೋಕೋಗ್ರಜ್ವಲನಂ=ಜ್ಞಾನಿಗೆ ಮರಣಕಾಲದಲ್ಲಿ ಭಗವಂತನಿಗೆ ಆಶ್ರಯವಾದ ಹೃದಯದ ತುದಿಭಾಗದಲ್ಲಿ ಭಗವಂತನ ತೇಜಸ್ಸು ಬೆಳಗುತ್ತದೆ. ತತ್ಪ್ರಕಾಶಿತದ್ವಾರಃ=ಆ ಬೆಳಕಿನಿಂದ ಪ್ರಕಾಶಿತವಾದ ನಾಡೀದ್ವಾರವುಳ್ಳವನಾಗಿ ಜ್ಞಾನಿಯಾದ ಜೀವನು ನಾಡಿಮಾರ್ಗದಿಂದ ಶರೀರದಿಂದ ತೆರಳುತ್ತಾನೆ. ವಿದ್ಯಾಸಾಮರ್ಥ್ಯಾತ್=ಈಶ್ವರ ಅಪರೋಕ್ಷಜ್ಞಾನದ ಶಕ್ತಿಯಿಂದಲೂ ತಚ್ಛೇಷ-ಗತ್ಯನುಸ್ಮೃತಿಯೋಗಾಚ್ಚ=ಈಶ್ವರನ ಅಪರೋಕ್ಷಜ್ಞಾನಕ್ಕೆ ಸಹಕಾರಿಯಾದ ತನ್ನ

ಹೃದಯವನ್ನಾರಂಭಿಸಿ ಪರಮಾತ್ಮನನ್ನು ಹೊಂದುವ ವರೆಗಿನ ಮಾರ್ಗಸ್ಮರಣೆಯ ಸಂಬಂಧದಿಂದಲೂ ಹಾರ್ದಾನುಗೃಹೀತಃ=ಹೃದಯವಾಸಿಯಾದ ಭಗವಂತನಿಂದ ಅನುಗೃಹೀತವಾಗಿಯೂ ಸಹ ಶತಾಧಿಕಯಾ=ಸುಷುಮ್ನಾನಾಡಿಯಿಂದ ತೆರಳು ವನು.

## ಪ್ರತಿಸ್ಮರಣಾಧಿಕರಣ (4-2-10)

ಓಂ ಯೋಗಿನಃ ಪ್ರತಿ ಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ ಎಂಬ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ತನ್ನ ಹೃದಯದಿಂದಾರಂಭಿಸಿ ಬ್ರಹ್ಮನ ವರೆಗಿನ ಗಮನವು ವಿಷಯ. ಹಿಂದಿನ ಅಧಿಕರಣದಲ್ಲಿ ಅಪರೋಕ್ಷಜ್ಞಾನ, ಮಾರ್ಗ ಸ್ಮರಣೆಗಳು ಕಾರಣವೆಂದು ಪ್ರತಿಪಾದಿಸಲಾಗಿದೆ. ಆದರೆ ಸ್ಪಷ್ಟವಾದ ಪ್ರಮಾಣವು ಉಪಲಬ್ಧವಾಗದಿರುವುದರಿಂದ ಸಂಶಯ ಬರುತ್ತದೆ– ಪೂರ್ವೋಕ್ತಗಮನಕ್ಕೂ ಅಪರೋಕ್ಷಜ್ಞಾನಮಾರ್ಗಸ್ಮರಣೆಗಳ ಅಪೇಕ್ಷೆ ಇದೆಯೋ? ಇಲ್ಲವೋ? ಎಂದು.

**ಪೂರ್ವಪಕ್ಷ—** 'ಅಗ್ನಿರ್ಜ್ಯೋತಿರಹಃ...' ಎಂದು ಪ್ರಾರಂಭವಾಗುವ ಗೀತೆಯು (8-24,25) ಎರಡು ಶ್ಲೋಕಗಳಲ್ಲಿ ಚಂದ್ರ, ಬ್ರಹ್ಮರನ್ನು ತಲುಪಲು ಆಯಾ ಕಾಲಗಳಲ್ಲಿ ಮರಣಹೊಂದುವುದೇ ಕಾರಣವೆಂದು ಹೇಳಲಾಗಿದೆ. ಆದ್ದರಿಂದ ಜ್ಞಾನ ಮತ್ತು ಮಾರ್ಗಸ್ಮರಣೆಗಳು ಕಾರಣಗಳಲ್ಲ. ಮತ್ತು ಲೌಕಿಕವಾದ ಕೃಷ್ಯಾದಿರೂಪವಾದ ಸಾಧನವನ್ನು ಮಾಡುವಾಗ ಫಲಸ್ಮರಣೆಯನ್ನು ಮಾಡುವುದು ಕಂಡಿಲ್ಲ. ಅಂದರಂತೆ ಸ್ವರ್ಗ, ಮೋಕ್ಷ ಮೊದಲಾದ ಫಲಗಳಿಗೆ ಮಾರ್ಗಸ್ಮರಣೆಯ ಅಪೇಕ್ಷೆಯಿಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಲೋಕೋಪಮಾ'** (ಲೋಕದಲ್ಲಿ ಕಂಡಂತೆ ಕಲ್ಪಿಸುವುದು) ಎಂಬುದು. ಇದನ್ನು ಮತ್ತು **'ಶಶ್ವದನುಪ್ರವೃತ್ತಿ'** (ಮಾರ್ಗಸ್ಮರಣೆಯ ಅನುವೃತ್ತಿ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಕೃಷ್ಯಾದಿಲೌಕಿಕಸಾಧನಸ್ಯ ಫಲಸ್ಮರಣಾನಪೇಕ್ಷತ್ವಾತ್ ಸ್ವರ್ಗ-ಮೋಕ್ಷಯೋರಪಿ ತಥಾತ್ವಮಿತಿ ವಾಚ್ಯಮ್ ।**

'ಕ್ರಿಯಾನುವೃತ್ತಿರ್ಲೌಕಿಕೇ ಸಾಧನೇ ತು ಮನೋಽನುವೃತ್ತಿರ್ವೈದಿಕೇ ಸಾಧನೇ ಸ್ಯಾತ್ ।

ಭವೇತ್ ಫಲಂ ಸರ್ವಥೇತ್ಯೇವ ತಸ್ಮಾತ್ ಸ್ಮರೇತ್ ಸದಾ ನಿಶ್ಚಿತತ್ವೇನ ವಿದ್ವಾನ್ ॥'

ಇತಿ ಶ್ರುತೇಸ್ತದನುಸಾರ್ಯನುವೃತ್ತೇರ್ಲೌಕಿಕವೈದಿಕಯೋಃ ಸಾಮ್ಯಾತ್ । ಅತೋಽತ್ರ ಫಲಾನುಸ್ಮರಣಂ ಲವನಾದಿಕೃಷ್ಯನುವೃತ್ತಿವದ್ ದ್ರಷ್ಟವ್ಯಮ್ । ವಚನಪ್ರಾಮಾಣ್ಯಾತ್ ॥ ೧೦ ॥

**ಭಾವಾರ್ಥ**—ಲೌಕಿಕವಾದ ಕೃಷಿ ಮೊದಲಾದ ಸಾಧನಗಳಿಗೆ ಫಲ ಸ್ಮರಣೆಯ ಅಪೇಕ್ಷೆಯಿಲ್ಲದಿರುವುದರಿಂದ ಸ್ವರ್ಗ, ಮೋಕ್ಷಗಳಲ್ಲಿಯೂ ಫಲ ಸ್ಮರಣೆಯ ಅಪೇಕ್ಷೆಯಿಲ್ಲ ಎಂದೇ ಹೇಳಬೇಕು ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಲೌಕಿಕವಾದ ಸಾಧನೆಯಲ್ಲೂ ಕ್ರಿಯಾನುವೃತ್ತಿಯು (ಮತ್ತೆ ಮತ್ತೆ ಕೆಲಸವನ್ನು ಮಾಡುವುದು) ಆಗ ಬೇಕು. ವೈದಿಕ ಸಾಧನೆಯಲ್ಲೂ ಮನೋಽನು ವೃತ್ತಿಯು (ಭಗವಂತನಲ್ಲಿ ಪುನಃ ಪುನಃ ಮನಸ್ಸನ್ನು ನೆಲೆಗೊಳಿಸುವುದು)ಬೇಕು. ಈರೀತಿ ಮನೋನುವೃತ್ತಿಯನ್ನು ಮಾಡಿದರೇನೇ ನನಗೆ ಫಲವಾಗುವುದು ಎಂದು ನಿಶ್ಚಯಿಸಿ ಜ್ಞಾನಿಯು ಮನೋನುವೃತ್ತಿಯನ್ನು ಮಾಡಬೇಕು' ಎಂದು ಶ್ರುತಿಯಿರುವುದರಿಂದ ಲೌಕಿಕ ಮತ್ತು ವೈದಿಕಸಾಧನೆಗಳಲ್ಲಿ ಅದಕ್ಕೆ ಅನುಗುಣವಾದ ಅನುವೃತ್ತಿಯು ಸಮಾನವಾಗಿದೆ. ಆದ್ದರಿಂದ ಕೃಷಿಯಲ್ಲಿ ಛೇದನಾದಿಗಳ ಅನುವೃತ್ತಿಯಂತೆ ಉತ್ಕ್ರಾಂತಿಗಾಗಿಯೂ ಫಲದ ಸ್ಮರಣೆಯು ಆವಶ್ಯಕವಾಗಿದೆ ಎಂಬುದು ವಾಕ್ಯಪ್ರಾಮಾಣ್ಯದಿಂದ ಸಿದ್ಧವಾಗುತ್ತದೆ.

**ವಿವರಣೆ**—ಛೇದನಾಕ್ರಿಯೆಯಲ್ಲಿ ಕೊಡಲಿಯಿಂದ ಮರಕ್ಕೆ ಉದ್ಯಮ–ನಿಪತನವು(ಕೊಡಲಿಯನ್ನು ಎತ್ತುವುದು–ಹೊಡೆಯುವುದು) ಅನ್ವವೃತ್ತಿಯಾಗಬೇಕು. ಕೃಷಿಗೆ ಉಳುವುದು, ಕಳೆಕೀಳುವುದು ಇವುಗಳ ಅನುವೃತ್ತಿಯು ಬೇಕು. ಹೀಗೆ ಅವಾಂತರವ್ಯಾಪಾರಗಳಲ್ಲಿ ವೈಲಕ್ಷಣ್ಯ ಎದ್ದರೂ ಅನುವೃತ್ತಿಯು ಸಮಾನವಾಗಿದೆ. ಅದರಂತೆ ವೈದಿಕಕ್ರಿಯೆಯಲ್ಲಿಯೂ ಮಾರ್ಗಸ್ಮರಣೆಯ ಅನುವೃತ್ತಿಯು ಬೇಕು ಎಂದು ಸಿದ್ಧವಾಗುವುದು.

ಗೀತೆಯು ಕಾಲವನ್ನೇ ಕಾರಣವೆಂದು ಹೇಳಿದೆ. ಅದಕ್ಕೇನು ಅರ್ಥ ಮಾಡಬೇಕು? ಎಂದರೆ 'ಗತ್ಯನುಸ್ಮರಣಾದ್ ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಮ್। ಅನನುಸ್ಮರತಃ ಕಾಲೇ ಸ್ಮರಣಂ ಪ್ರಾಪ್ಯ ವೈ ಗತಿಃ' (ಜ್ಞಾನಯೋಗಿಗಳು ಮತ್ತು ಕರ್ಮಯೋಗಿಗಳು ಮಾರ್ಗಸ್ಮರಣೆಯಿಂದ ಬ್ರಹ್ಮನನ್ನು ಅಥವಾ ಚಂದ್ರನನ್ನು ನಿಶ್ಚಯವಾಗಿ ಹೊಂದುತ್ತಾರೆ. ಇದು ನಿಶ್ಚಯ. ಕರ್ಮಯೋಗಿಗೆ ಉತ್ಕ್ರಾಂತಿಕಾಲದಲ್ಲಿ ಮಾರ್ಗದ ಸ್ಮರಣೆ ಬರದಿದ್ದರೆ ಮತ್ತೊಂದು ಜನ್ಮವನ್ನು ಪಡೆದು ಮಾರ್ಗಸ್ಮರಣೆ ಬಂದಮೇಲೆಯೇ ಯೋಗ್ಯವಾದ ಲೋಕವನ್ನು ಹೊಂದುತ್ತಾನೆ.) ಎಂಬ ಪ್ರಮಾಣಾನುಸಾರ ಕಾಲವಿಶೇಷದಲ್ಲಿ ಮರಣವಾದರೂ ಮಾರ್ಗಸ್ಮರಣೆಯು ಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ

ಏತೇ=ಬ್ರಹ್ಮನನ್ನು, ಚಂದ್ರನನ್ನು ಕುರಿತ ಗಮನಗಳು ಯೋಗಿನಃ=ಜ್ಞಾನಯೋಗಿ ಮತ್ತು ಕರ್ಮಯೋಗಿಗಳನ್ನು ಕುರಿತು ಸ್ಮರ್ಯೇತೇ=ಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. ಸ್ಮಾರ್ತೇ ಚ=ಗತಿಯ ಅನುಸ್ಮರಣದಿಂದ ಹೊಂದಲ್ಪಡತಕ್ಕವು ಆಗಿವೆ. ಕೇವಲ ಕಾಲಕೃತವಲ್ಲ.

**ಇಲ್ಲಿಗೆ ದ್ವಿತೀಯಪಾದ ಮುಗಿಯಿತು.**

# ತೃತೀಯಪಾದ

ಈ ಪಾದದಲ್ಲಿ ಚರಮದೇಹವನ್ನು ತೊರೆದ ಜ್ಞಾನಿಗಳು ಬ್ರಹ್ಮಲೋಕಕ್ಕೆ ಹೋಗುವ ಮಾರ್ಗವನ್ನು ಮತ್ತು ಅವರ ಗಮ್ಯಸ್ಥಾನವನ್ನು ತಿಳಿಸಲಾಗಿದೆ. ಆದ್ದರಿಂದ ಪಾದಕ್ಕೆ 'ಮಾರ್ಗಪಾದ' ಎಂದು ಹೆಸರು. ಈ ಪಾಪದ ಪೂರ್ವಪಕ್ಷ, ಸಿದ್ಧಾಂತ ನ್ಯಾಯಗಳನ್ನು ಹೀಗೆ ಸಂಗ್ರಹಿಸಲಾಗಿದೆ.

**ಸುಕ್ರಮವಿಕ್ರಮೌ ಚ ಸಾಂತಾನಿಕಂ ಪ್ರಾಪ್ತಿರಭೀಪ್ಸತಾ ಚ**
**ಸೌಕರ್ಯಮಿತ್ಯನ್ಯಮತಸ್ಯ ತರ್ಕಾ ವಿಶೇಷ ಸಂಪ್ರಾಪ್ತಿರುರುತ್ವಮಾಪ್ತಿಃ**
**ಕ್ರಮಾನುರಾಗಃ ಕಥಿತಾನುವೃತ್ತಿಃ ಸಿದ್ಧಾಂತನಿರ್ಣೀತಿಕರಾಃ...॥**

ಅರ್ಚಿರಾದ್ಯಧಿಕರಣದಲ್ಲಿ ಸುಕ್ರಮ, ಸಂಕ್ರಾಂತಿಗಳು, ವಾಯುಗತ್ಯಧಿಕರಣ ಮತ್ತು ತಟಿದಧಿಕರಣ ಆತಿವಾಹಿಕಾಧಿಕರಣಗಳಲ್ಲಿ ಸುಕ್ರಮ, ವಿಶೇಷಸಂಪ್ರಾಪ್ತಿಗಳು, ವೈದ್ಯುತಾಧಿಕರಣದಲ್ಲಿ ವಿಕ್ರಮ, ಉರುತ್ವಗಳು, ಕಾರ್ಯಾಧಿಕರಣದಲ್ಲಿ ಸಾಂತಾನಿಕ, ಪ್ರಾಪ್ತಿ, ಅಭೀಪ್ಸತಾ, ಸೌಕರ್ಯಗಳು, ಆಪ್ತಿ, ಕ್ರಮಾನುರಾಗ, ಕಥಿತಾನುವೃತ್ತಿ ಇವುಗಳು ಕ್ರಮವಾಗಿ ಪೂರ್ವಪಕ್ಷ, ಸಿದ್ಧಾಂತ, ಸಾಧಕ ಯುಕ್ತಿಗಳು.

## ಅರ್ಚಿರಾದ್ಯಧಿಕರಣ (4-3-1)

ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಬ್ರಹ್ಮಪ್ರಾಪ್ತಿ ಮಾರ್ಗವು ವಿಷಯ. 'ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮ್' ಎಂಬ ಶ್ರುತಿಯಲ್ಲಿ ಜ್ಞಾನಿಯು ಅರ್ಚಿರ್ಲೋಕಕ್ಕೆ ಮೊದಲು ಹೋಗುವುದು ಎಂದು ಹೇಳಲಾಗಿದೆ. 'ಯದಾ ಹ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ' ಎಂಬ ಶ್ರುತಿಯು ವಾಯುಲೋಕವನ್ನು ಕುರಿತು ತೆರಳುವನು ಎಂದು ತಿಳಿಸುತ್ತಿದೆ. ಈ ಎರಡು ಶ್ರುತಿಗಳಿರುವುದರಿಂದ ಸಂಶಯವು ಬರುತ್ತದೆ— ಜ್ಞಾನಿಯು ಮೊದಲಿಗೆ ಅರ್ಚಿರ್ಲೋಕವನ್ನು ಕುರಿತು ಹೋಗುವನೋ? ಅಥವಾ ವಾಯುಲೋಕವನ್ನು ಕುರಿತು ಹೋಗುವನೋ? ಎಂದು.

ಪೂರ್ವಪಕ್ಷ—'ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮ್' (ಜ್ಞಾನಿಗಳು ಅರ್ಚಿ ಎಂಬ ಅಗ್ನಿಪುತ್ರನ ಲೋಕಕ್ಕೆ ಹೋಗುತ್ತಾರೆ. ಅಲ್ಲಿಂದ ಅಹರಭಿಮಾನಿಲೋಕಕ್ಕೆ ಆ ಅಹರ್ಲೋಕದಿಂದ ಶುಕ್ಲಪಕ್ಷಾಭಿಮಾನಿ ಲೋಕಕ್ಕೆ ಹೋಗುತ್ತಾರೆ) ಎಂದು ಒಂದು ಶ್ರುತಿಯು ತಿಳಿಸುತ್ತದೆ. ಮತ್ತೊಂದು ಶ್ರುತಿಯು 'ಯದಾ ಹ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಭಿಗಚ್ಛತಿ' (ಯಾವಾಗ ಜ್ಞಾನಿಯು ಈ ಲೋಕದಿಂದ ದೇಹಬಿಟ್ಟು ಹೋಗುವನೋ ಆವನು ಮೊದಲು ವಾಯುಲೋಕಕ್ಕೆ ಹೋಗುತ್ತಾನೆ) ಎಂದು ತಿಳಿಸುತ್ತಿದೆ. ಈ ಎರಡು ಶ್ರುತಿಗಳೂ ನಿರವಕಾಶವಾದ್ದರಿಂದ ಎರಡು ಲೋಕಗಳಿಗೆ ಮಾರ್ಗಭೇದದಿಂದಲೇ ಪ್ರಾಥಮ್ಯವು ಯುಕ್ತವಾಗುವುದು. ಒಬ್ಬೊಬ್ಬ ಅಧಿಕಾರಿಗೆ ಒಂದೊಂದು ಮಾರ್ಗ ಎಂದು ಅಧಿಕಾರಿ ಭೇದದಿಂದಲೇ ಮಾರ್ಗಭೇದವನ್ನು ಕೂಡಿಸಬಹುದು. ಆದ್ದರಿಂದ ಯಾವ ಅಧಿಕಾರಿಗೆ ಯಾವ ಮಾರ್ಗವೆಂದು ನಿರ್ಣಯಿಸಲು ಸಾಧ್ಯವಿಲ್ಲದಿರುವುದರಿಂದ ಮಾರ್ಗಸ್ಮರಣೆಯ ಆವಶ್ಯಕತೆ ಇಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸುಕ್ರಮ' (ಮಾರ್ಗಭೇದವನ್ನು ಕಲ್ಪಿಸುವುದು) ಎಂಬುದು ಇದನ್ನು ಮತ್ತು 'ವಿಶೇಷಸಂಪ್ರಾಪ್ತಿ' (ವಿಶೇಷಶ್ರುತಿಯಿಂದ ಮಾರ್ಗವಿಶೇಷವನ್ನು ತಿಳಿಯುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ-

**॥ ಹರಿಃ ಓಂ ॥ ನ ಚ ತತ್ರ ತತ್ರ ಮಾರ್ಗಸ್ಯಾನ್ಯಥೋಕ್ತೇರಧಿಕಾರಿಭೇದೇನ ಪೃಥಙ್ ಮಾರ್ಗಸುಕ್ರಮೋಪಪತ್ತಿರಿತಿ ವಾಚ್ಯಮ್ ।**

**'ಸರ್ವೇ ವಾ ಏತ ಉತ್ಕ್ರಾಮಂತಿ ತೇಽರ್ಚಿಷಮೇವಾಭಿಯಂತಿ ತತೋ ವಾಯುಂ ತತೋಽಹಃ ಪೂರ್ವಪಕ್ಷಮಿತ್ಯೇಷ ಉ ಏವ ಬ್ರಹ್ಮಪಥಃ । ದ್ವೇ ಸೃತೀ ಅಶೃಣವಂ ಪಿತೄಣಾಮಹಂ ದೇವಾನಾಮುತ ಮರ್ತ್ಯಾನಾಮ್ । ತಾಭ್ಯಾಮಿದಂ ವಿಶ್ವಮೇಜತ್ ಸಮೇತಿ ಯದಂತರಾ ಪಿತರಂ ಮಾತರಂ ಚ'**

**ಇತಿ ವಿಶೇಷಶ್ರುತಿತೋ ಜ್ಞಾನಿನಾಮೇಕಮಾರ್ಗಸ್ಯೈವ ಪ್ರಾಪ್ತತ್ವಾತ್ ।**

'ಏಷ ಏವ ಬ್ರಹ್ಮಪಥಃ' ಇತ್ಯವಧಾರಣವಿರೋಧೋಽನ್ಯಥಾ । ಏಜದಿತಿ ವೈದಿಕಾನುಷ್ಠಾನವತ ಉಕ್ತೇರ್ನಾಧೋಗತಿವಿರೋಧಃ ।

'ಪುನರಾವರ್ತಿನೋ ಯೇ ತು ತೇಷಾಂ ಧೂಮಪಥೋ ಧ್ರುವಃ ।
ಅನ್ಯೇಷಾಮರ್ಚಿರಾದಿಸ್ತು ತದ್ಭೇದೋ ಮಧ್ಯಸಂಸ್ಥಿತಿಃ ।
ಧೂಮಾರ್ಚಿರಾದಿದೇವೇಭ್ಯಃ ಪ್ರಾಪ್ಯಾನುಜ್ಞಾಂ ತು ಮಧ್ಯಗಾಃ ।
ವಿಹೃತ್ಯ ಸ್ವೇಷ್ಟದೇಶೇಷು ತದೂರ್ಧ್ವಂ ಯಾಂತಿ ವಾಽಧರಮ್ ।
ಅತ್ಯಲ್ಪಾನಾಮವಿಜ್ಞಾತಾಽಪ್ಯನುಜ್ಞಾವರ್ತಿನಾಂ ಭವೇತ್ ।
ಪುಂದ್ವಾರೇಣ ಸ್ವದೃಷ್ಟ್ಯಾ ವಾ ಯಥಾಯೋಗ್ಯಂ ವಿಮುಚ್ಯತಾಮ್ ।
ಅತೋ ನ ಮಾರ್ಗಭೇದೋಽಸ್ತಿ ನ ಹಿ ಮಾರ್ಗೋಽತ್ರ ಸಂಭವಃ ।
ಪ್ರೇತತ್ವಂ ಚಾಧರೋ ಮಾರ್ಗಃ ಪಾಪಜತ್ವಾತ್ ತಯೋಃ ಪೃಥಕ್ ॥'
ಇತಿ ಸ್ಮೃತೇಶ್ಚ ॥ ೧-೪ ॥

**ಭಾವಾರ್ಥ**—ಆಯಾ ಶ್ರುತಿಗಳಲ್ಲಿ ಮಾರ್ಗವನ್ನು ಬೇರೆಬೇರೆ ರೀತಿಯಲ್ಲಿ ಹೇಳಿರುವುದರಿಂದ ಅಧಿಕಾರಭೇದದಿಂದ ಬೇರೆ ಬೇರೆ ಮಾರ್ಗವು ಎಂಬುದನ್ನು ಒಪ್ಪಿಕೊಂಡು ಮಾರ್ಗಭೇದವನ್ನು ಕೂಡಿಸಬಹುದು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, ಎಲ್ಲ ಜ್ಞಾನಿಗಳೂ ಈ ದೇಹವನ್ನು ಬಿಟ್ಟು ತೆರಳುವರು. ಅವರು ಅರ್ಚಿರ್ಲೋಕವನ್ನೇ ಹೊಂದುವರು. ಅನಂತರ ವಾಯುಲೋಕವನ್ನು, ಅಲ್ಲಿಂದ ಅಹರ್ಲೋಕಕ್ಕೆ ಅನಂತರ ಶುಕ್ಲಪಕ್ಷಾಭಿಮಾನಿಲೋಕವನ್ನು ಹೊಂದುವರು. ಇದುವೇ ಬ್ರಹ್ಮಮಾರ್ಗ, ಮರ್ತ್ಯಾನಾಂ=ಮರಣಶೀಲರಾದ ಮೋಕ್ಷ, ಸ್ವರ್ಗಲೋಕಗಳನ್ನು ಕುರಿತು ಹೋಗುವ ಜನರಿಗೆ ಪಿತೃಣಾಂ=ಪಿತೃಸಂಬಂಧಿಯಾದ ಪಿತೃಯಾನವನ್ನು ದೇವಾನಾಂ=ದೇವಸಂಬಂಧಿಯಾದ ದೇವಯಾನವನ್ನು ಅಹಂ=ನಾನು ಅಶೃಣವಂ=ಕೇಳಿರುವೆನು. ಏಜತ್=ವೇದೋಕ್ತಕರ್ಮ ಪರಿತ್ಯಾಗ ದಿಂದ ಪಡೆದರುವ (ವೇದೋಕ್ತವಾದ ಪ್ರವೃತ್ತಿಕರ್ಮ, ನಿವೃತ್ತಕರ್ಮಗಳೆಂಬ ಸಾಧನೆ ಯನ್ನು ಪೂರ್ಣಗೊಳಿಸಿದ) ಪಿತರಂಮಾತರಂ ಚ ಅಂತರಾ=ದ್ಯು, ಪೃಥಿವಿಗಳ ಮಧ್ಯದಲ್ಲಿರುವ ಈ ಜೀವ ಸಮುದಾಯವು ಬ್ರಹ್ಮನನ್ನು ಅಥವಾ ಸ್ವರ್ಗವನ್ನು

ಹೊಂದುತ್ತದೆ ಎಂಬ ವಿಶೇಷ ಶ್ರುತಿಯಿರುವುದರಿಂದ ಜ್ಞಾನಿಗಳಿಗೆ ಒಂದೇ ಮಾರ್ಗವಿದೆ ಎಂದು ಸಿದ್ಧವಾಗುತ್ತದೆ. ಮಾರ್ಗಭೇದವನ್ನು ಅಂಗೀಕರಿಸಿದರೆ 'ಏಷ ಉ ಏವ ಬ್ರಹ್ಮಪಥಃ' ಎಂಬ ಶ್ರುತಿಯಲ್ಲಿ ಏವ ಎಂಬ ಅವಧಾರಣದ ವಿರೋಧವು ಬರುತ್ತದೆ. 'ಏಜತ್' ಎಂಬುದಾಗಿ ವೇದೋಕ್ತಕರ್ಮಾನುಷ್ಠಾನ ಮಾಡುವವರ ಬಗ್ಗೆ ಹೇಳಿರುವುದರಿಂದ ಕೆಲವರಿಗೆ ಅಂಧಂತಮಸ್ಸು ಪ್ರಾಪ್ತವಾಗುವುದರ ವಿರೋಧವು ಇಲ್ಲ.

**ವಿವರಣೆ**— 'ಸರ್ವೇ ತೇ ಏತೇ...' ಎಂಬ ಶ್ರುತಿವಿಶೇಷದಿಂದ ಜ್ಞಾನಿಗಳು ಹೋಗುವ ಮಾರ್ಗವು ಅರ್ಚಿರಾದಿಯೇ ಎಂದು ತಿಳಿಯುವುದು. ಅರ್ಚಿರ್ಲೋಕದ ನಂತರ ವಾಯುಲೋಕವಿರುವ ಪ್ರಯುಕ್ತ ಅರ್ಚಿರ್ಮಾರ್ಗವೆಂದರೂ ವಾಯುಮಾರ್ಗವೆಂದರೂ ಒಂದೇ.

ಶ್ರುತಿಯಲ್ಲಿ 'ಯದಂತರಾ ಪಿತರಂ ಮಾತರಂ ಚ' ಎಂದಿದೆ. ಇಲ್ಲಿ ಪಿತೃ ಶಬ್ದಕ್ಕೆ ದ್ಯುಲೋಕ ಎಂದರ್ಥ. ಮಾತೃ ಶಬ್ದಕ್ಕೆ ಪೃಥಿವೀಲೋಕ ಎಂದರ್ಥ. 'ದ್ಯೌರ್ನಃ ಪಿತಾ ಪೃಥಿವೀ ಮಾತಾ' ಎಂದು ಶ್ರುತಿಯಿರುವುದರಿಂದ.

ಎಲ್ಲ ಜೀವರೂ ಧೂಮಮಾರ್ಗ, ಅರ್ಚಿರ್ಮಾರ್ಗ ಎಂಬ ಎರಡು ಮಾರ್ಗಗಳಲ್ಲೂ ಸ್ವರ್ಗ, ಮೋಕ್ಷ ಪಡೆಯುತ್ತಾರೆ ಎಂದು 'ದ್ವೇ ಸೃತೀ...' ಎಂಬ ಶ್ರುತಿಯು ಪ್ರತಿಪಾದಿಸುತ್ತಿದೆ. ಆದರೆ ಅಂಧಂತಮಸ್ಸಿಗೆ ಹೋಗುವ ಕೆಲವು ಜನರೂ ಇದ್ದಾರೆ. ಅವರಿಗೆ ಬೇಕಾಗುವ ಅಧೋಗತಿಯನ್ನು ಏಕೆ ನಿರೂಪಿಸಲಿಲ್ಲ ಎಂದರೆ ಶ್ರುತಿಯಲ್ಲಿ 'ಏಜತ್' ಎಂಬ ಶಬ್ದಪ್ರಯೋಗವಿದೆ. ಇದರಿಂದ ವೇದೋಕ್ತವಾದ ಸಾಧನಾನುಷ್ಠಾನ ಮಾಡುವವರಿಗೆ ಸಂಬಂಧಿಸಿದ ಎರಡು ಮಾರ್ಗವನ್ನು ನಿರೂಪಿಸಿದ್ದೇ ಹೊರತು ಸಕಲ ಜೀವರ ಸಂಬಂಧಿಯಾದ ಮಾರ್ಗವನ್ನು ನಿರೂಪಿಸಿಲ್ಲ ಎಂದು ತಿಳಿಯುತ್ತದೆ. ಆದ್ದರಿಂದ ವಿರೋಧವಿಲ್ಲ.

**ಸೂತ್ರಾರ್ಥ—**

### ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ

ದೇಹದಿಂದ ಉತ್ಕ್ರಮಣವನ್ನು ಹೊಂದಿದ ಜ್ಞಾನಿಯು ಅರ್ಚಿರಾದಿನಾ=

ಅರ್ಚಿರಾದಿಮಾರ್ಗದಿಂದ ಹೋಗುವನು. ಏನು ಪ್ರಮಾಣವೆಂದರೆ ತತ್ಪ್ರಥಿತೇಃ=ಶ್ರುತಿಯಲ್ಲಿ ಆರೀತಿ ಪ್ರಸಿದ್ಧಿಯಿರುವುದರಿಂದ.

## ವಾಯುಗತ್ಯಧಿಕರಣ (4-3-2)

ಓಂ ವಾಯುಶಬ್ದಾದವಿಶೇಷವಿಶೇಷಾಭ್ಯಾಮ್ ಓಂ ಎಂಬ ಒಂದು ಸೂತ್ರ ವನ್ನೊಳಗೊಂಡ ಈ ಅಧಿಕರಣಕ್ಕೆ ಮಾರ್ಗವೇ ವಿಷಯ. 'ವಾಯುಮಾಗಚ್ಛತಿ' ಮತ್ತು 'ಅರ್ಚಿಷೋಽಹಃ' ಎಂಬ ಶ್ರುತಿಗಳಲ್ಲಿ ವಿವಾದವಿರುವುದರಿಂದ, ವಾಯುದೇವತೆ ದ್ವಿತೀಯಪ್ರಾಪ್ಯವೋ? ಅಥವಾ ಅಹರ್ಲೋಕವು ದ್ವಿತೀಯ ಪ್ರಾಪ್ಯವೋ? ಎಂಬ ಸಂಶಯ ಬರುತ್ತದೆ.

**ಪೂರ್ವಪಕ್ಷ—** 'ಅರ್ಚಿಷೋ ವಾಯುಮಾಗಚ್ಛತಿ' ಎಂಬ ಶ್ರುತಿಯು ಅರ್ಚಿರ್ಲೋಕದ ನಂತರ ವಾಯುಲೋಕವು ಪ್ರಾಪ್ಯವೆನ್ನುತ್ತಿದೆ. 'ಅರ್ಚಿಷೋಽಹಃ' ಎಂಬ ಮತ್ತೊಂದು ಶ್ರುತಿಯು ಅರ್ಚಿರ್ಲೋಕದ ನಂತರ ಅಹರ್ಲೋಕವು ಪ್ರಾಪ್ಯವೆನ್ನುತ್ತಿದೆ. ಈ ಎರಡು ವಾಕ್ಯಗಳೂ ಪ್ರಮಾಣವೇ ಆಗಿವೆ. ಈ ವಿರೋಧ ಪರಿಹಾರವಾಗಬೇಕಾದರೆ ಬೇರೆ ಬೇರೆ ಅಧಿಕಾರಿಗಳಿಗೆ ಬೇರೆ ಬೇರೆ ಮಾರ್ಗವು ದ್ವಿತೀಯ ಪ್ರಾಪ್ಯವಾಗಿದೆ ಎಂದು ಹೇಳಬೇಕಾಗುವುದು. ಆದರೆ ಯಾರಿಗೆ ಯಾವ ಮಾರ್ಗವೆಂಬುದು ನಿರ್ಣಯವಿಲ್ಲದಿರುವುದರಿಂದ ಮಾರ್ಗ ಸ್ಮರಣೆಯ ಆವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ **'ಸುಕ್ರಮ'** ಎಂಬುದೇ.

**ಸಿದ್ಧಾಂತ—** ಸಿದ್ಧಾಂತಸಾಧಕವಾದ ಯುಕ್ತಿ 'ವಿಶೇಷಸಂಪ್ರಾಪ್ತಿ' ಎಂಬುದೇ. 'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋ ರಹಃ' (ಇಲ್ಲಿಂದ ಹೊರಟ ಜ್ಞಾನಿಯು ಎರಡನೆಯದ್ದನ್ನಾಗಿ ವಾಯುದೇವತೆಯನ್ನು ಹೊಂದಿ ಅನಂತರ ಅರ್ಹರ್ಲೋಕವನ್ನು ಹೊಂದುತ್ತಾನೆ.) ಎಂದು ವಿಶೇಷ ಶ್ರುತಿಯಿರುವುದರಿಂದ ಅರ್ಚಿರ್ಲೋಕದ ನಂತರ ವಾಯುಲೋಕ ಎಂದೇ ಹೇಳಬೇಕು. 'ಅರ್ಚಿಷೋಽಹಃ' ಎಂಬ ಶ್ರುತಿಯಲ್ಲಿ ದ್ವಿತೀಯಶಬ್ದ ಇಲ್ಲದಿರುವುದ ರಿಂದ ಅರ್ಚಿರ್ಲೋಕದಿಂದ ವಾಯುಲೋಕದ್ವಾರಾ ಅಹರ್ಲೋಕಕ್ಕೆ ಹೋಗುತ್ತಾನೆ ಎಂದು ಅರ್ಥೈಸಬಹುದಾದ್ದರಿಂದ ಮಾರ್ಗಭೇದವನ್ನು ಕಲ್ಪಿಸುವುದು ಸರಿಯಲ್ಲ ಎಂದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ವಾಯುಶಬ್ದಾದವಿಶೇಷವಿಶೇಷಾಭ್ಯಾಮ್ ಓಂ

ಅವಿಶೇಷವಿಶೇಷಾಭ್ಯಾಂ=ಸಾಮಾನ್ಯವಿಶೇಷಗಳಿಂದ ವಾಯುಶಬ್ದಾತ್='ಸ ವಾಯುಮಾಗಚ್ಛತಿ' ಎಂಬ ಶ್ರುತಿಗೆ ವಾಯುವು ದ್ವಿತೀಯಪ್ರಾಪ್ಯ ಎಂದರ್ಥ.

## ತಟಿದಧಿಕರಣ (4-3-3)

ಓಂ ತಟಿತೋऽಧಿವರುಣಸ್ಸಂಬಂಧಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಮಾರ್ಗವೇ ವಿಷಯ. 'ಮಾಸೇಭ್ಯಃ ಸಂವತ್ಸರಂ ಸಂವತ್ಸರಾದ್ ವರುಣಲೋಕಮ್' ಎಂಬ ಶ್ರುತಿ, 'ಸಂವತ್ಸರಾತ್ ತಟಿತಮಾಗಚ್ಛತಿ ತಟಿತಃ ಪ್ರಜಾಪತಿಮ್' ಎಂಬ ಮತ್ತೊಂದು ಶ್ರುತಿ, ಹೀಗೆ ಶ್ರುತಿಗಳಲ್ಲಿ ಪರಸ್ಪರ ವಿರೋಧವು ಕಾಣುತ್ತಿರುವುದರಿಂದ ಸಂಶಯ ಬರುತ್ತದೆ– 'ಜ್ಞಾನಿಯು ಸಂವತ್ಸರಾನಂತರ ವರುಣಲೋಕಕ್ಕೆ ಹೋಗುವನೋ? ಅಥವಾ ತಟಿಲ್ಲೋಕಕ್ಕೆ ಹೋಗುವನೋ? ಎಂದು.

**ಪೂರ್ವಪಕ್ಷ—** 'ಮಾಸೇಭ್ಯಃ ಸಂವತ್ಸರಂ, ಸಂವತ್ಸರಾದ್ ವರುಣಲೋಕಂ ವರುಣಲೋಕಾತ್ ಪ್ರಜಾಪತಿಲೋಕಮ್' (ಉತ್ತರಾಯಣದ ಆರು ಮಾಸಾಧಿಪತಿ ಲೋಕದಿಂದ ಸಂವತ್ಸರಲೋಕಕ್ಕೆ ಸಂವತ್ಸರಲೋಕದಿಂದ ವರುಣಲೋಕಕ್ಕೆ, ವರುಣ ಲೋಕದಿಂದ ಪ್ರಜಾಪತಿಲೋಕಕ್ಕೆ ಬ್ರಹ್ಮಜ್ಞಾನಿಗಳು ಹೋಗುತ್ತಾರೆ) ಎಂದು ಒಂದು ಶ್ರುತಿ ಪ್ರತಿಪಾದಿಸುತ್ತಿದೆ. 'ಸಂವತ್ಸರಾತ್ ತಟಿತಮಾಗಚ್ಛತಿ ತಟಿತಃ ಪ್ರಜಾಪತಿ ಲೋಕಮ್' (ಸಂವತ್ಸರಾಧಿಪತಿಲೋಕದಿಂದ ಮಿಂಚಿಗೆ ಅಭಿಮಾನಿ ಲೋಕಕ್ಕೆ, ಅಲ್ಲಿಂದ ಪ್ರಜಾಪತಿಲೋಕಕ್ಕೆ ಹೋಗುತ್ತಾರೆ) ಎಂದು ಮತ್ತೊಂದು ಶ್ರುತಿ ತಿಳಿಸುತ್ತದೆ. ಈ ಎರಡು ಶ್ರುತಿಗಳಲ್ಲಿ ವಿರೋಧ ಪರಿಹಾರವಾಗಬೇಕಾದರೆ ಅಧಿಕಾರಭೇದದಿಂದ ಮಾರ್ಗಭೇದವನ್ನೇ ಒಪ್ಪಬೇಕು. ಆದರೆ ಯಾವ ಅಧಿಕಾರಿಗೆ ಯಾವ ಮಾರ್ಗ ವೆಂದು ನಿರ್ಣಯವಾಗದಿರುವುದರಿಂದ ಮಾರ್ಗಸ್ಮರಣೆಯ ಆವಶ್ಯಕತೆಯಿಲ್ಲ ಎಂದೇ ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ 'ಸುಕ್ರಮ' ಎಂಬುದು.

**ಸಿದ್ಧಾಂತ—** ಸಿದ್ಧಾಂತಸಾಧಕವಾದ ಯುಕ್ತಿ ವಿಶೇಷಸಂಪ್ರಾಪ್ತಿ ಎಂಬುದೇ.

'ತಟಿತಾ ಹ್ಯಾಹ್ಯತೇ ವರುಣಲೋಕಸ್ತಟಿದುಪರಿ ಮುಕ್ತಾಮಯೋ ರಾಜತೇ। ತತ್ರಾಸೌ ವರುಣೋ ರಾಜಾ ಸತ್ಯಾನೃತೇ ವಿಮುಂಚತಿ' (ತಟಿಲ್ಲೋಕದಿಂದ ವರುಣಲೋಕಕ್ಕೆ ಹೋಗುತ್ತಾನೆ. ಏಕೆಂದರೆ ತಟಿಲ್ಲೋಕದಿಂದಲೇ ವರುಣಲೋಕವು ಧರಿಸಲ್ಪಟ್ಟಿದೆ. ತಟಿಲ್ಲೋಕದ ಮೇಲಿರುವ ವರುಣಲೋಕದಲ್ಲಿ ರೋಗರಹಿತನಾಗಿ ಜ್ಞಾನಿಯು ವಿರಾಜಮಾನನಾಗುತ್ತಾನೆ. ಅಲ್ಲಿ ರಾಜನಾದ ವರುಣನು ತನ್ನ ಪ್ರಜೆಗಳ ಪುಣ್ಯಪಾಪಗಳನ್ನು ವಿವೇಚಿಸುತ್ತಾನೆ) ಎಂಬ ವಿಶೇಷಶ್ರುತಿಯಿರುವುದರಿಂದ ಜ್ಞಾನಿಯು ಸಂವತ್ಸರಾಭಿಮಾನಿ ಲೋಕವನ್ನು ಹೊಂದಿ ಅನಂತರ ತಟಿಲ್ಲೋಕವನ್ನು ಹೊಂದುವನು. ಅನಂತರ ವರುಣಲೋಕಕ್ಕೆ ಹೋಗುವನು, ಎಂದು ಒಪ್ಪಬೇಕು. ಹೊರತು ಅಧಿಕಾರಿಭೇದದಿಂದ ಮಾರ್ಗಭೇದವನ್ನು ಅಂಗೀಕರಿಸಬಾರದು. ಜ್ಞಾನಿಗೆ ಇರುವ ಮಾರ್ಗ ಒಂದೇ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ತಟಿತೋಽಧಿವರುಣಃ ಸಂಬಂಧಾತ್ ಓಂ

ತಟಿತೋಽಧಿ=ತಟಿಲ್ಲೋಕವನ್ನು ಹೊಂದಿದ ನಂತರ ವರುಣಃ=ವರುಣ ಲೋಕವು ಪ್ರಾಪ್ಯವಾಗಿದೆ. ಏಕೆಂದರೆ, ಸಂಬಂಧಾತ್='ತಟಿತಾ ಹ್ಯಾಹ್ಯತೇ ವರುಣಲೋಕಃ' ಎಂದು ತಟಿಲ್ಲೋಕದ ಮೇಲೆ ವರುಣಲೋಕದ ಸಂಬಂಧವು ಶ್ರುತವಾಗಿರುವುದರಿಂದ.

## ಆತಿವಾಹಿಕಾಧಿಕರಣ (4-3-4)

ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ವಾಯು ವಿಷಯ. 'ವಾಯುಮಾಗಚ್ಛತಿ' ಎಂಬ ಶ್ರುತಿಯಲ್ಲಿ ವಾಯುಶಬ್ದಪ್ರಯೋಗವಿರುವುದರಿಂದ ಜ್ಞಾನಿಯು ಬ್ರಹ್ಮಪ್ರಾಪ್ತಿಯ ಮಾರ್ಗದಲ್ಲಿ ಅರ್ಚಿರ್ದೇವತೆಯ ನಂತರ ಹೊಂದುವ ವಾಯು ಎಂದರೆ ಮುಖ್ಯ ವಾಯುವೋ? ಅಮುಖ್ಯವಾಯುವೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ—** 'ಸ ವಾಯುಮಾಗಚ್ಛತಿ' ಎಂಬ ಶ್ರುತಿಯಲ್ಲಿ ಉಕ್ತವಾದ ಅರ್ಚಿರ್ಲೋಕದ ನಂತರ ಬ್ರಹ್ಮಜ್ಞಾನಿಯಿಂದ ಪ್ರಾಪ್ಯವಾದ ವಾಯುದೇವತೆಯು

ಮುಖ್ಯವಾಯುವೇ ಆಗಬೇಕು. ಅಮುಖ್ಯವಾಯುವನ್ನು ಸ್ವೀಕರಿಸಬೇಕೆಂದರೆ ಬಾಧಕವಿರಬೇಕಷ್ಟೇ! ಯಾವುದೇ ಬಾಧಕವಿಲ್ಲದಿರುವುದರಿಂದ ಅಮುಖ್ಯವಾಯುವನ್ನು ಸ್ವೀಕರಿಸಬಾರದು. ಆದ್ದರಿಂದ ಅರ್ಚಿರ್ಲೋಕದ ನಂತರ ವಾಯುಲೋಕವು ಪ್ರಾಪ್ಯವಾದ್ದರಿಂದ ವಾಯುವಿಗೆ ಶ್ರೇಷ್ಠತ್ವವು ಕೂಡುವುದಿಲ್ಲ ಎಂಬುದು ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ **'ಸುಕ್ರಮ'** ಎಂಬುದೇ.

**ಸಿದ್ಧಾಂತ—** ಸಿದ್ಧಾಂತಸಾಧಕವಾದ ಯುಕ್ತಿ **'ವಿಶೇಷಸಂಪ್ರಾಪ್ತಿ'** ಎಂಬುದೇ. 'ಉತ್ಕ್ರಾಂತೋ ವಿದ್ವಾನ್ ಪರಮಭಿಗಚ್ಛನ್ ವಿದ್ಯುತಮೇವಾಂತತ ಉಪಗಚ್ಛತಿ। ದ್ಯೌರ್ವಾವ ವಿದ್ಯುತ್। ತತ್ಪತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛತಿ' (ಉತ್ಕ್ರಾಂತಿಯನ್ನು ಹೊಂದಿದ ಮುಕ್ತನು ಕೊನೆಗೆ ವಿದ್ಯುನ್ನಾಮಕ ಭಾರತಿಯನ್ನು ಪಡೆಯುತ್ತಾನೆ. ಅವಳನ್ನು 'ದ್ಯೌ' ಎಂಬುದಾಗಿಯೂ ಕರೆಯುವರು. ಅವಳ ಗಂಡನಾದ ವಾಯುವನ್ನು ಪಡೆದು ಬ್ರಹ್ಮನನ್ನು ಹೊಂದುತ್ತಾನೆ) ಎಂಬ ಶ್ರುತ್ಯಂತರದಲ್ಲಿ ಅಂತಿಮಪ್ರಾಪ್ಯವಾಗಿ ಹೇಳಲ್ಪಟ್ಟ ವಾಯುವಿಗೆ ಭಾರತೀಪತಿತ್ವವೆಂಬ ವಿಶೇಷಣವಿದೆ. ಆ ಶ್ರುತಿವಿಶೇಷದಿಂದ ಅಂತಿಮಪ್ರಾಪ್ಯನಾದ ವಾಯುವೇ ಮುಖ್ಯವಾಯುವೆಂದು ತಿಳಿಯಬೇಕು. 'ಸ ವಾಯುಮಾಗಚ್ಛತಿ' ಎಂಬಲ್ಲಿ ದ್ವಿತೀಯಪ್ರಾಪ್ಯನೆಂದು ಹೇಳಲ್ಪಟ್ಟ ವಾಯು ಆತಿವಾಹಿಕವಾಯು ಎಂದು ಸ್ವೀಕರಿಸಬೇಕು. ಆದ್ದರಿಂದ ವಾಯುವಿನ ಶ್ರೇಷ್ಠತ್ವಕ್ಕೆ ಭಂಗವಿಲ್ಲವೆಂದು ತಿಳಿಯಬೇಕು.

ಅಥವಾ ಆತಿವಾಹಿಕಾಧಿಕರಣದಲ್ಲಿ ಮುಂದಿನ ಅಧಿಕರಣದಲ್ಲಿ ಹೇಳಲಾದ ವಿಕ್ರಮ, ಉರುತ್ವಗಳೇ ಕ್ರಮವಾಗಿ ಪೂರ್ವಪಕ್ಷ, ಸಿದ್ಧಾಂತ ಯುಕ್ತಿಗಳೆಂದು ಹೇಳಬಹುದಾಗಿದೆ.

**ಪೂರ್ವಪಕ್ಷ—** ಅರ್ಚಿರ್ದೇವತೆಯನಂತರ ದ್ವಿತೀಯ ಪ್ರಾಪ್ಯನಾಗಿ ಶ್ರುತನಾದವನು ಮುಖ್ಯವಾಯುವೇ ಆಗಬೇಕು. ಪರಬ್ರಹ್ಮನನ್ನು ಹೊಂದುವುದಕ್ಕಿಂತ ಮೊದಲು ಶ್ರುತನಾದವನು ಆತಿವಾಹಿಕನಾಗಬೇಕು. ಮೊದಲು ಉತ್ತಮನಾದ ಮುಖ್ಯವಾಯುವನ್ನು ತಲುಪಿ ಕೊನೆಯಲ್ಲಿ ಅವರನಾದ ಆತಿವಾಹಿಕನೆಂಬ ವಾಯುವನ್ನು ಹೊಂದುತ್ತಾನೆ ಎಂಬುದು ಯುಕ್ತವಾಗುವುದಿಲ್ಲವಲ್ಲ? ಎಂದರೆ, ಉತ್ತಮತ್ವಕ್ರಮವನ್ನು ಅನುಸರಿಸಿಯೇ ಪ್ರಾಪ್ತಿಯೆಂಬ

ನಿಯಮವಿಲ್ಲ. ಏಕೆಂದರೆ 'ಸೋಮಾದಗ್ನಿಮಗ್ನೇರಿಂದ್ರಮ್' ಎಂಬಲ್ಲಿ ಉತ್ತಮವಾದ ಸೋಮನನ್ನು ಹೊಂದಿ ಅವರನಾದ ಅಗ್ನಿಯನ್ನು ಹೊಂದುವುದು ಕಂಡಿದೆ. ಅದರಂತೆ ಇಲ್ಲಿಯೂ ದ್ವಿತೀಯಪ್ರಾಪ್ಯನಾದವನು ಮುಖ್ಯವಾಯುವೆಂದರೆ ಯಾವ ಬಾಧಕವೂ ಇಲ್ಲ ಎಂದು ಪೂರ್ವಪಕ್ಷ. ಇದಕ್ಕೆ ಸಾಧಕವಾದ ಯುಕ್ತಿ **ವಿಕ್ರಮ** (ವ್ಯುತ್ಕ್ರಮವಾಗಿ ಪ್ರಾಪ್ತಿಯು ಕಂಡಿರುವುದು) ಎಂಬುದು.

**ಸಿದ್ಧಾಂತ—** ಸಿದ್ಧಾಂತಸಾಧಕವಾದ ಯುಕ್ತಿ **'ಉರುತ್ವ'** (ಉತ್ತಮತ್ವ) ವೆಂಬುದು. ಅರ್ಚಿರ್ದೇವತೆಯನ್ನು ಹೊಂದಿದ ನಂತರ ದ್ವಿತೀಯಪ್ರಾಪ್ಯನು ಆತಿವಾಹಿಕವಾಯು. ಪರಬ್ರಹ್ಮನನ್ನು ಹೊಂದುವುದಕ್ಕೂ ಮೊದಲು ಶ್ರುತನಾದವನು ಮುಖ್ಯವಾಯುವೇ. ಏಕೆಂದರೆ ದಿವಸ್ಪತಿತ್ವ ರೂಪವಾದ ಉತ್ತಮತ್ವವು ಮುಖ್ಯವಾಯುವಿನಲ್ಲಿಯೇ ಶ್ರುತವಾಗಿದೆ. ದ್ಯುಶಬ್ದವಾಚ್ಯಳಾದವಳು ಭಾರತೀ. ಅವಳ ಪತಿ ಮುಖ್ಯವಾಯುವೇ. ಈ ಭಾರತೀಪತಿತ್ವವು ಮುಖ್ಯವಾಯುವಿಗೆ ರುದ್ರಾದಿಗಳಿಗಿಂತ ಉತ್ತಮತ್ವವನ್ನು ತಿಳಿಸುತ್ತದೆ. ಆದ್ದರಿಂದ ಪರಬ್ರಹ್ಮನನ್ನು ಹೊಂದುವುದಕ್ಕೂ ಮೊದಲು ಶ್ರುತನಾದವನು ಮುಖ್ಯವಾಯು. ಅರ್ಚಿರ್ದೇವತೆಯನಂತರ ಶ್ರುತನಾದವನು ಆತಿವಾಹಿಕವಾಯು ಎಂದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ

ಆತಿವಾಹಿಕಃ=ದ್ವಿತೀಯ ಪ್ರಾಪ್ಯನಾದ ವಾಯು ಆತಿವಾಹಿಕವಾಯುವೇ ಹೊರತು ಮುಖ್ಯವಾಯುವಲ್ಲ. ಏಕೆಂದರೆ, ತಲ್ಲಿಂಗಾತ್=ಪೂರ್ವಪ್ರಾಪ್ಯತ್ವ ಲಿಂಗವಿರುವುದರಿಂದ.

## ವೈದ್ಯುತಾಧಿಕರಣ (4-3-5)

ಓಂ ವೈದ್ಯುತೇನೈವ ತತಸ್ತಚ್ಛ್ರುತೇ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದ ವಿಷಯ ಪ್ರಕೃತವಾದ ಮಾರ್ಗವೇ. ಮುಖ್ಯವಾಯುವಿನ ಅನಂತರ ಪರಬ್ರಹ್ಮನಿಗಿಂತ ಮೊದಲು ಪ್ರಾಪ್ಯನಾದವನು ಇದ್ದಾನೋ? ಇಲ್ಲವೋ? ಎಂದು ಸಂದೇಹ.

**ಪೂರ್ವಪಕ್ಷ—** ಮುಖ್ಯವಾಯುವಿನ ಅನಂತರ ಪರಬ್ರಹ್ಮನನ್ನು ಹೊಂದುವುದಕ್ಕೂ ಮೊದಲು ಮಧ್ಯದಲ್ಲಿ ಪ್ರಾಪ್ಯನಾದವನು ಬೇರೊಬ್ಬನು ಇದ್ದಾನೆ. ವಾಯುವು ಎಲ್ಲರಿಗಿಂತ ಉತ್ತಮನಾದ್ದರಿಂದ ಅವನೇ ಅಂತಿಮಪ್ರಾಪ್ಯನಾಗಬೇಕು. ಆದ್ದರಿಂದ ಮಧ್ಯದಲ್ಲಿ ಪ್ರಾಪ್ಯನಾದವನು ಬೇರೆಯವನು ಇರಲು ಸಾಧ್ಯವಿಲ್ಲ ಎಂದು ಹೇಳಬಾರದು. ಉತ್ತಮತ್ವ-ಕ್ರಮವನ್ನು ಅನುಸರಿಸಿಯೇ ಪ್ರಾಪ್ತಿಯ ಕ್ರಮ ಎಂಬ ನಿಯಮವೇನೂ ಇಲ್ಲ. ಏಕೆಂದರೆ 'ಸೋಮಾದಗ್ನಿ-ಮಗ್ನೇರಿಂದ್ರಮ್' ಎಂಬ ಶ್ರುತಿಯಲ್ಲಿ ಸೋಮನಿಗಿಂತ ಅವರನಾದ ಅಗ್ನಿಯನ್ನು, ಅಗ್ನಿಗಿಂತ ಅವರನಾದ ಇಂದ್ರನನ್ನು ಹೊಂದುತ್ತಾನೆ ಎಂದು ಹೇಳಿದಂತೆ ವಾಯುವಿನ ಅನಂತರ ಪ್ರಾಪ್ಯನು ಮತ್ತೊಬ್ಬನು ಇರುವುದರಿಂದ ವಾಯುವಿಗೆ ಅತಿಶಯಿತ ಪ್ರಾಧಾನ್ಯವು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಕ್ರಮ' (ಪ್ರಾಪ್ತಿಯಲ್ಲಿ ವಿಪರೀತ ಕ್ರಮ ಕಂಡಿರುವುದು) ಇದನ್ನು ಮತ್ತು 'ಉರುತ್ವ' (ಉತ್ತಮತ್ವ) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಸೋಮಾದಗ್ನಿಮಗ್ನೇರಿಂದ್ರಮಿತಿ ಸೋಮಾದಗ್ನೇರವರಸ್ಯಾಪಿ ಪ್ರಾಪ್ತೇಃ ಪ್ರಧಾನವಾಯೋರಪ್ಯವರೋಽನ್ಯಃ ಪ್ರಾಪ್ಯೋಽಸ್ತ್ವಿತಿ ವಾಚ್ಯಮ್ । ಉತ್ತಮತ್ವಾತ್ ತಸ್ಯೈವ ಬ್ರಹ್ಮಪ್ರಾಪಯಿತೃತ್ವಶಕ್ತೇಃ ।**

**'ವಾಯುರೇವ ಬ್ರಹ್ಮ ಗಮಯತಿ ತಸ್ಯ ಹ್ಯೇಷಾ ಶಕ್ತಿಃ । ನ ಹ್ಯನ್ಯೋ ಬ್ರಹ್ಮ ಗಮಯತಿ ಪ್ರಿಯೋ ಹ್ಯೇನದ್ ಗಮಯತಿ । ನ ಹ್ಯನ್ಯಃ ಪ್ರಿಯೋ ಬ್ರಹ್ಮಣಃ' ಇತಿ ಶ್ರುತೇಃ ।**

**ಮಾರ್ಗೇ ತ್ವವರಸ್ಯಾಪಿ ಯಥಾಮಾರ್ಗಂ ಪಶ್ಚಾತ್ ಪ್ರಾಪ್ತಿರ್ಭವತಿ ಲೋಕವತ್ । ನ ಹಿ ರಾಜಾನಂ ಯಃ ಕಶ್ಚಿತ್ ಪ್ರಾಪಯತಿ ಕ್ಲೃಪ್ತಮತಿ-ಪ್ರಿಯಂ ಜಾತಿಹಾಯ ।। ೫ ।।**

**ಭಾವಾರ್ಥ—**'ಜ್ಞಾನಿಯು ಸೋಮನಿಂದ ಅಗ್ನಿಯನ್ನು, ಅಗ್ನಿಯಿಂದ ಇಂದ್ರನನ್ನು ಹೊಂದುತ್ತಾನೆ' ಎಂಬ ಶ್ರುತಿಯಲ್ಲಿ ಸೋಮನಿಗಿಂತ ಅವರನಾದ

ಅಗ್ನಿಯ ಪ್ರಾಪ್ತಿಯೂ ಕಂಡಿರುವುದರಿಂದ ಪ್ರಧಾನವಾಯುವಿನ ಅನಂತರ ಅವನಿಗಿಂತ ಅವರನಾದ ಮತ್ತೊಬ್ಬ ದೇವತೆಯೂ ಪ್ರಾಪ್ಯನಾಗಬಹುದು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಪ್ರಧಾನವಾಯು ಉತ್ತಮನಾದ್ದರಿಂದ ಪರಬ್ರಹ್ಮನನ್ನು ತಲುಪಿಸುವ ಶಕ್ತಿ ಅವನಿಗೇ ಇದೆ. 'ವಾಯುವೇ ಪರಬ್ರಹ್ಮನನ್ನು ತಲುಪಿಸುತ್ತಾನೆ. ಅವನಿಗೇ ಈ ಪ್ರಾಪಕತ್ವಶಕ್ತಿ ಇದೆ. ವಾಯುವಿನ ಹೊರತಾಗಿ ಬೇರೆ ಯಾರೂ ಪರಬ್ರಹ್ಮನನ್ನು ತಲುಪಿಸಲಾರರು. ಪ್ರಿಯನಾದವನು ಮಾತ್ರ ಬ್ರಹ್ಮನನ್ನು ಹೊಂದಿಸುತ್ತಾನೆ. ವಾಯುವನ್ನು ಬಿಟ್ಟು ಪರಬ್ರಹ್ಮನಿಗೆ ಪ್ರಿಯನಾದವನಿಲ್ಲ' ಎಂದು ಶ್ರುತಿಯಿದೆ. ಮತ್ತು ಲೋಕದಲ್ಲಿ ಕಂಡಿರುವಂತೆ ಮಾರ್ಗದಲ್ಲಿ ಮಾರ್ಗಕ್ಕನುಗುಣ ವಾಗಿ ಮೊದಲು ಉತ್ತಮನನ್ನು ಹೊಂದಿ ಆಮೇಲೆ ಅವರನ್ನೂ ಹೊಂದಬಹುದು. ರಾಜನನ್ನು ಅವನಿಗೆ ಅತಿಪ್ರಿಯನಾದ ಪ್ರಮಿತನಾದ ವ್ಯಕ್ತಿಯನ್ನು ಬಿಟ್ಟು ಯಃಕಶ್ಚಿದ್ ವ್ಯಕ್ತಿ ತಲುಪಿಸಲಾರನಷ್ಟೇ!

**ವಿವರಣೆ—** ಮುಖ್ಯವಾಯುವೇ ಉತ್ತಮ ಮತ್ತು ಪರಬ್ರಹ್ಮನಿಗೆ ಅತಿಪ್ರಿಯನಾಗಿದ್ದಾನೆ. ಆದ್ದರಿಂದ ಅವನನ್ನು ಬಿಟ್ಟು ಬೇರೆ ಯಾರೂ ಪರಬ್ರಹ್ಮನನ್ನು ತಲುಪಿಸಲಾರರು. ಆದ್ದರಿಂದ ಪ್ರಧಾನವಾಯುವಿನ ಅನಂತರ ಪರಬ್ರಹ್ಮನಿಗಿಂತ ಮೊದಲು ಯಾರೂ ಪ್ರಾಪ್ಯನಾದವನಿಲ್ಲ. ಆದ್ದರಿಂದ ವಾಯುವಿಗೆ ಅತಿಶಯಿತ ಪ್ರಾಧಾನ್ಯವು ಯುಕ್ತ ವಾಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

**ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ**

ವೈದ್ಯುತೇನೈವ=ಬ್ರಹ್ಮಜ್ಞಾನಿಯು ಭಾರತೀಪತಿಯಾದ ಮುಖ್ಯಪ್ರಾಣ ನಿಂದಲೇ ಪರಮಾತ್ಮನನ್ನು ಹೊಂದುವನು. ತತಃ=ಮುಖ್ಯಪ್ರಾಣನ ಅನಂತರ ಮಧ್ಯದಲ್ಲಿ ಮತ್ತೊಬ್ಬ ಪ್ರಾಪ್ಯನಿಲ್ಲ. ಏಕೆಂದರೆ ತಚ್ಛ್ರುತೇಃ='ವಾಯುರೇವ ಬ್ರಹ್ಮ ಗಮಯತಿ' ಎಂದು ಶ್ರುತಿಯಿರುವುದರಿಂದ.

## ಕಾರ್ಯಾಧಿಕರಣ (4-3-6)

ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ ಎಂಬ ಸೂತ್ರದಿಂದ

ಆರಂಭವಾಗುವ ಈ ಅಧಿಕರಣಕ್ಕೆ 'ಸ ಏನಾನ್ ಬ್ರಹ್ಮ ಗಮಯತಿ' ಎಂಬಲ್ಲಿ ಹೇಳಲ್ಪಟ್ಟ ಬ್ರಹ್ಮನು ವಿಷಯ, ಬ್ರಹ್ಮಶಬ್ದವು ಸಾಧಾರಣವಾಗಿರುವುದರಿಂದ ಸಂಶಯ ಬರುತ್ತದೆ. ಪೂರ್ವೋಕ್ತಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದವಾಚ್ಯನು ಚತುರ್ಮುಖನೋ? ಅಥವಾ ಪರಬ್ರಹ್ಮನೋ? ಅಥವಾ ಇಬ್ಬರೂ ಆಗುವರೋ? ಎಂದು. ಇಬ್ಬರೂ ಆಗುವರು ಎಂಬ ಮೂರನೆ ಪಕ್ಷದಲ್ಲಿ ಒಂದೇ ಕಾಲದಲ್ಲಿ ಒಬ್ಬನೇ ಜ್ಞಾನಿಗೆ ಇಬ್ಬರು ಬ್ರಹ್ಮರ ಪ್ರಾಪ್ತಿಯು ಯುಕ್ತವಾಗುವುದಿಲ್ಲ, ಆದಕಾರಣ ವಾಯುದೇವನು ಕೆಲವರನ್ನು ಕಾರ್ಯಬ್ರಹ್ಮನನ್ನು ತಲುಪಿಸುವನು. ಮತ್ತೆ ಕೆಲವರನ್ನು ಪರಬ್ರಹ್ಮನನ್ನು ತಲುಪಿಸುವನು ಎಂದು ಅಭಿಪ್ರಾಯ. ಯಾವುದಾದರೂ ಒಂದು ಕ್ರಮದಿಂದ ಉಭಯಪ್ರಾಪ್ತಿಯೋ? ಅಥವಾ ಕ್ರಮವಿಲ್ಲದೆ ಉಭಯಪ್ರಾಪ್ತಿಯೋ? ಕ್ರಮವಾದರೂ ಯೋಗ್ಯತಾರೂಪವೋ? ಭಿನ್ನವಾದದ್ದೋ? ಎಂದು ಸಂಶಯ ಬರುತ್ತದೆ.

**ಪೂರ್ವಪಕ್ಷ—** 'ಸ ಏನಾನ್ ಬ್ರಹ್ಮ ಗಮಯತಿ' (ವಾಯುದೇವನು ಜ್ಞಾನಿಗಳನ್ನು ಬ್ರಹ್ಮನ ಬಳಿ ತಲುಪಿಸುತ್ತಾನೆ) ಎಂಬಲ್ಲಿ ಬ್ರಹ್ಮಶಬ್ದವಾಚ್ಯನಾದವನು ಚತುರ್ಮುಖನೇ. ಮುಖ್ಯಾರ್ಥವಾದ ಪರಬ್ರಹ್ಮನನ್ನು ಬಿಟ್ಟು ಅಮುಖ್ಯಾರ್ಥವಾದ ಕಾರ್ಯಬ್ರಹ್ಮನನ್ನು ಹೇಗೆ ಸ್ವೀಕರಿಸುವುದು ಎಂದರೆ, ಬಾಧಕವಿರುವುದರಿಂದ. 'ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ' (ಪ್ರಕೃತಿಯ ಬಂಧವು ಚತುರ್ಮುಖನೊಂದಿಗೇ ನಾಶವಾಗುವುದು) ಎಂದು ಹೇಳಿರುವುದರಿಂದ ಚತುರ್ಮುಖನ ಮುಕ್ತಿಯವರೆಗೂ ಬಂಧವು ಸಂತತವಾಗಿರುವುದರಿಂದ ಪರಬ್ರಹ್ಮನನ್ನು ತಲುಪುವುದಕ್ಕೆ ಮೊದಲು ಕಾರ್ಯಬ್ರಹ್ಮನನ್ನು ಹೊಂದಿಸುತ್ತಾನೆ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಾಂತಾನಿಕ' (ಸಂತತವಾಗಿರುವುದು) ಎಂಬುದು. ಇದನ್ನು ಮತ್ತು 'ಆಪ್ತಿ' (ಶ್ರುತಿಯಿಂದ ಪ್ರಾಪ್ತವಾದ ಪ್ರಮೇಯವನ್ನು ಸ್ವೀಕರಿಸಬೇಕು) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಚತುರ್ಮುಖಸ್ಯ ಪ್ರಾಪ್ತಿಪರ್ಯಂತಂ ಸಂತತತ್ವನಿಯಮಾದ್ ಬಂಧಸ್ಯ ತಾವದ್‌ಭಗವತ್ಪ್ರಾಪ್ತಿರ್ನಾಸ್ತೀತಿ ನಿಯಮಃ।**

**'ಯಾಂತಿ ದೇವಂ ಪರಂ ಕೇಚಿತ್ ಪೂರ್ವಂ ಕೇಚಿಲ್ಲಯೇ ವಿಭುಮ್।**
**ಯೋಗ್ಯತಾತಾರತಮ್ಯೇನ ವಿಶೇಷೋಽಯಮಪೀಷ್ಯತೇ ।।'**
**ಇತಿ ಶ್ರುತೇಸ್ತಥಾಪ್ರಾಪ್ತತ್ವಾತ್ ।**

**ಭಾವಾರ್ಥ—**ಚತುರ್ಮುಖನಿಗೆ ಮುಕ್ತಿಯಾಗುವವರೆಗೂ ಬಂಧವು ಸತತವಾಗಿರುವುದರಿಂದ ಅಲ್ಲಿಯವರೆಗೆ ಭಗವಂತನ ಪ್ರಾಪ್ತಿಯಾಗುವುದಿಲ್ಲ ಎಂದರೆ ಹಾಗೇನೂ ನಿಯಮವಿಲ್ಲ. ಏಕೆಂದರೆ, ಕೆಲವರು (ಅಪ್ರತೀಕಾಲಂಬನರು) ಪರಮಾತ್ಮನನ್ನು ಹೊಂದುತ್ತಾರೆ. ಇನ್ನು ಕೆಲವರು (ಪ್ರತೀಕಾಲಂಬನರು) ಪ್ರಲಯಕ್ಕಿಂತ ಮೊದಲು (ವಿಭುಂ=ಚತುರ್ಮುಖಂ) ಚತುರ್ಮುಖನನ್ನು ತಲುಪುತ್ತಾರೆ. ಯೋಗ್ಯತಾ ತಾರತಮ್ಯವೆಂಬ ಕ್ರಮದಿಂದಲೇ ಈ ವಿಶೇಷವು ಕೂಡುತ್ತದೆ' ಎಂಬ ಶ್ರುತಿಯಿಂದ ಹಾಗೆ ಪ್ರಾಪ್ತವಾಗಿದೆ.

**ವಿವರಣೆ—** ಶ್ರುತಿಯಿಂದ ಪ್ರಾಪ್ತವಾದ ಪ್ರಮೇಯವನ್ನು ಸ್ವೀಕರಿಸಬೇಕು. ಶ್ರುತಿಯಲ್ಲಿ ಹೇಳಿದಂತೆ ಅಪ್ರತೀಕಾಲಂಬನರು ಅಂದರೆ ವ್ಯಾಪ್ತೋಪಾಸಕರು, ಪರಬ್ರಹ್ಮನನ್ನು ಹೊಂದುತ್ತಾರೆ. ಪ್ರತೀಕಾಲಂಬನರು ಚತುರ್ಮುಖನ ಬಳಿಗೆ ಹೋಗುತ್ತಾರೆ ಎಂಬುದಾಗಿ ತಿಳಿಯಬೇಕು. ಇದೆಲ್ಲವೂ ಯೋಗ್ಯತಾತಾರತಮ್ಯಾನುಸಾರವಾಗಿ ನಡೆಯುವುದೇ ಹೊರತು ತಮಗೆ ಇಷ್ಟಬಂದತಲ್ಲ ಎಂಬುದು ಸಿದ್ಧಾಂತ.

**ಪೂರ್ವಪಕ್ಷ—** 'ಸ ಏನಾನ್ ಬ್ರಹ್ಮ ಗಮಯತಿ' ಎಂಬಲ್ಲಿ ವಾಯುದೇವನು ಪರಬ್ರಹ್ಮನನ್ನು ತಲುಪಿಸುತ್ತಾನೆ ಎಂದರ್ಥವನ್ನು ಹೇಳಬೇಕೇ ಹೊರತು ಕಾರ್ಯಬ್ರಹ್ಮನನ್ನಲ್ಲ. ಏಕೆಂದರೆ ಪರಬ್ರಹ್ಮನು ಮುಖ್ಯಾರ್ಥ. ಅಪರಬ್ರಹ್ಮನು ಅಮುಖ್ಯಾರ್ಥ. ಮುಖ್ಯಾರ್ಥವನ್ನು ಸ್ವೀಕರಿಸಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಸರಿಯಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕಯುಕ್ತಿ 'ಪ್ರಾಪ್ತಿ' ಎಂಬುದು. ಇದನ್ನು ಮತ್ತು 'ಆಪ್ತಿ' ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪರಬ್ರಹ್ಮಣ ಏವ ಬ್ರಹ್ಮಶಬ್ದಮುಖ್ಯಾರ್ಥತ್ವೇನ ಪ್ರಥಮಪ್ರಾಪ್ತತ್ವಾದಪೋಹಾಯುಕ್ತೇಸ್ತೇಸ್ಯೈವ ಪ್ರಾಪ್ತಿನಿಯಮಃ । 'ಯಾಂತಿ ದೇವಂ ಪರಂ ಕೇಚಿತ್' ಇತಿ ಪ್ರಮಾಣಪ್ರಾಪ್ತತ್ವಾದೇವ ।**

**ಭಾವಾರ್ಥ**—ಪರಬ್ರಹ್ಮನೇ ಬ್ರಹ್ಮಶಬ್ದದ ಮುಖ್ಯಾರ್ಥವಾದ್ದರಿಂದ ಪ್ರಥಮ ಪ್ರಾಪ್ತನಾದವನನ್ನು ಪರಿತ್ಯಜಿಸುವುದು ಸರಿಯಲ್ಲವಾದ್ದರಿಂದ ಪರಬ್ರಹ್ಮನ ಪ್ರಾಪ್ತಿಯನ್ನೇ ಹೇಳಬೇಕು ಎಂದರೆ, ಹಾಗೇನೂ ನಿಯಮವಿಲ್ಲ. 'ಯಾಂತಿ ದೇವಂ ಪರಂ ಕೇಚಿತ್' ಎಂಬ ಪ್ರಮಾಣದಿಂದ ಸಿದ್ಧವಾದ್ದರಿಂದಲೇ.

**ವಿವರಣೆ**— ಹಿಂದೆ ಹೇಳಿದಂತೆ 'ಯಾಂತಿ ದೇವಂ ಪರಂ ಕೇಚಿತ್' ಎಂಬ ಪ್ರಮಾಣಾನುಸಾರ ಯೋಗ್ಯತಾ ವಿಶೇಷವುಳ್ಳ ಅಪ್ರತೀಕಾಲಂಬನರನ್ನು ವಾಯುದೇವನು ಪರಬ್ರಹ್ಮನ ಬಳಿಗೆ ಕರೆದುಕೊಂಡು ಹೋಗುತ್ತಾನೆ. ಇತರರು ಕಾರ್ಯಬ್ರಹ್ಮನ ಬಳಿ ಹೋಗುತ್ತಾರೆ ಎಂಬುದು ಸಿದ್ಧಾಂತ.

**ಪೂರ್ವಪಕ್ಷ**— ವಾಯುದೇವನು ಜ್ಞಾನಿಗಳನ್ನು ಪರಬ್ರಹ್ಮ ಅಪರ ಬ್ರಹ್ಮರಿಬ್ಬರ ಬಳಿ ಒಯ್ಯುತ್ತಾನೆ ಎಂಬ ಮೂರನೇ ಪಕ್ಷದಲ್ಲಿ ಕ್ರಮವೇನಿಲ್ಲ. ಯಾರಿಗೆ ಯಾವುದರ ಅಪೇಕ್ಷೆಯೋ ಅದರಂತೆ ಪರಬ್ರಹ್ಮನ ಪ್ರಾಪ್ತಿಯೂ ಆಗಬಹುದು. ಅಪರಬ್ರಹ್ಮಪ್ರಾಪ್ತಿಯೂ ಆಗಬಹುದು ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಅಭೀಷ್ಟತಾ**' (ತಮಗಿಷ್ಟವಾದ ಬ್ರಹ್ಮನನ್ನು ಪಡೆಯುವುದು) ಎಂಬುದು. ಇದನ್ನು ಮತ್ತು 'ಕ್ರಮಾನುರಾಗ' (ಪರಮಾತ್ಮನ ಅವರವರ ಯೋಗ್ಯತೆಗನುಗುಣವಾಗಿ ಪ್ರಸನ್ನನಾಗುವನು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪರಪ್ರಾಪ್ತಿರ್ಯಸ್ಯಾಭೀಷ್ಟಾ ತಸ್ಯ ತತ್ಪ್ರಾಪ್ತಿರಿತಿ ನಿಯಮಃ ।**
**'ಕ್ರಮಾನುರಾಗೀ ಭಗವಾನ್ ಕ್ರಮಾತ್ ಪುಂಭಿರವಾಪ್ಯತೇ ।**
**ಅತಃ ಕ್ರಮಾತ್ ಸಮೃದ್ಧೇ ತು ಜ್ಞಾನೇ ಬ್ರಹ್ಮಲಯೇ ನರೈಃ ।**
**ಪ್ರಾಪ್ಯತೇ ನಿಯಮೇನೈವ ಕೈಶ್ಚಿದೇವಾಪ್ಯತೇ ಮೃತೌ ॥'**
**ಇತಿ ಭಗವತಃ ಕ್ರಮಾನುರಾಗಿತ್ವಶ್ರುತೇಃ ।**

**ಭಾವಾರ್ಥ**—ಯಾರಿಗೆ ಪರಬ್ರಹ್ಮಪ್ರಾಪ್ತಿಯು ಅಪೇಕ್ಷಿತವೋ ಅವನು ಪರಬ್ರಹ್ಮನನ್ನು ಹೊಂದುತ್ತಾನೆ ಎಂಬ ನಿಯಮವಿಲ್ಲ. ಏಕೆಂದರೆ 'ಯೋಗ್ಯತಾ

ತಾರತಮ್ಯಕ್ರಮದಲ್ಲಿ ಅನುರಾಗವುಳ್ಳ ಭಗವಂತನು ಆ ಕ್ರಮದಿಂದಲೇ ಜ್ಞಾನಿಗಳಿಂದ ಹೊಂದಲ್ಪಡುತ್ತಾನೆ. ಯೋಗ್ಯತೆಗನುಗುಣವಾಗಿ ಜ್ಞಾನವು ಪೂರ್ಣವಾದಾಗ ಪ್ರತೀಕಾಲಂಬನರಿಂದ ಚತುರ್ಮುಖ ಪ್ರಾಪ್ತಿಪೂರ್ವಕವಾಗಿ ಬ್ರಹ್ಮಲಯದಲ್ಲಿ ಹೊಂದಲ್ಪಡುತ್ತಾನೆ. ಕೆಲವರಿಂದ (ಅಪ್ರತೀಕಾಲಂಬನರಿಂದ) (ಮೃತೌ= ಲಯಾತ್ ಪೂರ್ವಂ) ಲಯಕ್ಕೂ ಮೊದಲು ನಿಯಮೇನ ಹೊಂದಲ್ಪಡುತ್ತಾನೆ' ಎಂಬುದಾಗಿ ಭಗವಂತನಿಗೆ ಕ್ರಮದಲ್ಲಿ ಅನುರಾಗವು ಶ್ರುತವಾಗಿದೆ.

**ವಿವರಣೆ—** ಪರಮಾತ್ಮನು ಅವರವರ ಯೋಗ್ಯತಾಕ್ರಮದಿಂದ ಪ್ರಸನ್ನನಾಗುವನು ಮತ್ತು ಪ್ರಾಪ್ಯನಾಗುವನು ಎಂದು ಪೂರ್ವೋಕ್ತ ಪ್ರಮಾಣಕ್ಕನುಗುಣವಾಗಿ ಒಪ್ಪಬೇಕು. ಆದ್ದರಿಂದ ಆಯಾ ಜ್ಞಾನಿಗಳು ತಮ್ಮ ತಮ್ಮ ಇಚ್ಛೆಯಂತೆ ಫಲವನ್ನು ಪಡೆಯುತ್ತಾರಾದರೂ ಆಯಾ ಫಲಕ್ಕೆ ಯೋಗ್ಯರಾದರೆ ಮಾತ್ರ ಆ ಫಲವನ್ನು ಹೊಂದುತ್ತಾರೆ.

**ಪೂರ್ವಪಕ್ಷ—** ವಾಯುದೇವನು ಜ್ಞಾನಿಗಳನ್ನು ಪರಬ್ರಹ್ಮ ಅಪರಬ್ರಹ್ಮ ಇವರಿಬ್ಬರ ಬಳಿ ಕೊಂಡೊಯುತ್ತಾನೆ ಎಂಬ ಮೂರನೆ ಪಕ್ಷದಲ್ಲಿ ಕ್ರಮವನ್ನೂ ಒಪ್ಪಿದರೂ ಅದಕ್ಕೆ ಯೋಗ್ಯತೆಯು ನಿಯಾಮಕವಲ್ಲ. ಅವರವರ ಸೌಕರ್ಯಕ್ಕನುಗುಣವಾಗಿ ಪರಬ್ರಹ್ಮ-ಅಪರಬ್ರಹ್ಮರನ್ನು ಹೊಂದುತ್ತಾರೆ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸೌಕರ್ಯ' ಎಂಬುದು. ಇದನ್ನು ಮತ್ತು 'ಕಥಿತಾನುವೃತ್ತಿ' (ಶ್ರುತ್ಯುಕ್ತವಾದದ್ದನ್ನು ಒಪ್ಪುವುದು) ಎಂಬ ಸಿದ್ಧಾಂತ ಸಾಧಕ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಬಹುಧಾಶ್ರುತೇರ್ಯಥಾಸೌಕರ್ಯಂ ಚತುರ್ಮುಖಸ್ಯ ಪರಸ್ಯ ವಾ ಪ್ರಾಪ್ತಿರಿತಿ ವಾಚ್ಯಮ್ । ಶ್ರುತ್ಯುಕ್ತಾನುವೃತ್ತೇರೇವ ನ್ಯಾಯ್ಯತ್ವಾತ್ । ಸಪ್ರತೀಕಾಶ್ಚತುರ್ಮುಖಮಪ್ರತೀಕಾಃ ಪರಮಮು ಹೈತೇ ಗಚ್ಛಂತ್ಯಾಗಚ್ಛಂತಿ ಚ ಚತುರ್ಮುಖಾತ್ ಪರಮಂ ಪರಮಾಚ್ಚತುರ್ಮುಖಂ ಯಾವದ್ ವಿಲಯಮಥ ಸಹ ಚತುರ್ಮುಖೇನ ವಿಮುಚ್ಯಂತೇ ಆನಂದೀಭವಂತಿ' ಇತಿ ಹಿ ಶ್ರುತಿಃ । ಅಂತರ್ಭೇದಾಧಿಕರಣತ್ವಾತ್ ಸಮುದಾಯೋಕ್ತಿಃ ॥ ೬ ॥**

**ಭಾವಾರ್ಥ**—(ಪರಬ್ರಹ್ಮ-ಅಪರಬ್ರಹ್ಮರನ್ನು ಹೊಂದುತ್ತಾರೆ ಎಂಬ ವಿಷಯದಲ್ಲಿ) ಅನೇಕ ಶ್ರುತಿಗಳಿರುವುದರಿಂದ (ಎಲ್ಲವೂ ಪ್ರಮಾಣವೇ ಆಗಿದ್ದು ಯಾವುದನ್ನೂ ಬಿಡಲು ಸಾಧ್ಯವಿಲ್ಲದಿರುವುದರಿಂದ) ಅವರವರ ಸೌಕರ್ಯಕ್ಕನುಗುಣವಾಗಿ ಚತುರ್ಮುಖನನ್ನೋ ಪರಬ್ರಹ್ಮನನ್ನೋ ಹೊಂದುತ್ತಾರೆ ಎಂದು ಹೇಳಬಹುದು ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ ಶ್ರುತಿಯಲ್ಲಿ ಉಕ್ತವಾದುದ್ದನ್ನು ಒಪ್ಪುವುದೇ ಸರಿಯಾದದ್ದು. 'ಪ್ರತೀಕಾಲಂಬನರು ಚತುರ್ಮುಖನನ್ನು ಹೊಂದುತ್ತಾರೆ. ಅಪ್ರತೀಕಾಲಂಬನರು ಚತುರ್ಮುಖನನ್ನು ತಲುಪುತ್ತಾರೆ. ಪ್ರಲಯದ ವರೆಗೆ ಚತುರ್ಮುಖನಿಂದ ಪರಬ್ರಹ್ಮನನ್ನು, ಪರಬ್ರಹ್ಮನಿಂದ ಚತುತರ್ಮುಖನನ್ನು ಕುರಿತು ಹೋಗುತ್ತಾರೆ, ಬರುತ್ತಾರೆ. ಚತುರ್ಮುಖನೊಂದಿಗೆ ಮುಕ್ತರಾಗುತ್ತಾರೆ. ಆನಂದವುಳ್ಳವರಾಗುತ್ತಾರೆ' ಎಂಬುದಾಗಿ ಶ್ರುತಿಯಿದೆ. ಈ ಅಧಿಕರಣದಲ್ಲಿ ಅವಾಂತರ ಪ್ರಭೇದವಿರುವುದರಿಂದ ಪೂರ್ವಪಕ್ಷ-ಸಿದ್ಧಾಂತ-ನ್ಯಾಯಗಳ ಸಮುದಾಯವನ್ನು ಹೇಳಲಾಗಿದೆ.

**ವಿವರಣೆ**—ಶ್ರುತಿಯಲ್ಲಿ ಹೇಳಿದಂತೆ ಪ್ರತೀಕಾಲಂಬನರು ಚತುರ್ಮುಖನನ್ನು, ಅಪ್ರತೀಕಾಲಂಬನರು ಪರಬ್ರಹ್ಮನನ್ನು ಹೋಗಿ ಸೇರುತ್ತಾರೆ ಎಂಬುದು ಸಿದ್ಧಾಂತ.

ಕಾರ್ಯಾಧಿಕರಣ ಒಂದರಲ್ಲಿ ನಾಲ್ಕು ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ಹೇಳುವ ಆವಶ್ಯಕತೆಯೇನು?. ಎಂಬ ಪ್ರಶ್ನೆಗೆ 'ಅಂತರ್ಭೇದಾಧಿಕರಣತ್ವಾತ್...' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಅಂತರ್ಭೇದಾಧಿಕರಣತ್ವಾತ್ ಎಂದರೆ ಅವಾಂತರ ಪ್ರಭೇದವಿರುವ ಒಂದೇ ಅಧಿಕರಣ ಎಂದರ್ಥ. (ಅಂತಃ ಭೇದಃ ಯಸ್ಯ ತತ್ ಅಂತರ್ಭೇದಮ್ । ಅಂತರ್ಭೇದಂ ಚ ತತ್ ಅಧಿಕರಣಂ ಚ ಅಂತರ್ಭೇದಾಧಿಕರಣಮ್ । ತಸ್ಯ ಭಾವಃ ।।) ಹತ್ತು ಸೂತ್ರಗಳನ್ನೊಳಗೊಂಡಿದೆ ಈ ಅಧಿಕರಣ. ಇದರಲ್ಲಿ ಅನೇಕ ಅವಾಂತರ ವಿಷಯಗಳನ್ನು ಪ್ರತಿಪಾದಿಸಿ ಪರಬ್ರಹ್ಮಪ್ರಾಪ್ತಿ ಎಂಬ ಮುಖ್ಯ ವಿಷಯವನ್ನು ಪ್ರತಿಪಾದಿಸಲಾಗಿದೆ. ಅವಾಂತರ ಭಿನ್ನಭಿನ್ನ ವಿಷಯಗಳನ್ನು ಪ್ರತಿಪಾದಿಸುವುದಕ್ಕಾಗಿ ಅನೇಕ ಪೂರ್ವಪಕ್ಷ-ಸಿದ್ಧಾಂತ- ನ್ಯಾಯಗಳನ್ನು ನಿರೂಪಿಸಿದ್ದಾರೆ.

**ಸೂತ್ರಾರ್ಥ—**

## ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ

'ಸ ಏನಾನ್ ಬ್ರಹ್ಮಗಮಯತಿ' ಎಂಬ ಶ್ರುತಿಯಲ್ಲಿ ಕಾರ್ಯಂ=ಉತ್ಪತ್ತಿಯುಳ್ಳ ಚತುರ್ಮುಖನನ್ನು ಕುರಿತು ಮುಖ್ಯಪ್ರಾಣನು ಜ್ಞಾನಿಯನ್ನು ಕರೆದೊಯ್ಯುವನು ಎಂದು ಹೇಳಲ್ಪಟ್ಟಿದೆ ಎಂದು ಬಾದರಿಃ=ಬಾದರಿ ಆಚಾರ್ಯರು ಹೇಳುತ್ತಾರೆ. ಏಕೆಂದರೆ, ಅಸ್ಯ=ಚತುರ್ಮುಖನಿಗೇ ಗತ್ಯುಪಪತ್ತೇಃ=ಪ್ರಾಪ್ಯತ್ವವು ಉಪಪನ್ನವಾಗುವುದರಿಂದ.

**ಇಲ್ಲಿಗೆ ಚತುರ್ಥಾಧ್ಯಾಯ ತೃತೀಯಪಾದ ಮುಗಿಯಿತು.**

# ಚತುರ್ಥಾಧ್ಯಾಯ ಚತುರ್ಥಪಾದ

ಮೋಕ್ಷವು ನಾಲ್ಕು ಬಗೆಯಾದದ್ದು ಎಂದು ಹಿಂದೆ ನಿರೂಪಿಸಲಾಗಿದೆ. ಚತುರ್ಮುಖನೊಂದಿಗೆ ಪರಬ್ರಹ್ಮನನ್ನು ಹೊಂದಿರುವ ಜ್ಞಾನಿಗಳು ಮುಕ್ತಿಯಲ್ಲಿ ಅನುಭವಿಸುವ ನಾಲ್ಕನೆಯದ್ದಾದ ಭೋಗವನ್ನು ಈ ಪಾದದಲ್ಲಿ ನಿರೂಪಿಸುತ್ತಿದ್ದಾರೆ. ಈ ಪಾದದ ಪೂರ್ವಪಕ್ಷ-ಸಿದ್ಧಾಂತ ನ್ಯಾಯಗಳನ್ನು ಹೀಗೆ ಸಂಗ್ರಹಿಸಿದ್ದಾರೆ.

**ಅತಿಕ್ರಮೋಕ್ತಿಃ ಕೃತಿರರ್ಥಲಾಭಃ ಪರಾಗತಿಃ ಪಾರಗತಿಸ್ತದೋಕಃ ।**
**ಸಮಸ್ತಕಾರ್ಯಂ ವಶಿತಾ ಚ ವಿಶ್ವಸಂಭಾವನಾ ಯುಕ್ತಯಸ್ತ್ವನ್ಯಪಕ್ಷೇ ।**
**ಸಾಮಾನ್ಯರೂಪಂ ಪ್ರತಿಭಾನಮುಕ್ತಿರಾಶ್ಚರ್ಯತಾಽಕೃತ್ರಿಮತಾಽಸ್ತದೋಷಃ।**
**ವಿಶೇಷಕ್ಲೃಪ್ತಿಃ ಕೃತನಿಶ್ಚಯಶ್ಚ ಮಾಹಾತ್ಮ್ಯಮಿತ್ಯೇವ ಸುನಿರ್ಣಯಾರ್ಥಾಃ ॥**

ಸಂಪದ್ಯಾಧಿಕರಣದಲ್ಲಿ ಅತಿಕ್ರಮೋಕ್ತಿ, ಸಾಮಾನ್ಯರೂಪಗಳು ಮುಕ್ತಾಧಿಕರಣದಲ್ಲಿ ಕೃತಿ, ಪ್ರತಿಭಾನಗಳು ಆತ್ಮಾಧಿಕರಣದಲ್ಲಿ ಅರ್ಥಲಾಭ, ಉಕ್ತಿಗಳು, ಅವಿಭಾಗಾಧಿಕರಣದಲ್ಲಿ ಪರಾಗತಿ, ಆಶ್ಚರ್ಯತಾಗಳು ಚಿತಿಮಾತ್ರಾಧಿಕರಣದಲ್ಲಿ ಪಾರಗತಿ, ಅಕೃತ್ರಿಮತಾಗಳು, ಸಂಕಲ್ಪಾಧಿಕರಣ, ಅನನ್ಯಪತಿತ್ವಾಧಿಕರಣಗಳಲ್ಲಿ ತದೋಕಃ, ಅಸ್ತದೋಷಗಳು, ಅಭಾವಾಧಿಕರಣ ಮತ್ತು ಜಗದ್ವ್ಯಾಪಾರಾಧಿಕರಣಗಳಲ್ಲಿ ಸಮಸ್ತಕಾರ್ಯ, ವಿಶೇಷಕ್ಲೃಪ್ತಿಗಳು ಸ್ಥಿತ್ಯಧಿಕರಣದಲ್ಲಿ ವಶಿತಾ, ಕೃತನಿಶ್ಚಯಗಳು ಅನಾವೃತ್ತ್ಯಧಿಕರಣದಲ್ಲಿ ವಿಶ್ವಸಂಭಾವನಾ, ಮಾಹಾತ್ಮ್ಯಗಳು ಕ್ರಮವಾಗಿ ಪೂರ್ವಪಕ್ಷ, ಸಿದ್ಧಾಂತ ಯುಕ್ತಿಗಳಾಗಿವೆ.

## ಸಂಪದ್ಯಾಧಿಕರಣ (4-4-1)

ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣಕ್ಕೆ ಮುಕ್ತನು ವಿಷಯ. ಅರ್ಚಿರಾದಿದೇವತೆಗಳ ಅತಿಕ್ರಮಣವನ್ನು ಹೇಳಿದ್ದಾರೆ. ಭಗವಂತನೇ ಗಮ್ಯನೆಂದೂ ಹೇಳಿದ್ದಾರೆ. ಆದ್ದರಿಂದ ಸಂಶಯ ಬರುತ್ತದೆ- ಮುಕ್ತನು ಪರಬ್ರಹ್ಮನನ್ನು ಅತಿಕ್ರಮಿಸಿ ಭೋಗಿಸುವನೋ? ಸಮೀಪಿಸಿ ಭೋಗಿಸುವನೋ? ಎಂದು.

**ಪೂರ್ವಪಕ್ಷ—** ಮುಕ್ತನು ಪರಬ್ರಹ್ಮನನ್ನು ಅತಿಕ್ರಮಿಸಿ ಭೋಗಗಳನ್ನು ಭೋಗಿಸುವನು ಎಂದು 'ಏತಂ ಸೇತುಂ ತೀರ್ತ್ವಾಂಧಃ ಸನ್ನನಂಧೋ ಭವತಿ' (ಅಜ್ಞಾನಿಯಾಗಿದ್ದ ಈ ಸಂಸಾರಿಯು ಈ ಜಗದ್ಧಾರಕರನಾದ ಪರಬ್ರಹ್ಮನನ್ನು ದಾಟಿ ಅವಿದ್ಯೆಯಿಂದ ಮುಕ್ತನಾಗಿ ಪೂರ್ಣಜ್ಞಾನಿಯಾಗುತ್ತಾನೆ) ಎಂಬ ಶ್ರುತಿಯು ಹೇಳುತ್ತಿದೆ. ಆದ್ದರಿಂದ ಪರಬ್ರಹ್ಮನ ಅತಿಕ್ರಮಣವಾಗದೆ ಸ್ವರೂಪದ ಅಭಿವ್ಯಕ್ತಿ ಇಲ್ಲ. ಹೀಗೆ ಮುಕ್ತನಿಗೆ ಬ್ರಹ್ಮಾತಿಕ್ರಮಣವು ನಿಯತವಾಗಿರುವುದರಿಂದ ಬ್ರಹ್ಮನು ಗಮ್ಯನಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ **'ಅತಿಕ್ರಮೋಕ್ತಿ'** (ಶ್ರುತಿಯಲ್ಲಿ ಪರಬ್ರಹ್ಮನ ಅತಿಕ್ರಮಣವನ್ನು ಹೇಳಿರುವುದು) ಎಂಬುದು. ಇದನ್ನು ಮತ್ತು **'ಸಾಮಾನ್ಯರೂಪ'** (ಸಾಮಾನ್ಯರೂಪದಿಂದ ಅತಿಕ್ರಮಣವು ಹೇಳಲ್ಪಟ್ಟಿರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ 'ಏತಂ ಸೇತುಂ ತೀರ್ತ್ವಾ' ಇತ್ಯತ್ರಾತಿಕ್ರಮೋಕ್ತೇರ್ಮುಕ್ತೋ ಬ್ರಹ್ಮ ತೀರ್ತ್ವಾ ಗಚ್ಛತೀತಿ। ತರತೀತಿ ಸಾಮಾನ್ಯಪ್ರತೀತೇರ್ಬ್ರಹ್ಮ ತೀರ್ತ್ವೇದಂ ಗಚ್ಛತೀತಿ ವಿಶೇಷಾನುಕ್ತೇಃ 'ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಬ್ರಹ್ಮ ಸಂಪದ್ಯತೇ' ಇತಿ ವಿಶೇಷೋಕ್ತೇಶ್ಚೈತಂ ಸೇತುಂ ಪ್ರತ್ಯನ್ಯತ್ತೀರ್ತ್ವೇತ್ಯನ್ಯಥೋಪಪತ್ತೇಃ ॥ ೧ ॥**

**ಭಾವಾರ್ಥ—**'ಏತಂ ಸೇತುಂ ತೀರ್ತ್ವಾ' ಎಂಬ ಶ್ರುತಿಯಲ್ಲಿ ಅತಿಕ್ರಮಣವನ್ನು ಹೇಳಿರುವುದರಿಂದ ಮುಕ್ತನು ಪರಬ್ರಹ್ಮನನ್ನು ದಾಟಿ ಹೋಗುತ್ತಾನೆ ಎಂಬುದು ಸರಿಯಲ್ಲ. ಏಕೆಂದರೆ ಶ್ರುತಿಯಲ್ಲಿ 'ತರತಿ' ಎಂಬುದಾಗಿ ಸಾಮಾನ್ಯವಾಗಿ ಪ್ರತೀತವಾಗುತ್ತಿದೆ. 'ಬ್ರಹ್ಮನನ್ನು ದಾಟಿ ಇದನ್ನು ಹೊಂದುತ್ತಾನೆ' ಎಂದು ವಿಶೇಷವಾದ ಗಮ್ಯವನ್ನು ಹೇಳದೇ ಇರುವುದರಿಂದ. 'ಅಮಂಗಲವಾದ ಭಯಂಕರವಾದ ಈ ಸಂಸಾರನದಿಯನ್ನು ದಾಟಿ ಜಗದ್ಧಾರಕನಾದ ಬ್ರಹ್ಮನನ್ನು ಹೊಂದಿ ತನಗೆ ಮೋಕ್ಷಪ್ರದನಾದ ಈ ಬ್ರಹ್ಮನೊಂದಿಗೇ ಸಾಮಾನ್ಯವಾದ ವಿಷಯಗಳಿಂದ ಉಂಟಾದ ಆನಂದವನ್ನು ಹೊಂದುತ್ತಾನೆ. ಪ್ರಕೃಷ್ಟವಾದ ವಿಷಯಗಳಿಂದ ಉಂಟಾಗುವ ಆನಂದವನ್ನು ಹೊಂದುತ್ತಾನೆ. ಸ್ವರೂಪ ಸುಖವನ್ನು

ಅನುಭವಿಸುತ್ತಾನೆ' ಎಂಬ ವಿಶೇಷಶ್ರುತಿಯಿರುವುದರಿಂದ 'ಈ ಪರಬ್ರಹ್ಮನನ್ನು ಹೊಂದಲು ಸಂಸಾರವನ್ನು ದಾಟಿ' ಎಂಬ ಅರ್ಥವನ್ನು ಮಾಡಲು ಬರುತ್ತದೆ.

**ವಿವರಣೆ—** 'ದಾಟುತ್ತಾನೆ' ಎಂದು ಸಾಮಾನ್ಯವಾಗಿ ಹೇಳಲಾಗಿದೆಯೇ ಹೊರತು ಯಾವುದನ್ನು ದಾಟುತ್ತಾನೆ ಎಂದು ವಿಶೇಷವಾಗಿ ಹೇಳಿಲ್ಲ. ಆದರೆ 'ಏತಂ ಸೇತುಮಾಪ್ಯ, ಏತೇನ ಸೇತುನೈವ' ಎಂಬ ಮೌದ್ಗಲ್ಯಶ್ರುತಿಯಲ್ಲಿ ಪರಬ್ರಹ್ಮನನ್ನು ಹೊಂದಿ ಅವನಿಂದಲೇ ಸಂತೋಷ ಪಡುತ್ತಾನೆ ಎಂದು ವಿಶೇಷವಾಗಿ ಹೇಳಿರುವುದರಿಂದ ಅದಕ್ಕನುಸಾರವಾಗಿ 'ಏತಂ ಸೇತುಂ ತೀರ್ತ್ವಾ' ಎನ್ನುವುದಕ್ಕೆ 'ಏತಂ ಸೇತುಮುದ್ದಿಶ್ಯ' ಈ ಬ್ರಹ್ಮನನ್ನು ಪಡೆಯುವ ಉದ್ದೇಶದಿಂದ ಸಂಸಾರವನ್ನು ದಾಟಿ ಎಂದು ಅರ್ಥವನ್ನು ಮಾಡಬೇಕು ಎಂಬುದು ಸಿದ್ಧಾಂತ.

**ಸೂತ್ರಾರ್ಥ :**

### ಓಂ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ

ಸಂಪದ್ಯ=ಬ್ರಹ್ಮಜ್ಞಾನಿಯು ಪರಬ್ರಹ್ಮನನ್ನು ಹೊಂದಿ ಅವಿಹಾಯ= ಪರಬ್ರಹ್ಮನನ್ನು ಅತಿಕ್ರಮಿಸದೆ ಸ್ವೇನ=ಸ್ವರೂಪದಿಂದಲೇ ಇರುವವನಾಗಿ ಭೋಗ ವನ್ನು ಅನುಭವಿಸುವನು. 'ಏತಂ ಸೇತುಂ ತೀರ್ತ್ವಾ' ಎಂಬ ಶ್ರುತಿಯ ವಿರೋಧವು ಬರುವುದು ಎಂದರೆ, ಶಬ್ದಾತ್='ಇಮಾಂ ಘೋರಾಮಶಿವಾಂ' ಎಂಬ ವಿಶೇಷ ಶ್ರುತಿಯಿರುವುದರಿಂದ ವಿರೋಧವು ಪರಿಹಾರವಾಗುತ್ತದೆ.

## ಮುಕ್ತಾಧಿಕರಣ (4-4-2)

ಓಂ ಮುಕ್ತಃ ಪ್ರತಿಜ್ಞಾನಾತ್ ಓಂ ಎಂಬ ಒಂದೇ ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನಾದವನು ವಿಷಯ. ಅಸಾಧಾರಣಲಿಂಗಗಳನ್ನು ಹೇಳ ದಿರುವುದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಕ್ರೀಡಾದಿಗಳನ್ನು ಮುಕ್ತ-ಅಮುಕ್ತ ರಿಬ್ಬರಿಗೂ ಹೇಳಬಹು ದಾದ್ದರಿಂದ ಸಂಶಯ ಬರುತ್ತದೆ- ಪೂರ್ವೋಕ್ತ ಶ್ರುತಿಯಲ್ಲಿ ಪ್ರತಿಪಾದ್ಯನಾದವನು ಮುಕ್ತನೋ? ಅಮುಕ್ತನೋ? ಎಂದು.

**ಪೂರ್ವಪಕ್ಷ :** 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ'

(ಮುಕ್ತನು ಮೋಕ್ಷದಲ್ಲಿ ತಿನ್ನುತ್ತಾ, ಆಡುತ್ತಾ ಸ್ತ್ರೀಯರೊಂದಿಗೆ ರಮಿಸುತ್ತಾ ಸಂಚರಿಸುತ್ತಾನೆ) ಎಂಬ ಶ್ರುತಿಯಲ್ಲಿ ಕ್ರೀಡಾದಿಕ್ರಿಯೆಯು ಶ್ರುತವಾಗಿದೆ. ಮುಕ್ತನು ಕೃತಕೃತ್ಯನಾದ್ದರಿಂದ ಅವನಿಗೆ ಕ್ರೀಡೆಯು ಯುಕ್ತವಲ್ಲ. ಆದ್ದರಿಂದ ಅಮುಕ್ತನಿಗೇ ಎನ್ನಬೇಕು. ಅಮುಕ್ತನಿಗೂ ಇಂತಹ ಕ್ರೀಡೆಯು ಅಸಂಭಾವಿತವೆನ್ನಬಾರದು. ಬೇರೆ ಸಮಯದಲ್ಲಿ ಅಸಂಭಾವಿತವಾಗಿದ್ದರೂ ಪರಮಾತ್ಮನನ್ನು ಹೊಂದಿದ ನಂತರ ಸಂಭಾವಿತವಾಗುತ್ತದೆ. ಆದ್ದರಿಂದ ಇದು ಅಮುಕ್ತನ ಪ್ರಕರಣವಾಗಿದೆ. 'ಸ ತತ್ರ ಪರ್ಯೇತಿ' ಎಂಬ ಶ್ರುತಿಯಲ್ಲಿ ಪ್ರತಿಪಾದ್ಯನು ಅಮುಕ್ತನೇ ಆಗಿದ್ದಾನೆ. ಆದ್ದರಿಂದ ಮುಕ್ತನಿಗೆ ಭೋಗವಿಲ್ಲ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಕೃತಿ' (ಕ್ರಿಯೆ) ಎಂಬುದು. ಇದನ್ನು ಮತ್ತು 'ಪ್ರತಿಭಾನ' (ತೋರುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಕೃತಿಮತ್ತ್ವಾದಮುಕ್ತ ಏವೋಚ್ಯತೇ । 'ಸ ತತ್ರ ಪರ್ಯೇತಿ' ಇತ್ಯಾದೌ 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಇತಿ ಮುಕ್ತಸ್ಯ ಸ್ಪಷ್ಟಂ ಪ್ರತಿಭಾತತ್ವಾಚ್ಛ್ರುತೌ । 'ಸ ತತ್ರ ಪರ್ಯೇತೀ'ತಿ ಶ್ರುತ್ಯೈಕ್ಯಪ್ರತೀತೇಶ್ಚ । ಏವಂಭೂತಸ್ಯಾಪಿ ಪ್ರಕರಣತ್ವಂ ಪರಿಕಲ್ಪ್ಯ ಶ್ರುತಿಬಾಧಾಂಗೀಕಾರೇ ಸಾ ಶ್ರುತಿರಪ್ಯೇವಂ ವಿಭಜ್ಯ ಕಿಂ ಯೋಜಯಿತುಂ ನ ಶಕ್ಯಾ' ಇತಿ ಶ್ರುತೇರೇವಾಭಾವಪ್ರಸಂಗಃ । 'ಸತ್ಯಂ ಜ್ಞಾನಮ್' ಇತ್ಯಾದಾವಪಿ ಸತ್ಯಮಿತ್ಯಸ್ಯಾನ್ನಮಿತ್ಯನೇನಾನ್ವಯ ಇತ್ಯಾದಿಪ್ರಸಂಗಾತ್ ॥ ೨ ॥**

**ಭಾವಾರ್ಥ**—ಕೃತಿಯುಳ್ಳವನಾದ್ದರಿಂದ 'ಸ ತತ್ರ ಪರ್ಯೇತಿ' ಎಂಬ ಶ್ರುತಿಯಲ್ಲಿ ಅಮುಕ್ತನೇ ಉಕ್ತನಾಗುತ್ತಾನೆ ಎಂಬ ಪೂರ್ವಪಕ್ಷವು ಸರಿಯಲ್ಲ. 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬುದಾಗಿ ಶ್ರುತಿಯಲ್ಲಿ ಮುಕ್ತನು ಸ್ಪಷ್ಟವಾಗಿ ತೋರುತ್ತಿದ್ದಾನೆ. ಮತ್ತು 'ಪರಂ ಜ್ಯೋತಿಃ ಸ್ವೇನರೂಪೇಣಾಭಿನಿಷ್ಪದ್ಯತೇ' ಎಂಬುದಕ್ಕೆ 'ಸ ತತ್ರ ಪರ್ಯೇತಿ' ಎಂಬ ಶ್ರುತಿಯೊಂದಿಗೆ ಏಕವಿಷಯತ್ವವು ತೋರುತ್ತಿದೆ. ಹೀಗೆ ಏಕವಾಕ್ಯವಾಗಿ ತೋರುತ್ತಿರುವುದನ್ನು ಭಿನ್ನಪ್ರಕರಣವೆಂದು ಅಂಗೀಕರಿಸಿ ಶ್ರುತಿಗೆ

ಬಾಧವನ್ನು ಹೇಳುವುದಾದರೆ (ಮುಕ್ತನನ್ನು ಪ್ರತಿಪಾದಿಸುವುದಿಲ್ಲವೆಂದು ಹೇಳುವುದಾದರೆ) 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯನ್ನೂ ವಿಭಾಗಿಸಿಕೊಂಡು ಬೇರೆ ರೀತಿ ಯೋಜನೆ ಮಾಡಲು ಬರುವುದಿಲ್ಲವೇನು? ಹೀಗಾಗುವುದಾದರೆ ಯಾವ ಶ್ರುತಿಯೂ ಏಕವಾಕ್ಯವಾಗಿಲ್ಲವೆಂದು ಹೇಳಬೇಕಾಗುವುದು. (ದೂರಾನ್ವಯವನ್ನು ಮಾಡುವುದಾದರೆ) 'ಸತ್ಯಂ ಜ್ಞಾನಂ' ಮುಂತಾದ ಕಡೆಗಳಲ್ಲಿಯೂ 'ಸತ್ಯಂ' ಎಂಬುದಕ್ಕೆ ಅನ್ನಪದದಿಂದ ಅನ್ವಯವು ಬರಬೇಕಾದೀತು ಎಂಬ ಆಪಾದನೆಯು ಬರುತ್ತದೆ.

**ವಿವರಣೆ—** 'ಸ್ವೇನ ರೂಪೇಣಾಭಿನಿಷ್ಪದ್ಯತೇ' (ಶ್ರೇಷ್ಠಪ್ರಕಾಶ ರೂಪವಾದ ಪರಮಾತ್ಮನನ್ನು ಸಮೀಪಿಸಿ ತನ್ನ ನಿಜರೂಪದಿಂದ ಸಾಧಕನು ಅಭಿವ್ಯಕ್ತನಾಗುತ್ತಾನೆ) ಎಂಬುದಾಗಿ ಶ್ರುತಿಯಲ್ಲಿ ಸ್ವರೂಪಾವಿರ್ಭಾವವನ್ನು ಹೇಳಿದ್ದರಿಂದ ಮುಕ್ತನೇ ತೋರುತ್ತಾನೆ. ಹೊರತು ಅಮುಕ್ತನಲ್ಲ ಎಂದರ್ಥ.

'ಸ ಏಷ ಸಂಪ್ರಸೂತೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯಲ್ಲಿ ಸ್ವರೂಪಾಭಿವ್ಯಕ್ತಿಯನ್ನು ಹೇಳಿರುವುದು ನಿರ್ಗುಣೋಪಾಸಕನಿಗೆ. 'ಸ ತತ್ರ ಪರ್ಯೇತಿ' ಎಂಬಲ್ಲಿ ಭೋಗವನ್ನು ಹೇಳಿರುವುದು ದಹರವಿದ್ಯೋಪಾಸಕನಾದ ಅಮುಕ್ತನಿಗೆ. ಹೀಗೆ ಇವೆರಡೂ ಭಿನ್ನಪ್ರಕರಣಗಳಾಗಿವೆ. ಆದ್ದರಿಂದ 'ಸ ತತ್ರ ಪರ್ಯೇತಿ' ಎಂಬಲ್ಲಿ ಮುಕ್ತನೇ ಸ್ಪಷ್ಟವಾಗಿ ತೋರುತ್ತಾನೆ ಎಂದು ಹೇಗೆ ಹೇಳುವುದು? ಎಂಬ ಆಕ್ಷೇಪ ಸರಿಯಲ್ಲ. 'ಸ ತತ್ರ ಪರ್ಯೇತಿ' ಎಂಬ ಶ್ರುತಿಗೆ 'ಪರಂ ಜ್ಯೋತಿಃ' ಎಂಬ ಶ್ರುತಿಯೊಂದಿಗೆ ಏಕವಿಷಯತ್ವವು ತೋರುತ್ತದೆ. ಹೇಗೆಂದರೆ– 'ಸ್ವೇನರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ' ಎಂಬುದಾಗಿ ಶ್ರುತಿಯ ಆನುಪೂರ್ವಿ ಇದೆ. ಇಲ್ಲಿ 'ಸಃ' ಎಂಬ ತಚ್ಛಬ್ದದಿಂದ ಸ್ವರೂಪಾವಿರ್ಭಾವವುಳ್ಳ ಮುಕ್ತನನ್ನೇ ಸ್ವೀಕಾರ(ಪರಾಮರ್ಶ) ಮಾಡುವುದು ಯುಕ್ತ. ಹೊರತಾಗಿ ದೂರದಲ್ಲಿ ಉಕ್ತನಾದ ದಹರವಿದ್ಯಾ ಉಪಾಸಕನನ್ನು ಸ್ವೀಕರಿಸುವುದು ಸರಿಯಲ್ಲ. ಆದ್ದರಿಂದ 'ಸ ತತ್ರ ಪರ್ಯೇತಿ' ಎಂಬಲ್ಲಿ ಮುಕ್ತನೇ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಒಂದೇ ವಿಷಯವನ್ನು ಪ್ರತಿಪಾದನೆ ಮಾಡುವ 'ಸ್ವೇನ ರೂಪೇಣಾಭಿನಿಷ್ಪದ್ಯತೇ' ಮತ್ತು 'ಸ ತತ್ರ

ಪರ್ಯೇತಿ' ಎಂಬ ವಾಕ್ಯಗಳಿಗೆ ಪೂರ್ವಪಕ್ಷಿಯು ವಿಭಾಗಮಾಡಿ ಭಿನ್ನ ವಿಷಯವನ್ನು ಪ್ರತಿಪಾದನೆ ಮಾಡುತ್ತದೆ ಎಂದು ಹೇಳುವುದಾದರೆ 'ಸ ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ವಾಕ್ಯಕ್ಕೂ ಭಿನ್ನವಿಷಯತ್ವವನ್ನು ಹೇಳಲು ಬರುತ್ತದೆ. ಹೇಗೆಂದರೆ 'ಸ ಏಷ ಸಂಪ್ರಸಾದೋ ಜೀವಃ ಅಸ್ಮಾಚ್ಛರೀರಾತ್ ಸಮುತ್ಥಾಯ ಪರಂ ಜ್ಯೋತಿಃ ನಿರ್ಗುಣಂ ಬ್ರಹ್ಮೈವ ಭವತಿ' (ಸಂಪ್ರಸಾದನು (ಜೀವನು) ಈ ಚರಮಶರೀರವನ್ನು ಬಿಟ್ಟು ಹೊರಟು ನಿರ್ಗುಣಬ್ರಹ್ಮನಾಗುತ್ತಾನೆ) ಎಂದು, 'ಯಸ್ತೂಪಸಂಪದ್ಯತೇ ಸಗುಣೋಪಸತ್ತಿಂ ಈಶ್ವರಾಖ್ಯೇನ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ತೂತ್ತಮಃ ಪುರುಷಃ ಈಶ್ವರ ಇತ್ಯುಚ್ಯತೇ' (ಯಾವನು ಸಗುಣೋಪಾಸನೆಯನ್ನು ಮಾಡುವನೋ ಆ ಜೀವನು ತನ್ನ ಜ್ಞಾನಾನಂದಮಯ ವಾದ ಸ್ವರೂಪದಿಂದ ಪ್ರಕಟನಾಗುತ್ತಾನೆ.) ಎಂದೂ ವಾಕ್ಯವನ್ನು ವಿಭಾಗಮಾಡಿ ಸಗುಣ ನಿರ್ಗುಣಬ್ರಹ್ಮ ಪರವಾಗಿ ಅರ್ಥಮಾಡಲು ಬರುವುದರಿಂದ ಎಲ್ಲಿಯೂ ಪರವಿಷಯವನ್ನು ಪ್ರತಿಪಾದನೆ ಮಾಡುವ ವಾಕ್ಯವೇ ಇರದೇ ಹೋಗ ಬೇಕಾಗುವುದು. (ವಾಕ್ಯಾರ್ಥಮುಕ್ತಾವಲೀ)

'ಸ ತತ್ರ ಪರ್ಯೇತಿ' ಎಂಬಲ್ಲಿರುವ 'ಸಃ' ಎಂಬ ತಚ್ಛಬ್ದದಿಂದ ಸನ್ನಿಹಿತವಾದ ಮುಕ್ತನನ್ನು ಬಿಟ್ಟು ದೂರದಲ್ಲಿ ಉಕ್ತನಾದ ದಹರವಿದ್ಯೋಪಾಸಕನನ್ನು ಸ್ವೀಕಾರ ಮಾಡುವುದಾದರೆ ಅತಿಪ್ರಸಂಗವನ್ನು 'ಸತ್ಯಂ ಜ್ಞಾನಮಿತ್ಯಾದಾವಪಿ' ಎಂಬ ಮೂಲದಿಂದ ಹೇಳುತ್ತಿದ್ದಾರೆ. ಅದು ಹೇಗೆಂದರೆ— 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವಲ್ಲಿ 'ಸತ್ಯಂ' ಎನ್ನುವುದಕ್ಕೆ 'ಯೇಽನ್ನಂ ಬ್ರಹ್ಮೋಪಾಸತೇ' ಎಂದು ಹೇಳಿದ 'ಅನ್ನಂ' ಎನ್ನುವುದರಿಂದ ಏಕಾರ್ಥವನ್ನು ಪ್ರತಿಪಾದಿಸುವುದರಿಂದ ಸಾಮಾನಾಧಿಕರಣ್ಯರೂಪವಾದ ಅನ್ವಯವು ಬರಬೇಕಾಗುವುದು. ಅದರಂತೆ 'ಜ್ಞಾನಂ' ಎಂಬುದಕ್ಕೆ 'ಮನಃ' ಎಂಬುದರಿಂದಲೂ 'ಅನಂತಂ' ಎಂಬುದಕ್ಕೆ 'ಆನಂದಂ' ಎನ್ನುವುದರಿಂದಲೂ ಏಕಾರ್ಥಪ್ರತಿಪಾದಕತ್ವ ಬರಬೇಕಾದೀತು. ಇದು ಪರರಿಗೆ ಅಭಿಪ್ರೇತವಾಗಿಲ್ಲ. ಅವರು 'ಸತ್ಯಂ ಜ್ಞಾನಮನಂತಂ' ಎಂಬ ವಾಕ್ಯವು ಅಖಂಡಾರ್ಥಪ್ರತಿಪಾದಕವಾದ್ದರಿಂದ ಬ್ರಹ್ಮನನ್ನು ಪ್ರತಿಪಾದಿಸುತ್ತದೆ. ಅನ್ನಮಯಾದಿವಾಕ್ಯಗಳು ಕೋಶಗಳನ್ನು ಪ್ರತಿಪಾದಿಸುತ್ತವೆ. ಇವೆರಡೂ

ಭಿನ್ನಪ್ರಕರಣಗಳು ಎಂದು ಅಂಗೀಕರಿಸುವರು. ಅವರ ಮತವನ್ನು ಅನುಸರಿಸಿ ಅವರಿಗೆ ಏಕವಾಕ್ಯತ್ವವು ಬರಬೇಕಾದೀತು ಎಂಬ ಆಪಾದನೆ ಸರಿಯಾಗಿದೆ. ವಸ್ತುತಃ ದ್ವೈತಸಿದ್ಧಾಂತದಲ್ಲಿ ಇವೆರಡು ಭಿನ್ನಪ್ರಕರಣಗಳಲ್ಲ ಎಂದು 'ಮಾಂತ್ರವರ್ಣಿಕ ಮೇವ ಚ ಗೀಯತೇ' ('ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬಲ್ಲಿ ಹೇಳಲ್ಪಟ್ಟ ಬ್ರಹ್ಮನ ಲಕ್ಷಣವನ್ನೇ ಅನ್ನಮಯಾದಿ ಪ್ರಕರಣದಲ್ಲಿ ವಿವರಿಸಲಾಗುತ್ತದೆ) ಎಂಬಲ್ಲಿ ಪ್ರತಿಪಾದಿಸಲಾಗಿದೆ.

**ಸೂತ್ರಾರ್ಥ :**

### ಓಂ ಮುಕ್ತಃ ಪ್ರತಿಜ್ಞಾನಾತ್ ಓಂ

'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟವನು ಮುಕ್ತಃ=ಮುಕ್ತನೇ ಆಗಿದ್ದಾನೆ. ಏಕೆಂದರೆ ಪ್ರತಿಜ್ಞಾನಾತ್= 'ಅಹರಹರೇನಮನುಪ್ರವಿಶತಿ' ಎಂಬ ಶ್ರುತಿಯಲ್ಲಿ ಮುಕ್ತನಿಗೆ ಭೋಗವನ್ನು ಹೇಳಿರುವುದರಿಂದ.

## ಆತ್ಮಾಧಿಕರಣ (4-4-3)

ಓಂ ಆತ್ಮಾ ಪ್ರಕರಣಾತ್ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿ ಕರಣದಲ್ಲಿ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಜ್ಯೋತಿಯು ವಿಷಯ. ಜ್ಯೋತಿಶ್ಶಬ್ದದ ಪ್ರಯೋಗ ವಿಷ್ಣು ಸೂರ್ಯ ಇಬ್ಬರಲ್ಲಿಯೂ ಕಂಡಿರುವುದರಿಂದ ಸಂಶಯ ಬರುತ್ತದೆ. ಜ್ಯೋತಿಃಶಬ್ದವಾಚ್ಯನಾದವನು ವಿಷ್ಣುವೋ? ಸೂರ್ಯನೋ? ಎಂದು.

**ಪೂರ್ವಪಕ್ಷ :** 'ಪರಂ ಜ್ಯೋತಿಃ' ಎಂಬಲ್ಲಿ ಉಕ್ತವಾದ ಜ್ಯೋತಿ ಎಂದರೆ ವಿಷ್ಣುವಲ್ಲ. 'ಸೂರ್ಯಮಗನ್ಮ ಜ್ಯೋತಿಃ' ಎಂಬಿವೇ ಮೊದಲಾದ ವಾಕ್ಯಗಳಲ್ಲಿ ಸೂರ್ಯನಲ್ಲಿ ಜ್ಯೋತಿಶ್ಶಬ್ದದ ಪ್ರಯೋಗವೂ ಕಂಡಿದೆ. ಆದ್ದರಿಂದ ಇಲ್ಲಿಯೂ ಜ್ಯೋತಿಶಬ್ದ ವಾಚ್ಯನಾದವನು ಸೂರ್ಯನೇ. ಹೀಗೆ ಸೂರ್ಯನನ್ನು ಅಂಗೀಕರಿ ಸಿದರೆ ಏಕಾರ್ಥತಾಲಾಭ ಎಂಬ ಪ್ರಯೋಜನವೂ ಸಿದ್ಧಿಸುತ್ತದೆ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ '**ಅರ್ಥಲಾಭ**' (ಪ್ರಯೋಜನದ ಲಾಭ) ಎಂಬುದು. ಇದನ್ನು ಮತ್ತು 'ಉಕ್ತಿ' ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪರಂಜ್ಯೋತಿಃಶಬ್ದೇನಾದಿತ್ಯಜ್ಯೋತಿರಂಗೀಕಾರೇ**

**'ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ' ಇತ್ಯಾದಿ-ನೈಕಾರ್ಥತೇತಿ ಪ್ರಯೋಜನಮ್ ।**

**'ಅಥ ಕಿಮುಚ್ಯತೇ ಪರಂಜ್ಯೋತಿರಿತ್ಯಾತ್ಮೈವ ಪರಂಜ್ಯೋತಿಃ ಸ ಹಿ ಪರಮೋ ದ್ಯೋತತೇ ಜೀವಾಚ್ಚಾಜೀವಾಚ್ಚ ತಸ್ಮಾದಾಹುಃ ಪರಂ ಜ್ಯೋತಿರಿತಿ । ತಮೇಷ ಜೀವೋಽಭಿಸಂಪದ್ಯ ಸ್ವೇನ ರೂಪೇಣಾಭಿ-ನಿಷ್ಪದ್ಯತೇ' ಇತಿ ತಸ್ಯೈವ ಪರಂಜ್ಯೋತಿಷ್ಟ್ವೋಕ್ತೇಃ । ಸಾವಕಾಶ-ಲಿಂಗಾನ್ನಿರವಕಾಶಶ್ರುತೇರೇವ ಬಲವತ್ತ್ವಾತ್ ॥ ೩ ॥**

**ಭಾವಾರ್ಥ**—'ಪರಂ ಜ್ಯೋತಿಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಜ್ಯೋತಿಶ್ಶಬ್ದದಿಂದ ಸೂರ್ಯನೆಂಬ ಜ್ಯೋತಿಸ್ಸನ್ನು ಸ್ವೀಕರಿಸಿದರೆ, 'ಸರ್ಪವು ತನ್ನ ಪೊರೆಯನ್ನು ಬಿಡುವಂತೆ ಜ್ಞಾನಿಯು ಸೂರ್ಯನನ್ನು ಹೊಂದಿ ಪಾಪದಿಂದ ಮುಕ್ತನಾಗುತ್ತಾನೆ' ಇತ್ಯಾದಿ ವಾಕ್ಯಗಳಿಂದ ಏಕಾರ್ಥತ್ವ ಎಂಬ ಪ್ರಯೋಜನವು ಲಭಿಸುತ್ತದೆ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ 'ಪರಂಜ್ಯೋತಿಃ ಎಂಬ ಶಬ್ದದಿಂದ ಯಾವುದು ಉಕ್ತವಾಗುತ್ತದೆ? ಪರಮಾತ್ಮನೇ ಉಕ್ತನಾಗುತ್ತಾನೆ. ಏಕೆಂದರೆ ಆ ಪರಮಾತ್ಮನೇ ಜೀವಾತ್=ಚತುರ್ಮುಖ, ರುದ್ರಾದಿಗಿಂತಲೂ ಅಜೀವಾತ್= ಲಕ್ಷ್ಮೀದೇವಿಗಿಂತಲೂ, ಜಡಪ್ರಕೃತಿಗಿಂತಲೂ ಚೆನ್ನಾಗಿ ಪ್ರಕಾಶಿಸುತ್ತಾನೆ. ಆದ್ದರಿಂದ ಆ ಪರಮಾತ್ಮನನ್ನು ಪರಂಜ್ಯೋತಿ ಎನ್ನುವರು. ಅವನನ್ನು ಹೊಂದಿಯೇ ಜೀವನು ತನ್ನ ಜ್ಞಾನಾಂದಾದಿ ಸ್ವರೂಪವನ್ನು ಪಡೆಯುತ್ತಾನೆ' ಎಂಬುದಾಗಿ ಆ ಪರಮಾತ್ಮನಿಗೇ ಪರಂಜ್ಯೋತಿಷ್ಟ್ವವು ಉಕ್ತವಾಗಿದೆ. ಸಾವಕಾಶವಾದ ಸಮಾಖ್ಯಾರೂಪವಾದ ಲಿಂಗಕ್ಕಿಂತ ನಿರವಕಾಶವಾದ ಶ್ರುತಿಯೇ ಪ್ರಬಲವಾಗುತ್ತದೆ.

**ವಿವರಣೆ**— 'ಆತ್ಮೈವ ಹಿ ಪರಂಜ್ಯೋತಿಃ' ಎಂಬ ನಿರವಕಾಶವಾದ

ಉಕ್ತಿಯಿರುವುದರಿಂದ ಪರಂಜ್ಯೋತಿ ಪದದಿಂದ ಪರಮಾತ್ಮನನ್ನೇ ಗ್ರಹಿಸಬೇಕು ಎಂಬುದು ಸಿದ್ಧಾಂತ.

ಜ್ಯೋತಿಶ್ಶಬ್ದದಿಂದ ಸೂರ್ಯನೆಂಬ ಜ್ಯೋತಿಸ್ಸನ್ನು ಪರಿಗ್ರಹಿಸಿದರೆ 'ಸ ತೇಜಸಿ ಸೂರ್ಯೇ ಸಂಪನ್ನೋ ಭವತಿ...' ಎಂಬ ಶ್ರುತಿಯೊಂದಿಗೆ ಏಕಾರ್ಥತ್ವವು ಕೂಡುತ್ತದೆ ಎಂಬ ಕಾರಣದಿಂದ ಸಮಾಖ್ಯೆಯು ಉಪಪನ್ನವಾಗುತ್ತದೆ ಎಂಬ ಪೂರ್ವಪಕ್ಷಿಯ ಆಕ್ಷೇಪವೂ ಸರಿಯಲ್ಲ. ಏಕೆಂದರೆ, 'ಶ್ರುತಿಲಿಂಗವಾಕ್ಯಪ್ರಕರಣ ಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಮರ್ಥವಿಪ್ರಕರ್ಷಾತ್' ಎಂಬ ನ್ಯಾಯದಂತೆ ಶ್ರುತಿಗಿಂತಲೂ ಸಮಾಖ್ಯೆಯು ದುರ್ಬಲವಾಗಿದೆ. ಮತ್ತು ಸಮಾಖ್ಯೆಯು ಸಾವಕಾಶವಾಗಿದೆ. ಶ್ರುತಿಯು 'ಆತ್ಮೈವ ಪರಂಜ್ಯೋತಿಃ' ಎಂದು ಅವಧಾರಣಸಹಿತವಾದ್ದರಿಂದ ನಿರವಕಾಶವೂ ಆಗಿದೆ. ಆದ್ದರಿಂದ ಪ್ರಬಲವಾಗಿದೆ.

**ಸೂತ್ರಾರ್ಥ**

### ಓಂ ಆತ್ಮಾ ಪ್ರಕರಣಾತ್ ಓಂ

'ಪರಂಜ್ಯೋತಿರುಪಸಂಪದ್ಯ' ಎಂಬಲ್ಲಿ ಶ್ರುತನಾದ ಜ್ಯೋತಿಯು ಆತ್ಮಾ= ಪರಮಾತ್ಮನೇ ಹೊರತು ಸೂರ್ಯನಲ್ಲ. ಏಕೆಂದರೆ ಪ್ರಕರಣಾತ್=ಪರಮಾತ್ಮನ ಪ್ರಕರಣವಾದ್ದರಿಂದ.

## ಅವಿಭಾಗಾಧಿಕರಣ (4-4-4)

ಓಂ ಅವಿಭಾಗೇನ ದೃಷ್ಟತ್ವಾತ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕಾರಣಕ್ಕೆ ಮುಕ್ತರ ಭೋಗವು ವಿಷಯ. ಪರಮಾತ್ಮನು ಸರ್ವಭೋಕ್ತೃ ವಾದ್ದರಿಂದ ಅವನಿಂದ ಭೋಗಿಸಲ್ಪಟ್ಟ ಭೋಗಗಳನ್ನೇ ಅನುಭವಿಸುವರೋ? ಪುರುಷಾರ್ಥ ರೂಪವಾದ ಮೋಕ್ಷದಲ್ಲಿ ಸಕಲಭೋಗಗಳೂ ಸಿಗಬಹುದಾದ್ದರಿಂದ ಪರಮಾತ್ಮನಿಂದ ಭೋಗಿಸಲ್ಪಡದ ಭೋಗಗಳನ್ನೂ ಅನುಭವಿಸುವರೋ? ಎಂದು ಸಂದೇಹ.

**ಪೂರ್ವಪಕ್ಷ :** ಪುರುಷಾರ್ಥವಾದ ಮೋಕ್ಷದಲ್ಲಿ ಸಿಗದಿರುವ ಭೋಗವೇ ಇಲ್ಲ.

ಆದ್ದರಿಂದ ಪರಮಾತ್ಮನಿಂದ ಭೋಗಿಸಲ್ಪಡದ ಭೋಗಗಳನ್ನು ಸಾಯುಜ್ಯಮುಕ್ತರು ಅನುಭವಿಸುವರು. ಪರಮಾತ್ಮನು ಯಾವಾಗಲೂ ಆನಂದಪೂರ್ಣ. ಕೆಲವೊಮ್ಮೆ ಅವನು ಭೋಗಮಾಡದಿರಬಹುದು. ಪರಮಾತ್ಮನು ಅನುಭವಿಸಿದ ಭೋಗವನ್ನೇ ಮುಕ್ತನು ಭೋಗಿಸುವನು ಎಂದರೆ ಮುಕ್ತನಿಗೆ ಭೋಗಿಸುವ ಇಚ್ಛೆ ಇದ್ದರೂ ಪರಮಾತ್ಮನು ಭೋಗಿಸದಿರುವಾಗ ಮುಕ್ತನಿಗೂ ಭೋಗವಿಲ್ಲದಂತಾಗುವುದು. ಇದರಿಂದ ಮೋಕ್ಷವು ಪುರುಷಾರ್ಥವಾಗದಿರಬೇಕಾಗುತ್ತದೆ. ಆದ್ದರಿಂದ ಪರಮಾತ್ಮನು ಭೋಗಿಸದ ಭೋಗವನ್ನು ಮುಕ್ತನು ಅನುಭವಿಸುವನು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಪರಾಗತಿ' (ಮೋಕ್ಷವು ಪರಮಗತಿ ಯಾಗಿದೆ.) ಎಂಬುದು. ಇದನ್ನು 'ಆಶ್ಚರ್ಯತಾ' ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪರಮಗತಿತ್ವಾದೀಶ್ವರಾಭುಕ್ತಾ ಅಪಿ ಭೋಗಾ ಮುಕ್ತೌ ಭವಂತಿ । ಈಶ್ವರಸ್ಯ ಸ್ವತ ಏವ ಪೂರ್ಣಾನಂದತ್ವಾದಭೋಗಸ್ಯಾಪಿ ಸಂಭವಾದಿತಿ ವಾಚ್ಯಮ್ ।**

**'ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ ಪೂರ್ಣಜ್ಞಾನಃ ಪೂರ್ಣಭಾಃ ಪೂರ್ಣಶಕ್ತಿಃ ।**

**'ಆಶ್ಚರ್ಯತ್ವಾದ್ ಭಗವಾನ್ ವಾಸುದೇವೋ ವಿರುದ್ಧಶಕ್ತಿರ್ನ ಚ ದೋಷಸ್ತ್ವೃಗೀಶಃ ॥'**

**ಇತ್ಯಾಶ್ಚರ್ಯತಯೈವ ಬ್ರಹ್ಮಣ ಉಭಯೋಕ್ತೇಃ । ಸಾವಕಾಶೋ-ಪಪತ್ತಿಮಾತ್ರಾನ್ನಿರವಕಾಶಶ್ರುತಿಯುಕ್ತೋಪಪತ್ತೇರೇವ ಬಲವತ್ತ್ವಾತ್ ॥ ೪ ॥**

**ಭಾವಾರ್ಥ**—ಮೋಕ್ಷವು ಪರಮಗತಿಯಾದ್ದರಿಂದ ಅಲ್ಲಿ ಈಶ್ವರನಿಂದ ಭೋಗಿಸಲ್ಪಡದ ಭೋಗಗಳೂ ಇರುತ್ತವೆ. ಈಶ್ವರನು ಆನಂದಪೂರ್ಣನಾದ್ದರಿಂದ

ಅವನಿಗೆ ಭೋಗವಿಲ್ಲದಿರುವಿಕೆಯೂ ಕೂಡುತ್ತದೆ ಎಂಬ ಪೂರ್ವಪಕ್ಷವು ಸರಿಯಲ್ಲ. ಏಕೆಂದರೆ, 'ಪರಮಾತ್ಮನು ಪೂರ್ಣಾನಂದವುಳ್ಳವನು, ಪೂರ್ಣಭೋಗವುಳ್ಳವನು, ಪೂರ್ಣಕರ್ತನು, ಪೂರ್ಣಜ್ಞಾನವುಳ್ಳವನು, ಪೂರ್ಣಪ್ರಕಾಶನು, ಪೂರ್ಣಶಕ್ತಿಯುಳ್ಳವನು, ಅವನು ಆಶ್ಚರ್ಯನಾದ್ದರಿಂದ ವಿರುದ್ಧವಾದ ಶಕ್ತಿಯುಳ್ಳವನು. ದೋಷದ ಸ್ಪರ್ಶವಿಲ್ಲದವನು' ಎಂದು ಆಶ್ಚರ್ಯನಾದ್ದರಿಂದಲೇ (ಪೂರ್ಣಾನಂದ, ಪೂರ್ಣಭೋಗಗಳನ್ನು) ಎರಡನ್ನೂ ಹೇಳಿದ್ದಾರೆ. ಸಾವಕಾಶವಾದ ಲಿಂಗಕ್ಕಿಂತಲೂ ನಿರವಕಾಶವಾದ ಶ್ರುತಿಸಹಿತ ಯುಕ್ತಿಯೇ ಪ್ರಬಲವಾಗುತ್ತದೆ.

**ವಿವರಣೆ**—ಬೇರೆಯವರಲ್ಲಿ ಇಲ್ಲದಿರುವ ವಿರುದ್ಧ ಧರ್ಮಗಳು ಭಗವಂತನಲ್ಲಿ ಇವೆ. ಆದ್ದರಿಂದ ಪೂರ್ಣಾನಂದವಿದ್ದರೂ ಪೂರ್ಣಭೋಗವು ಭಗವಂತನಲ್ಲಿ ಕೂಡುತ್ತವೆ. ಅವನಲ್ಲಿ ಭೋಗಾಭಾವಪ್ರಸಂಗವೇ ಇಲ್ಲದಿರುವುದರಿಂದ ಈಶ್ವರ ಭುಕ್ತಭೋಗಗಳನ್ನು ಮುಕ್ತರು ಭೋಗಿಸುತ್ತಾರೆ ಎಂಬುದು ಸಿದ್ಧಾಂತ.

ಮುಕ್ತಿಯು ಪರಮಗತಿಯಾದ್ದರಿಂದ ಈಶ್ವರನಿಂದ ಅಭುಕ್ತವಾದ ಭೋಗಗಳೂ ಅಲ್ಲಿ ಇರಬೇಕು ಎಂದು ಪರಮಗತಿತ್ವವೆಂಬ ಯುಕ್ತಿಯಿಂದ ಪೂರ್ವಪಕ್ಷವನ್ನು ಮಾಡಿದಾಗ ಆಶ್ಚರ್ಯತ್ವವೆಂಬ ಯುಕ್ತಿಯಿಂದಲೇ ಸಿದ್ಧಾಂತವನ್ನು ಮಾಡುವುದು ಹೇಗೆ ಸರಿ? ಎಂದರೆ ಪರಮಗತಿತ್ವವೆಂಬ ಯುಕ್ತಿಯು ಸಾವಕಾಶವಾಗಿದೆ. ಈಶ್ವರನಿಂದ ಅಭುಕ್ತವಾದ ಭೋಗಗಳನ್ನು ಭೋಗಿಸುವುದರಿಂದಲೇ ಮೋಕ್ಷವು ಪರಮಗತಿಯಾಗಬೇಕಿಲ್ಲ. ಪುನರಾವೃತ್ತಿರಹಿತವಾದ್ದರಿಂದಲೂ ಪರಮಗತಿ ಯಾಗಬಹುದಾದ್ದರಿಂದ ಸಾವಕಾಶವಾಗಿದೆ. ಆಶ್ಚರ್ಯತ್ವಲಿಂಗವಾದರೂ ನಿರವಕಾಶವಾಗಿದೆ. ಅಷ್ಟೇ ಅಲ್ಲ, ಶ್ರುತಿಯುಕ್ತವೂ ಆಗಿದೆ. ಆದ್ದರಿಂದ ಪ್ರಬಲವಾಗಿದೆ. ಇದರಿಂದ ಪೂರ್ಣಾನಂದವಿದ್ದರೂ ಪೂರ್ಣಭೋಗವಿರುವುದಕ್ಕೆ ಯಾವ ವಿರೋಧವಿಲ್ಲ.

**ಸೂತ್ರಾರ್ಥ :**

## ಓಂ ಅವಿಭಾಗೇನ ದೃಷ್ಟತ್ವಾತ್ ಓಂ

ಅವಿಭಾಗೇನ=ಪರಮಾತ್ಮನು ಅನುಭವಿಸಿದ ಭೋಗಗಳನ್ನೇ ವಿಭಾಗವಿಲ್ಲದೆ

ಕೆಲವನ್ನು ಮಾತ್ರ ಸಾಯುಜ್ಯಮುಕ್ತರು ಭೋಗಿಸುವರು. ಹೀಗೆ ದೃಷ್ಟತ್ವಾತ್= ವೇದದಲ್ಲಿ ಕಂಡಿರುವುದರಿಂದ.

## ಬ್ರಾಹ್ಮಾಧಿಕರಣ (ಚಿತಿಮಾತ್ರಾಧಿಕರಣ) (4-4-5)

ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಭೋಗವು ವಿಷಯ. ವಾದಿ ಪ್ರತಿವಾದಿಗಳಲ್ಲಿ ವಿವಾದವಿರುವುದರಿಂದ ಮುಕ್ತನಿಗೆ ಭೋಗವು ಯುಕ್ತವೋ? ಅಯುಕ್ತವೋ? ಎಂದು ಸಂದೇಹ.

ಭೋಗಕ್ಕೆ ಕಾರಣವಾದದ್ದು ದೇಹ. ಮುಕ್ತರು ಸಂಸಾರರಹಿತರಾದ್ದರಿಂದ ಅವರಿಗೆ ದೇಹವಿಲ್ಲ. ದೇಹವಿದೆ ಎಂದರೆ ಮುಕ್ತರಾಗಲು ಸಾಧ್ಯವಿಲ್ಲ. ಹೀಗೆ ದೇಹವಿಲ್ಲದಿರುವುದರಿಂದ ಭೋಗವು ಅಸಂಭಾವಿತ. ಆದ್ದರಿಂದ ಮೋಕ್ಷವು ಪುರುಷಾರ್ಥವಲ್ಲ ಎಂಬುದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ 'ಪಾರಗತಿ' (ಸಂಸಾರದ ಪಾರವನ್ನು ಹೊಂದಿರುವುದು) ಎಂಬುದು. ಇದನ್ನು ಮತ್ತು 'ಅಕೃತ್ರಿಮತ್ವ' (ಚಿದ್ರೂಪವಾದ ದೇಹವಿರುವುದು) ಎಂಬ ಸಿದ್ಧಾಂತ ಸಾಧಕವಾದ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚ ಪಾರಗತತ್ವಾನ್ಮುಕ್ತಸ್ಯ ಚಿನ್ಮಾತ್ರದೇಹೋಽಪಿ ನಾಸ್ತೀತಿ ವಾಚ್ಯಮ್ । ಅಕೃತ್ರಿಮತ್ವಾತ್ ತಸ್ಯ ದೇಹಸ್ಯಾಪ್ಯನಪಗಮಾತ್ ।**

**'ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ ಚಿನ್ಮಾತ್ರಾಣಿ ಕರಣಾನಿ ತೈರೀಶಾನುಗೃಹೀತೈರ್ಭೋಗಾನ್ ಭುಂಕ್ತೇ' ಇತಿ ಶ್ರುತೇಃ ॥ ೫ ॥**

**ಭಾವಾರ್ಥ**—ಮುಕ್ತನು ಸಂಸಾರದ ಪಾರವನ್ನು ತಲುಪಿದ್ದರಿಂದ ಅವನಿಗೆ ಚಿದ್ರೂಪ ದೇಹವೂ ಇಲ್ಲವಾದ್ದರಿಂದ ಭೋಗವು ಕೂಡುವುದಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಮುಕ್ತನ ದೇಹವು ಅಕೃತ್ರಿಮವಾಗಿದೆ. ಅದು ನಾಶವಾಗಿಲ್ಲ. 'ಮುಕ್ತರಿಗೆ ಚಿದ್ರೂಪವಾದ ದೇಹವಿರುತ್ತದೆ. ಇಂದ್ರಿಯಗಳೂ ಚಿದ್ರೂಪಗಳೇ. ಭಗವಂತನಿಂದ

ಅನುಗ್ರಹಿಸಲ್ಪಟ್ಟ ಅವುಗಳಿಂದ ಭೋಗಗಳನ್ನು ಅನುಭವಿಸುತ್ತಾನೆ' ಎಂಬ ಶ್ರುತಿಯಿರುವುದರಿಂದ.

**ವಿವರಣೆ—** ಕೃತ್ರಿಮ ದೇಹಗಳು ಮಾತ್ರ ಸಂಸಾರ ಆಪಾದಕಗಳಾಗಿವೆ. ಮುಕ್ತನು ಕೃತ್ರಿಮ ದೇಹಗಳನ್ನು ತೊರೆದಿದ್ದರೂ ಅಕೃತ್ರಿಮವಾದ ಚಿದ್ರೂಪವಾದ ದೇಹವಿದ್ದೇ ಇದೆ. ಆದರಿಂದಲೇ ಭೋಗವನ್ನು ಅನುಭವಿಸುತ್ತಾನೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

### ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ

ಚಿತಿಮಾತ್ರೇಣ=ಕೇವಲ ಜ್ಞಾನರೂಪವಾದ ದೇಹದಿಂದ ಮುಕ್ತನು ಭೋಗವನ್ನು ಅನುಭವಿಸುವವನು. ದೇಹವಿದ್ದರೂ ಸಂಸಾರಿಯಲ್ಲ. ಕಾರಣವೇನೆಂದರೆ ತದಾತ್ಮಕತ್ವಾತ್=ಜ್ಞಾನರೂಪ ದೇಹವು ಮುಕ್ತನ ಸ್ವರೂಪವೇ ಆಗಿರುವುದರಿಂದ. ಇತಿ=ಎಂದು ಔಡುಲೋಮಿಃ=ಔಡುಲೋಮಿ ಆಚಾರ್ಯರು ತಿಳಿಯುತ್ತಾರೆ.

ಈ ಸೂತ್ರವು ಈ ಅಧಿಕರಣದ ಎರಡನೆಯ ಸೂತ್ರವಾಗಿದ್ದರೂ ಪೂರ್ವಪಕ್ಷ-ಸಿದ್ಧಾಂತನ್ಯಾಯಗಳಿಗೆ ಸಂಬದ್ಧವಾದ್ದರಿಂದ ಇದರ ಅರ್ಥವನ್ನು ವಿವರಿಸಲಾಗಿದೆ.

## ಸಂಕಲ್ಪಾಧಿಕರಣ (4-4-6)

ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿಯೂ ಮುಕ್ತರ ಭೋಗವೇ ವಿಷಯ. ಇದು ಲೋಕದ ಭೋಗದಂತೆ ಪ್ರಯತ್ನಸಾಧ್ಯವಾದ ಸಾಧನದಿಂದ ಸಾಧ್ಯವೋ? ಅಥವಾ ಅಲೌಕಿಕವಾದ್ದರಿಂದ ಇಚ್ಛಾಮಾತ್ರದಿಂದ ಸಾಧ್ಯವೋ? ಎಂದು ಸಂದೇಹ.

ಈ ಅಧಿಕರಣದ ಪೂರ್ವಪಕ್ಷಯುಕ್ತಿ 'ತದೋಕಃ' (ಮೋಕ್ಷವು ಭಗವಂತನ ಮನೆಯಾಗಿದೆ) ಎಂಬುದು. ಇದನ್ನು ಮತ್ತು 'ಅಸ್ತದೋಷ' (ಭಗವಂತನ ಮಂದಿರ, ಮತ್ತು ಮುಕ್ತರು ದೋಷರಹಿತರು) ಎಂಬ ಸಿದ್ಧಾಂತಸಾಧಕವಾದ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಭಗವದೋಕಃಸ್ಥಿತತ್ವಾನ್ಮುಕ್ತಸ್ಯ ತಸ್ಯಾಪ್ಯೋಕಸ್ತ್ವಸಾಮ್ಯೇನ ತತ್ತದುಪಾಯಸಾಧ್ಯಭೋಗಸಾಧನತ್ವಂ ವಾಚ್ಯಮ್ । ನಿರ್ದೋಷತ್ವಾತ್ ತದೋಕಸೋ ಮುಕ್ತಸ್ಯ ಚ ಸಂಕಲ್ಪಾದೇವೇತಿ ಶ್ರುತ್ಯುಕ್ತಾನುಸಾರೇಣೋಪಪತ್ತೇಃ ॥ ೬ ॥**

**ಭಾವಾರ್ಥ—**ಮುಕ್ತನು ಭಗವಂತನ ಮನೆಯಲ್ಲಿದ್ದಾನೆ. (ಮೋಕ್ಷದಲ್ಲಿದ್ದಾನೆ) ಭೂಲೋಕದಲ್ಲಿರುವ ಮನೆಗೂ ಆ ಮನೆಗೂ ಸಾಮ್ಯವಿದೆ. ಭೂಲೋಕದ ಮನೆಯಲ್ಲಿರುವ ಭೋಗವು ಆಯಾ ಪ್ರಯತ್ನ ಸಾಧ್ಯವಾಗುವಂತೆ ಅಲ್ಲಿಯ ಭೋಗವೂ ಪ್ರಯತ್ನ ಸಾಧ್ಯವಾಗಬೇಕು ಎಂಬ ಪೂರ್ವಪಕ್ಷ ಸರಿಯಲ್ಲ. ಭಗವಂತನ ಮನೆಯು ಮತ್ತು ಮುಕ್ತನೂ ನಿರ್ದುಷ್ಟವಾದ್ದರಿಂದ ಶ್ರುತಿಯಲ್ಲಿ ಹೇಳಿದಂತೆ ಕೇವಲ ಸಂಕಲ್ಪದಿಂದಲೇ ಭೋಗವು ಕೂಡುತ್ತದೆ.

**ವಿವರಣೆ—** ಭಗವಂತನ ಮಂದಿರ ಮತ್ತು ಮುಕ್ತರು ದೋಷರಹಿತ ನಾಗಿದ್ದಾರೆ. ಆದ್ದರಿಂದ ಅಲ್ಲಿ ಸಂಕಲ್ಪದಿಂದಲೇ ಭೋಗವುಂಟಾಗುವುದೆಂದು 'ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಸ್ಯ ಪಿತರಃ ಸಮುತ್ತಿಷ್ಠಂತಿ' (ಮುಕ್ತರಿಗೆ ತನ್ನ ತಂದೆಯನ್ನು ನೋಡಬೇಕು ಎಂದು ಬಯಕೆಯಾದರೆ ಸಂಕಲ್ಪದಿಂದಲೇ ಅವನ ಪಿತೃಗಳು ಎದ್ದು ಬರುತ್ತಾರೆ) ಎಂದು ಶ್ರುತಿಯು ತಿಳಿಸುತ್ತದೆ. ಆದ್ದರಿಂದ ಅಲ್ಲಿಯ ಭೋಗಗಳು ಶ್ರಮಸಾಧ್ಯವಲ್ಲ ಎಂದು ಸಿದ್ಧಾಂತ.

## ಅನನ್ಯಾಧಿಪತ್ಯಧಿಕರಣ (4-4-1)

ಓಂ ಅತ ಏವ ಚಾನನ್ಯಾಧಿಪತಿಃ ಓಂ ಎಂಬ ಒಂದು ಸೂತ್ರವನ್ನೊಳಗೊಂಡ ಈ ಅಧಿಕರಣಕ್ಕೆ ಮುಕ್ತನು ವಿಷಯ. ಲೋಕದಲ್ಲಿರುವಂತೆ ಕ್ಲೃಪ್ತರಾದ ಅಧಿಪತಿಗಳಿಗಿಂತಲೂ ಭಿನ್ನರಾದವರಿಂದ ನಿಯಮ್ಯನಾಗಿರುವನೋ? ಅಥವಾ ಮುಕ್ತಿಯು ಅಲೌಕಿಕವಾದ್ದರಿಂದ ನಿಯಮ್ಯನಲ್ಲವೋ? ಎಂದು ಸಂದೇಹ.

ಇಲ್ಲಿಯೂ ಪೂರ್ವಪಕ್ಷಸಾಧಕವಾದ ಯುಕ್ತಿಯು 'ತದೋಕಃ' ಎಂಬುದೇ. ಅದನ್ನು ಮತ್ತು 'ಅಸ್ತದೋಷ' ಎಂಬ ಸಿದ್ಧಾಂತವನ್ನು ಸಾಧಿಸುವ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

ನ ಚ ಪರಗೃಹಗತತ್ವಾದಸ್ಯ ರಾಜಗೃಹಗತಸ್ಯೇವ ಸ್ವಾಧಮಾ ಅಪಿ ಕದಾಚಿದೀಶತೇ । ನಿರ್ದೋಷತ್ವಾದೇವ ಮುಕ್ತಸ್ಯೇಶ್ವರಸ್ಯ ತತ್ರಸ್ಥಾನಾಂ ಮುಕ್ತಾಂತರಾಣಾಂ ಚ ರಾಜದೋಷವದ್ ದೋಷಾಸಂಭವಾದ್ ಯಥಾಯೋಗ್ಯಮೇವ ಸ್ವೀಕಾರೋಪಪತ್ತೇಃ ।

'ಮುಕ್ತಾನಾಂ ಪತಯೋ ದೇವಾ ದೇವಾನಾಂ ಚ ಪ್ರಜಾಪತಿಃ ।

ತಸ್ಯ ವಿಷ್ಣುರ್ನ ಚೈವೇದಂ ಪಾರಾವರ್ಯಂ ವಿನಶ್ಯತಿ॥'

ಇತಿ ಚ ಶ್ರುತಿಃ ॥ ೭ ॥

**ಭಾವಾರ್ಥ**—ರಾಜನ ಮನೆಯನ್ನು ಪ್ರವೇಶಿಸಿದ ಪುರುಷನು ತನಗಿಂತಲೂ ಅಧಮರಾದ ಪ್ರತೀಹಾರಾದಿಗಳಿಂದ ನಿಯಮ್ಯವಾಗಿರುವುದು ಕಂಡಿದೆ. ಅದರಂತೆ ಪರಗೃಹವಾದ ಪರಮಾತ್ಮನ ಮನೆಯನ್ನು ಪ್ರವೇಶಿಸಿದ ಮುಕ್ತನಿಗೆ ತನಗಿಂತಲೂ ಅಧಮರು ಕೆಲವೊಮ್ಮೆ ನಿಯಾಮಕರಾಗಬಹುದು ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, ಮುಕ್ತನು, ಪರಮಾತ್ಮನು, ಮುಕ್ತಿಯಲ್ಲಿರುವ ಬೇರೆ ಮುಕ್ತರೂ ದೋಷ ರಹಿತರಾದ್ದರಿಂದ ರಾಜನಲ್ಲಿರುವ ದೋಷಗಳಿಲ್ಲದಿರುವುದರಿಂದ ಉತ್ತಮರನ್ನು ಬಿಟ್ಟು ಬೇರೆಯವರಿಂದ ನಿಯಮ್ಯರಾಗುವುದಿಲ್ಲವೆಂದು ಸ್ವೀಕಾರ ಮಾಡಬಹು ದಾಗಿದೆ. 'ಮುಕ್ತರಿಗೆ ದೇವತೆಗಳು ಅಧಿಪತಿಗಳು. ದೇವತೆಗಳಿಗೆ ಚತುರ್ಮುಖನು, ಚತುರ್ಮುಖನಿಗೆ ವಿಷ್ಣು ಅಧಿಪತಿ. ಈ ಉತ್ತಮಾಧಮಭಾವವು ಎಂದಿಗೂ ನಾಶವಾಗುವುದಿಲ್ಲ' ಎಂದು ಶ್ರುತಿಯೂ ತಿಳಿಸುತ್ತಿದೆ.

**ವಿವರಣೆ**— ರಾಜನ ಮನೆಯಲ್ಲಿರುವಂತೆ ಅಲ್ಲದೆ ಪರಮಾತ್ಮನ ಮನೆಯಲ್ಲಿ ಇರುವುದೆಲ್ಲವೂ ದೋಷರಹಿತವಾದ್ದರಿಂದ ತಮಗಿಂತಲೂ ಅಧಮರಿಂದ ನಿಯಮ್ಯರಾಗುವುದಿಲ್ಲ. ಆದರೆ ಉತ್ತಮರು ನಿಯಾಮಕರಾಗಿರುತ್ತಾರೆ ಎಂದು ಸಿದ್ಧಾಂತ.

**ಸೂತ್ರಾರ್ಥ**—

ಓಂ ಅತ ಏವಚಾನ್ಯಾಧಿಪತಿಃ ಓಂ

ಅತಃ ಏವ=ನಾನು ಇವರಿಂದ ಮಾತ್ರ ನಿಯಮ್ಯನಾಗುವೆನು ಎಂದು ಸತ್ಯಸಂಕಲ್ಪನಾದ್ದರಿಂದಲೇ ಮುಕ್ತನು ಅನನ್ಯಾಧಿಪತಿಃ=ಕ್ಲೃಪ್ತರಾದ ಉತ್ತಮರ ಹೊರತಾಗಿ ಇತರ ಅಧಿಪತಿಯುಳ್ಳವನಲ್ಲ. ಚ=ಈ ವಿಷಯದಲ್ಲಿ 'ಮುಕ್ತಾನಾಂ ಪತಯೋ ದೇವಾಃ' ಎಂಬ ಶ್ರುತಿಯೂ ಇದೆ.

## ಅಭಾವಾಧಿಕರಣ (4-4-8)

ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಮುಕ್ತರ ಭೋಗವೇ ವಿಷಯ. ವಾದಿ-ಪ್ರತಿವಾದಿಗಳಲ್ಲಿ ವಿವಾದವು ಕಾಣುತ್ತಿರುವುದರಿಂದ ಮುಕ್ತರಿಗೆ ಭೋಗವು ಯುಕ್ತವೋ? ಅಯುಕ್ತವೋ? ಎಂದು ಸಂದೇಹ ಬರುತ್ತದೆ.

**ಪೂರ್ವಪಕ್ಷ—** ಮುಕ್ತರಿಗೆ ಭೋಗವು ಯುಕ್ತವಲ್ಲ. ಚಿದ್ದೇಹದಿಂದ ಭೋಗವನ್ನು ಒಪ್ಪಿದರೂ ಸುಷುಪ್ತಿಯಲ್ಲಿ ಚಿದ್ದೇಹವಿದ್ದರೂ ಆಗ ಸ್ರಕ್‌ಚಂದನಾದಿ ವಿಷಯ ಭೋಗ ಕಂಡಿಲ್ಲ. ಆದ್ದರಿಂದ ಅದು ಭೋಗಪ್ರಯೋಜಕವಲ್ಲ. ಸ್ಥೂಲದೇಹ ಮತ್ತು ಅದರಲ್ಲಿ ಅಭಿಮಾನವೇ ಪ್ರಯೋಜಕವೆನ್ನಬೇಕು. ಅದನ್ನು ಮುಕ್ತಿಯಲ್ಲಿ ಒಪ್ಪಿದರೆ ದುಃಖಾದಿ ಸಮಸ್ತಕಾರ್ಯಗಳೂ ಉಂಟಾಗಬೇಕು. ದೇಹವಿಲ್ಲವೆಂದರೆ ಭೋಗವೇ ಇಲ್ಲದಿರಬೇಕಾದೀತು ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಮಕಾರ್ಯ' (ದೇಹವನ್ನು ಒಪ್ಪಿದಲ್ಲಿ ಸಮಸ್ತ ದುಃಖಾದಿ ಕಾರ್ಯಗಳ ಪ್ರಸಕ್ತಿ) ಎಂಬುದು. ಇದನ್ನು ಮತ್ತು **'ವಿಶೇಷಕ್ಲೃಪ್ತಿ'** (ಶ್ರುತಿಯಿಂದಲೇ ಮುಕ್ತರಲ್ಲಿ ವಿಶೇಷವು ಸಿದ್ಧವಾಗುವುದು) ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ದೇಹಭಾವೇ ತತ್ಕಾರ್ಯದುಃಖಾದಿಸ್ತದಭಾವೇ ಭೋಗಾಸಂಭವ ಇತಿ ದೋಷಃ ।**

**'ದೇಹಾಭಾವಾಚ್ಚ ಭಾವಾಚ್ಚ ನಿರ್ಭೋಗಿತ್ವಂ ಚ ದುಃಖಿತಾಮ್ ।**
**ಯಾಂತ್ಯಮುಕ್ತಾ ನೋಭಯಂ ಚ ಮುಕ್ತಾನಾಂ ಪಠಿತಾ ಯತಃ ॥'**
**ಇತಿ ಶ್ರುತ್ಯೈವ ವಿಶೇಷಕ್ಲೃಪ್ತೇಃ ॥ ೮ ॥**

**ಭಾವಾರ್ಥ**—ಮುಕ್ತನಿಗೆ ದೇಹವಿದ್ದರೆ ದೇಹದ ಕಾರ್ಯವಾದ ದುಃಖಾದಿಗಳು ಬರಬೇಕಾಗುತ್ತದೆ. ದೇಹವಿಲ್ಲವೆಂದರೆ ಭೋಗವು ಕೂಡುವುದಿಲ್ಲ ಎಂಬ ದೋಷವಿರುವುದರಿಂದ ಮುಕ್ತನಿಗೆ ಭೋಗವಿಲ್ಲ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ಪ್ರಲಯಕಾಲದಲ್ಲಿ ದೇಹವಿಲ್ಲದಿರುವುದರಿಂದ ಭೋಗಾಭಾವವನ್ನು, ದೇಹವಿರುವುದರಿಂದ ಭೋಗವನ್ನೂ ಅಮುಕ್ತರು ಹೊಂದುತ್ತಾರೆ. ಪ್ರಕೃತಿಯು ಮುಕ್ತರ ಅಧೀನವಾದ್ದರಿಂದ ಭೋಗಾಭಾವವನ್ನು ದುಃಖವನ್ನು ಹೊಂದುವುದಿಲ್ಲ' ಎಂದು ಶ್ರುತಿಯಿಂದಲೇ ವಿಶೇಷಕ್ಲೃಪ್ತಿಯು ಸಿದ್ಧವಾಗಿದೆ.

**ವಿವರಣೆ**— ಅಮುಕ್ತರು ಪ್ರಕೃತಿಪ್ರತಿಬದ್ಧರಾದ ಪ್ರಯುಕ್ತ ಅವರಿಗೆ ಮಾತ್ರ ದೇಹವಿಲ್ಲದಿದ್ದರೆ ಭೋಗವಿಲ್ಲ, ದೇಹವಿದ್ದರೆ ದುಃಖವೆಂಬ ಪ್ರಸಂಗವಿದೆ. ಮುಕ್ತಜೀವರಾದರೂ ಅಗ್ನಿಸ್ತಂಭನ ವಿದ್ಯೆಯನ್ನು ಬಲ್ಲದವನಿಗೆ ಅಗ್ನಿಯು ಹೇಗೆ ದಾಹಕವಾಗುವು ದಿಲ್ಲವೋ ಅದರಂತೆ, ಜಡದೇಹವನ್ನು ತಮ್ಮ ವಶದಲ್ಲಿಟ್ಟು ಕೊಂಡಿರುವವ ರಾದ್ದರಿಂದ ಜಡದೇಹವುಳ್ಳವರಾದರೂ ದುಃಖಿಗಳಾಗುವುದಿಲ್ಲ, ದೇಹರಹಿತರಾರೂ ಭೋಗಹೀನರಾಗುವುದಿಲ್ಲ ಎಂದು ಅವರಲ್ಲಿ ವಿಶೇಷವಿರುವುದ ರಿಂದ ದುಃಖರಾಹಿತ್ಯ ಮತ್ತು ಭೋಗಗಳು ಕೂಡುತ್ತವೆ. ಬಾಹ್ಯಾಭಿಮಾನ ವಿಲ್ಲದಿದ್ದರೂ ಸ್ವಪ್ನದಲ್ಲಿ ಭೋಗವುಂಟಾಗುವಂತೆ ಮುಕ್ತಿಯಲ್ಲಿ ದೇಹವಿಲ್ಲದಿದ್ದರೂ ಭೋಗ ಆಗಬಹುದು. ಜಡದೇಹವನ್ನು ಒಪ್ಪಿದರೂ ದೀಪವು ಎಣ್ಣೆಯನ್ನು ಮಾತ್ರ ಸ್ವೀಕರಿಸಿ ಕಷ್ಮಲವನ್ನು ಬಿಡುವಂತೆ, ಮುಕ್ತಜೀವರು ಜಡದೇಹದಲ್ಲಿ ದುಃಖವನ್ನು ಬಿಟ್ಟು ಕೇವಲ ಸುಖವನ್ನು ಅನುಭವಿಸುತ್ತಾರೆ ಎಂದು ಕೂಡಿಸಬಹುದು.

**ಸೂತ್ರಾರ್ಥ**—

## ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ

ಅಭಾವಂ=ಮುಕ್ತನಿಗೆ ಚಿತ್‌ಸ್ವರೂಪದೇಹಕ್ಕಿಂತ ಭಿನ್ನವಾದ ದೇಹವಿಲ್ಲ ವೆನ್ನುವು ದನ್ನು ಬಾದರಿಃ=ಬಾದರಿ ಆಚಾರ್ಯರು ಆಹ=ಹೇಳುತ್ತಾರೆ. ಹಿ=ಯಾವ ಕಾರಣದಿಂದ ಏವಂ=ದೇಹವಿಲ್ಲದಿರುವಿಕೆಯನ್ನು ಆಹ=ಶ್ರುತಿಯು ಹೇಳಿದೆ.

## ಜಗದ್‌ವ್ಯಾಪಾರಾಧಿಕರಣ (4-4-9)

ಓಂ ಜಗದ್ವ್ಯಾಪಾರವರ್ಜ್ಯಮ್ ಓಂ ಎಂಬ ಸೂತ್ರದಿಂದ ಆರಂಭವಾಗುವ

ಈ ಅಧಿಕರಣಕ್ಕೆ ಮುಕ್ತರೇ ವಿಷಯ. ಮುಕ್ತನಿಗೆ ಸತ್ಯಕಾಮತ್ವವನ್ನು ಹೇಳಿರುವುದರಿಂದ ಅವನೂ ಜಗತ್ಸೃಷ್ಟ್ಯಾದಿವ್ಯಾಪಾರಗಳನ್ನು ಹೊಂದುವನೋ? ಜಗತ್ಸೃಷ್ಟಿಕರ್ತೃತ್ವವು ಪರಬ್ರಹ್ಮನದ್ದೇ ಲಕ್ಷಣವೆಂದು ಹೇಳಿರುವುದರಿಂದ ಮುಕ್ತನು ಜಗತ್ಸೃಷ್ಟ್ಯಾದಿವ್ಯಾಪಾರಗಳನ್ನು ಹೊಂದುವುದಿಲ್ಲವೋ? ಎಂಬ ಸಂದೇಹ.

**ಪೂರ್ವಪಕ್ಷ—** 'ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್' (ಮುಕ್ತನು ಎಲ್ಲ ಕಾಮನೆಗಳನ್ನು ಪಡೆದುಕೊಂಡು ಅಮೃತನಾಗುತ್ತಾನೆ) ಎಂದು ಶ್ರುತಿಯು ಹೇಳುತ್ತಿದೆ. ಸರ್ವಶಬ್ದದಲ್ಲಿ ಸೃಷ್ಟ್ಯಾದಿವ್ಯಾಪಾರಗಳೂ ಸೇರಿವೆ. ಸರ್ವಶಬ್ದಕ್ಕೆ ಅರ್ಥಸಂಕೋಚ ಮಾಡಲು ನಿಮಿತ್ತವೇನೂ ಇಲ್ಲ. ಮುಕ್ತರು ಸತ್ಯಕಾಮರಾದ್ದರಿಂದ ಜಗದ್ವ್ಯಾಪಾರಾದಿಗಳೂ ಅವರಿಗೆ ಬರುವುದರಿಂದ ಜನ್ಮಾದಿಕಾರಣತ್ವವೆಂಬ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ ಎಂದು ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ಸಮಸ್ತಕಾರ್ಯ' ಎಂಬುದು. ಇದನ್ನು ಮತ್ತು 'ವಿಶೇಷಕ್ಲೃಪ್ತಿ' ಎಂಬ ಸಿದ್ಧಾಂತವನ್ನು ಸಾಧಿಸುವ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ಸಂಕಲ್ಪಾದೇವ ಸಮಸ್ತಸಂಭವಾತ್ ಸೃಷ್ಟ್ಯಾದಿಸಮಸ್ತಕಾರ್ಯ-ಸಂಭವಃ ।**

'ವ್ಯಾಪಾರೋ ಜಗತೋ ವಿಷ್ಣೋರ್ಮುಕ್ತಾನಾಂ ತು ಸ್ವಭೋಗಗಃ ।
ನ ಹಿ ಸ್ವರ್ಣಂ ಶುದ್ಧಮಪಿ ವಹ್ನಿಕಾರ್ಯಕರಂ ಭವೇತ್ ।
ಅಯೋಗ್ಯಾಶಕ್ತಿತಸ್ತ್ವೇವ ನಾಧಿಕಾನಂದಸಂಭವಃ ।
ನ ಹಿ ಕಶ್ಚಿತ್ ಸುತರ್ಕ್ಕೋಽಪಿ ಚಕಾರಾಚೇತನಂ ಚಿತಿಮ್ ।
ನ ಚ ಕಾಮಸ್ತಥಾ ಭೂಯಾತ್ ತತಃ ಸ್ಯಾತ್ ಸತ್ಯಕಾಮತಾ ॥'
ಇತಿ ಶ್ರುತ್ಯಾ ವಿಶೇಷಕ್ಲೃಪ್ತೇರೇವ ।
'ಮುಕ್ತಾನಾಂ ನ ಜಗದ್ವ್ಯಕ್ತಸ್ತಥಾಽಪಿ ವಿಬುಧಾಃ ಸದಾ ।
ಮುಕ್ತಾನಾಂ ತು ನಿಯಂತಾರಸ್ತೇಷಾಂ ಬ್ರಹ್ಮಾಽಸ್ಯ ವೈ ಹರಿಃ॥'
ಇತಿ ಚ ವಿಶೇಷಕ್ಲೃಪ್ತಿಃ ॥ ೯ ॥

**ಭಾವಾರ್ಥ—**ಮುಕ್ತರಿಗೆ ಸಂಕಲ್ಪದಿಂದಲೇ ಸಮಸ್ತವಸ್ತುಗಳ ಪ್ರಾಪ್ತಿಯಾಗುವುದರಿಂದ ಜಗತ್‌ಸೃಷ್ಟ್ಯಾದಿವ್ಯಾಪಾರಗಳೂ ಉಂಟಾಗಬೇಕಾಗುತ್ತದೆ ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ, 'ವಿಷ್ಣುವಿನ ವ್ಯಾಪಾರವು ಜಗತ್ತನ್ನು ವಿಷಯೀಕರಿಸುತ್ತದೆ. ಮುಕ್ತನ ವ್ಯಾಪಾರವು ತನ್ನ ಭೋಗವನ್ನು ಮಾತ್ರ ವಿಷಯೀಕರಿಸುತ್ತದೆ (ವಿಷ್ಣುವಿಗೆ ಜಗತ್‌ಕರ್ತೃತ್ವವ್ಯಾಪಾರವಿದೆ. ಮುಕ್ತನಿಗೆ ಭೋಗ ಮಾತ್ರ ಇರುತ್ತದೆ ಎಂದರ್ಥ) ಬಂಗಾರವು ಶುದ್ಧವಾಗಿದ್ದರೂ ಬೆಂಕಿಯ ಕೆಲಸವನ್ನು (ಪ್ರಕಾಶ, ದಾಹಾದಿ) ಮಾಡುವುದಿಲ್ಲವಷ್ಟೇ! ಅಯೋಗ್ಯ ವಿಷಯದಲ್ಲಿ ಶಕ್ತಿಯಿಲ್ಲದಿರುವುದರಿಂದ ಯೋಗ್ಯತೆಗಿಂತ ಅಧಿಕವಾದ ಆನಂದವು ಉಂಟಾಗುವುದಿಲ್ಲ. ಒಬ್ಬ ವ್ಯಕ್ತಿಯು ಎಷ್ಟೇ ಸಮರ್ಥನಾಗಿದ್ದರೂ ಜಡವನ್ನು ಚೇತನವನ್ನಾಗಿ ಮಾಡಲಾರ. ಮುಕ್ತನಿಗೆ ಅಯೋಗ್ಯವಾದ ಕಾಮನೆಯೇ ಉಂಟಾಗಲಾರದು. ಆದ್ದರಿಂದಲೇ ಅವರಿಗೆ ಸತ್ಯಕಾಮತ್ವವು ಕೂಡುತ್ತದೆ' ಎಂಬುದಾಗಿ ಶ್ರುತಿಯಿಂದಲೇ ವಿಶೇಷಕ್ಲೃಪ್ತಿ ಇದೆ. 'ಮುಕ್ತರಿಗೆ ಜಗತ್‌ಸೃಷ್ಟಿವಿಷಯಕವಾದ ಪ್ರಯತ್ನವೇ ಉಂಟಾಗುವುದಿಲ್ಲ, ಹಾಗಿದ್ದರೂ ದೇವತೆಗಳು ಮುಕ್ತರಿಗೆ ನಿಯಾಮಕರಾಗಿರುತ್ತಾರೆ. ಅವರಿಗೆ ಬ್ರಹ್ಮನು, ಬ್ರಹ್ಮನಿಗೆ ಶ್ರೀಹರಿಯು ನಿಯಾಮಕನಾಗಿರುತ್ತಾನೆ' ಎಂದೂ ವಿಶೇಷಕ್ಲೃಪ್ತಿ ಇದೆ.

**ವಿವರಣೆ—** ಮುಕ್ತರಿಗೆ ಅಯೋಗ್ಯವಾದ ವಿಷಯದಲ್ಲಿ ಕಾಮನೆಯೇ ಉಂಟಾಗುವುದಿಲ್ಲ. ಅದೇ ಅವರ ಸತ್ಯಕಾಮತ್ವ ಎಂಬುದಾಗಿ ಶ್ರುತಿಯಿಂದಲೇ ಕ್ಲೃಪ್ತವಾಗಿದೆ. ಆದ್ದರಿಂದ ಜನ್ಮಾದಿಕಾರಣತ್ವವೆಂಬ ಪರಮಾತ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ಇಲ್ಲ.

ಮುಕ್ತನಿಗೆ ಜಗತ್‌ಸೃಷ್ಟಿಯ ಸಾಮರ್ಥ್ಯವೇ ಇಲ್ಲದಿರುವುದರಿಂದ 'ಸರ್ವಾನ್ ಕಾಮಾನಾಪ್ತ್ವಾ' ಎಂಬಲ್ಲಿರುವ ಸರ್ವ ಶಬ್ದಕ್ಕೆ ಅರ್ಥಸಂಕೋಚವನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ.

**ಸೂತ್ರಾರ್ಥ—**

## ಓಂ ಜಗದ್ವ್ಯಾಪಾರವರ್ಜ್ಯಮ್ ಓಂ

ಜಗದ್ವ್ಯಾಪಾರವರ್ಜ್ಯಂ=ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳನ್ನು ಬಿಟ್ಟು ಉಳಿದ ಕಾಮನೆಗಳನ್ನು ಮುಕ್ತನು ಅನುಭವಿಸುತ್ತಾನೆ.

# ಸ್ಥಿತ್ಯಧಿಕರಣ (4-4-10)

ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ ಎಂಬ ಸೂತ್ರದಿಂದ ಆರಂಭವಾಗುವ ಈ ಅಧಿಕರಣದಲ್ಲಿ ಮುಕ್ತರು ವಿಷಯ. ಲೋಕದಲ್ಲಿ ಎಲ್ಲರಿಗೂ ವೃದ್ಧಿಹ್ರಾಸಾದಿಗಳು ಕಂಡಿವೆ. ಆದರೆ ಮುಕ್ತರು ಲೋಕವಿಲಕ್ಷಣರು. ಆದ್ದರಿಂದ ಅವರಿಗೆ ವೃದ್ಧಿಹ್ರಾಸಗಳು ಇವೆಯೋ? ಇಲ್ಲವೋ? ಎಂದು ಸಂದೇಹ.

ಈ ಅಧಿಕರಣದ ಪೂರ್ವಪಕ್ಷಯುಕ್ತಿ 'ವಶಿತ್ವ' (ಎಲ್ಲವನ್ನು ತಮ್ಮ ಅಧೀನಲ್ಲಿ ಮಾಡಿಕೊಳ್ಳುವುದು) ಎಂಬುದು. ಇದನ್ನು ಮತ್ತು 'ಕೃತನಿಶ್ಚಯ' ಎಂಬ ಸಿದ್ಧಾಂತಸಾಧಕ ಯುಕ್ತಿಯನ್ನು ವಿವರಿಸುತ್ತಿದ್ದಾರೆ—

**ನ ಚ ವಶಿತ್ವಾನ್ಮುಕ್ತಸ್ಯಾಪಿ ವೃದ್ಧಿಃ। ಕೃತಕೃತ್ಯತ್ವೇನ ನಿಃಶ್ರಮತ್ವಾದುಪಾಸನಾದಾವಭ್ಯಾಸಪಾಟವಾನ್ನಿರ್ದೋಷತ್ವಾತ್ ಸ್ನೇಹಾಧಿಕ್ಯಾಚ್ಚ ತಸ್ಯೈವ ಪರಮಸುಖರೂಪತ್ವೇನ ಫಲಸ್ವರೂಪತ್ವಾತ್।**

**'ಅಭ್ಯಾಸಪಾಟವಾತ್ ಸ್ನೇಹಾದಶ್ರಮತ್ವಾದುಪಾಸನಾ।**
**ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಮ್ ॥'**

**ಇತಿ ಚ ಶ್ರುತಿಃ ॥ ೧೦ ॥**

**ಭಾವಾರ್ಥ**—ಮುಕ್ತರಲ್ಲಿ ಅಣಿಮಾದಿಸಿದ್ಧಿಗಳು ಇರುವುದರಿಂದ ವಶಿತ್ವವಿರುತ್ತದೆ. ಆದರಿಂದ ಅವರು ಮುಕ್ತಿಯಲ್ಲಿ ಮಾಡುವ ಉಪಾಸನಾದಿಗಳಿಂದ ಆನಂದಾದಿಗಳ ವೃದ್ಧಿಯನ್ನು ಪಡೆಯುತ್ತಾರೆ. ಹೀಗಾಗಿ ಮುಕ್ತಿಯೂ ಸಂಸಾರದ ಸಮಾನಧರ್ಮವಾಯಿತು ಎಂಬ ಪೂರ್ವಪಕ್ಷ ಸರಿಯಲ್ಲ. ಏಕೆಂದರೆ ಮುಕ್ತನು ಕೃತಕೃತ್ಯನಾದ್ದರಿಂದ, ಉಪಾಸನಾದಿಗಳಲ್ಲಿ ಶ್ರಮವಿಲ್ಲದಿರುವುದರಿಂದ, ಅಭ್ಯಾಸ ಪಾಟವವಿರುವುದರಿಂದ ದೋಷವಿಲ್ಲದಿರುವುದರಿಂದ, ಅಧಿಕ ಸ್ನೇಹಪ್ರಯುಕ್ತವಾದ್ದರಿಂದ, ಸಾಧನೆಯು ಫಲರೂಪವೇ ಹೊರತು ಸಾಧನಾರೂಪವಲ್ಲ. ಈ ವಿಷಯದಲ್ಲಿ ಶ್ರುತಿಯೂ ಪ್ರಮಾಣವಾಗಿದೆ. 'ಅಭ್ಯಾಸಪಾಟವವಿರುವುದರಿಂದ, ಸ್ನೇಹಪ್ರಯುಕ್ತವಾದ್ದರಿಂದ ಶ್ರಮವಿಲ್ಲದಿರುವುದರಿಂದ ಮುಕ್ತರ ಉಪಾಸನೆ ಮತ್ತು ಭಕ್ತಿಯು ಸುಖರೂಪವೇ ಹೊರತು ಸಾಧನರೂಪವಲ್ಲ ಎಂದು.

**ವಿವರಣೆ—** ಮುಕ್ತನು ಕೃತಕೃತ್ಯನಾದ್ದರಿಂದ ಅವನ ಉಪಾಸನೆಯು ಫಲರೂಪವೇ ಹೊರತು ಸಾಧನರೂಪವಲ್ಲ ಎಂಬುದು ಸಿದ್ಧಾಂತ.

ಮುಕ್ತನಿಗೆ ವಶಿತ್ವವಿರುವುದರಿಂದ ವೃದ್ಧಿಯನ್ನು ಪಡೆಯಬೇಕಾದೀತು ಎಂದು ಹೇಳುತ್ತಿರುವ ಪೂರ್ವಪಕ್ಷಿಗೆ ಪ್ರಶ್ನೆಯನ್ನು ಮಾಡುತ್ತೇವೆ. ಯೋಗ್ಯಫಲದ ವೃದ್ಧಿಯೋ? ಅಯೋಗ್ಯಫಲದ ವೃದ್ಧಿಯೋ? ಎಂದು. ಮುಕ್ತನು ಕೃತಕೃತ್ಯನಾದ್ದರಿಂದ (ಪಡೆದುಕೊಳ್ಳಬೇಕಾದ ಫಲವನ್ನು ಪಡೆದಿದ್ದಾನೆ ಆದ್ದರಿಂದ) ಯೋಗ್ಯ ಫಲದ ವೃದ್ಧಿಯಾಗುವುದಿಲ್ಲ. ಇನ್ನೂ 'ನ ಚಾಯೋಗ್ಯಂ ಮುಕ್ತಿಗೋಽಪಿ ಪ್ರಾಪ್ನುಯಾನ್ನ ಚ ಕಾಮಯೇತ್' ಎಂದು ಹೇಳಿರುವುದರಿಂದ ಅವನಿಗೆ ಅಯೋಗ್ಯವಿಷಯದಲ್ಲಿ ಕಾಮನೆಯೇ ಇಲ್ಲವಾದ್ದರಿಂದ ಅಯೋಗ್ಯ ಫಲದ ವೃದ್ಧಿಯೂ ಕೂಡುವುದಿಲ್ಲವಾದ್ದರಿಂದ ಪೂರ್ವಪಕ್ಷಿಯ ಆಕ್ಷೇಪವೇ ಸರಿಯಲ್ಲವೆಂದು ಸಿದ್ಧವಾಗುವುದು.

ಈ ಅಧಿಕರಣದ ಸಿದ್ಧಾಂತಸಾಧಕಯುಕ್ತಿಯನ್ನು ಅನುವ್ಯಾಖ್ಯಾನದಲ್ಲಿ 'ಕೃತನಿಶ್ಚಯಶ್ಚ' ಎಂಬ ಪದದಿಂದ ಹೇಳಿದ್ದಾರೆ. 'ಕೃತ' ಎಂಬ ಪದದಿಂದ ಕೃತಕೃತ್ಯತ್ವವನ್ನು, 'ಚ' ಎಂಬುದರಿಂದ ಅಭ್ಯಾಸಪಾಟವ, ನಿಶ್ರಮತ್ವ ಮೊದಲಾದ ಯುಕ್ತಿಗಳನ್ನು ತಿಳಿಸಿದ್ದಾರೆ ಎಂದು ತಿಳಿಯಬೇಕು.

**ಸೂತ್ರಾರ್ಥ—**

## ಓಂ ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ಓಂ

'ಸ ಏಷ ಏಕಸ್ಮಿನ್ ಬ್ರಹ್ಮಣಿ...' ಎಂಬ ಶ್ರುತಿಯು ಸ್ಥಿತಿಂ=ಮುಕ್ತರಿಗೆ ಏಕಪ್ರಕಾರದಿಂದ ಸ್ಥಿತಿಯನ್ನೇ ಆಹ=ಹೇಳಿದೆ. ಕೇವಲ ಇದು ಮಾತ್ರವಲ್ಲ. ಪ್ರತ್ಯಕ್ಷಂ=ಮಹಾತ್ಮರ ಪ್ರತ್ಯಕ್ಷವು, ಅನುಮಾನಂ='ವೃದ್ಧಿಹ್ರಾಸಗಳಿಗೆ ಕಾರಣವಾದದ್ದಲ್ಲ, ಆದ್ದರಿಂದ ವೃದ್ಧಿಹ್ರಾಸಗಳಿಲ್ಲ' ಎಂಬ ಕಾರಣಾಭಾವ ಅನುಮಾನವೂ ಸಹ ಏವಂ ಚ=ಈರೀತಿಯಾಗಿಯೇ ದರ್ಶಯತಃ=ತಿಳಿಸುತ್ತಿವೆ.

# ಅನಾವೃತ್ತ್ಯಧಿಕರಣ (4-4-11)

ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ ಎಂಬ ಒಂದು

ಸೂತ್ರವನ್ನೊಳಗೊಂಡ ಈ ಅಧಿಕರಣದಲ್ಲಿ ಮುಕ್ತನು ವಿಷಯ. ಲೋಕದಲ್ಲಿ ಬೇರೇ ಕಡೆಗೆ ಹೋದವನು ಹಿಂತಿರುಗಿ ಬರುವುದು ಕಂಡಿದೆ. ಅದರಂತೆ ಮೋಕ್ಷಕ್ಕೆ ಹೋದ ಮುಕ್ತನು ಸಂಸಾರಕ್ಕೆ ಹಿಂತಿರುಗುತ್ತಾನೋ? ಅಥವಾ ಮುಕ್ತಿಯು ಅಲೌಕಿಕವಾದ್ದ ರಿಂದ ಹಿಂತಿರುಗುವುದಿಲ್ಲವೋ? ಎಂದು ಸಂಶಯ.

**ಪೂರ್ವಪಕ್ಷ—** ಸ್ವರ್ಗ ಮುಂತಾದ ಲೋಕಗಳಿಗೆ ಹೋದವನು ಹಿಂತಿರುಗುವಂತೆ ಮೋಕ್ಷಕ್ಕೆ ಹೋದವನೂ ಹಿಂತಿರುಗುವನು. ಸ್ವರ್ಗಾದಿಗಳಿಗೆ ಹೋದವರಿಗೆ ಯುಗ, ಮನ್ವಂತರಗಳ ವರೆಗೆ ವಾಸ, ಮುಕ್ತಿಗೆ ಹೋದವರಿಗೆ ಸದಾ ಅಲ್ಲಿಯೇ ವಾಸ ಎಂಬ ವ್ಯತ್ಯಾಸವಿದೆ ಎಂದು ಹೇಳುವುದು ಸರಿಯಲ್ಲ. ಎಲ್ಲದಕ್ಕೂ ಸಮಾಪ್ತಿ ಇದೆ. ಕಾಲವು ಅನಂತವಾಗಿದ್ದರೂ ಮಹಾಭಾರತ ಯುದ್ಧದಲ್ಲಿ ಮೂರು ತಿಥಿಗಳು ಒಟ್ಟಿಗೇ ಬಂದು ಪಕ್ಷಸಮಾಪ್ತಿಯಾದಂತೆ ಸಮಸ್ತಕಾಲಕ್ಕೂ ಒಟ್ಟಿಗೆ ಸಮಾಪ್ತಿಯು ಸಂಭಾವಿತವಾಗಿದೆ. ಅಂತೂ ಮುಕ್ತಿಯೂ ಪುನರಾವೃತ್ತಿ ಉಳ್ಳದ್ದು. ಆದ್ದರಿಂದ ಅದು ಪುರುಷಾರ್ಥವಲ್ಲ ಎಂಬ ಪೂರ್ವಪಕ್ಷ.

ಈ ಪೂರ್ವಪಕ್ಷಕ್ಕೆ ಸಾಧಕವಾದ ಯುಕ್ತಿ 'ವಿಶ್ವಸಂಭಾವನಾ' (ಏನು ಬೇಕಾದರೂ ಆಗಬಹುದು) ಎಂಬುದು. ಇದನ್ನು ಮತ್ತು 'ಮಾಹಾತ್ಮ್ಯ' (ಮುಕ್ತನಲ್ಲಿ ಸತ್ಯಕಾಮತ್ವವೆಂಬ ಮಹಿಮೆ) ಎಂಬ ಸಿದ್ಧಾಂತಸಾಧಕ ನ್ಯಾಯವನ್ನೂ ವಿವರಿಸುತ್ತಿದ್ದಾರೆ—

**ನ ಚಾನಂತತ್ವಾತ್ ಕಾಲಸ್ಯ ತ್ರಯೋದಶೀಪಂಚದಶೀವತ್ ಕದಾಚಿತ್ ಸಮಸ್ತಸ್ಯಾಪಿ ಸಂಭವಾನ್ಮುಕ್ತಸ್ಯಾಪಿ ಪುನರಾವೃತ್ತ್ಯಾಶಂಕೇತಿ ವಾಚ್ಯಮ್ । ಸತ್ಯಕಾಮತ್ವಾದಿಮಾಹಾತ್ಮ್ಯಾತ್ ।**

**'ಅಶೇಷಕಾಮಸತ್ಯತ್ವಾನ್ಮುಕ್ತಾನಾಮಪುನರ್ಭವಃ ।**
**ಯಸ್ಮಾತ್ ಸ ಕಾಮಯೇದೇವ ನಿತ್ಯಮಾತ್ಮಾಪುನರ್ಭವಮ್ ॥'**

**ಇತಿ ॥ ೧೧ ॥**

**ಭಾವಾರ್ಥ—**ಕಾಲವು ಅನಂತವಾದ್ದರಿಂದ ಹದಿಮೂರು ದಿನಗಳೇ ಹದಿನೈದು ದಿನಗಳಾದಂತೆ ಸಮಗ್ರಕಾಲಕ್ಕೂ ಸಮಾಪ್ತಿಯಾಗಬಹುದಾದ್ದರಿಂದ

ಮೋಕ್ಷಕ್ಕೆ ಹೋದವನು ಹಿಂತಿರುಗಬಹುದು ಎಂಬ ಶಂಕೆ ಸರಿಯಲ್ಲ. ಏಕೆಂದರೆ, ಮುಕ್ತನಿಗೆ ಸತ್ಯಕಾಮತ್ವವೇ ಮೊದಲಾದ ಮಹಿಮೆಯಿರುವುದರಿಂದ. 'ಮುಕ್ತಾತ್ಮನು ಯಾವಾಗಲೂ ಮೋಕ್ಷದಿಂದ ಹಿಂತಿರುಗದೇ ಇರುವುದನ್ನು ಬಯಸುವುದರಿಂದ, ಅವನ ಎಲ್ಲ ಕಾಮನೆಗಳು ಸತ್ಯವಾಗುವುದರಿಂದ ಮುಕ್ತನಿಗೆ ಪುನರಾವೃತ್ತಿಯಿಲ್ಲ' ಎಂದು ಶ್ರುತಿಯು ತಿಳಿಸುತ್ತಿದೆ.

**ವಿವರಣೆ—** ಮುಕ್ತನಿಗೆ ಸತ್ಯ ಕಾಮತ್ವವೆಂಬ ಮಹಿಮೆ ಇರುವುದರಿಂದ ಮುಕ್ತನು ಎಂದಿಗೂ ಹಿಂದಿರುವುದಿಲ್ಲ ವಾದ್ದರಿಂದ ಮೋಕ್ಷವು ಪುರುಷಾರ್ಥವಾಗಿದೆ ಎಂಬುದು ಸಿದ್ಧಾಂತ.

**ಸೂತ್ರಾರ್ಥ—**

## ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ

ಅನಾವೃತ್ತಿಃ=ಮುಕ್ತನಿಗೆ ಸ್ವರ್ಗವನ್ನು ಹೊಂದಿದವನಂತೆ ಪುನರಾವೃತ್ತಿ ಇಲ್ಲ. ಪ್ರಮಾಣವೆಂದರೆ ಶಬ್ದಾತ್='ನ ಚ ಪುನರಾವರ್ತತೇ' ಎಂದು ಶ್ರುತಿಯಿರುವುದರಿಂದ.

**ಇತ್ಯನಂತಮಹಾನ್ಯಾಯಮೀಮಾಂಸಾಪಾರವಾರಿಧೇಃ ।**
**ಉತ್ತಾರಣಾತ್ಯಶಕ್ತ್ಯೈವ ವ್ಯಾಕುಲೀಕೃತಚೇತಸಾಮ್ ॥**

**ಮಂದಾನಾಮುಪಕಾರಾಯ ಮಹತಾಂ ಚೋಚ್ಚ್ರಿತಾತ್ಮನಾಮ್ ।**
**ತದ್ವಿಶೇಷಪರಿಜ್ಞಾನಪ್ರದೀಪ್ತಾರ್ಕಾಭಚೇತಸಾಮ್ ॥**

**ವಿಶೇಷಗಾಢೇ ಮನಸಿ ನಿತರಾಮುಪಕಾರಕಃ ।**
**ನ್ಯಾಯಪ್ಲವೋ ಮಯಾಽಕಾರಿ ಸಂಕ್ಷೇಪಾತ್ ಪ್ರಮಿತಾಕ್ಷರೈಃ ॥**

**ಭಾವಾರ್ಥ—**ಈರೀತಿಯಾಗಿ ಅನಂತವಾದ ಬಹಳ ಅರ್ಥಗಳುಳ್ಳದ್ದಾದ್ದರಿಂದ ದುರವಗಾಹ್ಯವಾದ ನ್ಯಾಯಪ್ರತಿಪಾದಕವಾದ ಬ್ರಹ್ಮಮೀಮಾಂಸಾ ಶಾಸ್ತ್ರವೆಂಬ ಸಮುದ್ರವನ್ನು ದಾಟಲು (ವ್ಯಾಖ್ಯಾನಮಾಡಲು) ಅಸಮರ್ಥರಾದ್ದರಿಂದಲೇ ಕಳವಳಗೊಂಡ ಮನಸ್ಸುಳ್ಳ ಮಂದಜನರ ಉಪಕಾರಕ್ಕಾಗಿ ಮತ್ತು,

(ನ್ಯಾಯವಿವರಣದ) ವಿಶೇಷಜ್ಞಾನದಿಂದ ಮಧ್ಯಾಹ್ನ ಸೂರ್ಯನಂತೆ ಪ್ರಕಾಶವಾದ ಮನಸ್ಸುಳ್ಳ ಉತ್ತಮ ಜ್ಞಾನಿಗಳ ಮನಸ್ಸು ಮೀಮಾಂಸಾಶಾಸ್ತ್ರದಲ್ಲಿ ವಿಶೇಷವಾಗಿ ಮುಳುಗಿರಲು ಬಹಳ ಉಪಕಾರಕವಾದ ಅಲ್ಪಾಕ್ಷರಗಳಿಂದ ಕೂಡಿದ ನ್ಯಾಯಮಾಲಾ ಎಂಬ ತೆಪ್ಪವು ನನ್ನಿಂದ ಮಾಡಲ್ಪಟ್ಟಿತು.

**ವಿವರಣೆ**—ಮೀಮಾಂಸಾಶಾಸ್ತ್ರವು ಸಮುದ್ರದಂತೆ ಅನಂತ ಅಪಾರ. ದುರವಗಾಹ್ಯವಾಗಿದೆ. ಇದನ್ನು ದಾಟಲು ಅಂದರೆ ಅರ್ಥೈಸಿಕೊಳ್ಳಲು ಅಸಮರ್ಥರಾದ ಅಜ್ಞಾನಿಗಳಿಗೆ ನ್ಯಾಯಮಾಲಾ ಎಂಬ ಗ್ರಂಥವು ತೆಪ್ಪದಂತೆ ಉಪಕಾರಕವಾಗಿದೆ. ಹಾಗಾದರೆ ಜ್ಞಾನಿಗಳಿಗೆ ಇದರಿಂದ ಉಪಯೋಗವಿಲ್ಲವೇ? ಎಂದರೆ ಪ್ರಕಾಶಮಾನವಾದ ಜ್ಞಾನವುಳ್ಳವರಿಗೂ ಇದು ಉಪಕಾರಕವಾಗಿದೆ. ಈ ಬ್ರಹ್ಮಮೀಮಾಂಸಾಶಾಸ್ತ್ರವೆಂಬ ಸಮುದ್ರದಲ್ಲಿ ಅವರ ಮನಸ್ಸು ಆಳವಾಗಿ ಮುಳುಗಿದಾಗಲೂ ಈ ನ್ಯಾಯಮಾಲಾ ಎಂಬ ತೆಪ್ಪವು ಉಪಕಾರಕವಾಗಿದೆ. ಹೀಗೆ ಎರಡು ವಿಧ ಜನರಿಗೆ ಈ ಗ್ರಂಥದಿಂದ ಉಪಕಾರವಿದೆ.

**ವಿಸ್ತಾರೋಽಪ್ಯಯಮೇವ ಸ್ಯಾತ್ ತದ್ವಿಶೇಷಾತಿವೇದಿನಾಮ್ ।**
**ವ್ಯಾಖ್ಯಾನುವ್ಯಾಖ್ಯಯೋರೇವ ವಿಸ್ತಾರೋ ಯದುದೀರಿತಃ ॥**
**ಅನಲ್ಪಚೇತಸಾಂ ಪುಂಸಾಮಲಂ ವಿಜ್ಞಾನಸಿದ್ಧಯೇ ।**

**ಭಾವಾರ್ಥ**—ಭಾಷ್ಯ, ಅನುವ್ಯಾಖ್ಯಾನಗಳಲ್ಲಿ ವಿಸ್ತಾರವಾಗಿ ನ್ಯಾಯಗಳು ಹೇಳಲ್ಪಟ್ಟಿರುವುದರಿಂದ ಆ ನ್ಯಾಯವಿಶೇಷಗಳನ್ನು ಚೆನ್ನಾಗಿ ತಿಳಿದವರಿಗೆ ನ್ಯಾಯಮಾಲಾ ಗ್ರಂಥವೂ ಕೂಡ ಯದ್ಯಪಿ ವಿಸ್ತಾರವೇ ಆಗುತ್ತದೆ. ಆದರೂ ಬಹಳ ತಿಳಿದವರಿಗೂ ವಿಶೇಷ ಜ್ಞಾನ ಸಿದ್ಧಿಗಾಗಿ ಈ ಗ್ರಂಥವು ನನ್ನಿಂದ ಮಾಡಲ್ಪಟ್ಟಿದೆ.

**ತನ್ನ್ಯಾಯೋದ್ಧರಣೇಽಶಕ್ತಾ ಅಪಿ ಹ್ಯೇತೇನ ಸುಸ್ಥಿರಮ್ ॥**
**ನ್ಯಾಯಾನುಗಂ ಮನಃ ಕುರ್ಯುರಿತಿಸಂಗ್ರಹಲಾಲಸಾಃ ।**

**ಭಾವಾರ್ಥ**—ಭಾಷ್ಯಾದಿಗಳಲ್ಲಿ ಹೇಳಲ್ಪಟ್ಟ ನ್ಯಾಯಗಳ ಉದ್ಧಾರ ಮಾಡುವುದರಲ್ಲಿ ಶಕ್ತಿಯುಳ್ಳ ಜ್ಞಾನಿಗಳೂ ಸಂಗ್ರಹಮಾಡುವುದರಲ್ಲಿ ಆತುರವುಳ್ಳವ

ರಾಗಿ ಮನಸ್ಸನ್ನು ಸ್ಥಿರವಾಗಿ ನ್ಯಾಯಸಂಬಂಧ್ಧವನ್ನಾಗಿ ಮಾಡಲಾರರು. ಆದ್ದರಿಂದ ಈ ಗ್ರಂಥವನ್ನು ಮಾಡಿರುವೆನು.

**ವಿವರಣೆ**—ಭಾಷ್ಯ, ಅನುವ್ಯಾಖ್ಯಾನಗಳಲ್ಲಿಯೇ ನ್ಯಾಯಗಳನ್ನು ಹೇಳಿದ ಮೇಲೆ ನ್ಯಾಯಮಾಲಾ ಎಂಬ ಗ್ರಂಥದ ಆವಶ್ಯತೆ ಏನು? ನ್ಯಾಯವಿವರಣೆ ಯಂತೂ ಸುತರಾಂ ಬೇಡವಲ್ಲವೇ? ಎಂದರೆ, ಮಂದರಿಗೆ ಭಾಷ್ಯ, ಅನುವ್ಯಾಖ್ಯಾನ ಗಳಲ್ಲಿರುವ ನ್ಯಾಯಗಳನ್ನು ಉದ್ಧರಿಸಲೇ ಸಾಧ್ಯವಾಗುವುದಿಲ್ಲ. ಅವರಿಗಾಗಿ ಈ ಗ್ರಂಥದ ಅಪೇಕ್ಷೆ ಇದೆ. ಇನ್ನು ನ್ಯಾಯಗಳನ್ನು ಉದ್ಧರಿಸಲು ಸಮರ್ಥರಾದ ಜ್ಞಾನಿಗಳೂ ಸಂಗ್ರಹ ಮಾಡುವುದರಲ್ಲಿಯೇ ಆತುರಪಟ್ಟು ನ್ಯಾಯಗಳಲ್ಲಿ ಮನಸ್ಸನ್ನು ಲಗ್ನಗೊಳಿಸಲಾರದು. ಅವರಿಗಾಗಿಯೂ ಸಂಕ್ಷೇಪ ವಿಸ್ತಾರ ರೂಪವಾದ ಎರಡು ವಿಧ ಗ್ರಂಥಗಳ ಅಪೇಕ್ಷೆ ಇದೆ.

**ಕೋ ನಾಮಾಶೇಷವಿದ್ಯೋರುಸಾಗರೋನ್ಮಥನೋದ್ಧೃತಮ್ ॥**
**ಸಾಕ್ಷಾದ್ ವಿದ್ಯಾಧಿರಾಜೇನ ನ್ಯಾಯಾಮೃತಮನುತ್ತಮಮ್ ।**
**ಅಶೇಷತೋಽಧಿಗಚ್ಛೇತ ವಂದ್ಯೋ ವೃಂದಾರಕೋಽಪಿ ಸನ್ ॥**

**ಭಾವಾರ್ಥ**—ಸಕಲ ಶಾಸ್ತ್ರಗಳೆಂಬ ಸಾಗರವನ್ನು ಮಥನ ಮಾಡಿ ವಿದ್ಯೆಗಳಿಗೆ ಒಡೆಯರಾದ ಸಾಕ್ಷಾತ್ ವೇದವ್ಯಾಸರಿಂದಲೇ ಹೊಂದಲ್ಪಟ್ಟ ನ್ಯಾಯಪ್ರತಿಪಾದಕ ಗಳಾದ ಬ್ರಹ್ಮಸೂತ್ರಗಳೆಂಬ ಅಮೃತವನ್ನು ಎಲ್ಲರಿಂದಲೂ ವಂದ್ಯನಾದ ದೇವತೆ ಯಾದರೂ ಯಾರು ತಾನೆ ಸಂಪೂರ್ಣವಾಗಿ ಹೊಂದಿಯಾನು? (ತಿಳಿದಾನು?)

**ವಿವರಣೆ**—ಬ್ರಹ್ಮಸೂತ್ರಗಳು ಮೋಕ್ಷಪ್ರದಗಳಾದ್ದರಿಂದ ಅವುಗಳನ್ನು ಅಮೃತವೆಂದು ಹೋಲಿಸಿದ್ದಾರೆ.

**ಏವಂ ಸುದುರ್ಲಭೇಽಪ್ಯದ್ಧಾ ಮಹಾನ್ಯಾಯಪರಾಮೃತೇ ।**
**ಕೇಚನಾಧಿಕ್ರಿಯಂತೇಽತ್ರ ತತ್ಪ್ರಸಾದಾನುರಂಜಿತಾಃ ॥**
**ಬ್ರಹ್ಮಾದ್ಯಾ ಅಮೃತೇ ಯದ್ವತ್ ಸಾಗರೋನ್ಮಥನೋದ್ಧೃತೇ ।**

**ಭಾವಾರ್ಥ**—ಈರೀತಿಯಾಗಿ ಉತ್ಕೃಷ್ಟವಾದ, ಅಮೃತತುಲ್ಯವಾದ ಬ್ರಹ್ಮಸೂತ್ರಗಳು ಅತ್ಯಂತ ದುರ್ಲಭವಾಗಿದ್ದರೂ, ಸಮುದ್ರಮಥನದಿಂದ ಲಭಿಸಿದ

ಅಮೃತದಲ್ಲಿ ಬ್ರಹ್ಮಾದಿದೇವತೆಗಳು ಮಾತ್ರ ಅಧಿಕಾರಿಗಳು ಆದಂತೆ, ವೇದವ್ಯಾಸರ ಅನುಗ್ರಹಕ್ಕೆ ಪಾತ್ರರಾದ ಕೆಲವರು (ಬ್ರಹ್ಮಾದಿದೇವತೆಗಳು) ಮಾತ್ರ ನಿಶ್ಚಿತ ವಾಗಿಯೂ ಅಧಿಕಾರಿಗಳಾಗುತ್ತಾರೆ.

**ಅಹಂ ತು ತತ್ಪ್ರಸಾದೈಕಮಹಾಸ್ಪದಬಲೋದ್ಧತಃ ॥**

**ನ್ಯಾಯಾಮೃತಾರ್ಣವಮಿಮಮವಗಾಹ್ಯ ವಿಭಜ್ಯ ಚ ।**
**ಸಂಕ್ಷೇಪವಿಸ್ತರಾಭ್ಯಾಂ ಚ ಚಕಾರ ವ್ಯಾಕೃತಿಂ ಕೃತಿಮ್ ॥**

**ಭಾವಾರ್ಥ**—ನಾನಾದರೂ ವೇದವ್ಯಾಸರ ಅನುಗ್ರಹರೂಪವಾದ ಮುಖ್ಯ ಆಶ್ರಯವಾದ ಬಲದಿಂದ ಕೂಡಿದವನಾಗಿ ಅಮೃತತುಲ್ಯವಾದ ನ್ಯಾಯ (ಬ್ರಹ್ಮಸೂತ್ರಗಳ) ಸಮುದ್ರದಲ್ಲಿ ಮುಳಗಿ ವಿಭಾಗಮಾಡಿ ಅವುಗಳನ್ನು ಸಂಕ್ಷೇಪ, ವಿಸ್ತಾರರೂಪವಾಗಿ ವ್ಯಾಖ್ಯಾನರೂಪವಾದ ಈ ಗ್ರಂಥವನ್ನು ರಚಿಸಿರುವೆನು.

**ವಿವರಣೆ**—ಬ್ರಹ್ಮಸೂತ್ರಗಳಲ್ಲಿ ಬ್ರಹ್ಮದೇವರೇ ಮೊದಲಾದವರಿಗೆ ಅಧಿ ಕಾರವಿರುವುದಾದರೆ ನೀವು ಹೇಗೆ ವ್ಯಾಖ್ಯಾನವನ್ನು ರಚಿಸುತ್ತಿರುವಿರಿ? ಎಂಬ ಪ್ರಶ್ನೆಗೆ ಉತ್ತರಿಸುತ್ತಿರುವರು. ನಾನೂ ಕೂಡ ವೇದವ್ಯಾಸರ ಅನುಗ್ರಹ ಬಲದಿಂದಲೇ ರಚಿಸುತ್ತಿರುವೆನು ಎಂದು. ಸಂಕ್ಷೇಪರೂಪವಾದ ಗ್ರಂಥವೆಂದರೆ ನ್ಯಾಯಮಾಲಾ. ವಿಸ್ತಾರರೂಪವಾದದ್ದು ನ್ಯಾಯವಿವರಣೆ ಎಂದು ತಿಳಿಯಬೇಕು.

**ತತ್ಪ್ರಸಾದಮೃತೇ ಕಸ್ಯ ಶಕ್ತಿಃ ಸಂಸಾರಸಾಗರೇ ।**
**ಮಗ್ನಸ್ಯ ಚೇತಸನ್ಯ ಸ್ಯಾತ್ ತತ್ಕೃತಾನುಕೃತೌ ಕ್ವಚಿತ್ ॥**
**ನಿತ್ಯಾನಂದಾಮೃತಸ್ಯಂದಿತತ್ಕಟಾಕ್ಷೈಧಿತಸ್ಯ ತು ।**
**ಕಾ ನು ಶಕ್ತಿರ್ಭವೇನ್ನೈವ ತತಃ ಕೋ ವಾಽತಿವಿಸ್ಮಯಃ ॥**

**ಭಾವಾರ್ಥ**—ಸಂಸಾರಸಾಗರದಲ್ಲಿ ಮುಳುಗಿರುವ ಜೀವನಿಗೆ ಆ ಭಗವಂತನ ಅನುಗ್ರಹವಿಲ್ಲದೆ ಅವನಿಂದ ರಚಿತವಾದ ಕೃತಿಯನ್ನು ಅನುಕರಿಸುವುದಕ್ಕೆ ಯಾವ ಶಕ್ತಿಯಿರುತ್ತದೆ? ನಿತ್ಯಾನಂದವೆಂಬ (ಮೋಕ್ಷವೆಂಬ) ಅಮೃತವನ್ನು ಸುರಿಸುವ ಪರಮಾತ್ಮನ ಕಟಾಕ್ಷದಿಂದ ಸಮೃದ್ಧನಾದವನಿಗೆ ಯಾವ ಸಾಮರ್ಥ್ಯವೂ ಲಭಿಸುವು

ದಿಲ್ಲವೆಂದೇನೂ ಇಲ್ಲ. (ಸರ್ವ ವಿಧವಾದ ಸಾಮರ್ಥ್ಯವೂ ಲಭಿಸುವುದು ಎಂದರ್ಥ) ಇದರಲ್ಲೇನು ಮಹಾಶ್ಚರ್ಯ?

**ವಿದ್ಯಾಽವಿದ್ಯೇ ಸುಖಂ ದುಃಖಮಶಕ್ತಿಃ ಶಕ್ತಿರೇವ ಚ ।**
**ಉತ್ಪತ್ತಿಸ್ಥಿತಿನಾಶಾಶ್ಚ ವಿಶೇಷಾಶ್ಚ ಪರೇಽಖಿಲಾಃ ॥**
**ಚೇತನಾಚೇತನಸ್ಯಾಸ್ಯ ಸಮಸ್ತಸ್ಯ ಯದಿಚ್ಛಯಾ ।**
**ಸ ಮಮ ಸ್ವಕೃತೇನೈವ ಪ್ರೀಯತಾಂ ಪುರುಷೋತ್ತಮಃ ॥**

**ಭಾವಾರ್ಥ**—ಜ್ಞಾನ, ಅಜ್ಞಾನ, ಸುಖ, ದುಃಖ, ಅಶಕ್ತಿ, ಶಕ್ತಿ , ಉತ್ಪತ್ತಿ , ಸ್ಥಿತಿ, ನಾಶ, ನಿಯಮನವೇ ಮೊದಲಾದವುಗಳು ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಯಾವ ಭಗವಂತನ ಇಚ್ಛೆಯಿಂದ ಆಗುವವೋ ಆ ಪುರುಷೋತ್ತಮನು ತಾನೇ ಮಾಡಿಸಿದ ಈ ಗ್ರಂಥದಿಂದ ಸಂತುಷ್ಟನಾಗಲಿ.

**ವಿವರಣೆ**—ಗ್ರಂಥವನ್ನು ರಚಿಸುವ ಶಕ್ತಿ ಆ ಪರಮಾತ್ಮನ ಅನುಗ್ರಹದಿಂದ ಲಭಿಸುವುದು ಎಂದು ಹಿಂದಿನ ಶ್ಲೋಕದಲ್ಲಿ ತಿಳಿಸಿ, ಅದು ಮಾತ್ರವಲ್ಲದೆ ಜಗತ್ತಿನ ಎಲ್ಲ ಚಟುವಟಿಕೆಯೂ ಭಗವದಧೀನವೆಂದು ಈ ಶ್ಲೋಕಗಳಲ್ಲಿ ತಿಳಿಸುತ್ತಿದ್ದಾರೆ.

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಮ್ ।**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**
**ವಾಯೋ ರಾಮವಚೋ ನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪು-**
**ರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥**

**ಭಾವಾರ್ಥ**—ಯಾವ ವಾಯುದೇವನ ಮೂರು ದಿವ್ಯರೂಪಗಳು ವೇದಮಂತ್ರಗಳಲ್ಲಿ ಚೆನ್ನಾಗಿ ವರ್ಣಿಸಲ್ಪಟ್ಟಿವೆಯೋ ಲೋಕವನ್ನು ಕಾಪಾಡುವ ಬಲ ಜ್ಞಾನ ಪೂರ್ಣವಾಗಿರುವ ಮೂಲ ಮಹಾರೂಪವೇ ಯಾವ ವ್ಯತ್ಯಾಸವಿಲ್ಲದೆ ಮೂರು ಅವತಾರವನ್ನು ಮಾಡಿದೆ. ರಾಮನ ಸಂದೇಶವನ್ನು ಸೀತೆಗೆ ಒಯ್ದ ಹನುಮಂತನ ಮೊದಲನೆಯ ರೂಪ. ಕುರುಸೇನೆಯನ್ನು ಸಂಹರಿಸಿದ ಭೀಮಸೇನನು ಎರಡನೆಯ ರೂಪ. ಮಧ್ವರೇ ಮೂರನೆಯ ರೂಪ. ಆ ಮೂರನೆಯ ರೂಪವೇ ಈ ಗ್ರಂಥವನ್ನು ನಾರಾಯಣನ ಪ್ರೀತಿಗಾಗಿ ರಚಿಸಿದೆ.

**ವಿವರಣೆ**—ನಾರಾಯಣನ ಸ್ವರೂಪಜ್ಞಾನವು ಹೇಗೆ ಮೋಕ್ಷಸಾಧನವೋ ಅದರಂತೆ ತನ್ನ ಸ್ವರೂಪದ ಜ್ಞಾನವೂ ಅಧಿಕಾರಿಗಳಿಗೆ ಮೋಕ್ಷಸಾಧನವಾದ್ದರಿಂದ ಅದನ್ನು ಈ ಪದ್ಯದಲ್ಲಿ ತಿಳಿಸುತ್ತಿರುವರು.

**ನಮೋಽಜಭವಭೂರ್ಯರ್ಕಪುರಃಸರಸುರಾಶ್ರಯ ।**

**ನಾರಾಯಣಾರಣಂ ಮಹ್ಯಂ ಮಾಪತೇ ಪ್ರೇಯಸಾಂ ಪ್ರಿಯಃ ॥**

**ಭಾವಾರ್ಥ**—ಚತುರ್ಮುಖ, ರುದ್ರ, ಇಂದ್ರನೇ ಮೊದಲಾದ ದೇವತೆಗಳಿಗೆ ಆಶ್ರಯನಾದ ನಾರಾಯಣ! ನಿನಗೆ ನಮಸ್ಕಾರ. ಅತಿಪ್ರಿಯವಾದ ವಸ್ತುಗಳಿಗಿಂತ ಪ್ರಿಯನಾದ ಲಕ್ಷ್ಮೀಪತಿಯೇ! ನನಗೆ ರಕ್ಷಕನಾಗು.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣೇ**
**ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ ॥**

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನ್ಯಾಯವಿವರಣಮ್ ॥**

**ಇಲ್ಲಿಗೆ ಚತುರ್ಥ ಅಧ್ಯಾಯದ ಚತುರ್ಥಪಾದ ಮುಗಿಯಿತು.**

## ಕೃತಜ್ಞತೆ

ಈ ಗ್ರಂಥ ಪ್ರಕಟಣೆಗೆ ಹೆಚ್. ನಾಗರಾಜ್, ರಾಘವೇಂದ್ರ ಕಾಲೋನಿ, ಚಾಮರಾಜಪೇಟೆ, ಬೆಂಗಳೂರು ಇವರು 25,000 ರೂ.ಗಳು ಹಾಗೂ ಕಾಮಧೇನು ಕ್ಷೇತ್ರ , ಕಮ್ಮಸಂದ್ರ ಮುಖ್ಯರಸ್ತೆ , ವಡ್ಡರಹಳ್ಳಿ, ಕಡಬಗೆರೆ, ಬೆಂಗಳೂರು ಉತ್ತರ ಇವರು 10,008 ರೂಗಳನ್ನು ದೇಣಿಗೆಯಲ್ಲಿ ನೀಡಿರುತ್ತಾರೆ.

ಅಖಿಲ ಭಾರತ ಮಾಧ್ವ ಮಹಾಮಂಡಲದ ಕನ್ನಡ ಸರ್ವಮೂಲ ಗ್ರಂಥ ಪ್ರಕಟಣೆಯ ಆಡಳಿತ ಸಮಿತಿ ಇವರನ್ನು ಅಭಿನಂದಿಸುತ್ತದೆ.